

ವಿಶ್ವ ಕನ್ನಡ ಸಮ್ಮೇಳನ

ಪಾರ್ತಿಸುಬ್ಬ ಕವಿಯ

# ಯಕ್ಷಗಾನ ಪ್ರಸಂಗಗಳು


ಸಂಪಾದಕ:

**ಕೆ. ವೆಂಕಟಕೃಷ್ಣಯ್ಯ**





ಪ್ರಕಾಶಕರು:

**ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ**

14 : 3 ಅ, ನೃಪತುಂಗ ರಸ್ತೆ

ಬೆಂಗಳೂರು – 560 002

PARTHISUBBA KAVIYA YAKSHAGANA PRASANGAGALU
A classic on Yakshagana Folklore in Kannada
Edited by K. Venkatakrishnayya
Published by A. R. Chandrahasa Gupta, I.A.S.
for the Directorate of Kannada and Culture
14-3A, Nrupathunga Road, Bangalore-560 002,
on the occasion of World Kannada Conference, 1985

Pages: xii+೩೭೭



**ಬೆಲೆ: ರೂ. 10-50**

ಮುದ್ರಣ: 1985

ವಿಶ್ವಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಕರ್ನಾಟಕ ಸರಕಾರದ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪರವಾಗಿ
ಅ. ರಾ. ಚಂದ್ರಹಾಸ ಗುಪ್ತ, ಐ.ಎ.ಎಸ್. . ಅವರಿಂದ ಪ್ರಕಟಿತ

ಮುದ್ರಕರು:
**ರಾಜೇಶ್ ಪವರ್ ಪ್ರೆಸ್**
ದರ್ಬೆ - ಪುತ್ತೂರು - 574 202
ದಕ್ಷಿಣ ಕನ್ನಡ

# ಮುನ್ನುಡಿ

1982ರಲ್ಲಿ ನಡೆಯಬೇಕಾಗಿದ್ದ ವಿಶ್ವಕನ್ನಡ ಸಮ್ಮೇಳನವನ್ನು ಕಾರಣಾಂತರಗಳಿಂದ ಮುಂದೂಡಲಾಗಿತ್ತು. ಮತ್ತೆ ಮುಂದೂಡುವುದು ಸೂಕ್ತವಲ್ಲವೆಂದು ಭಾವಿಸಿ 1985ರ ಡಿಸೆಂಬರ್ 15,16 ಮತ್ತು 17 ರಂದು ಮೈಸೂರಿನಲ್ಲಿ ಸಮ್ಮೇಳನವನ್ನು ಸರಳವಾಗಿ ಏರ್ಪಡಿಸಲು ನಮ್ಮ ಸರ್ಕಾರ ನಿರ್ಧರಿಸಿದೆ. ಈ ಸಮ್ಮೇಳನ ಕನ್ನಡಿಗರ ಸರ್ವತೋಮುಖ ಬೆಳವಣಿಗೆಯ, ಕನ್ನಡ ಸಂಸ್ಕೃತಿಯ ಪ್ರತೀಕವಾಗಬೇಕೆಂಬುದು ನಮ್ಮ ಆಕಾಂಕ್ಷೆ. ಈ ನಿಟ್ಟಿನಲ್ಲಿ ಅನೇಕ ಅರ್ಥಪೂರ್ಣ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ.

ಈ ಸಮ್ಮೇಳನ ಕನ್ನಡ ಸಾಹಿತ್ಯ, ಸಂಸ್ಕೃತಿಯ ಪ್ರತಿಬಿಂಬವಾಗ ಬೇಕೆಂಬುದು ನಮ್ಮ ಹಿರಿಯ ಆಸೆ. ಇದರ ಅಂಗವಾಗಿ ಸಾಹಿತ್ಯ ಸಂಪತ್ತನ್ನು ಕನ್ನಡಿಗರೆಲ್ಲರಿಗೆ ತಲುಪಿಸುವ ಕಾರ್ಯ ಹಾಗೂ ರಂಗಮಂದಿರಗಳ ನಿರ್ಮಾಣ ಪ್ರಮುಖವಾದುವು. ಆರ್ಥಿಕ ಮುಗ್ಗಟ್ಟಿದ್ದರೂ ಕನ್ನಡದ ಕೆಲಸ ನಿಧಾನ ವಾಗಬಾರದು, ನಿಲ್ಲಬಾರದು ಎಂಬ ದೃಢನಿಶ್ಚಯ ನಮ್ಮ ಸರ್ಕಾರದ್ದು.

ಕನ್ನಡ ಸಂಸ್ಕೃತಿಗೆ ಹಿರಿದಾದ ಅಂತಸ್ಸತ್ವವಿದೆ, ಭವ್ಯ ಪರಂಪರೆಯಿದೆ. ಅನೇಕ ಶತಮಾನಗಳ ಅವಧಿಯಲ್ಲಿ ಸುಂದರವಾದದ್ದನ್ನು, ಸತ್ಯವಾದದ್ದನ್ನು ಮೈಗೂಡಿಸಿಕೊಂಡ ಈ ಸಂಸ್ಕೃತಿ ಇಂದು ಸೊಂಪಾಗಿ ಬೆಳೆದಿದೆ. ಹಳೆಯ ದನ್ನು ಮರೆಯದೆ, ಹೊಸದನ್ನು ಅಲಕ್ಷಿಸದೆ, ಉತ್ತಮಾಂಶಗಳನ್ನು ತನ್ನದ ನ್ನಾಗಿಸಿಕೊಂಡು ಕರ್ನಾಟಕ ಸಂಸ್ಕೃತಿ ವಿಶಿಷ್ಟ ಘನತೆಯನ್ನು ಔನ್ನತ್ಯವನ್ನು ಕಾಪಾಡಿಕೊಂಡು ಬಂದಿದೆ. ನಮ್ಮ ಜನ ಬಾಳಿದ ಬಗೆ, ನಂಬಿದ ಮೌಲ್ಯ ಗಳು, ಅನುಸರಿಸಿದ ಆಚಾರ-ವಿಚಾರ, ನಮ್ಮ ಸಾಹಿತ್ಯ, ಕಲಾಪ್ರಕಾರಗಳಲ್ಲಿ ಅಚ್ಚಳಿಯದೆ ಪ್ರತಿಬಿಂಬಿಸಿವೆ. ಅಂದು ಕಲೆ, ಸಾಹಿತ್ಯ, ಸಂಸ್ಕೃತಿ ವರ್ಧನೆಗೆ ರಾಜರು ಆಶ್ರಯ ನೀಡಿದ್ದರು. ಇಂದು ಜನತೆ ಈ ಹೊಣೆಯನ್ನು ಹೊತ್ತಿದೆ.

ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಈಗಾಗಲೇ ಕನ್ನಡ ಖ್ಯಾತ ಲೇಖಕರ 117 ಕೃತಿಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸಲಾಗಿದೆ. ಈ ಪುಸ್ತಕಮಾಲೆಗೆ ದೊರೆತ ಜನಪ್ರಿಯತೆಯಿಂದಾಗಿ ಈ ಯೋಜನೆಯನ್ನು ಮುಂದುವರಿಸಿ, ಈಗ 50 ಪುಸ್ತಕಗಳನ್ನು ಹೊರತರಲಾಗುತ್ತಿದೆ. ಇವುಗಳಲ್ಲಿ ಗದುಗಿನ ಕುಮಾರವ್ಯಾಸ ಭಾರತ, ಹರಿಶ್ಚಂದ್ರ ಕಾವ್ಯ, ಪ್ರಭುಲಿಂಗಲೀಲೆ, ಜೈಮಿನಿ ಭಾರತ, ಯಶೋಧರ ಚರಿತ್ರೆಯಂತಹ ಪ್ರಸಿದ್ಧ ಅಭಿಜಾತ ಕೃತಿಗಳೂ, ಹಲವಾರು ಕಾದಂಬರಿ, ಸಣ್ಣಕತೆ, ನಾಟಕ, ವಿಚಾರ ಕೃತಿಗಳೂ ಸೇರಿವೆ.

ಸಮ್ಮೇಳನದ ಸವಿನೆನಪಿಗಾಗಿ ಹೊರತರಲು ಆರಿಸಿಕೊಂಡಿರುವ ಈ ಪುಸ್ತಕಗಳ ಪ್ರಕಟನೆಗೆ ನಮ್ಮ ಸಾಹಿತಿಗಳು ಉದಾರ ಮನಸ್ಸಿನಿಂದ ಅನುಮತಿ ನೀಡಿದ್ದಾರೆ. ಇವರೆಲ್ಲರಿಗೆ ನಾನು ಕನ್ನಡ ಜನತೆಯ ಪರವಾಗಿ ಆಭಾರಿ. ಈ ಕೃತಿಗಳನ್ನು ಕನ್ನಡಿಗರು ಸಹೃದಯತೆಯಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ವಿಧಾನ ಸೌಧ
ಬೆಂಗಳೂರು
ದಿನಾಂಕ 22–11–1985

(ರಾಮಕೃಷ್ಣ ಹೆಗಡೆ)
ಮುಖ್ಯಮಂತ್ರಿ

# ಅನುಕ್ರಮಣಿಕೆ

# ಪಾರ್ತಿಸುಬ್ಬ : ಯಕ್ಷಗಾನದ ಆಚಾರ್ಯಕವಿ

ಸಾಹಿತ್ಯ ಹಾಗೂ ಕಲಾಕ್ಷೇತ್ರಕ್ಕೆ ರಮ್ಯವೂ ರೋಮಾಂಚಕವೂ ಆದ ಕರ್ನಾಟಕದ ಅಪೂರ್ವವಾದ ಕೊಡುಗೆ ಯಕ್ಷಗಾನ. ಕರಾವಳಿ ಕರ್ನಾಟಕದಲ್ಲಿ, ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಈ ಸಾಹಿತ್ಯ ಕಲಾಪ್ರಕಾರ ಶತಮಾನಗಳಿಂದ ವಿಜೃಂಭಿಸುತ್ತಿದೆ. ಪ್ರಾಚೀನಕಾಲದಿಂದಲೂ, ನಮ್ಮ ದೇಶದ ವಿದ್ಯಾಸಂಸ್ಕೃತಿಗಳ ಕೇಂದ್ರವಾಗಿರುವ ದೇವಾಲಯಗಳೇ ಯಕ್ಷಗಾನಕ್ಕೂ ಆಶ್ರಯಸ್ಥಾನವಾಗಿದ್ದರೂ, ಜನತೆಯ ಬೆಂಬಲದಿಂದ, ಗುರುಮನೆ ಅರಮನೆಗಳ ತನಕವೂ ಇದು ಜನಪ್ರಿಯವೆನಿಸಿತು. ಸ್ವಾತಂತ್ರ್ಯಾನಂತರ ಕಾಲದಲ್ಲಿ ಧೀಮಂತ ವರ್ಗದ ಹಾಗೂ ಸರಕಾರದ ಸಕ್ರಿಯವಾದ ಪ್ರೋತ್ಸಾಹ ಪಡೆದು ಇಂದು ಯಕ್ಷಗಾನ ದೇಶವಿದೇಶಗಳಲ್ಲಿಯೂ ಮೆರೆಯುವಂತಾಗಿದೆ. ಹೀಗೆ ವಿಶ್ವಕಲಾರಂಗದಲ್ಲಿಯೂ ಕರ್ನಾಟಕದ ಯಕ್ಷಗಾನ ಮಾನ್ಯತೆ ಪಡೆಯುತ್ತಿರುವುದು ನಾಡಿನ ಭಾಗ್ಯವೆನ್ನಬೇಕು.

ಇಂತಹ ಯಕ್ಷಗಾನಕಲೆಗೆ ಒಂದು ಶಾಸ್ತ್ರೀಯ ಸಂವಿಧಾನವನ್ನು ರೂಪಿಸಿ, ಆ ಕಲಾಶಿಲ್ಪವನ್ನು ಮೋಹಕವಾಗಿ ಕಂಡರಿಸಿ, ಅದಕ್ಕೆ ಬೇಕಾದ ರಾಗ ತಾಳ ನೃತ್ಯಾದಿಗಳನ್ನು ವಿಶ್ಲೇಷಿಸಿ, ವೇಷಭೂಷಣಾದಿಗಳನ್ನು ಅಳವಡಿಸಿ, ರಸಸ್ಯಂದಿಯಾದ ಸಾಹಿತ್ಯಪಾಕವನ್ನು ಕೂಡ ಒದಗಿಸಿ ಆಚಾರ್ಯ ಪುರುಷನೆನಿಸಿದವನು ಮಹಾಕವಿ ಪಾರ್ತಿಸುಬ್ಬ. ಸಂಪೂರ್ಣ ರಾಮಾಯಣದ ಕಥೆಯನ್ನು ಪ್ರಸಂಗ ಸಾಹಿತ್ಯ ರೂಪದಲ್ಲಿ ಬರೆದು ಮೆಚ್ಚುಗೆ ಗಳಿಸಿದ ಈತನನ್ನು ಯಕ್ಷಗಾನ ವಾಲ್ಮೀಕಿಯೆಂದೇ ಜನರು ಪ್ರಶಂಸಿಸುತ್ತಿದ್ದಾರೆ. ಸಾಮಾನ್ಯ ಜನರನ್ನು ಎಂತಂತೆ ವಿದ್ವಜ್ಜನರನ್ನೂ ತಲೆದೂಗಿಸಬಲ್ಲ ಪಾರ್ತಿಸುಬ್ಬ ಕವಿಯ ಪ್ರಸಂಗಗಳು ಸಾಹಿತ್ಯ ಪ್ರಪಂಚದಲ್ಲಿಯೂ ವಿಶಿಷ್ಟ ಸ್ಥಾನವನ್ನು ಪಡೆದಿವೆ. ಪಂಡಿತ ಮುಳಿಯ ತಿಮ್ಮಪ್ಪಯ್ಯನವರು, ಈ ಕವಿಯ ಹಾಗೂ ಕಾವ್ಯದ ಕುರಿತು ಸಂಶೋಧನಾತ್ಮಕವೂ, ಪಾಂಡಿತ್ಯ

ಪೂರ್ಣವೂ ಆದ "ಪಾರ್ತಿಸುಬ್ಬ" ಎಂಬ ಆಚಾರ್ಯಕೃತಿಯೊಂದನ್ನು ರಚಿಸಿದರು. ರಾಷ್ಟ್ರಕವಿ ಗೋವಿಂದ ಪೈ ಪಾರ್ತಿಸುಬ್ಬನ ಕುರಿತು ಮುಕ್ತಕಂಠ ಪ್ರಶಂಸಿಸಿದರು. ಮೈಸೂರು ವಿಶ್ವವಿದ್ಯಾನಿಲಯ ಶ್ರೀ ಕುಕ್ಕಿಲ ಕೃಷ್ಣ ಭಟ್ಟರು ಸಂಪಾದಿಸಿದ "ಪಾರ್ತಿಸುಬ್ಬನ ಯಕ್ಷಗಾನಗಳು" ಎಂಬ ಬೃಹತ್ ಗ್ರಂಥವೊಂದನ್ನು ಪ್ರಕಟಿಸಿತು. ಹೀಗೆ ಕನ್ನಡದ ಹಲವು ಮಂದಿ ವಿದ್ವಾಂಸರು ಈ ಕವಿಯನ್ನೂ ಆತನ ಕೃತಿಯನ್ನೂ ಕೊಂಡಾಡಿದರು.

ಇಂತು ಪ್ರಶಂಸೆಗೆ ಪಾತ್ರನಾದ, ಯಕ್ಷಗಾನದ ಆಚಾರ್ಯಪುರುಷನಾದ ಪಾರ್ತಿಸುಬ್ಬನ ಕೃತಿಗಳನ್ನು ಆ ಕವಿಯ ವಂಶಕ್ಕೆ ಸಂಬಂಧಿಸಿದವರೂ, ಕಾಸರಗೋಡಿನ ಕನ್ನಡ ಹಾಗೂ ಸಂಸ್ಕೃತಿಗಳ ಎಲ್ಲಾ ಚಟುವಟಿಕೆಗಳಲ್ಲಿಯೂ ಸಕ್ರಿಯ ಸಹಾಯಕರೂ, ಸ್ವತಃ ಲೇಖಕರೂ ಆದ ಶ್ರೀ ಕೆ. ವೆಂಕಟಕೃಷ್ಣಯ್ಯನವರು ಸಂಪಾದಿಸಿ ಪ್ರಕಟನೆಗೆ ಸಿದ್ಧಪಡಿಸಲು ಮುಂದೆ ಬಂದದ್ದು ಅಭಿಮಾನದ ಸಂಗತಿಯಾಗಿದೆ. ಪಂಡಿತ ತಿಮ್ಮಪ್ಪಯ್ಯನವರು, ತನ್ನ "ಪಾರ್ತಿಸುಬ್ಬ" ಗ್ರಂಥದಲ್ಲಿ ಕವಿಯ ವಂಶಾವಳಿಯನ್ನು ಕೊಡುತ್ತಾ, ಶ್ರೀ ಲಕ್ಷ್ಮೀನಾರಾಯಣಯ್ಯ ಇವರ ಪತ್ನಿ ಸೌ। ಅಕ್ಕಮ್ಮ ಎಂಬವರು ಪಾರ್ತಿಸುಬ್ಬ ಕವಿಯ ವಂಶದ ಕೀ. ಶೇ. ಪಾ। ವೆಂಕಪ್ಪಯ್ಯನವರ ಮಗಳು ಎಂದು ಉಲ್ಲೇಖಿಸಿದ್ದಾರೆ. ಪ್ರಕೃತ, ಈ ಗ್ರಂಥದ ಸಂಪಾದಕರಾದ ಶ್ರೀ ಕೆ. ವೆಂಕಟಕೃಷ್ಣಯ್ಯ ಇವರು, ಇಂದು ಕೀರ್ತಿಶೇಷರಾಗಿರುವ ಸೌ। ಅಕ್ಕಮ್ಮ ಮತ್ತು ಶ್ರೀ ಲಕ್ಷ್ಮೀನಾರಾಯಣಯ್ಯ ಈ ದಂಪತಿಗಳ ಜ್ಯೇಷ್ಠ ಪುತ್ರರು. ಹಾಗಾಗಿ, ಇವರು ಕವಿಯ ವಂಶಕ್ಕೆ ಸಮೀಪದ ಸಂಬಂಧವುಳ್ಳವರು ಎಂಬುದರಿಂದ ಸ್ವತಃ ಸಾಹಿತ್ಯ ಕಲಾಭಿಜ್ಞರೂ ಆಗಿರುವುದರಿಂದ, ಅವರು ಸಂಪಾದಿಸಿದ ಪಾರ್ತಿಸುಬ್ಬ ಕವಿಯ ಪ್ರಸಂಗಗಳ ಈ ಗ್ರಂಥಕ್ಕೆ ಹೆಚ್ಚಿನ ಮಹತ್ವವಿದೆ.

ಕಾಸರಗೋಡು ಅಚ್ಚಗನ್ನಡ ಪ್ರದೇಶವೆನ್ನುವುದಕ್ಕೆ ಇಲ್ಲಿ ಹುಟ್ಟಿ ಬಳೆದ ಒಬ್ಬ ಪಾರ್ತಿಸುಬ್ಬ, ಒಬ್ಬ ಗೋವಿಂದ ಪೈ – ಇಂತಹ ಒಬ್ಬೊಬ್ಬರೇ ಸಾಕು. ಇಂತಹ ಹಲವರು ಈ ಭಾಗದಲ್ಲಿ ಹಿಂದಿನಂತೆ ಇಂದೂ ಇದ್ದಾರೆ– ಎನ್ನುವಾಗ ಈ ಪ್ರದೇಶವನ್ನು ಕೇರಳಕ್ಕೆ ಸೇರಿಸಿದ್ದರಿಂದ ಕನ್ನಡನಾಡಿಗೆ

ಎಂತಹ ನಷ್ಟವುಂಟಾಯಿತು ಎಂಬುದನ್ನು ಅರಿತುಕೊಳ್ಳಬಹುದು. ಪಾರ್ತಿಸುಬ್ಬ ಕವಿ ಕಾಸರಗೋಡು ಪ್ರದೇಶದ ಕುಂಬಳೆಯ ನಿವಾಸಿ. ಕುಂಬಳೆ ಪಾರ್ತಿಸುಬ್ಬನೆಂದೇ ಖ್ಯಾತನಾದವನು. ಕುಂಬಳೆ ಎನ್ನುವ ಊರನ್ನು ತುಳುಭಾಷೆಯಲ್ಲಿ "ಕಣ್ಪುರ" ಎನ್ನುತ್ತಾರೆ; ಅದನ್ನೇ ಸಂಸ್ಕೃತ–ಕನ್ನಡೀಕರಣ ಮಾಡಿ ಕಣಿಪ್ರರ, ಕಣ್ವಪುರ – ಎಂದು ಗ್ರಂಥಸ್ಥ ಮಾಡಿದರು. ಪಾರ್ತಿಸುಬ್ಬ ಕವಿ ಕಣಿಪ್ರರದ ಶ್ರೀ ಗೋಪಾಲಕೃಷ್ಣ ದೇವರ ಭಕ್ತ. ಆ ದೇವರ ಹೆಸರಿನ ಅಂಕಿತವಲ್ಲಿಯೇ ಆತನು ಕೃತಿರಚನೆ ಮಾಡಿದ್ದಾನೆ.

ತುಳುನಾಡಿನ ಈ ಪ್ರದೇಶದಲ್ಲಿ "ಸ್ಥಾನಿಕ" ಬ್ರಾಹ್ಮಣರೆಂಬೊಂದು ಸಮಾಜವಿದೆ; ಹೆಸರೇ ಸೂಚಿಸುವಂತೆ ಅವರು ಇಲ್ಲಿನ ಮೂಲಸ್ಥಾನದವರು. ಇವರನ್ನು ಶಿವಬ್ರಾಹ್ಮಣರೆಂದೂ ಹೇಳುತ್ತಾರೆ. ಈ ಪ್ರದೇಶದ ಎಲ್ಲಾ ದೇವಾಲಯಗಳಲ್ಲಿ ಆ ಸಮುದಾಯದ ಬ್ರಾಹ್ಮಣರು ಹೆಚ್ಚಿನ ಸ್ಥಾನಮಾನ ಗಳಿಸಿದ್ದರು. ಹಿಂದೆ ದೇವಾಲಯಗಳೇ ಸಾಂಸ್ಕೃತಿಕ ಕೇಂದ್ರಗಳೂ ಆಗಿದ್ದು ವಷ್ಟೆ. ಪಾರ್ತಿಸುಬ್ಬ ಕವಿಯೂ, ಅಂತೆಯೇ, ಕುಂಬಳೆಯ ಶ್ರೀ ಗೋಪಾಲ ಕೃಷ್ಣ ದೇವರ ಸೇವಾಕಾರ್ಯದಲ್ಲಿದ್ದನೆಂದು ತಿಳಿಯುತ್ತದೆ. ತುಳುನಾಡಿನ ಎಂದರೆ ದಕ್ಷಿಣ ಕನ್ನಡದ ಈ ಸ್ಥಾನಿಕ ಬ್ರಾಹ್ಮಣ ಸಮಾಜಕ್ಕೆ ಸೇರಿದ ಹಲವರು, ಮೂಲ್ಕಿಯ ಹರಿದಾಸ ಲಕ್ಷ್ಮೀನಾರಾಯಣಪ್ಪಯ್ಯ, ಕನ್ನಡ ದೋಜನೆನಿಸಿದ ಪೆರಡಾಲ ಕೃಷ್ಣಯ್ಯ, ಸಕಲ ಕಲಾವಿದರೆನಿಸಿದ ಕೊಡ್ಲು ಸುಬ್ರಾಯ ಶ್ಯಾನುಭಾಗ – ಇಂತಹ ಹಲವರು ಸಾಹಿತ್ಯ ಕಲಾಸರಸ್ವತಿಯ ವರಪುತ್ರರಾಗಿ ಕೀರ್ತಿ ಗಳಿಸಿದ್ದನ್ನು ನಾವು ನೆನಪು ಮಾಡಿಕೊಳ್ಳಬಹುದು. ಅಂತಹ ರತ್ನರಾಶಿಯಲ್ಲಿ ಯಕ್ಷಗಾನ ವಾಲ್ಮೀಕಿಯೆನಿಸಿದ ಪಾರ್ತಿಸುಬ್ಬ ಚೂಡಾರತ್ನವಾಗಿ ಶೋಭಿಸುತ್ತಾನೆ. ಈ ಕವಿಯ ಕಾಲದ ಕುರಿತು ಖಚಿತ ವಾದ ಆಧಾರಗಳು ಇದುವರೆಗೆ ದೊರಕದೆ ಇದ್ದರೂ ಈತನು ಹದಿನೆಂಟು ಹತ್ತೊಂಭತ್ತನೆಯ ಶತಮಾನಗಳ ಮಧ್ಯಕಾಲದಲ್ಲಿದ್ದವನೆಂದು ಹೇಳಬಹು ದಾಗಿದೆ.

ಪಾರ್ತಿಸುಬ್ಬ ಕವಿ, ಪುತ್ರಕಾಮೇಷ್ಟಿಯಿಂದ ಮೊದಲ್ಗೊಂಡು ರಾಮಾಯಣದ ಕಥೆಯನ್ನು ಬೇರೆ ಬೇರೆ ಪ್ರಸಂಗಗಳಾಗಿ ಬರೆದಿದ್ದಾನೆ. ಯಾವುದಾದರೊಂದು ಕಥೆಯ ವಿಶಿಷ್ಟ ಘಟನೆಯನ್ನು ವಿವರವಾಗಿ ತಿಳಿಸುವ

ಯಕ್ಷಗಾನ ಸಾಹಿತ್ಯ ಪ್ರಕಾರಕ್ಕೆ ಪ್ರಸಂಗವೆನ್ನುತ್ತಾರೆ. ರಾಮಾಯಣ ಕಥಾ ಪ್ರಸಂಗಗಳನ್ನು ಮಾತ್ರವಲ್ಲ, ಕೃಷ್ಣಚರಿತೆ, ಐರಾವತ ಎಂಬೀ ಪ್ರಸಂಗ ಗಳನ್ನೂ 'ಸಭಾಲಕ್ಷಣ'ವೆಂಬ ಬಯಲಾಟದ ಪೂರ್ವರಂಗಕ್ಕೆ ಸಂಬಂಧಿಸಿದ ಒಂದು ಶಾಸ್ತ್ರೀಯ ಆಧಾರಗ್ರಂಥವನ್ನೂ ರಚಿಸಿರುವನು. ಲಲಿತವೂ ಸುಂದರವೂ ಆದ ಅಚ್ಚಗನ್ನಡ ನುಡಿಗಳಿಂದ, ನಾನಾ ಛಂದೋಗತಿಗಳಿಂದ, ವಿವಿಧ ತಾಳ ರಾಗಗಳಿಂದ, ಸಮಯೋಚಿತವಾದ ನಾಳ್ನುಡಿಗಳಿಂದ, ಸಹಜ ವಾದ ಅಲಂಕಾರಗಳಿಂದ, ಶೃಂಗಾರ ವೀರ ಹಾಸ್ಯಾದಿ ನವರಸಗಳಿಂದ, ಚಮತ್ಕಾರಿಕವಾದ ರಂಗದೃಶ್ಯಗಳಿಂದ ಕೂಡಿದ ಪಾರ್ತಿಸುಬ್ಬ ಕವಿಯ ಪ್ರಸಂಗಗಳು ಸಾಹಿತ್ಯ ದೃಷ್ಟಿಯಲ್ಲಿಯೂ, ದೃಶ್ಯಕಾವ್ಯದ ನೆಲೆಯಲ್ಲಿಯೂ ಉನ್ನತವಾದ ಸ್ಥಾನವನ್ನು ಪಡೆಯುತ್ತವೆ. ಆದ್ದರಿಂದಲೇ ಪಾಮರ ಪಂಡಿತರಾದಿಯಾಗಿ ಅತ್ಯಂತ ಜನಪ್ರಿಯವಾಗಿವೆ.

ಯಕ್ಷಗಾನದಲ್ಲಿ ಆಟ (ಬಯಲಾಟ), ತಾಳಮದ್ದಳೆ ಎಂಬ ಎರಡು ಪ್ರಕಾರಗಳಿವೆ. ಪ್ರಸಂಗದಲ್ಲಿ ಬರುವ ಪಾತ್ರಗಳ ವೇಷ ಹಾಕಿ ರಂಗಸ್ಥಳಕ್ಕೆ ಬಂದು ನರ್ತನ, ಅಭಿನಯ, ಮಾತುಗಳಿಂದ ಆಡಿ ತೋರಿಸುವುದು ಆಟ. ವೇಷಭೂಷಣವೇನೂ ಇಲ್ಲದೆ ರಂಗಸ್ಥಳದ ಪ್ರವೇಶ ನಿರ್ಗಮನ ಯಾವುದೂ ಇಲ್ಲದೆ ಸಭೆಯಲ್ಲಿ ಕುಳಿತಂತೆ ಪ್ರಸಂಗದ ಪಾತ್ರಗಳನ್ನು ಆಹ್ವಾನಿಸಿಕೊಂಡು ತಮ್ಮ ನಿತ್ಯ ವೇಷದಲ್ಲಿಯೇ ಬೇರೆ ಬೇರೆ ಪ್ರಸಂಗಗಳ ಪಾತ್ರಧಾರಿಗಳಾಗಿ ಮಾತನಾಡುವುದು ತಾಳಮದ್ದಳೆಯ ಕ್ರಮ; ಇವೆರಡರಲ್ಲಿಯೂ ಪ್ರಸಂಗ ಗಳನ್ನು ತಾಳಲಯಬದ್ಧವಾಗಿ ಹಾಡುವ ಭಾಗವತ, ಆತನ ಜತೆಗೆ ಚೆಂಡೆ ಮದ್ದಳೆ ಎಲ್ಲಾ ಇರಬೇಕು. ವೇಷಭೂಷಣ ನರ್ತನಾದಿಗಳಿಂದ ಸಭಾಸದ ರನ್ನು ತನ್ಮಯಗೊಳಿಸುವುದಕ್ಕಿಂತಲೂ, ಅದಾವುದೂ ಇಲ್ಲದೆ ಕೇವಲ ಮಾತಿನ ಭಂಗಿಯಿಂದ ರಸಿಕರ ತಲೆದೂಗಿಸುವ ತಾಳಮದ್ದಳೆಯ ಪ್ರಯೋಗ ಹೆಚ್ಚು ಕುಶಲತೆಯದ್ದು. ಇವೆರಡಕ್ಕೂ ಸರಿಯಾದ ಪರಿಣಾಮ ಹುಟ್ಟಿಸ ಬೇಕಾದರೆ ಪ್ರಸಂಗದ ಸಾಹಿತ್ಯ ಉನ್ನತಮಟ್ಟದ್ದಿರಬೇಕು. ಪಾರ್ತಿಸುಬ್ಬನ ಪ್ರಸಂಗಗಳು ಆಟ, ತಾಳಮದ್ದಳೆ ಎಂಬೀ ಉಭಯಪ್ರಕಾರಗಳಿಗೂ ಅತ್ಯಂತ ಪ್ರಭಾವಶಾಲೀ ಮಾಧ್ಯಮಗಳಾಗಿರುವುದರಿಂದ, ಕಲಾವಿದರ ಪ್ರಶಂಸೆಗೆ ಪಾತ್ರವಾಗಿವೆ.

ಕೇರಳದಲ್ಲಿಯೂ ಇಂತಹುದೇ ಒಂದು ಕಲಾ ಸಾಹಿತ್ಯ ಮಾಧ್ಯಮ ವಿದೆ. ಅದನ್ನು 'ಕಥಕ್ಕಳಿ' ಎನ್ನುತ್ತಾರೆ. ಪ್ರಸಂಗ ಸಾಹಿತ್ಯದಲ್ಲಿ, ವೇಷ ಭೂಷಣಾದಿಗಳಲ್ಲಿ, ರಾಗ ತಾಳ ನರ್ತನಾದಿಗಳಲ್ಲಿಯೂ ಇವೆರಡಕ್ಕೂ ಸಾಮ್ಯ ವನ್ನು ಕಾಣಬಹುದು. ಭಾಗವತರು, ಚೆಂಡೆ ಮದ್ದಳೆ, ರಂಗಸ್ಥಳ ಎಲ್ಲವೂ ಹೀಗೆಯೇ. ಆದರೆ ಕಥಕ್ಕಳಿಯಲ್ಲಿ ಕೇವಲ ಮುದ್ರೆಗಳ ಆಂಗಿಕಾಭಿನಯ ವಲ್ಲದೆ ಯಕ್ಷಗಾನದಂತೆ ಪಾತ್ರಗಳ ಮಾತುಗಾರಿಕೆಯಿಲ್ಲ. ನಮ್ಮಲ್ಲಿನ ತಾಳ ಮದ್ದಳೆಯ ಪ್ರಕಾರ ಅಲ್ಲಿ ಇಲ್ಲ. ಕೇರಳದ ಮಹಾಕವಿ ವಲ್ಲತ್ತೋಳ್, ಕಥಕ್ಕಳಿಯನ್ನು ದೇಶವಿದೇಶಗಳಿಗೆ ಕೊಂಡೊಯ್ದು ಬಹಳ ಹಿಂದೆಯೇ ಜನ ಪ್ರಿಯಗೊಳಿಸಿದರು. ಅವರು ಸ್ಥಾಪಿಸಿದ ಕಲಾಮಂಡಲ ಕಥಕ್ಕಳಿಯ ಶಿಕ್ಷಣ ನೀಡಿ ಇನ್ನಷ್ಟು ಪ್ರಚುರಗೊಳಿಸುತ್ತದೆ. ಈ ಕಾರ್ಯ, ಯಕ್ಷಗಾನದ ಮಟ್ಟಿಗೆ ಆದದ್ದು ತುಂಬಾ ತಡವಾಗಿ.ಡಾ। ಶಿವರಾಮಕಾರಂತರ ಸಾಹಸದಿಂದ ಇಂದು ಯಕ್ಷಗಾನವೂ ಸೀಮೋಲ್ಲಂಘನ ಮಾಡಿದೆ ಎಂಬುದು ನಮಗೆಲ್ಲಾ ಅಭಿಮಾನ ತರುವಂತಹ ಕಾರ್ಯವಾಗಿದೆ.

ಇಂತಹ ಸೀಮೋಲ್ಲಂಘನ ಕಾರ್ಯವನ್ನು 'ಕಥಕ್ಕಳಿ' ಮೊದಲು ಮಾಡಿತು ಎನ್ನುವುದರಿಂದಲೋ ಏನೋ, ಕೆಲವರು ಕಥಕ್ಕಳಿಯೇ ಯಕ್ಷಗಾ ನದ ಮೂಲವೆಂದೂ, ಪಾರ್ತಿಸುಬ್ಬ ಕವಿ ಅಲ್ಲಿಂದ ಸ್ಫೂರ್ತಿ ಪಡೆದನೆಂದೂ ಹೇಳುವಂತಾಗಿದೆ. ಈ ಭಾವನೆ ಅಷ್ಟೊಂದು ಸರಿಯಾದುದಲ್ಲ, ತದ್ವಿರುದ್ಧ. ಕಥಕ್ಕಳಿಗೆ ನಮ್ಮ ಯಕ್ಷಗಾನವೇ ಮೂಲವೆಂಬುದನ್ನು ನಾವು ಸಾಧಿಸಬಹು ದಾಗಿದೆ. ಮುಖ್ಯವಾಗಿ ಮಲೆಯಾಳ ಭಾಷೆ ಸಾಹಿತ್ಯ ಕನ್ನಡ ಭಾಷಾ ಸಾಹಿತ್ಯಕ್ಕಿಂತ ಎಷ್ಟೋ ಅರ್ವಾಚೀನ. ಪ್ರಾಚೀನ ಸಾಹಿತ್ಯದಿಂದ ಅರ್ವಾಚೀನ ಸಾಹಿತ್ಯ ವಿಷಯ ಸಂಗ್ರಹಿಸುವುದು ಕ್ರಮವಾಗಿದೆ. ಕಥಕ್ಕಳಿ ಹಾಡುಗಳ ಶೈಲಿ ಸಂಸ್ಕೃತ ಭೂಯಿಷ್ಠ; ಕೇರಳದ ಮಣಿಪ್ರವಾಳವೆಂಬ ಶೈಲಿಗೆ ಸಮೀಪದ್ದು. ನಮ್ಮ ಯಕ್ಷಗಾನದ, ಆದರಲ್ಲೂ ಪಾರ್ತಿಸುಬ್ಬನ ಶೈಲಿ ಅತ್ಯಂತ ಸರಳ, ಅಚ್ಚಗನ್ನಡ ಭಾಷೆಯದ್ದು. ಕಾವ್ಯ ಶಾಸ್ತ್ರಾದಿಗಳ ಅಭ್ಯಾಸ ವನ್ನು ಮಾಡದೆ ಇದ್ದರೂ, ಯಕ್ಷಗಾನದ ಮೂಲಕ ಆಟ ತಾಳಮದ್ದಳೆ ಗಳಿಂದ, ಕಾವ್ಯ ಶಾಸ್ತ್ರ ಪುರಾಣಗಳ ಅನುಭವವುಳ್ಳ ಕನ್ನಡಿಗರ ಕುರಿತೇ, ಕನ್ನಡದ ಆದಿಯ ಅಲಂಕಾರಿಕನಾದ ನೃಪತುಂಗನು "ಕುರಿತೋದದೆಯುಂ

ಕಾವ್ಯಪ್ರಯೋಗ ಪರಿಣತ ಮತಿಗಳ್" ಎಂದು ಹೇಳಿದ್ದಾಗಿ ತಿಳಿಯಬೇಕು. ಅಗ್ಗಳನ "ಚಂದ್ರಪ್ರಭಾ ಪುರಾಣ"ದಲ್ಲಿ, ಅಭಿನವ ಪಂಪನ "ಮಲ್ಲಿನಾಥ ಪುರಾಣ"ದಲ್ಲಿ ಕೂಡ ಯಕ್ಷಗಾನದ ಸೂಚನೆ ಕಂಡುಬರುವುದರಿಂದ ಇಷ್ಟು ಪ್ರಾಚೀನವಾದ ಕರ್ನಾಟಕದ ಕಲೆ, ಅರ್ವಾಚೀನ ಭಾಷೆಯಾದ ಮಲೆಯಾಳದ "ಕಥಕ್ಕಳಿ"ಯಿಂದ ಬಂತು ಎಂಬುದು ತೀರಾ ಅಸಂಗತವೆನಿಸುತ್ತದೆ.

ಇಷ್ಟು ಮಾತ್ರವಲ್ಲ, ಈ ವಿಷಯವಾಗಿ, ಪಾರ್ತಿಸುಬ್ಬ ಕವಿಯ ಪ್ರಾಶಸ್ತ್ಯದ ಕುರಿತು ನನಗೆ ತಿಳಿದುಬಂದ ಒಂದು ದಂತ ಕಥೆಯನ್ನೂ ಇಲ್ಲಿ ಪ್ರಸ್ತಾಪಿಸುವುದು ಅಪ್ರಸ್ತುತವಾಗಲಾರದು.

ಕಥಕ್ಕಳಿಯ ರಾಮಾಯಣ ಪ್ರಸಂಗಗಳನ್ನು ಓರ್ವನೇ ಬರೆದಿದ್ದಾನೆ; ಆತ ರಾಜವಂಶೀಯ. ಎಳವೆಯಲ್ಲಿ ಆತ ಮೂಕನಾಗಿದ್ದ. ರಾಜಮಾತೆ ಆ ಮೂಕ ಪುತ್ರನನ್ನು ಒಬ್ಬ ಬ್ರಾಹ್ಮಣನ ವಶ ಒಪ್ಪಿಸಿದಳು. ಆ ಬ್ರಾಹ್ಮಣನು ಮೂಕ ಬಾಲಕನೊಂದಿಗೆ ಅಲ್ಲಿಂದ ಪ್ರಯಾಣ ಮಾಡುತ್ತಾ ಕುಂಬಳೆಯ ಈ ಗೋಪಾಲಕೃಷ್ಣ ದೇವಾಲಯಕ್ಕೆ ಬಂದನು. ಅಲ್ಲಿ ಆ ಮೂಕ ಬಾಲಕನನ್ನು ಪಾರ್ತಿಸುಬ್ಬನ ವಶವೇ ಬಿಟ್ಟು ಹೋದನು. ದೇವರ ಸೇವೆಯನ್ನೂ ಕವಿಯ ಶುಶ್ರೂಷೆಯನ್ನೂ ಮಾಡುತ್ತಾ ಆ ಬಾಲಕನಿರುವ ವೇಳೆ, ಒಂದು ದಿನ ಕಾಲು ಜಾರಿ ದೇವಾಲಯದ ಕೆರೆಗೆ ಬಿದ್ದನು. ಆ ಅಸಹಾಯಕ ಸ್ಥಿತಿಯಲ್ಲಿ, ದೇವರ ದಯೆಯಿಂದಲೋ ಎಂಬಂತೆ ಹುಡುಗನ ಬಾಯಿಂದ ಮಾತುಗಳು ಹೊರಟವು. ಮುಂದೆ ಆ ಬಾಲಕನು ಪಾರ್ತಿಸುಬ್ಬ ಕವಿಯ ಸೇವೆ ಮಾಡಿ ಕೊಂಡಿದ್ದು ಆತನಿಂದ ಯಕ್ಷಗಾನ ವಿದ್ಯೆಯನ್ನು ಅಭ್ಯಾಸ ಮಾಡಿದನು. ಕೆಲಕಾಲದ ನಂತರ ಸ್ವದೇಶಕ್ಕೆ ಹೋಗಿ ಕಥಕ್ಕಳಿಯ ರಾಮಾಯಣ ಪ್ರಸಂಗ ಗಳನ್ನು ರಚಿಸಿದನು. "ಅರಿದು ಬರುವುದು ವಿಪಿನೇ" ಎಂಬೀ ತೆರನ ಕನ್ನಡ ಮಾತುಗಳು ಆ ಕಥಕ್ಕಳಿ ಹಾಡುಗಳಲ್ಲಿ ಕಂಡು ಬರುವುದೂ ಈ ದಂತಕಥೆಗೆ ಆಧಾರವಾಗಿದೆ.

ಈ ಸಂಗತಿಯನ್ನು ಹೇಳಿದವರು ಕುಂಬಳೆಯಲ್ಲಿ ವಿದ್ಯಾಧಿಕಾರಿಗಳಾಗಿದ್ದ ಶ್ರೀ ಕೆ.ಪಿ. ಕೃಷ್ಣನ್ ನಂಬಿಯಾರ್ ಎಂಬ ಮಲೆಯಾಳೀ ಮಿತ್ರರು. ಅವರು

ಮಲೆಯಾಳೀ ಸಾಹಿತ್ಯದಲ್ಲಿ ಚೆನ್ನಾಗಿ ಪರಿಣತರು. ಈ ಕಡೆಗೆ ಬಂದು ಇಲ್ಲಿನ ಭಾಷೆ ಸಾಹಿತ್ಯ ಯಕ್ಷಗಾನ ಮೊದಲಾದವುಗಳನ್ನು ತಿಳಿದುಕೊಂಡವರು. ಈ ದಂತಕಥೆಯ ಸತ್ಯಾಸತ್ಯತೆ ಏನೇ ಇರಲಿ, ಕೇರಳದ ಕಥಕ್ಕಳಿಯಿಂದ ನಮ್ಮ ಯಕ್ಷಗಾನ ಬಂತೆಂದಾಗಲಿ, ಪಾರ್ತಿಸುಬ್ಬನು ಕೇರಳದ ಕಥಕ್ಕಳಿ ಪಾಟುಗಳಿಂದ ತನ್ನ ಕೃತಿಗಳನ್ನು ಅನುವಾದಿಸಿದನೆಂದಾಗಲಿ ಹೇಳುವುದು ಸಮಂಜಸವಾಗಲಾರದು.

ಯಕ್ಷಗಾನದ ಮೂಲಕ. ಆಟ ತಾಳಮದ್ದಳೆಗಳ ಮೂಲಕ, ಶಾಸ್ತ್ರ ಪುರಾಣಗಳನ್ನು ಓದದ ನಿರಕ್ಷರಕುಕ್ಷಿಗಳು ನ್ಯಾಯಾನ್ಯಾಯ ಧರ್ಮಾಧರ್ಮ ಗಳನ್ನು ತಿಳಿದುಕೊಳ್ಳುತ್ತಾರೆ; ರಾಮಾಯಣ, ಮಹಾಭಾರತದ ಕಥೆಗಳನ್ನು ಆಟ ತಾಳಮದ್ದಳೆಗಳಲ್ಲಿ ನೋಡಿ ಕೇಳಿ ಗ್ರಹಿಸಿಕೊಳ್ಳುತ್ತಾರೆ. ರಾವಣನಂತೆ ಇರಬಾರದು; ರಾಮನಂತಿರಬೇಕು. ಕೌರವನಂತೆ ಹಠಮಾಡಬಾರದು; ಧರ್ಮಜನಂತೆ ಒಳ್ಳೆಯವನಾಗಿರಬೇಕು. ಸೀತೆಯಂತೆ ಪತಿವ್ರತೆಯಾಗಿರ ಬೇಕು; ಶೂರ್ಪನಖೆಯಂತೆ ಸ್ವೇಚ್ಛಾಚಾರಿಣಿಯಾಗಕೂಡದು ಎಂಬೀ ನೀತಿ ಯನ್ನು ಪಾಮರರಾದವರೂ ಯಕ್ಷಗಾನದಿಂದ ತಿಳಿದುಕೊಂಡು ಸಂಸ್ಕೃತಿ ಸಂಪನ್ನ ರಾಗುತ್ತಾರೆ. ಅಂತಹ ಒಂದು ಉತ್ತಮ ಕಲೆಯನ್ನು ಪ್ರಚಾರಪಡಿಸಿದ, ಅದಕ್ಕಾಗಿ ಅಮೂಲ್ಯ ಸಾಹಿತ್ಯ ರಚನೆ ಮಾಡಿದ ಯಕ್ಷಗಾನದ ಆಚಾರ್ಯ ಪುರುಷನಾದ ಪಾರ್ತಿಸುಬ್ಬ ಮಹಾಕವಿಯ ಕೃತಿಗಳ ಅಭ್ಯಾಸ ಸರ್ವಕಾಲಕ್ಕೂ ಸರ್ವರಿಗೂ ಅವಶ್ಯವಾಗಿದೆ. ಈ ಪುಸ್ತಕದ ಪ್ರಕಟನೆ ಅಂತಹ ಅಭ್ಯಾಸಕ್ಕೆ ಸಹಾಯಕವಾಗಿದೆ.

ಪೆರಡಾಲ
2-8-1984

ಕಯ್ಯಾರ ಕಿಞ್ಞಣ್ಣ ರೈ

# ಪುತ್ರಕಾಮೇಷ್ಟಿ - ಸೀತಾಕಲ್ಯಾಣ

## ಪಾತ್ರಗಳು

ದಶರಥ
ಸುಮಂತ್ರ
ವಸಿಷ್ಠಮುನಿ
ವಿಶ್ವಾಮಿತ್ರಮುನಿ
ರಾಮ
ಲಕ್ಷ್ಮಣ
ಜನಕರಾಯ
ಸುಮತಿರಾಜ
ಗೌತಮಋಷಿ
ಸುಬಾಹು
ಮಾರೀಚ
ಕುಶಧ್ವಜ
ಪರಶುರಾಮ

ಕೌಸಲ್ಯೆ
ಕೈಕೆ
ಸುಮಿತ್ರೆ
ಅಹಲ್ಯೆ
ತಾಟಕಿ
ಸೀತೆ

ರಾಕ್ಷಸರು
ದೂತರು

# ಪುತ್ರಕಾಮೇಷ್ಟಿ - ಸೀತಾಕಲ್ಯಾಣ

### ಮಾಲಿನೀ ವೃತ್ತ

ಮದಗಜವದನಂ ತಂ ವಿಘ್ನವಿಚ್ಛೇದ ದಕ್ಷಂ । ಸರಸಿಜಭವ ಜಾಯಾಂ ಭಾರತೀಂ ಸೋಮಮೀಶಂ ॥ ನಿಶಿಚರಕುಲಕಾಲಂ ರಾಘವಂ ಜಾನಕೀಶಂ । ಪ್ರತಿದಿನ ಮತಿಭಕ್ತ್ಯಾ ನೌಮಿ ವಾಲ್ಮೀಕಿಮಾರ್ಯಂ ॥

### ಶಾರ್ದೂಲವಿಕ್ರೀಡಿತ ವೃತ್ತ

ಪ್ರಾಪ್ತಾನಂತ ಘನಶ್ರಿಯಃ ಪ್ರಿಯತಮ ಶ್ರೀರೋಹಿಣೀ ಜನ್ಮನೋ । ಪಂಚಿಸ್ತ್ರ್ಯವರ ವೀರಕೇರಳ ವಿಭೋಃ ರಾಜ್ಞಃ ಸ್ವಸೋಃ ಸೂನುನಾ ॥ ಶಿಷ್ಯೇಣ ಪ್ರವರೇಣ ಶಂಕರಕವೇಃ ರಾಮಾಯಣಂ ವರ್ಣ್ಯತೇ । ಕಾರುಣ್ಯೇನ ಕಥಾಗುಣೇನ ಕವಯಃ ಕುರ್ವಂತಿ ತಾಂ ಕರ್ಣಯೋಃ ॥

### ನಾಟರಾಗ - ಝಂಪೆ ತಾಳ

ಜಯತು ಗೌರಿಯ ಕುವರ । ಜಯ ಸಕಲ ವಿಘ್ನಹರ । ಜಯತು ಭದ್ರಾಕಾರ । ಜಯ ಸುರೋದ್ಧಾರ ॥ ಜಯತು ॥ ಪಲ್ಲ ॥ ದ್ಯುಮಣಿ ಕೋಟಿವಿರಾಜ । ಹೇರಂಬ ಗಣರಾಜ । ಕುಮುದ ಕುಟ್ಮಲದಂತ । ಬಹು ಸುಗುಣವಂತ ॥ ರಮಣೀಯಾಕರರೂಪ । ರಕ್ಷಿಸೆನ್ನನು ಗಣಪ । ನಮಿಪೆನ್ನೈ ಬಿಡದು । ಹೇ ದಯಾ ಸಿಂಧು ॥ ಜಯತು ॥ ೧ ॥ ಕಾಲಕರ್ಮವಿದೂರ । ಬಹುದುರಿತ ಸಂಹಾರ । ಮೂರುಲೋಕ ಸಂಚಾರ । ಕೀರ್ತಿವಿಸ್ತಾರ ॥ ಶೀಲ ಕರುಣಾಪಾಂಗ । ನಿಖಿಲಾಗಮೋತ್ತುಂಗ । ಪಾಲಿಸೋ ಮಂಗಲವ । ಕೋರಿಸೊಳ್ಳೊಲಿವ ॥ ಜಯತು ॥ ೨ ॥ ವರವೀವ ದಾತಾರ । ಶರಧಿ ಸಮ ಗಂಭೀರ । ಮೆರೆವ ಮೋಹನ ಕಾಯ । ಮೋದಕ ಪ್ರಿಯ ॥ ಶರಣ ಜನ ಕುಲರಕ್ಷ । ಸಕಲ ದೇವಾಧ್ಯಕ್ಷ । ವರದ ಮಧುಪುರವಾಸ । ಶರಣು ವಿಘ್ನೇಶ ॥ ಜಯತು ॥ ೩ ॥

### ಕಂದ ಪದ್ಯ

ಗಜವದನ ಗೌರಿ ಶಾರದೆ । ಯಜಪಂಕ್ತಿ ಸರೋಜಯುಗಳಕಭಿ
ವಂದಿಸುತಂ ॥ ಸುಜನಾಧಿಪ ವಾಲ್ಮೀಕಿಯು । ಭಜಿಸುತೆ ಸಾಂಗದಲಿ ಪೇಳ್ವೆ
ರಾಮಾಯಣಮಂ ॥

### ದ್ವಿಪದಿ

ಪರಶಿವನ ಪಾದಕ್ಕೆ ಪೊಡಮಟ್ಟು ನಿಂದು । ಗಿರಿಜೆ ಪರಿಕಥೆಗಧಿಕವಾವು
ದೆನಲಂದು ॥ ೧ ॥ ರಾಮನಾಮಾಮೃತವು ರಮಣೀಯ ಕರವು । ಭಾಮಿನೀ
ಮಣಿ ಕೇಳು ಬಲು ಸೌಖ್ಯಪ್ರದವು ॥ ೨ ॥ ಎನಲಾಗಲಾ ಕಥೆಯಸನಗೆ
ಪೇಳೆನಲು । ಘನ ಮಹಿಮ ರಾಮಾಯಣವನರುಹುತಿರಲು ॥ ೩ ॥ ಇತ್ತ
ಬದರಿಯೊಳೊಬ್ಬ ಚೋರವ್ಯಾಧನಿಗೆ । ಉತ್ತಮ ಶ್ಲೋಕ ಮುನಿವರರ
ದಯವಾಗೆ ॥ ೪ ॥ ಪರಮ ತಪಸಿಗೆ ಮೆಚ್ಚಿ ಪರಮೇಷ್ಠಿ ಬಂದು ।
ಕರುಣಿಸಲು ವಾಲ್ಮೀಕಿ ಮುನಿಯಾದನಂದು ॥ ೫ ॥ ವರ ಕ್ರೌಂಚ ಪಕ್ಷಿಯನು
ಕಂಡು ಚಿಂತಿಸಲು । ಸುರಮುನಿಪ ನಾರದನು ಶೀಘ್ರದಿಂ ಬರಲು ॥ ೬ ॥
ನಾರದನ ಚರಣಕ್ಕೆ ನಮಿಸಿ ನಿಂದಿರುವ । ಪಾರಿಕಾಂಕ್ಷಿಯನಾಗ ಕಂಡು
ಕನಿಕರವ ॥ ೭ ॥ ಪಿಡಿದು ರಜತಾದ್ರಿಯಲಿ ಪಾರ್ವತಿಗೆ ಪ್ರಿಯದಿ । ಮೃಡ
ಪೇಳ್ದ ರಾಮಾಯಣವನುಸುರೆ ಮುದದಿ ॥ ೮ ॥ ಕೇಳಿ ವಾಲ್ಮೀಕಿ
ರಘುವರನ ಚರಿತವನು । ಪೇಳಲಾ ಬಾಲಕರು ಮುಗಿದು ಕರಗಳನು ॥ ೯ ॥
ನಮ್ಮ ಪೂರ್ವಜರೆಂತು ಜನಿಸಿದರು ಜೀಯ । ಘಮ್ಮನರುಹೆನಲೆಂದನಾಗ
ಮುನಿರಾಯ ॥ ೧೦ ॥

### ಮಧ್ಯಮಾವತಿ ರಾಗ - ತ್ರಿವುಡೆ ತಾಳ

ಬ್ರಹ್ಮನಿಂದ ಮರೀಚಿ ಕಶ್ಯಪ । ಸೂರ್ಯ ಮನು ವಾಕುಕ್ಷಿಯು ॥
ಧರ್ಮಯುತನು ವಿಕುಕ್ಷಿ ಇಕ್ಷ್ವಾಕು । ವರ ದಿಲೀಪ ರಘೂತ್ತಮ ॥
ರಾಮ ರಾಮ ॥ ೧ ॥ ಅಜಕುಮಾರ ಸುಧೀರ ಮಂಗಲ । ತ್ರಿಜಗವಂದಿತ
ನೆನಿಸುವ ॥ ಸುಜನ ರಕ್ಷಕನಾದ ದಶರಥ । ನೃಪತಿಲಕನೆನಿಸಿರ್ದನು ॥
ಹರುಷದಿಂದ ॥ ೨ ॥ ಭಾಸುರಾಂಗದ ದಶರಥೇಂದ್ರಗೆ । ಕೌಸಲ್ಯಾ ಸ್ತ್ರೀರತ್ನವು ॥
ಆ ಸುಕೈಕೆ ಸುಮಿತ್ರೆಯರ ರಾ । ಜೇಶ ವರಿಸಿ ವಿವಾಹದಿ ॥ ಸುಖದೋಳಿರ್ದ

॥ ೩ ॥ ಒಂದು ದಿನದಿ ಸು । ಮಂತ್ರ ಕೌಸಲೆ । ಇಂದೀವರಾಕ್ಷಿ ಸು । ಮಿತ್ರೆಯೂ । ಮಂದಗಮನದ । ಕೈಕೆ ಸಹಿತಾ । ನಂದದಲಿ । ಬಂದನು ದಶರಥೇಂದ್ರ ॥ ೪ ॥

### ನವರೋಜು ರಾಗ - ಏಕತಾಳ

ದೇವ ದೇವ । ದಯಾಸಾಂದ್ರ । ಭಾವಿಪೆನಾ ಮುದದಿಂದ ॥ ಪ ॥ ನಂಬಿದವರಾ । ನಂದದಿಂದ । ಬೆಂಬಿಡದೆ । ಪೊರೆವ ಧೀರ ॥ ಅ. ಪ ॥ ಕರುಣಾನಿಧೇ । ಕರಿವರದ । ಉರಗಶಯನ । ಗರುಡರಥ । ಮುರ ಮಥನ । ಸಿರಿಯರಸ । ಪೊರೆ ಎನ್ನ । ಗುರುರಾಯ ॥ ೧ ॥ ಕುಂದರದನಾ । ನಂದಶರಧೇ । ಚಂದ್ರಕೋಟಿ । ಸುಂದರಾಂಗ । ಇಂದೀವರಾಕ್ಷ । ಇಂದ್ರರಕ್ಷ । ವಂದಿಸುವೆ ಗೋ । ವಿಂದ ಸಲಹೊ ॥ ೨ ॥

### ಮತ್ತೇಭ ವಿಕ್ರೀಡಿತ

ಇನವಂಶಾಬ್ಧಿ ಅಯೋಧ್ಯೆಯೊಳ್ ದಶರಥಂ ಒಡ್ಡೋಲಗಂ ಗೊಟ್ಟು
ತಂ। ಮನ ಕಂದುತ್ತ ಸುಮಂತ್ರ ಮಂತ್ರಿ ಮುಖಮಂ ನೋಡುತ್ತಲಿರ್ಪಾಗಳಾ।
ಅನುವಿಂ ಬಂದ ವಸಿಷ್ಠರಿಂಗೆರಗುತಾ ಮಾತಾಡುವಾ ಭಕ್ತಿಯಿಂ । ಜನ
ಪಾಲಾಗ್ರಣಿ ತನ್ನ ಕಾರ್ಯದಿರವಂ ಪೇಳುತ್ತಲಿಂತೆಂದನು ॥

### ಘಂಟಾರವ ರಾಗ - ಝಂಪೆತಾಳ

ವರಮುನೀಶ್ವರ ದೇವ । ಪರಮ ಗುರುವೆ ॥ ಪಲ್ಲ ॥ ಪರಮೇಷ್ಠಿಯಾ ಕುವರ । ಎನ್ನ ರಕ್ಷಿಸು ತಂದೆ । ಕರವ ಮುಗಿಯುವೆನೊಂದು । ಮಾತನೀ ಕೇಳು ॥ ವರ ॥ ೧ ॥ ಹೇಳೆನ್ನ ಭೂಪಾಲ । ನಿನ್ನ ಮನದಿರವ ಸುರಪಾಲನಿಗೆ ಸಮಧೀರ। ಮೂರ್ಲೋಕ ತಿಲಕ ॥ ವರ ॥ ೨ ॥ ಮಕ್ಕಳಿಲ್ಲದರಿಂದ ॥ ಮಾನಸದೊಳಿಂದು ನಾ । ಕಕ್ಕುಲತೆಗೊಳುತ ಬಲು । ದುಃಖಿಸುವೆನಯ್ಯ ॥ ವರ ॥ ೩ ॥ ಅರಿತೆ ನಿನ್ನಯ ಪರಿಯ । ಧರಣಿಪಾಲಾಗ್ರಣಿಯೆ । ತರಿಸು । ಬೇಕಾದುದನು । ಮಾಡು ಯಜ್ಞವನು ॥ ವರ ॥ ಅಶ್ವಮೇಧವ ರಚಿಸು । ಅಮರ ಕುಲಗಳಿಗೆಲ್ಲ । ಆಶ್ಚರ್ಯಮಾಡಿದರೆ । ಆಗದೇನಯ್ಯ ॥ ವರ ॥ ೫ ॥ ತುರಗವ ಬಿಡು ನೃಪತಿ । ದೀಕ್ಷೆಯನು ಆಚರಿಸು । ಹರಿಣಾಕ್ಷಿಯರ ಸಹಿತ । ನಾಗಿ ತೊಡಗಯ್ಯ ॥ ವರ ॥ ೬ ॥

### ಕಂದ ಪದ್ಯ

ಇಂತೆಂದಾ ಋಷಿ ಪೇಳಲ್ । ಸಂತಸದಿಂ ನೃಪತಿ ಬೀಳ್ಕೊಡುತ ಮುನಿಗಳನುಂ ॥ ಮಂತ್ರಿ ಸುಮಂತ್ರನ ಕೈವಿಡಿ । ದಂತಃಪುರದೆಡೆಗೆ ಬಂದರಸಿಯರೊಳೆಂದಂ ॥

### ಕಾಂಬೋಧಿ ರಾಗ - ಏಕತಾಳ

ಪಾರಿಜಗಂಧಿ ವಯ್ಯಾರೆ । ನೀರೆ ಮುದ್ದು ನಲ್ಲೆ ॥ ಮಾರನಾ ಮದ್ದಾನೆ ಎನ್ನ । ಮಾನಿನಿ ಕೌಸಲ್ಯೆ ॥ ೧ ॥ ತರಳರಿಲ್ಲವೆಂದು ಹಲುಬುತಿರೆ ವಿಧಾತ್ರಸೂನು ॥ ಬರುತ ಮುಖಮಾತೆಂದನದಕೆ । ನೀನೆನ್ನುವುದೇನು ॥ ೨ ॥ ಒಳ್ಳಿತಾಯಿತು ಭೂಪಾಲ । ಕುಲವೊಳಮಿತ ಶೌರ್ಯ ॥ ಎಲ್ಲ ನಮಗೆ ಇದಿಂಗಲೆ । ಕಲ್ಯಾಣದ ಕಾರ್ಯ ॥ ೩ ॥ ನೀ ಕೇಳಿದೇನೆ ಕೈಕೆ । ನಿನ್ನ ಮನವೇನೇ ॥ ಏಕಾಂತವೇತಕೆ ಯಜ್ಞ । ರಚಿಸುವರಿನ್ನೇನೇ ॥ ೪ ॥ ಚಂದವಾಯ್ತು ರಮಣ ರಚಿಸು । ಇಂದೇ ಕ್ರತುವ ಜವದಿ ॥ ಕಂದನ ಪಡೆದು ನಿತ್ಯಾ । ನಂದಗೊಳುವೆ ಮನದಿ ॥ ೫ ॥ ನಿನ್ನ ಮನವೇನೆ ಕನ್ಯೆ ॥ ರನ್ನಳೇ ಸುಮಿತ್ರೆ ॥ ಪನ್ನಗ ವೇಣಿಯೆ ಬೇಗ । ಪೇಳೆ ಚಾರುಗಾತ್ರೆ ॥ ೬ ॥ ಮನ್ಮಥಕಲೆಯ ಬಲ್ಲ । ಮುದ್ದು ನಲ್ಲ ಪ್ರೌಢಾ ॥ ಇನ್ನು ತಡವೇಕೆ ಕ್ರತುವ । ಆಚರಿಸೊ ಗಾಢಾ ॥ ೭ ॥

### ವಚನ

ಇಂತೆಂದು ಪೇಳ್ದ ಕಾಂತೆಯರ ಮಾತಂ ಕೇಳ್ದು ದಶರಥ ನೃಪತಿ ಸುಮಂತ್ರನಂ ಕಂಡು ಮುನಿಗಳಿಂದ ಮುಖದೊಳ್ ಮಕ್ಕಳಾಗುವುದೇ ಏನೆಂದು ಪೇಳೆನಲ್ಕಾ ಮಂತ್ರಿ ಬಳಿಕೆಂದಂ -

### ಸವಾಯ್ ರಾಗ - ಏಕತಾಳ

ಭೂಪಾಲಾಗ್ರಣಿ ಕೇಳಿದೆಯೇನೈ । ದೇವ ಮುನಿಯು ತಾ ಪೇಳಿದ ಹದನು ॥ ಸೂರ್ಯಾನ್ವಯದೊಳು ಜನಿಸಿದ ದಶರಥ । ಧಾರುಣಿ ಪಾಲಿಸುವಾ ಸಮಯದೊಳಂ ॥ ೧ ॥ ಸುತಹೀನರು ವೈಭಾಂಡಕ ಮೌನಿಯ । ಸುತನಿಂ ಮಖವನು ಮಾಡಿದರಿಂದಂ ॥ ಸುತರಾಗುವರದರಿಂದಾತನ ನೀ । ಜತನದಿ ಕರೆಸೆನಲವ ನಿಂತೆಂದಾ ॥ ೨ ॥

ಭೈರವಿ ರಾಗ - ಝಂಪೆತಾಳ

ಚಿಂತೆಯನು ಪರಿಹರಿಸು । ಮಂತ್ರಿಕುಲ ಮೌಕ್ತಿಕ ಸು । ಮಂತ್ರ ನೀನೆಂದೆನಲಿ । ಕಂತುಪಿತನಾಗ ॥ ॥ ೧ ॥ ಪುತ್ರಕಾಮೇಷ್ಟಿಯನು । ಋತ್ವಿಜರ ಕೈಯಿಂದ । ಪೃಥ್ವಿಯೊಳು ಮಾಡಿಸೈ । ಶಾಸ್ತ್ರವಿಧಿಯಿಂದ ॥ ೨ ॥ ಆಗಲಾಗಲಿ ಮಂತ್ರಿ । ಏ ಗುಣಾಢ್ಯನೆ ಯಜ್ಞ । ಸಾಗಬೇಕಾದಡದ । ಕೇಸು ಸಾಧನವೊ ॥ ೩ ॥ ರೋಮಪಾದನ ಪುತ್ರಿ । ಯನು ಮದುವೆಯಾ। ದಾ ಮಹಾ ಋಷ್ಯಶೃಂ । ಗಾಖ್ಯ ಬರಬೇಕು ॥ ೪ ॥ ಜನಪಾಲನಲ್ಲಿಗ । ಮುನಿ ಬಂದಿರುವನೇಕೆ । ವನದಿಂದ ಪುರಕೆ ಬಂದನುವ ಪೇಳ್ಮಂತ್ರಿ । ॥ ೫ ॥

ವಚನ

ಆ ಮಾತಿಗೆ ಸುಮಂತ್ರನು ದಶರಥನೊಡನೆ ಏನೆಂದನು ಎಂದರೆ -

ದ್ವಿಪದಿ

ರೋಮಪಾದನು ಪೂರ್ವದೊಳಗೆ ಯಜ್ಞವನು । ತಾ ಮಾಡಲಾ ಸುರಪ ಮಳೆಯ ತಡೆಸಿದನು ॥ ೧ ॥ ಚಿಂತಿಸಲು ನಾರದನು ಚಿತ್ತೈಸಿ ಬಂದು । ಸಂತಾಪಣದಿ ಭೂಪ ಪೊಡಮಟ್ಟನೆಂದು ॥ ೨ ॥ ವರ ವಿಭಾಂಡಕನ ಸುತ ಋಷ್ಯಶೃಂಗಾಖ್ಯ । ತೆರಳಿ ಬಂದರೆ ನಮ್ಮ ರಾಷ್ಟ್ರದಲಿ ಸೌಖ್ಯ ॥ ೩ ॥ ಎಂದೆನಲು ಪೋಗವನು ಬರುವ ಪೇಳೆಂದು । ಇಂದುಮುಖಿಯರ ಕಳುಹಿ ಕರೆಸೆನಲು ರಾಯ ॥ ೪ ॥ ವಾರಾಂಗನೆಯರೆಲ್ಲ ವನಕೆ ತೆರಳಿದರು । ಆ ಋಷ್ಯಶೃಂಗ ಮುನಿಪತಿಯ ನೋಡಿದರು ॥ ೫ ॥

ಶಂಕರಾಭರಣ ರಾಗ - ಅಷ್ಟತಾಳ

ತರುಣಿಯರೈದಿದರಾ ವನಕೆ । ಮುನಿ । ವರನ ಮರುಳು ಮಾಡಿ ಕರೆ ತರುವುದಕೆ ॥ ತರುಣಿ ॥ ಪಲ್ಲ । ತನುವ ಸಿಂಗರಿಸುತ್ತ ನೀರೆಯರೆಲ್ಲರು । ಘನ ಕುಚದ್ವಯಗಳ ತೋರಿಸುತಾ ॥ ವಿನಯದಿ ಬೆರಗುದೋರಿಸುತಿರೆ ಕಾಣುತ । ಮುನಿದ್ವಯಶೃಂಗವ ವಿಸ್ಮಯ ತಾಳ್ದು ॥ ತರುಣಿ ॥ ೧ ॥ ನಮಗೆ ಒಂದೇ ಕೋಡು ನಿಮಗೆ ದ್ವಯಗಳುಂಟು । ಅಮಮ ಮಹಾತುಮರಿವ ರೆನ್ನುತಾ । ಕಮಲವದನೆಯರು ಭ್ರಮರ ಕುಂತಳಗಳ । ಚಮರದ ತೆರದಿ

ಬೀಸುತ್ತ ಹೊದ್ದುತ್ತ ॥ ತರುಣಿ ॥ ೨ ॥ ಕರದಲ್ಲಿ ಕಜ್ಜಾಯುಗಳ ನೀಡಲಾ ಮುನಿ । ವರಸವ ಭಕ್ಷಿಸಿ ತಕ್ಕಸುತ ॥ ಗುರುಕುಚದ್ವಯುಗಳ ಮುಟ್ಟಿ ತಪವ ಬಿಟ್ಟು । ಸ್ಮರದೀಕ್ಷೆಯನುಗೊಂಡು ಹೊರವಂಟನಂದು ॥ ತರುಣಿ ॥ ೩ ॥

### ಕಂದ ಪದ್ಯ

ಫುಲ್ಲಾಸ್ತ್ರನ ಬಾಧೆಯೊಳ್ಮುನಿ । ಬಲ್ಲಿದ ಮಿಗೆ ರೋಮಪಾದ ಭೂವರನೆಡೆಗಂ ॥ ನಿಲ್ಲದೆ ಬರಲವ ಮಗಳಂ । ಕಲ್ಯಾಣಂ ರಚಿಸಿ ನೃಪತಿ ಮುಖ ತೀರಿಸಿದಂ ॥

### ವಾರ್ಧಿಕ

ಅದರಿಂದ ನೀನಾತನಂ ಕರೆಸಿ ಯಾಗಮಂ । ವಿಧಿ ವಿಧಾನದಿವಿರಚಿಸಲ್ಕೆ ಹರಿದಯದಿ ನಿ । ನ್ನುದರದೊಳ್ ಸುತರು ಸಂಜನಿಪರಿದು ಸಿದ್ಧವನಲಜ ಕುಮಾರಂ ಪರುಷದಿ ॥ ಒದಗಿನಿಂ ರೋಮಪಾದ ನರೇಶನಲ್ಲಿಗಂ । ಸುದತಿಯರ ಕಳುಪಿ ಋಷ್ಯ ಶೃಂಗನಂ ಬರಿಸಿ । ಪದುಳದಿಂ ಗುರು ವಸಿಷ್ಠನ ಮತ ದೊಳೊಡನೆ ಮುಖಿಕಾರಂಭಿಸಿದ ವಿನಯದಿ ॥

### ಕಂದ ಪದ್ಯ

ಹಿಂದಾ ದಶಶಿರನುಪಹತಿಯಿಂದ ಸುಪರ್ವಾಣರೆಲ್ಲ ಬ್ರಹ್ಮನ ಬಳಿಗಂ ॥ ಬಂದೊರೆದರು ತಂತಮ್ಮಾಯ । ದಂದುಗಮಂ ಚರಣಕೆರಗಿ ಬಲು ದೈನ್ಯ ದೊಳಂ ॥

### ಮಧ್ಯಮಾವತಿ ರಾಗ - ಏಕತಾಳ

ಪಾಹಿ ಸಾರಸಭವ ದೇವ ದೇವ । ತ್ರಾಹಿ ರಕ್ಷಿಸೊ ನಮ್ಮ ಭಕ್ತ ಸಂಜೀವ ॥ ಪಾಹಿ ॥ ಪಲ್ಲ ॥ ರಾವಣ ಮೊದಲಾದ ರಕ್ಕಸರೆಮ್ಮನು । ಜೀವಿಸಗೊಡದೆ ಭಾಧಿಸುವರಯ್ಯ ॥ ದೇವರ್ಕಳೆಲ್ಲರ ಪಿಡಿಸುತ್ಯದಾರ । ಕೇವಲ ದುಷ್ಟರೊಳಿರುವ ದಾರಿಯ ಕಾಣೆ ॥ ಪಾಹಿ ॥ ೧ ॥ ತರಣಿ ಚಂದ್ರಮರನ್ನು ಸಂಚರಿಸಲುಗೊಡ । ತಿರುಗಾಡಬಿಡನು ಮಾರುತನನೀಗ ॥ ಧರಣಿ ದೇವಿಯು ತಾನು ಬಹು ಚಿಂತಿಸುವಳಯ್ಯ । ಉರಗೇಂದ್ರ ಭಾರವ ಧರಿಸಲೊಲ್ಲನು ಜೀಯ ॥ ಪಾಹಿ ॥ ೨ ॥ ಚಿಂತೆಯೇತಕೆಲಪ್ಪಾ ಕೇಳಿಂದ್ರ

ರಾವಣನಿಗೆ । ಸಂತೋಷದಲಿ ಘೋರ ವರದಿತ್ತನು ॥ ಭ್ರಾಂತನ ಕೊಲ್ಲಲು ಯತ್ನಗಳಿಲ್ಲ ಅ । ನಂತಶಯನ ಬಲ್ಲ ನಿದಕನುವನಲ್ಲದೆ ॥ ಪಾಹಿ ॥ ೩ ॥

ಮಾರವಿ ರಾಗ - ಏಕತಾಳ

ಪೊಂಬೊಡೆಯನು ತಾನಿಂತೆನಲಮರಕ । ದಂಬವೆರಸಿ ಸುರಪಾ ॥ ಬೆಂಬಿಡದಿಂತೆಂದನು ಭಕ್ತಿಗಳಿಂ । ದಂಬುಜ ಪೀಠನೊಳು ॥ ೧ ॥ ಭಾರತಿಯು ರಸನೆ ನೀನೆಂಬುದು ದಿಟ । ಶ್ರೀರಮೆಯಧಿಪನಿಪ ॥ ಕ್ಷೀರಾಂಭೋನಿಧಿಗತಿ ಬೇಗದೊಳುಂ । ಸಾರುವುದೀಗೆನಲು ॥ ೨ ॥ ತಂದೆಯ ದರುಶನ ಕೆಂದಜನತಿ ಮುದ । ದಿಂದ ಸುರಪ ಸಹಿತ ॥ ಚಂದನೊಳೈತಂದೀಕ್ಷಿಸಿದರು ಪಯ । ಸಿಂಧುವನುಬ್ಬಟೆಯ ॥ ೩ ॥

ಸಾಂಗತ್ಯ ರಾಗ - ರೂಪಕತಾಳ

ಸಿರಿದೇವಿಯನು ಪೆತ್ತು ಹರಿಗಿತ್ತು ತನ್ನ ಮು । ದಿರದಲ್ಲಿ ಮನೆ ಮಾಡಿಕೊಂಡು । ಸುರಪಗಿಮ್ಮಡಿಯ ಭಾಗ್ಯದೊಳಿರ್ಪನೆಂದಬ್ಧಿ । ಗುರುವ ದಿಂದೊಪ್ಪಿರ್ದುದಾಗ ॥ ೧ ॥ ನಾಕ ದಿಕ್ಪಾಲರ ನೋಳ್ಪೆನೆನುತ್ತ ಮೈ । ನಾಕನ ತನ್ನೊಡಗೂಡಿ ॥ ಶ್ರೀಕಾಂತನುರು ಬಲದಿಂದಲೈದುವೆನೆಂಬಂ । ತಾ ಕಡೆ ತೆರೆಗಳೈದಿದವು ॥ ೨ ॥

ವಾರ್ಧಿಕ

ಇಂತಿಪ್ಪ ಶರಧಿಯಂ ಕಾಣುತಂ ನಾಲ್ಮೊಗಂ । ಸಂತಸಂ ಬಡೆದು ಫಣಿ ಶಯನನಂ ಬಿಡದೆ ತ । ನ್ನಂತರದೊಳೇಕ ಚಿತ್ತದಿ ಧ್ಯಾನಿಸುತ್ತಾಗ ಸುರಪ ಸಹಿತತಿವೇಗದಿ ॥ ಕಂತುಪಿತನಿದ್ದೆಸೆಯನೈದಿ ದ್ವಾರದಲಿ ತ । ನ್ನಂತರಂಗ ದೊಳಧಿಕ ಭಕ್ತಿಭಾವದಿ ಸ್ತುತಿಸ । ಲುಂ ತಿಳಿದು ಕರೆಸಲಜ ಸುರಪ ಮುಂತಾದವರು ಬಂದೆರಗಿ ನುತಿಗೈದರು ॥

ವೃಂದಾವನ ರಾಗ - ತ್ರಿವುಡೆತಾಳ

ಜಯದೇವ ಜಯದೇವ । ಜಯತು ಲಕ್ಷ್ಮೀಶ । ಜಯ ದುರಿತಾದ್ರಿ ವಿಚ್ಛೇದನ ಕುಲಿಶ ॥ ಜಯ ॥ ಪಲ್ಲ ॥ ತ್ರಿಗುಣಾತ್ಮಕ ತ್ರಿಜಗತ್ಪಾಲಕ ಪಾವನ ರೂಪ । ನಗಧರ ನಿತ್ಯಾನಂದ ನಿರಾಮಯ ನಿರ್ಲೇಪ ॥ ಅಗಣಿತ ಮಹಿಮ ಪರಾತ್ಪರ ಕದನ ಪ್ರತಾಪ । ಖಗವಾಹನ ಕರುಣಾಕರ ಕೀರ್ತಿಕಲಾಪ ॥ ಜಯ ॥

### ವಸಂತ ಮಾಧವಿ ರಾಗ - ಅಷ್ಟತಾಳ

ಮಾಧವ ಸ್ವಾಮಿಯೊ । ಮಾತ ಲಾಲಿಸು ಪ್ರೇಮಿಯೊ । ನೀ ದಯಾಂಬುಧಿಯೆಂದು । ನಿನ್ನ ಸೇರ್ದೆವು ಬಂದು ॥ ಮಾಧವ ॥ ಪಲ್ಲ ॥ ರಾವಣ ಮೊದಲಾದ ರಕ್ಕಸರೆಮ್ಮನು । ಜೀವಿಸಗೊಡದೆ ಬಾಧಿಸುವರಯ್ಯ । ಗೋವಿಂದ ನೀ ಬಂದು ಅಸುರರೆಲ್ಲರ ಕೊಂದು । ಕೇವಲ ಭಜಕರ ಸಲಹೊ ದಯದೊಳಿಂದು ॥ ಮಾಧವ ॥ ೧ ॥ ನನ್ನ ಭಜಿಸಲೆಂದು ನಾನೇ ವರವನಿತ್ತೆ । ನಿನ್ನು ತಪ್ಪಿಸಲೆನಗಳವಲ್ಲವಯ್ಯ ॥ ಪನ್ನಂಗಶಯನ ಕೇಳ್ ನಿನ್ನ ಮಗನ ತಪ್ಪು । ಮನ್ನಿಸಿ ದೇವರ್ಕಳನ್ನು ಪೊರೆಯೊ ಜೀಯ ॥ ಮಾಧವ ॥ ೨ ॥

### ವಚನ

ಇಂತೆಂದಜನೆನಲಾ ಮಾತಿಗೆ ಶ್ರೀಪತಿ ಅತಿ ಹರುಷದಿಂದ ಮಗನೊಡನೆ ಏನೆಂದನು ಎಂದರೆ -

### ಮಾಧವಿ ರಾಗ - ತ್ರಿವುಡೆ ತಾಳ

ಏಳಿ ಕ್ಲೇಶಗಳೇಕೆ ನಿಮಗೆಲ್ಲ । ಖೂಳ ರಾವಣನ ಬಾಧೆಗೆ ಚಿಂತೆ ಸಲ್ಲ ॥ ಏಳಿ ॥ ಪಲ್ಲ ॥ ದಶರಥ ನೃಪತಿಗೆ ಸುತನಾಗಿ ಜನಿಸುವೆ । ದಶಶಿರನನು ಕೊಂದು ಕೊಡುವೆ ಮುಂದೆ ॥ ವಸುಧೆಯೊಳಗೆ ಹವ್ಯಕವ್ಯಗಳೆಲ್ಲವ । ಹಸನಾಗಿ ನಡೆವಂತೆ ಕರುಣಿಸುವೆನು ತಾಳಿ ॥ ಏಳಿ ॥ ೧ ॥ ಆತನ ಬಂಧು ಬಾಂಧವರ ಮಕ್ಕಳ ಸಹ । ಜಾತಿಯನೆಲ್ಲ ಸಂಹರಿಸುವೆನು । ಕೋತಿಗಳಾಗಿ ನೀವೆಲ್ಲರು ದಿಸಿರೆಂಬ । ಮಾತ ಕೇಳುತ ಸುರವ್ರಾತ ಕೈಮುಗಿಯೆ ॥ ಏಳಿ ॥ ೨ ॥

### ಶಾ. ವೃತ್ತ

ಇಂತಿಂದ್ರಾದ್ಯರಿಗೆಂದು ಶೇಷಶಯನಂ ಪಕ್ಷೀಂದ್ರನನ್ನೇರುತ । ಸಂತೋಷಾಧಿಕನಾಗಿ ಬಂದು ನಿಲಲುಂ ಸದ್ಯಾಗಸಾಮಿಪ್ಯದಿ ॥ ಕಾಂತಾವರ್ಗವ ಕೂಡಿಕೊಂಡು ಮಖಮಂ ಮಾಡುತ್ತ ಭೂಪಾಲಕಂ । ನಿಂತಾ ಮಾತ್ರದಿ ಋಷ್ಯಶೃಂಗ ಮುನಿಪಂ ಪೇಳ್ದಂ ಸುಮಾಂಗಲ್ಯದಿ ॥

### ವಿಲಾಸ ರಾಗ- ತ್ರಿವುಡೆತಾಳ

ನೃಪತೀ । ಮಹಾರಾಜಾ ದಶರಥ । ನೃಪತೀ ॥ ಪಲ್ಲ ॥ ಪುತ್ರಕಾಮೇಷ್ಟಿಯ ನೀನು ಮಾಡಿದರಿಂದ । ಇತ್ತ ನಿನ್ನಯ ಮನೋರಥವು

ಸಿದ್ಧಿಸಿತು ॥ ಪುತ್ರರು ನಾಲ್ವರುದಿಸುವರು ಲಾಲಿಸು । ಚಿತ್ತಚಂಚಲ ಬಿಟ್ಟು ಸ್ಥಿರವಾಗಿ ಬಾಳು ॥ ನೃಪತೀ ॥ ॥ ೧ ॥ ಲಕ್ಷಣ ಶುಭವಾಗಿ ಕಾಣಬರುವುದೀಗ । ದಕ್ಷಿಣಾಸೆಯೊಳು ಜ್ವಲಿಪಹುತವಹನ ॥ ಪಕ್ಷೀಂದ್ರವಾಹನ ಪರಮ ವೈಭವ ದಿಂದ । ಲೀ ಕ್ಷಣ ದಯಮಾಡುವನು ಭೂಪ ಕೇಳು ॥ ನೃಪತೀ ॥ ॥ ೨ ॥ ಹವ್ಯವಾಹನನ ಮಧ್ಯದಲಿ ತೋರುತಲಿದೆ । ದಿವ್ಯ ರೂಪದಿ ಸ್ವರ್ಣ ಪಾತ್ರವ ಪಿಡಿದು ॥ ಅವ್ಯಕ್ತದ್ವಯನಾದ ಶ್ರೀಹರಿಪಾದಾಬ್ಜ । ಸೇವ್ಯನೆನಿಸಿ ಸದಾ ಬಾಳುವೆ ಮುಂದೆ ॥ ನೃಪತಿ ॥ ೩ ॥

### ಕಂದ ಪದ್ಯ

ಇಂತೀಳ್ದನದಲಿ ಋತ್ವಿಜ॥ ಶಿಂತಿಣಿಯನು ಕೂಡಿಕೊಂಡು ಮಖವಂ॥ ರಚಿಸಲ್ ॥ ನಂತರ ಪೂರ್ಣಾಹುತಿಯೊಳ್ । ಸಂತೋಷದಿ ಗೋಚರಿಸಿದ ಯಜ್ಞೇಶ್ವರ ತಾ ॥

### ವರಾಳಿಗೌಳ ರಾಗ - ಅಷ್ಟತಾಳ

ರಾಜಶೇಖರ ಮಹಾರಾಜ ಮಾನವಧೀರ । ರಾಜೀವಾಕ್ಷನ ಭಜಕಂ ರಾಜಿಪಾಗ್ನಿಯೊಳಿಂದು ನರರೂಪವನು ತಾಳಿ । ಆ ಜಗತ್ಪತಿಯನುಜ್ಞೆ ಯೊಳೀಗ ನಾ ಬಂದೆ ॥ ೧ ॥ ಭಗವಾನ್ ವೀತಿ ಹೋತ್ರ ಸ್ವಾಮಿ ನಿನ್ನಯ । ಪಾದಯುಗಳಕ್ಕೆ ನಮೊ ಎಂಬೆನು ॥ ಧಗಧಗಿಸುವ ತೇಜಯುಗಳ ಶರೀರದ । ನಗೆಮೊಗ ದರುಶನದಿಂದ ಸಫಲವಾಯ್ತು ॥ ೨ ॥ ನರವರ ಸುರರೆಲ್ಲ ಕೊಟ್ಟ ಪಾಯಸವಿದು । ಪರುಷದಿ ನಿನಗೀವನು ॥ ತರುಣಿಯರಿಗೆ ನಾಲ್ಕು ಪಾಲಾಗಿ ಸೀ ನೀಡು । ತರಳರುದಿಸುವರು ನಾಲ್ವರು ನಿಜವಾಗಿ ॥ ೩ ॥

### ಕಂದ ಪದ್ಯ

ತಂದಾ ಪಾಯಸ ಪಾತ್ರೆಯ । ನುದಾ ಭೂಪತಿಗೆ ಕೊಟ್ಟು ತೆರಳಿದ ನನಲಂ ॥ ಅಂದಾ ದಶರಥ ತನ್ನಯ ಮುಂದೀರ್ಪಂಗನೆಯರೊಡನೆ ತಾನಿಂತೆಂದಂ ॥

### ಕಾಂಬೋಧಿ ರಾಗ - ಏಕತಾಳ

ಫುಲ್ಲಲೋಚನೆ ಕೌಸಲ್ಯೆ । ಸೊಲ್ಲನವ ಧರಿಸೆ ॥ ಕಲ್ಯಾಣದ ಪಾಯಸ ವಿದು । ಮೆಲ್ಲನೆ ಪರಿಗ್ರಹಿಸೆ ॥ ೧ ॥ ಎಲ್ಲ ಕಾಮ ಕಲೆಗಳನ್ನು ।

ಬಲ್ಲಂಥಾ ಪೋಹನ್ನಾ ॥ ನಲ್ಲ ಕರುಣಿಸೆನ್ನ ಭಾಗ । ವನಲು ಕೊಟ್ಟ ಮುನ್ನ ॥ ೨ ॥ ಸರಸಿರುಪ ದಳನೇತ್ರ । ತರುಣಿ ಕೈಕೆ ಬಾರೇ ॥ ಹರುಷದಿ ನಿನ್ನಂಶವ ಸ್ವೀ । ಕರಿಸು ಸುಗುಣ ಸಾರೆ ॥ ೩ ॥ ಮಾರ ರೂಪಿನಂಥ ಮುದ್ದು । ನೀರ ವಂದಿಸುವೆನೂ ॥ ಧೀರ ಎನ್ನ ಕಾಂತ ಬಾರೊ । ತಾರೊ ಪರಮಾನ್ನವನು ॥ ॥ ೪ ॥ ಪುತ್ರರುದಿಸುವರಿಂದು ಸೌ । ಮಿತ್ರೆ ಬಾರೆ ಬೇಗ ॥ ಚಿತ್ರಪಾಯಸವ ಕೊಳ್ಳೆ । ಪುತ್ರಾರ್ಥಿ ನೀನೀಗ ॥ ೫ ॥ ಪೃಥ್ವಿಪಾಲ ಶಿರೋಮಣಿಯೆ ಚಿತ್ತಜ ಸ್ವರೂಪ ॥ ಉತ್ತಮಾಂಶವನ್ನು ಕೊಡಿಸೊ । ಮಿತ್ರವಂಶದೀಪ ॥ ೬ ॥

ಕಂದ ಪದ್ಯ

ಧರಣಿಪ ದಶರಥರಾಯಂ । ತರುಣಿಯರಿಗೆ ಪ್ರೀತಿಯಿಂದ ಪರಮಾನ್ನ ವನುಂ ॥ ಕರೆದಿತ್ತಾಮಾತ್ರದಿ ಸ್ತ್ರೀಯರು ಗರ್ಭವಾಂತು ಮಾತಾಡಿದರತಿ ಮುದದಿಂ ॥

ಶೀಗುಪ್ತಿ ರಾಗ - ಏಕತಾಳ

ಅಂಗನಾಮಣಿ ಎನ್ನ । ಅಂಗದ ವ್ಯಥೆಯನ್ನು । ತಾಳಲಾರೆನು। ದುರವಸ್ಥೆಗಳನು । ಪೇಳಲಾರೆನು ॥ ೧ ॥ ಅಡಿಯಿಡಲಳವಲ್ಲ । ನುಡಿವರೆ ಮನಸಿಲ್ಲ । ಕೇಳಿಯಕ್ಕಾ । ನಾ ತಾಳಲಾರೆ । ಘೋರ ದುಃಖ ॥ ೨ ॥ ಇಬ್ಬರಂತೆನಗಿಲ್ಲ । ಉಬ್ಬಸ ಘನವಲ್ಲ । ಕೇಳಿರಮ್ಮ । ಇದಕುಪಶಮನ ಪೇಳಿರಮ್ಮ ॥ ೩ ॥ ಕ್ಷೀರಸಾಗರವಾಸ । ನಾರಾಯಣ ದೇವೇಶ । ಲಾಲಿಸಯ್ಯ। ಪರಿಭವ ನೀಗಿ । ಪಾಲಿಸಯ್ಯ ॥ ೪ ॥

ಶಾ. ವೃತ್ತ

ಮಾಸಂ ಚೈತ್ರ ಸುಪಕ್ಷ ರಾಮನವಮೀ ಮಧ್ಯಾಹ್ನದೊಳ್ ಸೂರ್ಯನು । ಶೇಷಾಯುಕ್ತ ಕುಳೀರಲಗ್ನದುದಯೇ ತಾರಾ ಪುನರ್ವಸುವಿನೊಳ್ ॥ ದೇಶಾಧೀಶ್ವರನಾದ ಪಂಕ್ತಿರಥನಿಂ ಕೌಸಲ್ಯ ಗರ್ಭಾಬ್ಧಿಯೊಳ್ । ಶ್ರೀ ಸರ್ವೇಶ್ವರ ಮೋದದಿಂದುದಿಸಿದಂ ಲೋಕೈಕ ರಕ್ಷಾಮಣಿ ॥ ೧ ॥

ಭಾಮಿನಿ

ಮರುದಿವಸ ಪುಷ್ಯದಲಿ ಕೈಕಾ । ತರುಣಿ ಪಡೆದಳು ವಿಮಲ ವಿಶ್ವಂ । ಭರನ ಶಕ್ತಿತ್ರಯದೊಳೊಂದನು ಶುಭ ಮುಹೂರ್ತದಲಿ ॥ ತರುಣ

ಕೇಳುಳಿದಂಶವೆರಡನು । ನಿರತಿಶಯ ಲಗ್ನದಲಿ ಮಗಧನ । ತರಳೆ ಬೆಸನಾದಳು ಮಘಾನಕ್ಷತ್ರದುದಯದಲಿ ॥

ಕಂದಪದ್ಯ

ಸರಸಿಜನೇತ್ರೆಪುರೀಪರಿ । ಶರಳರನುತ್ಸವದಿ ಪಡೆಯಲಾ ವಾರ್ತೆಯನುಂ ॥ ಧರಣಿಪ ದಶರಥ ಕೇಳುತ । ಪರುಷದೊಳಾ ಬಳಿಗೆ ಬಂದು ಕಂಡನು ಸುತರಂ ॥

ಬಿಲಹರಿ ರಾಗ - ಏಕತಾಳ

ದಶರಥ ಭೂಪಗೆ ಕೌಸಲ್ಯಾದೇವಿಯು । ಶಿಶುವ ಕೈಯೊಳಗಿತ್ತಳತಿ ಮುದದಿಂದ ॥ ಎಸೆವ ಸಂತಸದಿಂದಾಘ್ರಾಣಿಸಿ ರಾಮನ । ಕುಶಲಮೂರ್ತಿಯ ನೆತ್ತಿ ಸತಿಗಿತ್ತನಾಗ ॥ ೧ ॥ ತನ್ನ ಬಾಲಕನ ತಂದಳು ಸರೋಜಾಕ್ಷಿ ಸಂ । ಪನ್ನಸೊಳ್ ಕೊಡಲಾಗ ಮನ್ನಿಸಿ ಭರತ ॥ ರನ್ನ ವಿಂದುನ್ನತ ನಾಮವ ವಿರಚಿಸಿ । ಚನ್ನ ಕೈಕೆಗೆ ಕೊಟ್ಟುದನ್ನು ನೋಡಿದಳು ॥ ೨ ॥ ಶಿಶುವೆರಡನು ತಂದು ಸೌಮಿತ್ರೆ ಕೊಡಲಾಗಿ ವಸುಧೇಶ ಲಕ್ಷ್ಮಣ ಶತ್ರುಘ್ನರೆಂದು ॥ ಶಶಿಮುಖಿಗಿತ್ತು ಮಂಗಲಘೋಷದಲಿ ಭೂಪ । ಅಸುರಾರಿ ಮೂರ್ತಿಯ ಧ್ಯಾನಿಸುತಿರ್ದ ॥ ೩ ॥

ಆಂದೋಳಿ ರಾಗ - ಅಷ್ಟತಾಳ

ಅಂಗನಾಕುಲರನ್ನೆಯರೆಲ್ಲ ಬಂದು । ಮಂಗಲಕರವಾದ ಲಗ್ನದಿ ಸಿಂದು ॥ ಶೃಂಗಾರವಾಗಿಹ ತೊಟ್ಟಿಲ ತಂದು । ಇಂಗಡಲರಸನ ತೂಗಿದ ರಂದು ॥ ಜೋಜೋ ॥ ೧ ॥ ಜೋಜೋ ದಶಶಿರ ವೈರಿ ಮುರಾರಿ । ಜೋಜೋ ಶ್ರೀ ರಾಮಚಂದ್ರ ಉದಾರಿ ॥ ಜೋಜೋ ಇಂದ್ರಜಿತುವಿನ ಸಂಹಾರಿ । ಜೋಜೋ ಲಕ್ಷ್ಮಣ ಶೇಷಾವತಾರಿ ॥ ಜೋಜೋ ॥ ೨ ॥ ಜೋಜೋ ಕೈಕಾದೇವಿಯ ಮುದ್ದು ಕಂದಾ । ಜೋಜೋ ಭರತನೆ ಸದ್ಗುಣ ವೃಂದ ॥ ಜೋಜೋ ಸೌಮಿತ್ರಾದೇವಿಯ ಕಂದ । ಜೋಜೋ ಶತ್ರುಘ್ನ ಬಾಸಿತ್ಯಾನಂದ ॥ ಜೋಜೋ ॥ ೩ ॥

ಕಂದ ಪದ್ಯ

ಸಿತಪಕ್ಷದೊಳಾ ತಾರಾ । ಪತಿ ಬೆಳೆವಂದದಲಿ ನೃಪನ ಗೇಹ ದೊಳಗೆಗರ್ ॥ ಅತಿವರ್ಧಿಸುತಲೆ ವಿದ್ಯಾ । ತತಿಯಂ ಕಲಿತಿರ್ಪ ಸುತರ ನೃಪ ಕರೆದಂದಂ ॥ ೧ ॥

ಕೇತಾರಗೌಳ ರಾಗ - ॥ ಝಂಪೆತಾಳ ॥

ಕಮಲದಳನಯನ ರಾಮು । ಇನಕುಲ । ಕ್ರಮಿತ ಸೌಭಾಗ್ಯ ಧಾಮು ॥ ೧ ॥ ಕಮುಮುದ್ದು ಮೊಗದ ಬಾಲಾ । ನೀನೆತ್ತ । ನಡೆದು ದಣಿದೆಯೊ ಸುಶೀಲ ॥ ೨ ॥ ತಮ್ಮ ಲಕ್ಷ್ಮಣನು ನಾನೂ । ಬೇಟೆಗೆ ಮ । ಹನ್ಮಮತೆಯಲಿ ಪೋದೆವು ॥ ೩ ॥ ಸಣ್ಣವರು ವಿಪಿನದೊಳಗೆ । ಇಬ್ಬರೇ । ಮಿಣ್ಣನೈದುವಿರೆ ವೇಗ ॥ ೪ ॥ ಆಸೆ ಕುದುರೆಗಳು ಸಹಿತ । ಆಡಿದೆವು । ಕಾನನದಿ ಕೇಳು ತಾತ ॥ ೫ ॥ ಸುರವಿರೋಧಿಗಳ ಕಂಡು । ಬೆದರುವಿರಿ । ತರವಲ್ಲ ಪೋಪುದಿಂದು ॥ ೬ ॥ ಅರಿರಾಯರೆಮ್ಮ ನೋಡೀ ಬೆದರಿ ಪದ । ಕೆರಗಿದರು ಭೀತಿಗೊಡಿ ॥ ೭ ॥ ತರಳ ಬಾರಿತ್ತ ಭರತ । ತಿರುಗಾಡು । ತಿರುವುದಿನ್ಯಾ ವಸಿತ ॥ ೮ ॥ ಅನುಜಶತ್ರುಘ್ನ ನಾನು । ಬಲು ವಿದ್ಯ । ವನು ಕಲಿತು ಇದೊ ಬಂದೆನು ॥ ೯ ॥ ತರವಲ್ಲವಪ್ಪಗಳಿರ । ವನದೊಳಗೆ । ತಿರುಗದಿರಿ ಬಾಲಕರಿರ ॥ ೧೦ ॥

ಮಾಲಿನಿ ವೃತ್ತ

ಪರಸುತರೊಡನಾ ಭೂಪಾಲ ಮಾತಾಡುವಾಗ । ಗುರುಕುಶಿಕಜನಂದ್ಯೆ ತಂದ ಮಾಂಗಲ್ಯದಿಂದ ॥ ಪರಮಪುರುಷನಂ ಕಂಡುತ್ತಮಾನಂದದಿಂದ । ಪರಸಲು ಧರಣೀಶಂ ರಾಮತಾಂ ವಂದಿಸಲ್ಕೆ ॥ ೧ ॥

ಪೂರ್ವಿ ರಾಗ - ॥ ಏಕತಾಳ ॥

ಋಷಿಶಿಲಕಾಗ್ರಣಿ ವಂದನೆ। ಕುಶಿಕನಂದನ ವರ । ಕೌಶಿಕಮುನಿ ॥ ಋಷಿ ॥ ಪಲ್ಲ ॥ ಸಾಕೇತಪುರ । ನಿನ್ನ । ಪಾದ ಸಂಗದಿ ॥ ಸಕಲರಘುವ ಪರಿ । ಹರಿಸಿತಲ್ಲ ॥ ಋಷಿ ॥ ೧ ॥ ಪೂರ್ವಜನ್ಮದಿ । ನರ । ದೇವನಲ್ಲೊ ॥ ಸರ್ವೇಶ್ವರನ ಭಜಿಸಿ । ಋಷಿಯಾದೆ ॥ ಋಷಿ ॥ ೨ ॥ ಧನ್ಯನಾನೀಗ । ಪರ ।

ಬ್ರಹ್ಮ ಋಷಿಯೆ ॥ ಎನ್ನನುದ್ಧರಿಸಯ್ಯ । ಮುನಿರಾಯ ॥ ಋಷಿ ॥ ೩ ॥ ಆನೆ ಕುದುರೆ । ಮಂದಿ । ಕ್ಷೋಣಿ ಎಲ್ಲ ॥ ಸೇನೆ ಕೂಡಿದ ಭಾಗ್ಯ । ನಿನ್ನದಯ್ಯ ॥ ಋಷಿ ॥ ೪ ॥ ಅರುಹಿಸು ನಿನ್ನ । ಮನ । ದಭಿಲಾಷೆಯನು ॥ ಶರಿಸಿಕೊಡು ವೆನಯ್ಯ । ಹರುಷದಿಂದ ॥ ಋಷಿ ॥ ೫ ॥ ಅಜನಂದನ । ಕೇ । ಳಿನ್ನಭಿಲಾಷೆ ॥ ನಿಜದಿ ಕೊಡುವೆನೆಂದು ನುಡಿದೆಯಲ್ಲ ॥ ಋಷಿ ॥ ೬ ॥ ಪಿರಿದಾದ ಯಾಗ । ನಾನು । ಮಾಡಲೆಂದು ॥ ಪರಿಸೋಪಸ್ಕರಗಳ । ಮಾಡಿ ಬಂದೆ ॥ ಋಷಿ ॥ ॥ ೭ ॥ ಸೋದರನಾದ ತಮ್ಮ । ಲಕ್ಷ್ಮಣ ಕೂಡಿ ॥ ಪೋದದಿ ರಾಮನ । ಕಳುಹಿಸಯ್ಯ ॥ ಋಷಿ ॥ ೮ ॥

### ಮತ್ತೇಭ ವಿಕ್ರೀಡಿತ

ವರ ಮೌನೀಶ್ವರನೆಂದ ಮಾತ ನೃಪತಿ ತಾ ಕೇಳುತಲೆ ಚಿಂತಿಸಿ । ಹರ ಮಾಹೇಶ್ವರನೆನ್ನ ಪುತ್ರರುಗಳಂ ಬಿಟ್ಟೆಂತು ನಾನಿರ್ಪೆನು ॥ ತರುಣ ಪ್ರಾಯದ ಕೋಮಲಾಂಗದವರುಂ ಕಂಡೇಯು ಕೌಶಿಕನೇ।ತರವಲ್ಲೈ ನಿಮಗಿಂಥ ಕಾರ್ಯ ಗುರುವೇ ಕೇಳೆಂದ ಧಾತ್ರೀಶ್ವರಂ ॥

### ಭೈರವಿ ರಾಗ - ॥ ಝಂಪೆತಾಳ ॥

ಸ್ವಾಮಿ ನಿಸ್ಪೃಹ ಮನದ । ಮುನಿಯೆ ನಮಿಸುವೆ ನಿನಗೆ । ರಾಮನಗಲಿರುವಂಥ । ಬುದ್ಧಿ ಎನಗಿಲ್ಲ ॥ ೧ ॥ ಷೋಡಶ ವಯಸ್ಸುಗಳು । ಇಲ್ಲವೀ ಬಾಲರಿಗೆ । ಕಡೆನ್ನ ಮಕ್ಕಳನು । ಕಳುಹಿಕೊಡಲಾರೆ ॥ ೨ ॥ ರಕ್ಕಸರ ಕೊಲ್ಲುವರೆ । ರಣಸಮರ್ಥರೆ ಇವರು । ಧಕ್ಕಡಿಗತನದ ಬಲು । ಕುಟಿಲತನದವರು ॥ ೩ ॥ ರಾಕ್ಷಸರ ಯುದ್ಧಕ್ಕೆ । ಗಜ ತುರಗ ಸಹಿತ ನಾ । ನೀ ಕ್ಷಣವೆ ಬಹೆನು ವಿ । ಶ್ವಾಮಿತ್ರಮುನಿಯೆ ॥ ೪ ॥

### ವರಾಳಿ ರಾಗ - ಅಷ್ಟತಾಳ

ಮಿತ್ರವಂಶ ಜಾತನಾದ । ಭೂಮಿಪಾಲಾ । ನೀನು । ಸತ್ಯವಂತನೆಂದು ನಂಬಿ । ಬಂದೆನಲ್ಲ ॥ ೧ ॥ ಬಂದ ತೆರದಿ ಪೇಳ್ದ ಮಾತು । ನಿನ್ನೊಳಿಲ್ಲ । ಈಗ । ಲೊಂದೆ ನಿಮಿಷದಲ್ಲಿ ಕಷ್ಟ । ದೋರಿತಲ್ಲ ॥ ೨ ॥ ಸೂರ್ಯವಂಶ ಭೂಪರಿಂಗೆ । ಏನು ಯೋಗ್ಯ । ದು । ಷ್ಕಾರ್ಯಕ್ಕೆ ಸೇರಿದ ಮೇಲೆ ।

ಸಾಕು ಭಾಗ್ಯ ॥ ೩ ॥ ಬಂದ ದಾರಿಗೆ ಸುಂಕವಿಲ್ಲ । ಪೋಪೆ ಕೇಳು । ಮುಂದೆ । ಕಂದರನ್ನು ನೋಡಿ ಸ್ಥಿರದಿ । ರಾಜ್ಯವಾಳು ॥ ೪ ॥

### ಕಂದ ಪದ್ಯ

ಮುನಿಪತಿ ಕೌಶಿಕ ಪೇಳಿದ । ಘನ ರೌದ್ರದ ಮಾತನಾಗ ಕೇಳ್ದಳಲುತ್ತಂ ॥ ಜನಪಾಲಾಗ್ರಣಿ ಇರಲಾ । ವನಜಾಸನಜಾತಾಂತು ನುಡಿ ವೃತ್ತಿರ್ದಂ ॥

### ಕಲ್ಯಾಣಿ ರಾಗ - ॥ ರೂಪಕತಾಳ ॥

ಅಜಕುಮಾರ ಧೀರ ವೀರ । ಬಾಹುವಿಕ್ರಮ ॥ ಪಲ್ಲ ॥ ಸುಜನ ರಕ್ಷ ಚಿಂತೆ ಬೇಡ । ಸೂರ್ಯವಂಶ ಭೂಮಿಪಾಲ । ಭಜಕರಿಷ್ಟವೀವ ರಾಮ । ನನ್ನು ಕಳುಹಿಸೊ ॥ ೧ ॥ ಮುನ್ನ ಕೊಡುವೆನೆಂದು ಪೇಳಿ । ಇನ್ನು ಇಲ್ಲ ವೆಂದೆನಲು । ಧನ್ಯಶೀಲ ಧರ್ಮದ್ರೋಹ । ಬರುವುದಲ್ಲಯ್ಯಾ ॥ ೨ ॥ ತನುಜನಾದ ರಾಮಚಂದ್ರ । ಮನುಜನೆಂದು ಭಾವಿಸದಿರು । ಮನದಿ ತಿಳಿಯೊ ಈತನೀಗ । ಗರುಡವಾಹನ ॥ ೩ ॥ ಈ ತಪಸ್ವಿಯನ್ನು ನೆರೆಯೆ । ಸಕಲ ಕಾರ್ಯ ಸಿದ್ಧಿಯಹುದು । ಭೀತಿ ಎಲ್ಲ ಬಿಟ್ಟು ರಾಮ । ನನ್ನು ಕಳುಹಿಸು ॥ ೪ ॥ ತನಯ ಬಾರೊ ರಾಮಚಂದ್ರ । ವನಜನೇತ್ರ ಸುಗುಣ ಸಾಂದ್ರ । ಮುನಿಕುಲೇಶ ಕರೆಯ ಬಂದ । ಪೋಗಬೇಕೆಲ್ಲೈ ॥ ೫ ॥ ವನದೊಳಧಿಕ ರಜನಿಚರರ । ಅನುವನರಿತು ಪ್ರಹರಿಸವರ । ನಿನಕುಲಾಬ್ಧಿಸೋಮ ರಾಮ । ಚಿನುಮಯಾತ್ಮಕ ॥ ೬ ॥ ತರುಣ ಬಾಲ ಸುಗುಣ ಶೀಲ । ತರಣಿ ಸದೃಶ ಲಕ್ಷ್ಮಣಾಂಕ । ಹಿರಿಯ ರಾಮಚಂದ್ರನೊಡನೆ । ತೆರಳಬೇಕೆಲ್ಲೈ ॥ ೭ ॥ ಋಷಿಕುಲಾರ್ಯ ಕುಶಿಕತನಯ । ರಸಿಕ ಧೈರ್ಯ ಯಜ್ಞಕಾರ್ಯ । ಮೆಸಗು ಬೇಗಲೆನುತ ಸುತರ । ಬೀಳುಗೊಟ್ಟನು ॥ ೮ ॥ ರಾಜತಿಲಕ ಹರುಷ ಪುಳಕ । ರಾಜಿಯಾಗಲಿಂದು ನಿನಗೆ । ರಾಜ ರಾಮಲಕ್ಷ್ಮಣರನು । ಕೊಂಡು ಪೋಪೆನೈ ॥ ೯ ॥

### ಭಾಮಿನಿ

ಧರಣಿಪತಿಗೊಂತೆಂದು ಮಕ್ಕಳ । ಹರುಷದಲಿ ಕರಕೊಂಡು ಮುನಿಪುರ । ವರವನುಳಿದೈತರಲು ಸಿದ್ಧಾಶ್ರಮಕೆ ದಾರಿಯಲಿ ॥ ತರತರದ

ಕಲ್ಮುಳ್ಗಳಿಂದತಿ । ಮೆರೆವ ಪಥ ಕಂಗೊಳಿಸುತಿರೆ ಭಾ । ಸ್ಕರ ಕುಲೇಂದ್ರ
ದೊಳೆಂದ ವಿಶ್ವಾಮಿತ್ರನೀತೆರದಿ ॥

### ಸಾಂಗತ್ಯ ರಾಗ - ರೂಪಕತಾಳ

ಶ್ರೀ ರಾಮ ಲಕ್ಷ್ಮಣ ದೇವೇಶರಿರ ಕೇಳಿ । ಸಾರಿದರೀ ಪರಿ ಮುಂದೆ ॥
ದಾರಿ ಪಾಷಾಣ ಮೆಗ್ಗಳವಮ್ಮ ಬಲು ಭಯ । ಬೀರುತ್ತಲಿಹುದು ಕಣ್ಮನಕೆ
॥ ೧ ॥ ಬಳಲಿಕೆಮೂದರೆ ಪೇಳಿರೀಗಲೆ ಮಂತ್ರ । ಗಳ ಉಪದೇಶ ಕೊಡುವೆ ॥
ನಲವೇರುವುದು ಹಸಿವಾಗದು ರವಿಕುಲ । ತಿಲಕರೆ ನಿಲ್ಲಿ ನೀವೆಂದ ॥ ೨ ॥
ಕರುಣಿಸೊ ಮುನಿವರ ಮಂತ್ರೋಪದೇಶವ । ಚರಣದೆಡೆಗೆ ವಂದಿಸುವೆವು ॥
ದುರುಳರ ಬಾಧೆಯ ನೀಗಿ ಸೌಖ್ಯದಿ ನಿಮ್ಮ । ನಿರಿಸುವೆವೈ ಸಿದ್ಧಾಶ್ರಮದಿ
॥ ೩ ॥ ಅರುಹಲುಪದೇಶ ಕೊಟ್ಟು ಮುಂದೈತರೆ । ತರಳರು ಕಂಡೊಂದ
ಡವಿಯ ॥ ಭರಿತ ವಿಸ್ಮಯಗೊಂಡು ಮುನಿಪೋತ್ತಮನ ಪದ । ಕೆರಗಿ
ಕೇಳಿದರು ಸಂಗಡಿಯ ॥ ೪ ॥

### ಭಾಮಿನಿ

ಮುನಿಪತಿಯೆ ಕೇಳತಿಭಯಂಕರ । ವನವಿದಾವಾಶ್ರಮವು ಗಮಿಸುವ ।
ಡಾಮಿಷರಿಗಳವಲ್ಲಿ ಹೆಸರೇನೀ ಮಹಾವನದ ॥ ಎನೆ ಸುರೇಂದ್ರನು
ಪೂರ್ವದಲಿ ವೃ । ತ್ರನ ವಿದಾರಿಸೆ ಬಂದು ದಾತಗೆ । ಜನಿತ ಕಲ್ಮಷ
ದೋಷವಾ ದಿನ ಕಂದನಾ ಮುನಿಪ ॥ ೧ ॥ ಕಲುಷವದನ ಪಹರಿಸಲಾ
ವಿಂ । ಡಲನ ಬಳಿಗಾ ಬಂದು ಗಂಗಾ । ಜಲದಭಿಷೇಕವನು ಮಾಡಿದನಾ
ಸುರೇಂದ್ರಂಗೆ ॥ ಬಳಿಕಲಾ ಜಲವಿಳಿಯಲೀ ವನ । ಕಲುಷಕಾನನವಾಯ್ತು
ಭಾರಿಯ । ವಿಳರಿಗಾಶ್ರಮವಾಯ್ತು ನಮ್ಮಾಶ್ರಮಕೆ ಹಗೆಯಾಯ್ತು ॥ ೨ ॥

### ನೀಲಾಂಬರಿ ರಾಗ - ತ್ರಿವುಡೆತಾಳ

ಧೂರ್ತೆ ರಕ್ಕಸಿ ಕೇಳು ತಾಟಕೀ । ತಾಪ । ಸೋತ್ತಮರನು ತಿಂಬಳ್
ಘಾತಕಿ ॥ ೧ ॥ ಆಕೆ ದಾರಿಯ ಬಿಡಳೇನಯ್ಯಾ । ಮುನಿ । ಏಕೆ ಬರಿದೆ ನೀ
ಚಿಂತಿಪೆಯಯ್ಯ ॥ ೨ ॥ ಶ್ರೀಕರ ರಾಮ ಅವಳ ಕೊಂದು। ಮುಂದೆ । ಲೋಕ
ದೊಳಗೆ ಕೀರ್ತಿ ಪೊರೆಸಿಂದು ॥ ೩ ॥ ಸ್ತ್ರೀಹತ್ಯ ಮಾಡೆ ಲೋಕದೊಳೆಲ್ಲ ।

ಎನ್ನ ದ್ರೋಹಿ ಎಂಬರು ಏನಗಿದು ಸಲ್ಲ ॥ ೪ ॥ ಸೀ ಹರಿಯೈಸೆ ಭಾರ್ಗವನಂದು । ತಾಯು । ಪ್ರಾಹರಿಸಿದ ಸುದ್ದಿ ತಿಳಿ ಇಂದು ॥ ೫ ॥ ತಂದೆ ಪೇಳಿದುದೀಗ ದಿಟವಯ್ಯ । ನಾನು । ಕೊಂದು ಕೊಡುವೆಹೋಗ ಮುನಿವರ್ಯ ॥ ೬ ॥

ವಾರ್ಧಿಕ

ಅಟವಿಯೊಳಗಿಂತು ಮುನಿ ರಾಮ ಲಕ್ಷ್ಮಣರೊಡನೆ । ಘಟಮಾತ್ರ ಮಾತಾಡುತಿರುವಷ್ಟರಲ್ಲಿ ನಿಟಿ । ನಿಟಿಲೆಸುತ ಘೋರಾಕೃತಿಯು ತಾಳ್ದು ಮೃತ್ಯುದೇವತೆಯ ಭಗಿನಿಯೊ ತಾನೆನೆ ॥ ಅಟಕಟಿಸಿ ಕಲ್ಮರ್ಗಳಂ ಕೆಡಪಿ ಖತಿಯೊಳಾ । ರ್ಭಟವಿತ್ತು ಕಡು ಮಾರಿ ಬಂದಂತೆ ತರ ತರದಿ । ಕುಟಿಲ ವೆಸಗುತ ಬಾಯ್ಗೆ ಬಂದಂತೆ ರಾಮನೊಡನೆಂತೆಂದಳಾ ತಾಟಕಿ ॥

ಪಂಚಾಗತಿ ರಾಗ - ಅಷ್ಟತಾಳ

ಆರೆಲೋ ಮನುಜ ಇಲ್ಲಿ । ಅಂಜಿಕಿಲ್ಲದೇ । ಇಂಥಾ ಘೋರವಾದ ಎನ್ನ ವನದಿ । ಬಂದು ಸಿಕ್ಕಿದೆ ॥ ೧ ॥ ಸಿಕ್ಕಿದೇನೆಂದು ಪೇಳುವ । ಮಾತು ಸಾಕಲೇ । ಕಳ್ಳ । ರಕ್ಕಸಿಯೆ ದಾರಿಯನು ಬಿ । ಟ್ಟತ್ತಸಾರೆಲೆ ॥ ೨ ॥ ತಾಟಕೀ ನಾ ಎನ್ನ ವನ । ನಿಮಗಿದು ಸಲ್ಲಾ । ಎನ್ನ । ಬೇಟೆಯ ಹುಲ್ಲೆಗಳಂತಾ । ದೀರಿ ನೀವೆಲ್ಲ ॥ ೩ ॥ ನಿನ್ನ ಬೇಟೆ ಎಂಬುದ್ಯಾವ । ಗಣ್ಯ ಕಾಣೆಲೇ । ಮುದಿ । ಕುನ್ನಿಯಂತೆ ದಾರಿಯ ಬಿ । ಟ್ಟತ್ತ ಸಾರೆಲೆ ॥ ೪ ॥ ಈ ಕ್ಷಣದಿ ನಿನ್ನ ಮಾಂಸ । ಖಂಡವ ಬೇಗಾ । ನಾ । ಭಕ್ಷಿಸುವೆನೆನುತ ಪಲ್ಲ । ತೋರಿದಳಾಗ ॥ ೫ ॥ ಹಲ್ಲ ಕಂಡರಂಜುವವನೆ । ರಾಮ ಕಾಣೆಲೇ । ನಿ । ಮ್ಮೆಲ್ಲರ ವಂಶಕ್ಕೆ ಶೂಲ । ನಾಗಿಹೆನೆಲೆ ॥ ೬ ॥ ಕಲ್ಲುಮರನ ಮಳೆಯುಗರೆವೆ । ನೆನ್ನುತಲಂದೂ । ಅಸುರೆ । ತಲ್ಲಣಿಸದೆ ಸಿಡಿಲಿನಂತೆ । ಹೊಡೆದಳು ಬಂದೂ ॥ ೭ ॥ ರಾಘವಾ ನೀನವಳ ಮಾತಾ । ಡಿಸ ಬೇಡೆಲೋ । ಅತಿ ಬೇಗದಿ ಕೊಂದು ಕಾಲನಾ । ವಶವ ಮಾಡೆಲೋ ॥ ೮ ॥

ಪಂಚಾಗತಿ ರಾಗ - ಮಟ್ಟಿತಾಳ

ಘೋರ ರೂಪಿನಿಂದ ಮದ । ವೇರಿ ಭುಜವನದುರಿಸುತ್ತ । ಮೂರು ಲೋಕ ನುಂಗಿ ಬಂದ । ಮಾರಿಯಂತಿರೇ ॥ ಚೀರಿ ಬಾಯಾವಿ ಕೈಯ । ನೂರಿ

ಹಲ್ಲ ತೋರಿ ಭಯವ । ಬೀರಿ ರಾಮಗಿಟ್ಟಳೊಂದು । ಕ್ರೂರಶೂಲವ ॥ ೧ ॥ ಇಟ್ಟ ಶೂಲವನ್ನು ರಾಮ। ತಟ್ಟಿ ಬಿಲ್ಲ ಪೆಟ್ಟಿನಿಂದ । ದಿಟ್ಟೆಗೊಂದು ಸರಳನಾಗ । ಬಿಟ್ಟ ಕ್ರೋಧದೀ ॥ ಕೆಟ್ಟ ತೊತ್ತೆ ಎನ್ನ ಕೂಡೆ । ಇಷ್ಟು ಶೌರ್ಯವೇಕೆನುತ್ತ । ಅಟ್ಟಿ ಬಡೆದು ಪೊಸ್ತುಲೊಂದು । ರಟ್ಟೆ ಮುರಿದುದು ॥ ೨ ॥ ಎತ್ತಣಿಂದ ಬಂದೆ ನಿನ್ನ । ತುತ್ತು ಮಾಳ್ಪೆನೆನುತಲಸುರೆ । ಮೃತ್ಯು ಬಾಯ ತೆರೆದವೋಲು । ಧೂರ್ತೆ ಘರ್ಜಿಸೇ । ಚಿತ್ತದಲ್ಲಿ ರಾಮ ಕ್ರೋಧ । ವೆತ್ತು ಸುರರ ಹವಿಯನುಗುಳೆ । ಸುತ್ತ ಬಾಣದಿಂದ ಕೊರಳ । ಕತ್ತರಿಸಿದನು ॥ ೩ ॥

ಶಾ. ವೃತ್ತ

ಶ್ರೀರಾಮಂ ಪಿಡಿದೆತ್ತ ದಿವ್ಯ ಶರದಿಂದಾ ಧೂರ್ತೆಯಮನಾಳ್ಗೊಳಲ್ । ಸೇರಲ್ ದಿವ್ಯ ಸುವೃಷ್ಟಿ ಮಂಗಳಮಯಂ ಘೋರಂದುದಾಕಾಶದಿ ॥ ಸೌರಮ್ಯಾಂಗ ದಿನಾ ಸುರಾಂಗನೆಯರುಂ ಸಂಗೀತ ಮಂ ಪಾಡಲು । ಧೀರೋದಾರರನಾ ಕುಮಾರರುಗಳಂ ಮುನಿ ಕರೆದು ಮಾತಾಡಿದಂ ॥

ಬಿಲಹರಿ ರಾಗ . ರೂಪಕತಾಳ

ಇನಕುಲಾಬ್ಧಿ ಸೋಮ ರಾಮ । ದನುಜವೈರಿ ಬಹು ನಿಸ್ಸೀಮ । ವನಜನೇತ್ರ ಸುಗುಣಧಾಮ । ಪೂತ ಕೇಳಯ್ಯ ॥ ೧ ॥ ಇಂದಿನಿರುಳು ಇಲ್ಲಿ ನಾವು । ಚಂದದಿಂದ ಕಳೆದೆವಾದ । ರೊಂದು ಕಂಟಕವಿಲ್ಲವಯ್ಯ । ಮುಂದೆ ಬಾಲಕಾ ॥ ೨ ॥ ಬ್ರಹ್ಮದಂಡ ಚಕ್ರಪಾಶ । ಧರ್ಮಪಾಶ ಕಾಲಪಾಶ । ನಿರ್ಮಲಾ ಸುವಾರುಣಾಸ್ತ್ರ । ಮಹೇಂದ್ರಾಸ್ತ್ರವು ॥ ೩ ॥ ಕೊಡುವೆನೈದು ಶಸ್ತ್ರವನ್ನು । ಪೊಡವಿ ಪಾಲರಿಂದ್ರಕುವರ । ನೊಡನೆ ಕಾದಲಾತ ಹಿಂದೆ । ನಡೆದು ಪೋಪನು ॥ ೪ ॥

ಕಂದ ಪದ್ಯ

ಎನುತಂ ಮಂತ್ರಾಸ್ತ್ರಗಳೈ । ದನು ಮುನಿಪತಿ ರಾಮಗಿತ್ತು ಮರುದಿನದೊಳಗಂ ॥ ಇನಕುಲಜರು ಸಹಿತಾಶ್ರಮ । ವನು ಶೀಘ್ರದಿ ಸೇರ್ದ ಕುಶಿಕತನುಭವ ಮುದದಿಂ ॥

### ಭೈರವಿರಾಗ - ಝಂಪೆತಾಳ

ಶ್ರೀರಾಮ ಲಕ್ಷ್ಮಣ । ಧೀರರಾಶ್ರಮದಲ್ಲಿ । ಆರೈದು ಕುಳ್ಳಿರಲು । ಋತ್ವಿಜರು ಸಹಿತ ॥ ೧ ॥ ಆರುದಿನ ಹಗಲಿರುಳೊ । ಳೀ ಋಷಿವ್ರಜ ಕೂಡಿ । ಓರಂತೆ ಯಜ್ಞವನು । ನಡೆಸಲೀಸಯ್ಯ ॥ ೨ ॥ ಏಕಭಾವಗಳಿಂದ । ನೇಕ ವಸ್ತುವತಂದು । ಶ್ರೀಕರದಿ ಯಜ್ಞವನು । ನಡೆಸು ಮನೀಂದ್ರ ॥ ೩ ॥ ಆ ಕುಠಾರರು ಬರಲಿ । ಬೇಕಾದ ಶಸ್ತ್ರದಿಂ । ನಾ ಕೊಂದು ಕೊಡುವೆನೀ । ಕ್ಷಣ ದಯಾಸಾಂದ್ರಾ ॥ ೪ ॥ ಇರುಳು ಹಗಲುಗಳೆನದೆ । ಸುರವಿರೋಧಿಗಳಲ್ಲಿ । ಬರುವವರತಿ ಜತನದಿಂ । ದಿರು ಕೃತೋದ್ಧಾರ ॥ ೫ ॥ ವೀರಲಕ್ಷ್ಮಣದೇವ । ಶೂರನಾ ದಿಕ್ಕಿನಲಿ । ಭಾರಿ ಧನುಶರವಿಡಿದು । ಘೋರಿ ರಾಕ್ಷಸರಾ ॥ ೬ ॥ ದಾರಿ ಈಕ್ಷಿಸಿ ಕಾಲ । ಸೂರ ತೋರಿಸು ಬೇಗ । ಚಾರು ಗುಣ ಗಂಭೀರ । ಮಾರನ ಸ್ವರೂಪ ॥ ೭ ॥

### ಕಂದ ಪದ್ಯ

ಅನುಜಂ ಸಹಿತಾ ರಾಮಂ । ಮುನಿಮುಖಿಮಂ ಸಲಹುತಿರುವ ವೇಳ್ಯ ದೊಳಾಗಂ ॥ ಘನ ರೋಷದೊಳಾರ್ಭಟಿಸುತ । ದನುಜರು ಬರೆ ಕಂಡು ರಾಮ ಮಿಗೆ ಮಾರಾಂತಂ ॥

### ಪಂತುವರಾಳಿ ರಾಗ - ಮಟ್ಟೆತಾಳ

ಆರೆಲೋ ಮನುಜಾ । ಬಂದಿರುವವ । ನ್ಯಾರೆಲೋ ಮನುಜಾ ॥ ಪಲ್ಲ ॥ ವನದೊಳಧಿಕ ರಜನಿಚರರ । ಹೆಣಗಿ ಯುದ್ಧರಂಗವಲ್ಲಿ । ಕಣನ ಜೈಸ ಲೆಂದು ದೃಢದ । ಮನವ ಮಾಡಿ ಇದಿರುನಿಂತ । ಮನುಜ ನಿನ್ನ ಪೆಸರ ದೇನೆಲಾ । ಸಂಗ್ರಾಮ ಬಿಟ್ಟು । ವಿನಯದಿಂದ ಪೋತೆ ಸಾರೆಲ ॥ ಆರೆಲೋ ॥ ೧ ॥ ಮನುಜನಾದ ದಶರಥನ್ನ । ತನಯ ರಾಮನೆಂಬ ನಾಮ । ಮುನಿಯ ಯಾಗವನ್ನು ಕಾಯ್ವ । ರಣಸಮರ್ಥನೆನ್ನ ಬಲಿದೆ । ಕೇಳಿ ನೀನು ಸಾಯ ಬೇಡಲಾ । ಶರಣಾಗಿ ಬೇಗ। ಗುಣದಿಕಲಹ ಬಿಟ್ಟು ಪೋಗೆಲ ॥ ಆರೆಲೋ ॥ ೨ ॥ ಮನುಜನಾದ ದಶರಥನ್ನ । ತನುಜ ನೀನು ಹೆಮ್ಮೆಯಿಂದ । ಮುನಿಯ ಮಾತ ಕೇಳಿ ಬಂದು ಎನಗೆ ಗ್ರಾಸವಾದೆ ಭಳಿರೆ । ತನುವಿನಾಸೆಬಿಟ್ಟು ಕಳೆಯಲಾ । ಬೆಂಬಲಕೆ ಬೇಗ । ಜನಕನನ್ನು ಕರಸಿಕೊಳ್ಳೆಲಾ ॥ ಆರೆಲೋ ॥ ೩ ॥ ಇಷ್ಟು

ಮಾತರ್ವೇತಕೆಂದು । ದುಷ್ಟಗೊಂದು ಶರವನೆಸೆದು । ನೆಟ್ಟನಾ ಮಾರೀಚ ನನ್ನು । ಇಟ್ಟನಾ ಸಮುದ್ರದಲ್ಲಿ । ಮತ್ತೆ ಒಬ್ಬ ದನುಜ ಬಂದನೂ । ಶ್ರೀರಾಮನೊಡನೆ । ಉತ್ತರವನು ಪೇಳ್ವ ನಿಂದನು ॥ ಆರೆಲೋ ॥ ೪ ॥ ಆರೆಲೋ ಸುಬಾಹು ನಾ ವು । ರಾರಿಯನ್ನು ಗೆಲುವೆನೆಂಬ । ವೀರರನು ಬಡಿದು ತಿಂದ । ಮಾರಿ ನಾನು ರಾಮನೆಂಬ । ಭೂರಿ ಗರ್ವ ನಿನಗೆ ಸಲ್ಲದೂ । ಇದಿರಾಗಿ ರಣದಿ । ಹೋರಲೀಗ ಸಮಯವಲ್ಲಿದೂ ॥ ಆರೆಲೋ ॥ ೫ ॥ ಎನ್ನ ತಿಂಬ ಮಾರಿ ಯಾರೊ । ನಿನ್ನ ಕೊರಳ ಕೊಯ್ವೆನೀಗ । ಕುನ್ನಿ ಸಾಯಬೇಡ ಹೋಗು । ಮುನ್ನಿನವರ ಬಗೆಯ ಕಂಡು । ಪನ್ನಿ ನುಡಿವೆ ಚೋರ ರಾಕ್ಷಸಾ । ನಿನ್ನುವನು ಕೊಂದ । ರೆನ್ನ ಮನಸಿಗಹುದು ಸಂತಸ । ಆರೆಲೋ ॥ ೬ ॥ ಎನಗೆ ಬಾಣವೆಸೆವೆನೆಂದು । ಮನುಜ ಪೇಳ್ವೆ ಸಾರೊ ನಿನ್ನ । ಸೆಣಸಿ ಕೊರಳನರಿದು ರಕುತ । ವನು ವಿನೋದದಿಂದ ಭೂತ । ಗಣಕೆ ತೃಪ್ತಿಬಡಿಸಿ ಬಿಡುವೆನೂ । ಆ ಮೇಲೆ ನೆರೆದ । ಮುನಿಗಳನ್ನು ಪಿಡಿದು ತಿಂಬೆನೂ। ಆರೆಲೋ ॥ ೭ ॥ ಧರಣಿಯಲ್ಲಿ ಎನ್ನ · ತಲೆಯ । ತರಿವ ಧೀರ ನೀನೆನುತ್ತ । ಸರಳ ಬಿಟ್ಟು ರಕ್ಕಸನ್ನ । ಕೊರಳ ಕತ್ತರಿಸಲು ಯೋಗಿ । ಸರಣಿ ಕಂಡು ಜಯಜಯೆಂದರೂ । ಸುಪರ್ವರೆಲ್ಲ । ಭರದಿ ಸುಮದ ವೃಷ್ಟಿ ಸುರಿದರು ॥ ಆರೆಲೋ ॥ ೮ ॥

# ಸೀತಾಕಲ್ಯಾಣ

## ಶಾ. ವೃತ್ತ

ಘೋರಾಕಾರ ಸುಬಾಹು ಬೀಳೆ ಮುನಿಪಂ ಸಂತೋಷಮಂ ತಾಳುತಾ। ಭೋರೆಂದಾಗ ಸುವೇದ ಘೋಷ ರವದಿಂ ತಾ ಯಜ್ಞಮಂ ಗೈಯುತ ॥ ಶ್ರೀರಾಮಂ ಸಹಿತಿಲ್ಲಿ ಸೌಖ್ಯದೊಳಗಂ ಸೇರಿರ್ದನಾನಂದದೀ । ಧೀರರ್ಗಾ ಋಷಿ ರಾಜಮೌಳಿ ಜನಕಂ ತಾ ಲೇಖವಂ ಬಿಟ್ಟನು ॥

### ಭೈರವಿ ರಾಗ - ಝಂಪೆತಾಳ

ಜನಕ ಕಳುಹಿದ ದೂತ । ವಿನಯದಿಂ ಬರಲಿತ್ತ । ಮುನಿ ಕೌಶಿಕಗೆ ಕೊಟ್ಟನಾಗ ಲೇಖನವ ॥ ೧ ॥ ಓಲೆಯನು ಕಂಡು ಮುನಿ । ಪಾಲ ತಾ ಹರುಷದಲಿ । ಶ್ರೀಲೋಲ ರಾಮನೊಡನೆಂದನೀ ತರದಿ ॥ ೨ ॥

### ಶಂಕರಾಭರಣ ರಾಗ - ರೂಪಕತಾಳ

ಇನಕುಲೇಶ ಬಾಲರಾಮ । ವನಜಲೋಚನ । ವಿನಯದಿಂದ ಮಿಥಿಲ ಪುರಕೆ । ಪೋಗಬೇಕೆಲ್ಲೈ ॥ ೧ ॥ ಜನಕರಾಯ ತಾನು ಮಾಳ್ಪ । ನೊಂದು ಮದುವೆಯು । ಮನುಮಥಾರಿ ಧನುವ ನೋಡ । ಬಹುದು ಬಾಲಕ ॥ ೨ ॥ ತ್ವರಿತದಿಂದ ಮುನಿಗಳೊಡನೆ । ನಾವು ಪೋಗುವಾ । ಭರದಲಿರುವ ಗಂಗೆ ಯನ್ನು । ದಾಟಬೇಕೆಲ್ಲೈ ॥ ೩ ॥

### ಕಂದ ಪದ್ಯ

ಮುನಿವರನೆಂದುದ ಕೇಳುತ । ಘನತರ ಜಪತಪವ ರಚಿಸಿ ಗಂಗಾ ನದಿಯಂ ॥ ವಿನಯದಿ ದಾಟುತ ಸುಮತೀ । ಜನಪನ ಗೃಹ ಸಾರಲೆಂದನಪ ಮುನಿಯೊಡನಂ ॥

### ದೇಶಾಕ್ಷಿ ರಾಗ - ಅಷ್ಟತಾಳ

ವಿಶ್ವಾಮಿತ್ರ ತಾಪಸೇಂದ್ರ । ಸದ್ಗುಣಸಾಂದ್ರ ॥ ಪಲ್ಲ ॥ ಇಂದು ಎನ್ನ ಮನೆಗೆ । ಬಂದ ಕಾರಣದಿಂದಾ । ನಂದವಾಯಿತೆನಗೆ ನಾ । ವಂದಿಸು ವೆನಯ್ಯ ನಿಮಗೆ ॥ ವಿಶ್ವಾಮಿತ್ರ ॥ ೧ ॥ ಚೆಲುವ ಬಾಲರಿವರ್ಯಾರು । ಜಲರುಹಾಕ್ಷರಾಗಿ ಮತ್ತೆ । ಬಲವೈರಿ ಸಮಬಲರು । ಕೋದಂಡಧರ ರಾಗಿಹರು ॥ ವಿಶ್ವಾಮಿತ್ರ ॥ ೨ ॥ ದಶರಥೇಂದ್ರನಣುಗ ರಾಮ । ಅಸಮ ಸದ್ಗುಣ ಧಾಮ । ರಸಿಕ ಲಕ್ಷ್ಮಣ ಕಾಣೊ । ಬಿಸಜಾಪ್ತ ಕುಲಜರಿವರು ॥ ವಿಶ್ವಾಮಿತ್ರ ॥ ೩ ॥ ಎನ್ನ ಯಾಗರಕ್ಷೆಗೆಂದು । ಮೊನ್ನೆ ಕರತಂದೆನಿವರ । ಕುನ್ನಿ ತಾಟಕೀ ಸುಬಾಹು । ವನ್ನು ಕೊಂದನ್ನೈ ಶ್ರೀರಾಮ ॥ ವಿಶ್ವಾಮಿತ್ರ ॥ ೪ ॥

### ವಚನ

ಇಂತೆಂದು ಸುಮತಿ ಭೂಪಾಲನಂ ಬೀಳ್ಕೊಂಡು ಶ್ರೀಕಾಂತನಾಗಿಹ ರಾಮ ಮುಂದೆಸೆದಿರುವ ವನಮಂ ನೋಡಿ ಕೈಮುಗಿದು ಮುನಿಯೊಡನೆ ಕೇಳ್ದನದೆಂತೆನೆ -

### ಭೈರವಿ ರಾಗ - ಝಂಪೆತಾಳ

ಮುನಿಕುಲೋತ್ತಮ ಕೇಳು । ವನದೊಳತ್ಯಧಿಕವಿದು । ಘನತ ರಾಶ್ರಮವ್ಯಾವ । ದೆನಗೆ ಪೇಳಯ್ಯ ॥ ೧ ॥ ಕೇಳು ರಾಘವ ವೀರ ।

ಹೇಳುವೆನು ನಿನಗೀಗ। ಕಾಳಕತ್ತಲೆ ವನದ। ಮೂಲ ಸಂಗತಿಯ॥ ೨ ॥ಮುನ್ನ ಗೌತಮ ಮುನಿಪ । ತನ್ನರಸಿಯೊಡಗೂಡಿ । ನನ್ನಿಯಿಂದಿರ್ದ ಸಂ । ಪನ್ನ ವಿಭವದಲಿ ॥ ೩ ॥ ಸುರಪನೈತಂದು ಮುನಿ ಸರಸಿಗೈದಿದ ಸಮಯ । ಪರಿತ ಹಲ್ಕಿಯು ತಾನು । ನೆರೆದ ಕಾಮದಲಿ ॥ ೪ ॥ ಆ ಸಮಯದಲಿ ಬಂದು । ಗೌತಮನು ಬಲು ರೌದ್ರ । ವೇಷದಿಂದಿಂದ್ರಗೆ । ಶಾಪವನು ಕೊಟ್ಟ ॥ ೫ ॥ ಮತ್ತಾಹಲ್ಯೆಗೆ ಶಾಪ । ವಿತ್ತಡವಳ್ ಕಲ್ಲಾದ । ಳುತ್ತಮೋತ್ತಮ ರಾಮ । ಚಿತ್ತವಧಾನ ॥ ೬ ॥ ಇದು ನಿನ್ನಯ ಪಾದ । ಸೋಂಕಲವ ಳೇಳುವಳು । ಎಂದೊಡಾ ರಾಮ ಪಾದ ಸ್ಪರ್ಶ ಮಾಡೇ ॥ ೭ । ಶ್ರೀಮುಕುಂದ ಮುರಾರಿ । ದಾಮೋದರಾ ಎನುತ । ಭೂಮಿಯುವಲ್ಕಿ ಕಳು । ರಾಮಗೆರಗಿದಳು ॥ ೮ ॥ ಇಂತು ನಾನಾ ತೆರದಿ । ಕಾಂತೆ ಭಜಿಸು ತ್ತಿರಲು । ಸಂತಸದಿ ಗೌತಮ ಮು । ನೀಂದ್ರ ಸಡೆತಂದ ॥ ೯ ॥

ರೇಗುಪ್ತಿ ರಾಗ - ಏಕತಾಳ

ಅಚ್ಯುತಾನಂತ ಗೋವಿಂದ । ನಾರಾಯಣ ರಾಮಾಚಂದ್ರ । ಸಚ್ಚಿದಾ ನಂದ ಮುಕುಂದ । ರಕ್ಷಿಸೋ ಎನ್ನ ॥ ೧ ॥ ಈ ಕಲ್ಲಾಗಿ ಬಿದ್ದಿಪಲ್ಯೆ । ನಿನ್ನ ಪಾದ ಸ್ಪರುಶದಿಂದ । ಶೋಕಹೀನಳಾಗಿ ಬಂದ । ಳಿನ್ನ ಭಾರ್ಯಳು ॥ ೨ ॥ ಶ್ರೀ ಕಮಲೆಯರಸ ಸರ್ವ । ಲೋಕೇಶನೆ ಎನ್ನ ಸತಿಯ ನಾ ಕರಕೊಂಡು ಪೋಪೆ । ಹೇ ಕೃಪಾನಿಧೇ ॥ ೩ ॥ ಇನ್ನು ವಿಶ್ವಾಮಿತ್ರ ಮೌನಿ । ಯನ್ನು ಕೂಡಿಕೊಂಡು ಜನ । ಕನ್ನ ಪುರಕ್ಕೈದುವುದೆಂದು । ಬೀಳು ಗೊಟ್ಟನು ॥ ೪ ॥

ಕಂದ ಪದ್ಯ

ವನಿತೆಯು ಸಹಿತಾ ಗೌತಮ । ಮುನಿ ಪೋಗಲಿಕತ್ತ ಕುಶಿಕತನುಭವ ನೊಡನಂ ॥ ಇನಕುಲಜರು ಮಿಥಿಲೆಗೆ ಬರ । ಲನುಪಮರನು ಕಂಡು ಪೇಳ್ದ ಜನಕ ನೃಪಾಲಂ ॥

ತುಜಾವಂತು ರಾಗ - ಝಂಪೆತಾಳ

ಹೇ ದಯಾನಿಧಿಯೆ ವಿಶ್ವಾಮಿತ್ರ ಮುನಿಯೇ । ಸಾಧುಶೀಲಾಗ್ರಣಿಯೆ ಸಕಲ ಗುಣಮಹಿಮೆ ॥ ಹೇ ॥ ಪಲ್ಲ ॥ ವರ ಮುನಿಪ ತವ ಚರಣ

ವರುಶನವ ಫಲವೊಳಗೆ । ಹರಿದುಪೋದುವನೇಕ ದುರಿತವಿಂದೀಗ ॥ ಪರಮ ಪಾವನ ಕಣ್ಗೆ ನಿತ್ಯಮುಂಗಲವಾಯ್ತು । ಧರೆಯೊಳಗೆ ನಾ ಧನ್ಯನಾದೆನ್ನೈ ಸ್ವಾಮಿ ॥ ಹೇ ॥ ೧ ॥ ಬಾಲರಿವರ್ಯಾರು ಮುನಿ ಬಲ ವೈರಿಸಮಬಲರು । ಶೀಲ ಸಂಪನ್ನರತಿ ಕೋದಂಡಧರರು ॥ ನೀಲಾಭ್ರಶ್ಯಾಮಲರ ಪರಿಯ ಪೇಳೆನಲಾಗ । ಲೀಲೆಯುಲಿ ನುಡಿದನಾ ಕುಶಿಕ ಸಂಜಾತ । ಹೇ ॥ ೨ ॥ ದಶರಥನ ಸುತರಿವರು ಜನಕ ಭೂಪತಿ ಕೇಳು । ರಸಿಕ ವಿಶ್ವಾಮಿತ್ರರ ಕ್ರತು ರಕ್ಷೆಗಾಗಿ ॥ ಕುಶಲದಿಂ ನಾ ಪೋಗಿ ಕರ ತಂದ ಕಾರಣದಿ ॥ ನಿಶಿಚರರ ಕೊಂದು ಯಾಗವ ಕಾಯ್ದನಲ್ಲೈ ॥ ಹೇ ॥ ೩ ॥ ಬರುವಾಗ ಸುಮತಿ ಭೂಪಾಲ ಕಂಡನು ಮತ್ತೆ । ವರ ಗೌತಮಾಶ್ರಮಕೆ ನಡೆತಂದೆವಯ್ಯ ॥ ಅರೆಯಾಗಿ ಬಿದ್ದಹಲ್ಯೆಗೆ ವಿಶಾಪವ ಮಾಡಿ । ಕರೆದು ಗೌತಮಗಿತ್ತು ಬಂದ ಶ್ರೀ ರಾಮ ॥ ಹೇ ॥ ೪ ॥

ವಚನ

ಕುಶಿಕತನಯನ ಮಾತ ಜನಕರಾಯನು ಕೇಳಿ ದಶರಥ ಸುತರಿಗೆ ವಂದಿಸುತ್ತ ಪಡಿ ಬಿಡಾರವನ್ನಿತ್ತು ವಿಶ್ವಾಮಿತ್ರನೊಡನೆ ಏನೆಂದನು ಎಂದರೆ -

ಭೈರವಿ ರಾಗ - ಝಂಪೆತಾಳ

ಧರಣಿಯನು ಶೋಧಿಸಲಿ । ಕಿರದೆ ಕನ್ಯಾರತ್ನ ದೊರಕಲಮರ ಮುನೀಂದ್ರ । ಸರಿದು ತಾನೆಂದ ॥ ೧ ॥ ವರ ಕುವರಿ ಸಿರಿದೇವಿ । ಹರಿಯು ಪತಿಯಾಗುವನು । ಕರೆದು ನೀ ಸಲಹೆಂದು । ಮುನಿ ಪೋದನೆಂದು ॥ ೨ ॥ ಇರಲು ಯೌವನದೋರೆ । ತರುಣಿ ಸೀತಾಸ್ವಯಂ । ವರ ಮಾಡಲೆಂದು ನಾ । ಪುರವ ಶೃಂಗರಿಸಿ ॥ ॥ ೩ ॥ ಧೊರೆಧೊರೆಗಳೆಲ್ಲರಿಗೆ । ಬರೆಸಿದೆನು ಲೇಖನವ । ಕರೆಯಲಟ್ಟಿದೆ ನಿಮ್ಮ । ವರ ಮುನಿಪ ಕೇಳು ॥ ೪ ॥

ಕಂದ ಪದ್ಯ

ಈ ಪರಿ ಜನಕ ನೃಪಾಲಂ । ತಾಪಸ ವಾರ್ತೆಯನು ಮನ್ನಿಸುತ್ತಿರಲಾಗಂ ॥ ಭೂಪರು ನಡೆತರಲಾ ಮಿಥಿ । ಳಾಪತಿ ಸಂತಸದೊಳವರ ನುಡಿಸುತ್ತಿರ್ದಂ ॥

### ತೋಡಿ ರಾಗ - ಏಕತಾಳ

ಬಂದಿರೇನ್ನೈ । ನಡೆ । ತಂದಿರೇನ್ನೈ ॥ ಪಲ್ಲ ॥ ಅಂಗ ಭೂಪಾಲ ನಮೋ । ವಂಗ ದೇಶಾಧೀಶ ನಮೋ ॥ ಬಂಗಾಳದ ರಾಯಗೆ ಕಾ । ಳಿಂಗ ಭೂಪಾಲಗೆ ನಮೊ ॥ ಬಂದಿರೇನ್ನೈ ॥ ೧ ॥ ಮಂಗಲಾಕಾರ ಕಾಂಭೋಜ । ತುಂಗ ಕಾಶಿರಾಜ ನಮೋ । ಸಿಂಗಲದ ರಾಯಗೆ ಮ । ತ್ತಂಗುಲಿಯಿಂದಲೀ ನಮೋ ॥ ಬಂದಿರೇನ್ನೈ ॥ ೨ ॥ ಸೌರಾಷ್ಟ್ರ ಬರ್ಬರ ದೇಶ । ಧೀರ ಪಾಂಡ್ಯ ಕೈಕೇಯಗೆ । ಗೋರಾಷ್ಟ್ರ ಹಮ್ಮೀರನಿಗೆ । ಹೇರಳನಿಗೆ ನಮೋ ನಮೋ ॥ ಬಂದಿರೇನ್ನೈ ॥ ೩ ॥

### ವಾರ್ಧಿಕ ಷಟ್ಪದಿ

ಜನಕ ಭೂಪತಿ ಬಂದ ನೃಪರ ಮನ್ನಿಸುತ ಶಿವ । ಧನುವ ಇಲ್ಲಿಗೆ ತನ್ನಿರೆಂದೆನುತ್ತಲಿ ಪೇಳ । ಲನಿತರೊಳು ಚರರು ತೀವ್ರದಲಿ ಚಾಪವ ಪೊತ್ತು ತರಲೊಡನೆ ಮಿಥಿಲೇಂದ್ರನು ॥ ಅನುಜ ಕುಶಧ್ವಜನೊಡನೆ ಸೀತೆಯಂ ಶೃಂಗರಿಸಿ । ಘನ ಬೇಗದಿಂದ ಕರೆತರುವುದೆನಲೈದಿ ಭೂ । ತನುಜೆಯಂ ಶೃಂಗಾರವೆಸಗಿ ಕರಕೊಂಡಾಗ ನಡೆತಂದನಾ ಸಭೆಯೊಳು ॥

### ಸಾಂಗತ್ಯ ರಾಗ - ರೂಪಕತಾಳ

ಇಂತು ಶೃಂಗಾರವಾಗಿಹ ಸೀತಾದೇವಿಯ । ದಂತಿಯೇರಿಸಿ ನಡೆತಂದು ॥ ಕಾಂತೆ ನೋಡಿತ್ತ ಭೂಪಾಲರ ಪಂಕ್ತಿಯ । ಸಿಂತು ನೋಡೆಲಿ ಸುರಸಭೆಯ ॥ ೧ ॥ ಮರಿ ಹಂಸೆಯನು ಏರಿ ಪರಮೇಷ್ಠಿ ಬಂದಿಹ । ಪರಶಿವ ನಡೆತಂದ ನೋಡೇ ॥ ಕರಿ ಏರಿ ಸುರಪನೈತಂದನೆರಳೆ ಏರ್ದು । ಸರಿದನಿಲನನು ನೋಡೆಂದ ॥ ೨ ॥ ಉರುಪರಾಕ್ರಮಿ ಕೋಣ ವಾಹನದಿಂದ ನಿಂ । ತಿರುವಾತ ನಿವ ದಂಡಧಾರ । ನಿಋತಿ ವರುಣರೆಲ್ಲ ಸಂತೋಷದಿಂದ ಕು । ಳ್ಳಿರುವರವರ ನೋಡೆ ಬಾಲೇ ॥ ೩ ॥ ವಾಯು ಕುಬೇರ ಈಶಾನ್ಯಾದಿ ದಿಗಧಿಪ । ರಾಯರ ಪಂಕ್ತಿಯನೆಲ್ಲ ॥ ಬಾ ಎಂದೆನುತಲಾಗ ತೋರೆ ನಕ್ಕಳು ಸೀತೆ । ಪ್ರಿಯನಪೇಕ್ಷೆಯೊಳಂದು ॥ ೪ ॥ ಕರಿ ಕುರಿ ಕಾಡ್ಗೋಣ ನರ ನೆಗಳೆ ರಳಿಯು । ತುರಗಾರೂಢರ ನೀಕ್ಷಿಸುತಲಿ ॥ ಸರಸಿಜಸಂಭವನೆನ್ನ ಬಾಲಕ ಪುರ । ಹರನೆನ್ನ ರಮಣನ ಮಿತ್ರ ॥ ೫ ॥ ಸುರರು ಕಿಂಕರರೆಲ್ಲ ನರರು

ಕೀಟಕರೆನ್ನ । ವರನ ಸಮಾನರಾಗುವರೆ॥ ಉರಗನ ಹಾಸಿಗೆಯಾದ ದಯಾನಿಧಿ । ಪರಿ ಎನ್ನ ರಮಣನಾಗಿಹನು ॥ ೬ ॥

ವಚನ

ಈ ರೀತಿಯಿಂದ ಜಾನಕಿ ತಿಳಿದು ಚಿಂತಿರಾಗಿ ಸತಿಯರಂ ಸೇರಿ ಇರಲಾ ವೇಳ್ಯದೊಳ್ ಇತ್ತಲಾಗಿ ಭೂಪಾಲಕರು ಮಾತಾಡುತ್ತಿರ್ದರದೆಂತೆನೆ-

ಅಹೇರಿ ರಾಗ - ಏಕತಾಳ

ಏಕಯ್ಯ ನೀವೇಳಿ । ಬಿಡಿಬಿಡಿ । ಸಾಕಯ್ಯ ನೀವೇಳಿ ॥ ಏಕಯ್ಯ ॥ ಪಲ್ಲ ॥ ಬೇಕಿಲ್ಲವು ನಮಗೀ ಕನ್ನಿಕೆಯು ತೋಟಿ ॥ ಏಕಯ್ಯ ॥ ೧ ॥ ಪಿತ್ತ ವೇರಿ ಕಣ್ಣು । ಕತ್ತಲೆ ಬರುತಿದೆ ॥ ಏಕಯ್ಯ ॥ ೨ ॥ ಸಂದು ಶೂಲೆಯು ಸಮ । ಗೆಂದೆಂದಿಗಾಗದು ॥ ಏಕಯ್ಯ ॥ ೩ ॥ ಸತ್ವಂತ ಸುದ್ದಿಗಿ ॥ ನ್ಯುತ್ತರ ವೇನಿದೆ ॥ ಏಕಯ್ಯ ॥ ೪ ॥ ಮತ್ತೆ ಮಲ ಮೂತ್ರವು। ಒತ್ತಿ ಬರುತಲಿದೆ ॥ ಏಕಯ್ಯ ॥ ೫ ॥ ಛಳಿಜ್ವರ ಸುರುವಾಗಿ । ಬಲು ಬಾಧಿಸುತ್ತಿದೆ ॥ ಏಕಯ್ಯ ॥ ೬ ॥ ತಾಯಿ ಎಂದು ಎನ್ನ । ಬಾಯಿಗೆ ಬಂದುದು ॥ ಏಕಯ್ಯ ॥ ೭ ॥ ವೃದ್ಧರು ನಾವು ಬಿಲ್ಲಿ । ಗಿದ್ದಲ್ಲೆ ನಮೊ ಎಂಬೆ ॥ ಏಕಯ್ಯ ॥ ೮ ॥

ಪರಜು ರಾಗ - ಏಕತಾಳ

ಅಂಗ ಭೂಮಿಪಾಲನ್ಯೆ ತಂದ । ಆಗಲೆ ನಿಂದ । ಮುಂಗೈಯ ಬಳೆ ತಿದ್ದಿಕೊಂಡ ॥ ಗಂಗಾಧರನ ಚಾಪವ ನೆತ್ತಲು । ತುಂಗ ವಿಕ್ರಮನತಿ ಭಂಗಿಸಿ ಪೋದ ॥ ಅಂಗ ॥ ಕೇರಳದೆರಸನು ಬಂದ । ಕಡು ಪಂಥದಿಂದ । ಓರೆಯೊಳ್ ಧನುವೆತ್ತಿ ನಿಂದ ॥ ಮಾರಾರಿಯ ಬಿಲ್ಲೇರಿಸಿ ಹಿಡಿಯಲು । ಕಾರುತ ರುಧಿರವ ಸಾರಿದ ಪುರವ ॥ ಅಂಗ ॥ ೨ ॥ ಲಾಟ ದೇಶದ ರಾಯ ಬಂದ । ಮುಂದಾಗಿ ನಿಂದ । ವಿಟಾಟಿ ಧನುವ ತೀವ್ರದಿಂದ ॥ ನೋಟವೇರಿ ಹಮ್ಮೈಸಲು ಬೆದರುತ । ದಾಟಿದ ಧನುವಿಂಗೊಂದಿಸಿ ಪುರಕೆ ॥ ಅಂಗ ॥ ೩ ॥

ಭಾಮಿನಿ

ಕೆಲರು ಧನುವನು ಮುಟ್ಟಿ ಪೋದರು । ಕೆಲರು ಧನುವಿನ ಮಾತು ಸಾಕೆನು । ತಲಿಯೆ ಲಂಕಾಪುರದ ರಾವಣ ಬಂದನಭ್ರದಲಿ ॥ ಕಳಕಳವನಿದ

ನೀಕ್ಷಿಸುತ್ತ । ಘಳಿಗೆಯೊಳು ಲಗ್ನದ ಸಭಾಮಂ । ಟಪಕೆ ಬರೆ ಚಾರಕರು ಸಾರಿದರಿಂತು ಭಯಂತಾಳ್ದು ॥

ಸವಾಯ್ ರಾಗ - ಏಕತಾಳ

ಕಟ್ಟಿಗೆಕಾರರು ಕಾರ್ಮುಕಪತ್ತಲು । ಘಟ್ಟಿಗರಾದವರೇಳ್ಕೈಸುತ । ಒಟ್ಟೊಟ್ಟಿಗೆ ಒಪ್ಪೊಬ್ಬರನೆಬ್ಬಿಸಿ । ಬಿಟ್ಟರು ಪ್ರೇಮದಿ ಮನ್ನಿಸುತ ॥ ೧ ॥ ಘಟ್ಟಿಸಿದಾ ಸಭೆಯೊಳಗೊಬ್ಬರು ಸ । ಮ್ಮಿಷ್ಟ ಸಲಿಸುವವರಿಲ್ಲೆನಲು । ನೆಟ್ಟನೆ ನುಡಿಯಲು ರಾವಣ ಬಂದನು । ತಟ್ಟನೆ ಸುರರತಿ ಭಯಗೊಳಲು ॥ ೨ ॥

ತೋಡಿ ರಾಗ - ಮಟ್ಟೆತಾಳ

ಬಂದು ರಾವಣ । ಸಭೆಯೊಳ್ । ನಿಂದನಾಕ್ಷಣ ॥ ಬಂದು ॥ ಪಲ್ಲ ॥ ॥ ಅಸುರ ಬಿಲ್ಲ ಪಿಡಿದುಕೊಂಡು । ವಸುಧೆಯಲ್ಲಿ ಹಾಕಿ ಮತ್ತೆ । ಅಸುರರೆಲ್ಲ ನೋಡುತಿರಲು । ಮಸುಕಿನಿಂದಲೆತ್ತುತಿರ್ದ । ಬಿಸಜ ವೈರಿಧರನ ಧನುವನು ಜನಕೇಂದ್ರ ಕಂಡು । ವ್ಯಸನದಿಂದ ಸುಮ್ಮನಿರ್ದಾದೂ ॥ ಬಂದು ॥ ೧ ॥ ಮತ್ತೆ ಸಹಸಿ ಸತ್ವದಿಂದ ಹಸ್ತದಲ್ಲಿ ಎತ್ತಿ ಧನುವ । ಮಸ್ತಕವನೊಲಿದು ನೋಡೆ । ಪಿತ್ತವೇರಿದಂತೆಯಾಗಿ । ಪೃಥ್ವಿಯಲ್ಲಿ ತಿರುಗಿ ಬಿದ್ದನು । ಕಾಣುತ್ತ ದನುಜ । ಮೊತ್ತ ಬೆದರುತಿರಲಿಕೆದ್ದನು ॥ ಬಂದು ॥ ೨ ॥ ಬಿದ್ದ ಭರಕೆ ಧರಣಿ ತಗ್ಗಿ । ಲೊದ್ದು ಹೂಂಕರಿಸುತ ಬಳಸು । ಎದ್ದು ಬಹಳ ಭಂಗದಿಂದ । ಸಾಧ್ಯವೆನುತ ಭಾಷೆ ಮಾಡಿ । ಎದ್ದು ಹೋದ ನಿಜ ನಿವಾಸಕೆ ಮಿಥಿಲೇಂದ್ರ ನಾಗ । ಹೊದ್ದಿದನು ಸಂತೋಷ ನಿಮಿಷಕೆ ॥ ಬಂದು ॥ ೩ ॥

ವಚನ

ಈ ರೀತಿಯಿಂದ ರಾವಣೇಶ್ವರನು ದಂತಭಗ್ನನಾಗಿ ತೆರಳಲು ಮುನಿ ವಿಶ್ವಾಮಿತ್ರ ರಾಮನೊಡನೆ ಏನೆಂದನು ಎಂದರೆ-

ದ್ವಿಜಾವಂತಿ ರಾಗ - ರೂಪಕತಾಳ

ರಾಮ ರವಿಕುಲೇಶ ಬಾಲ । ವನಜಲೋಚನ ॥ ರಾಮ ॥ ಪಲ್ಲ ॥ ಭೂವರೇಣ್ಯರೆಲ್ಲ ಧನುವ । ಗೆರಗಿ ಪೋದರು ॥ ರಾವಣೇಶ ದಂತಭಗ್ನ ।

ನಾಗಿ ತರಳಿದ ॥ ರಾಮ ॥ ೧ ॥ ಶಿವನ ಚಾಪ ಮುರಿವ ಸಮಯ । ಬಂತು ಬಾಲಕ ॥ ಅವನಿಜಾತೆ ಸೀತೆಯನ್ನು । ವರಿಸೊ ರಾಘವ ॥ ರಾಮ ॥ ೨ ॥

ನಾದನಾಮಕ್ರಿಯೆ ರಾಗ - ಅಷ್ಟತಾಳ

ಪುಟ್ಟ ಚಲ್ಲಣ ಘಟ್ಟಿಯುಟ್ಟನೊ । ಹಿಂ । ಗಟ್ಟು ಕಠಾರಿಯನಾಂತನು ॥ ತಟ್ಟನೆ ಬಿಲ್ಲೆತ್ತಿ ನಿಂದನು । ಅದ । ನಟ್ಟ ಹಾಸದಿ ಮುರಿದಿಟ್ಟನು ॥ ೧ ॥ ಅದ ಕಂಡು ಸುರರು ಸಂತೋಷದಿ । ಪ್ರಸೂ । ನದ ವೃಷ್ಟಿಗರೆಯೆ ಸುಮ್ಮಾನದಿ ॥ ಮುದದಿಂದ ಸೀತೆಯು ಕಾಣುತ್ತ । ಬಿಂಗೆ । ಸುದತಿಯರೆಂದರು ನಲಿವುತ್ತ ॥ ೨ ॥

ಕಾಂಬೋಧಿ ರಾಗ - ಏಕತಾಳ

ಗುರುಕುಚದ ರನ್ನೆ ಮುದ್ದು । ಕುವರಿ ಚೆಲುವೆ ಸೀತೆ ॥ ಕರಿಗಮನೆ ನಿನ್ನ ಭಾಗ್ಯ । ದರಸನಾದ ರಾಮ ॥ ೧ ॥ ಪರಮೇಶ್ವರನು ಹಿಡಿಯುವಂಥ । ಘೋರ ಚಾಪವನ್ನು ॥ ವೀರ ರಾಮ ಖಂಡಿಸಿದ । ನರ್ಧ ನಿಮಿಷದಲ್ಲಿ ॥ ೨ ॥ ಪೋಗು ಕಾಂತಗೆರಗು ಕಂಠ । ಕಿಕ್ಕು ಪುಷ್ಪಮಾಲೆ ॥ ಬೇಗೆನುತ್ತ ಕಳುಹಿಸಿದರು । ರಾಮನೆಡೆಗೆ ಸತಿಯ॥ ೩ ॥ ಇಂದೀವರಾಕ್ಷಿ ಬಂದು । ಶ್ರೀರಾಮಚಂದ್ರನಿಗೆ ॥ ಸುಂದರ ಮಾಲೆಯನಿಕ್ಕಿದಳು । ನಮಿಸಿ ಕಾಂತನಡಿಗೆ ॥ ೪ ॥

ವಚನ

ತದನಂತರದೊಳು ಜನಕರಾಯನು ಅತ್ಯಂತ ಸಂತೋಷಯುತನಾಗಿ ದಶರಥರಾಯಗೆ ಈ ವಾರ್ತೆಯಂ ಪೇಳಿ ದಿಬ್ಬಣಸಹ ತೆರಳಿಸಿಕೊಂಡು ಬಾರೆಂದು ಚಾರಕನ ಕಳುಹಲಾಕ್ಷಣ ದೂತ ಬಂದು ಏನೆನ್ನುತಿರ್ದನದೆಂತೆನೆ -

ಭೈರವಿ ರಾಗ - ಝಂಪೆತಾಳ

ವಸುಮತೀ ಪತಿ ತಿಲಕ । ದಶರಥ ಮಹಾರಾಜ । ಕುಸುಮಶರರೂಪ ಕೇಳ್ । ಬಹುಭಾಗ್ಯವಂತ ॥ ೧ ॥ ನಿನ್ನ ಸುತನಾಗಿರ್ಪ ರಾಮಚಂದ್ರನ ವಾರ್ತೆ । ಚೆನ್ನಾಗಿ ಕೇಳಯ್ಯ । ಬಹಳ ವಿಭವದಲಿ ॥ ೨ ॥ ಕುಶಿಕಸುತನು ಕೂಡಿ । ಕೊಂಡು ಮಿಥಿಲಾಪುರಕೆ । ಕುಶಲದಿಂದಲಿ ಬಂದು । ಪರಿಣಯದ

ಸ್ಥಳದಿ ॥ ೩ ॥ ಮುನ್ನ ಈಶ್ವರನಿತ್ತ । ಚಾಪವನು ಮುರಿದವಗೆ । ಕನ್ನಿಕೆಯ ಕೊಡುವೆನೆಂ । ದೆನುತ ಪೇಳಲ್ಕೆ ॥ ೪ ॥ ಅನುಜ ಲಕ್ಷ್ಮಣ ಸಹಿತ । ವಿನಯ ದಿಂದೈತಂದು । ಧನುವ ಮುರಿಯಲು ಸೀತೆ । ರಾಮಚಂದ್ರನಿಗೆ ॥ ೫ ॥ ಮಾಲೆ ಇಕ್ಕಿದ ವಾರ್ತೆ । ಪೇಳಿ ಕರತಾರೆಂದು ಭೂಲಲಾಮನು ಕಳುಹೆ । ನಾ ಬಂದೆನಯ್ಯ ॥ ೬ ॥

ವಾರ್ಧಿಕ

ಎಂದ ಮಾತಂ ಕೇಳುತಾಗ ಭೂಪಾಲ ನಿಜ । ಬಂಧುಬಾಂಧವರ ಗುರು ಪೌರೋಹಿತಾದಿಗಳ । ಸಂದಣಿಗಳಂ ಕೂಡಿ ಭರತಾದಿಗಳು ಸಹಿತಲರಸಿಯರ ಸೇರ್ವಿಕೆಯೊಳು ॥ ಚಂದದಿಂ ದಿಬ್ಬಣವ ತೆರಳಿಸುತ ಮಿಥಿಲೆಗೈ । ತಂದ ವಾರ್ತೆಯ ಕೇಳ್ದು ಭರದೊಳಿದಿರಾಗಿ ನಿಜ । ಮಂದಿರಕೆ ಕರೆತಂದು ಕುಶಲ ವನು ಬೆಸಗೊಂಡ ಜನಕ ದಶರಥನ ಕೂಡೆ ॥ ೧ ॥

ಭೈರವಿ ರಾಗ - ಏಕತಾಳ

ಕುಶಲವೆ ದಶರಥ ವೀರಾ । ಕೇ । ಳಸಮ ಗುಣಾಢ್ಯಗ ಭೀರ ॥ ಕುಸುಮಸಾಯಕನಾಕಾರ । ಲಾ । ಲಿಸುವುದು ಧರ್ಮೋದ್ಧಾರ ॥ ೧ ॥ ನಿನ್ನ ಸುತನು ರಾಮ ಬಂದ । ಧನು । ವನ್ನು ಮುರಿದು ಅಲ್ಲಿ ನಿಂದ ॥ ಎನ್ನ ಮಗಳ ಮುದದಿಂದ । ಧಾರೆ । ಯನ್ನೆರೆವೆನು ನೋಡೆಂದ ॥ ೨ ॥ ಲಕ್ಷ್ಮಣ ನಿಂಗೂರ್ಮಿಳೆಯ । ಇ ತ್ತೀಕ್ಷಿಸುವೆನು ಕೇಳಯ್ಯ ॥ ರಕ್ಷಿಸು ದಶರಥರಾಯ । ಉ । ಪೇಕ್ಷೆಯ ಮಾಡದಿರಯ್ಯ ॥ ೩ ॥

ಕಾಂಬೋಧಿ ರಾಗ - ಝಂಪೆತಾಳ

ಸುರುಚಿರದ ದಿವ್ಯ ಬಾಸಿಕ ಕುಂಡಲಗಳ ರಘು । ವರರ ಶಿರಕಳವಡಿಸಿ ಮುದದಿ ॥ ಮೆರೆವ ದಿವ್ಯಾಂಬರವ ತೆರೆವಿಡಿದು ಮಧ್ಯದಲಿ । ತರುಣೆಯರು ಸುಳಿದರಾರತಿಯ ॥ ೧ ॥ ಮೆಟ್ಟಕ್ಕಿಯಲಿ ನಿಲಿಸಿ ಗುಡಜೀರಿಗೆಯನಿತ್ತು । ಸೃಷ್ಟಿಪತಿ ಮಧುಪರ್ಕವೆಸಗಿ ॥ ಒಟ್ಟು ಗೋತ್ರ ಪ್ರವರ ವಿರಚಿಸುತ ಜೋಯಿಸರು ಶ್ರೇಷ್ಠ ಲಗ್ನವನು ಪೇಳಿದರು ॥ ೨ ॥ ಸುರದುಂದುಭಿಯು ಮೊಳಗೆ ವಾದ್ಯಘೋಷಗಳಿಂದ । ಧರಣಿ ಕಂಪಿಸಲು ಗಡಬಡೆಗೆ॥ ತರುಣೆಯರು ಪಾಡುತಿರೆ ಶ್ರೀರಾಮಚಂದ್ರನಿಗೆ । ಶರಳೆ ಮಾಲೆಯನು ಹಾಕಿದಳು ॥ ೩ ॥

### ಶಂಕರಾಭರಣ ರಾಗ - ಏಕತಾಳ

ಲಾಲಿಸಯ್ಯ ರಾಜಕುಲ । ಬಾಲ ಕುಶನೆ ರಾಮನಿಗೆ । ಬಾಲೆ ಸೀತೆ ಕೊರಳಿಗೆ ಪೂ । ಮಾಲೆಯನಿಕ್ಕೆ ॥ ೧ ॥ ಒಡನೆ ವೇದಘೋಷದಿಂದ । ಪೊಡವಿಯುಬ್ಬರಿಸುವಂತೆ । ಸಡಗರದಲಿ ಮಂತ್ರ ದ್ವಿಜರು । ನುಡಿವುತಿರ್ದರು ॥ ೨ ॥ ಅಡಿಗಡಿಗೆ ವಾದ್ಯಘೋಷ । ನುಡಿವುತಿರಲು ಸಪ್ತಸ್ವರದಿ । ದೃಢದಿ ಮಗಳ ಧಾರೆ ಎರೆದ । ಪೊಡವಿಪನಂದು ॥ ೩ ॥

### ಧವಳಾರ ರಾಗ - ತ್ರಿವುಡೆತಾಳ

ರಘುಕುಲ ತಿಲಕಗೆ ಮುದದಿಂದಲಿ । ಸುಗುಣ ಸೀತೆಯ ಧಾರೆಯು ನೆರೆಯಲು । ಮಿಗೆ ಪುರೋಹಿತರು ನಲವಿಂದ ॥ ನಲವಿಂದಲಿ ಹೋಮವ ನೆಸಗಲು । ಮುಗುದೆಯರಾರತಿಯ ಬೆಳಗಿದರು ॥ ಶೋಭಾನೆ ॥ ೧ ॥ ಸುರರಂಬರದಲಿ ಪೊಗಳಲು ಖೇ । ಚರರತಿ ಹರುಷದಿ ಪಾಡುತ್ತಿರೆ । ತರುಣಿಯರೆಲ್ಲ ಮುದದಿಂದ । ಮುದದಿಂದಲಿ ನಡೆತಂದಾಕ್ಷಣ । ಕುರುಜಿನಾರತಿಯ ಬೆಳಗಿದರು ॥ ಶೋಭಾನೆ ॥ ೨ ॥ ವರ ರಾಮಗೆ ಲಕ್ಷ್ಮಣದೇವಗೆ । ಭರತಗೆ ಶತ್ರುಘ್ನಗೆ ಸೀತೆಗೆ । ತರುಣಿಯೂರ್ಮಿಳೆಗೆ ಮಾಂಡವಿಗೆ ॥ ಮಾಂಡವಿಗೆ ಶ್ರುತಿಕೀರ್ತಿಗೆ ಸಹಿತಲಿ । ತರುಣಿಯರಾರತಿಯ ಬೆಳಗಿದರು ॥ ಶೋಭಾನೆ ॥ ೩ ॥

### ಭಾಮಿನಿ

ಇಂತು ವಿಭವದಿ ನಾಲ್ಕು ದಿನಗಳ । ನಂತರಿಸಿ ಅವಭೃತವ ಮಾಡಿಸಿ । ಸಂತಸದೊಳುಡುಗರೆಯ ಧರಣೀಶರಿಗೆ ತಾನಿತ್ತು ॥ ಅಂತಮಿಲ್ಲದ ವಸ್ತುಗಳ ಸೀ । ಮಂತಿನಿಯರಿಂಗೀವುತವರಿಗೆ । ಚಿಂತಿತಾರ್ಥವನಿತ್ತು ಕಳುಹಿದ ಜನಕ ರಾಜೇಂದ್ರ ॥

### ಕಂದ ಪದ್ಯ

ಧರಣಿಪ ದಶರಥ ಸುತರಂ । ತರುಣಿಯರಂ ಸೊಸೆಯರುಗಳ ಕೂಡಿ ಕೊಳುತ್ತಂ ॥ ಭರದೊಳಯೋಧ್ಯಾಪುರಕೈ । ತರಲಧ್ವದಿ ಪರಶುರಾಮ ರಾಮನ ತಡೆದಂ ॥

### ಕಾಂಬೋಧಿ ರಾಗ - ಏಕತಾಳ

ಆರೆಲವೊ ನಡೆದು ಪೋಪೆ । ರಾಮ ಶೂರತನದಿ ॥ ವೀರನಾದರನ್ನ ಜೈಸಿ । ನಡೆಯೊ ಮುಂದೆ ವೃಥದಿ ॥ ೧ ॥ ಕಾರಣವಿಲ್ಲದೆ ಬರಿದೆ । ಯುದ್ಧ ವೇತಕಯ್ಯ ॥ ದಾರಿಯನ್ನು ಬಿಡೆಲೊ ಪರಶು । ರಾಮ ಮುನಿವರ್ಯ ॥ ೨ ॥ ಎನ್ನ ಗುರುವಿನ ಬಿಲ್ಲ ಮುರಿವುತ್ತ ನೀನೀಗ ॥ ಕನ್ನೆಯನೊಪ್ಪುವರೆ ಬಿಡೆನು । ಬಿಟ್ಟು ತೆರಳು ಬೇಗ ॥ ೩ ॥ ಹೆಂಡತಿಯ ಬಿಡುವಂಥ । ಭಂಡಾಟವಿದೇನೊ ॥ ಪುಂಡಾಟಿಕೆ ಏಕೆಲವೊ । ಚಂಡ ಪರಶುರಾಮ ॥ ೪ ॥ ದಶರಥಸುತ ರಾಮ । ಪರಶುರಾಮನೆಂಬ ॥ ಪೆಸರೆರಡು ಇಲ್ಲದಂತೆ । ಮಾಡುವೆ ನಾನೀಗ ॥ ೫ ॥

### ಕೇದಾರಗೌಳ ರಾಗ - ಮಟ್ಟೆ ತಾಳ

ವಿಪ್ರಕುಲಾಧಮ ನಿನ್ನಯ ಶೌರ್ಯವ । ಕ್ಷಿಪ್ರದಿ ನಿಲಿಸುವೆನೊದರದಿರೀ ಪರಿ । ಕೇಳೊ ಭಾರ್ಗವ ರಾಮ ॥ ೧ ॥ ಉದ್ಧಟತನದಲಿ ತಾಟಕಿಯನು ನೀ । ಯುದ್ಧದಿ ಕೊಂದಾ ಕಿಲ್ಬಿಷವಿಲ್ಲವೊ । ಕೇಳೊ ರಾಘವರಾಮ । ೨ ॥ ಆವಳೆನ್ನಯ ತಾಯಲ್ಲ ಮುನೀಂದ್ರನೆ । ತವ ತಾಯಿಯ ಸಂಹರಿಸಿ ದುದೇತಕೊ । ಕೇಳೊ ಭಾರ್ಗವ ರಾಮ ॥ ೩ ॥ ಕ್ಷತ್ರಿಯ ವಂಶವನೆಲ್ಲವ ಸವರುವ ಚಿತ್ರಪುರುಷನಾರೆಂದರಿಯೆಯ ನೀ । ಕೇಳೊ ರಾಘವರಾಮ ॥ ೪ । ಮುನಿ ಎಂದತಿ ದಯಮಾಡಿದೆನಲ್ಲದೆ । ಧನುವಿಡಿದಾ ಮೇಲ್ ಯುದ್ಧದಿ ಭಯವೇನ್ । ಕೇಳೊ ಭಾರ್ಗವ ರಾಮ । ॥ ೫ ॥ ಬಲ್ಲಿದನಾದರೆ ಕಣೆಗಳ ಪೊತ್ತವ । ಚೆಲ್ಲು ಬೇಗ ನಾ ನೋಳ್ಪೆ ಪರಾಕ್ರಮ । ಕೇಳೊ ರಾಘವ ರಾಮ ॥ ೬ ॥ ಬಿಲ್ಲ ಸೆಳೆದು ಹೆದೆಗೇರಿಸಿದಾಕ್ಷಣ । ಪಲ್ಲಿಗೆಸೆಯಲೀ ಶರವೆಂದೆನುತಲಿ । ಹೇಳೊ ಭಾರ್ಗವ ರಾಮ ॥ ೭ ॥

### ವಚನ

ಈ ತೆರದಿಂದ ಶ್ರೀರಾಮನು ಬಾಣಮಂ ತೊಡಲು ಕಂಡು ಪರಶು ರಾಮನು ಏನೆಂದನು ಎಂದರೆ -

### ಗುಂಡಕ್ರಿಯೆ ರಾಗ - ಏಕತಾಳ

ಜಯ ಜಯ ಜಾನಕೀಶ । ಶ್ರೀರಾಮಚಂದ್ರ ॥ ಜಯ ಜಯ ಭಾನು ಕುಲೇಂದ್ರ । ರವಿಕೋಟಿ ಸಾಂದ್ರ ॥ ಜಯ ಜಯ ॥ ಪಲ್ಲ ॥ ನಿನ್ನ ಕೂಡೆ

ಸೆಣಸಿ ವ್ಯರ್ಥ । ಖಿನ್ನನಾದೆ ಗೃಹಿಣೀಗ । ನನ್ನ ನಿನ್ನ ವಿಕ್ರಮದಲಿ ।
ಭಿನ್ನ ಭೇದ ಕಾಣದಯ್ಯ ॥ ಜಯಜಯ ॥ ೧ ॥ ನೋಡಲಿನ್ನು ಯುದ್ಧ
ಮುಖದಿ । ಮಾಡಿದಾ ಪ್ರತಿಜ್ಞೆ ಸಾಕು । ಬೇಡ ಹೋಗು ಶ್ರೀಗೋವಿಂದ ।
ಗಾಡಿಗಾರ್ತಿಯೊಡನೆ ಪುರಕೆ ॥ ಜಯಜಯ ॥ ೨ ॥ ಸ್ಥಿರಜೀವಿಯಾಗಿರು
ವಂತೆ । ಕರುಣಿಸೊ ರಾಘವರಾಮ । ಧರದಿ ತಪಕೆ ಪೋಪೆನಯ್ಯ । ವರವ
ಕೊಡು ಮಹಾನುಭಾವ ॥ ಜಯಜಯ ॥ ೩ ॥

ವಾರ್ಧಿಕ

ಇಂತೆಂದು ಶ್ರೀರಾಮಚಂದ್ರಗಭಿವಂದಿಸುತ । ತಾಂ ತೆರಳಲಿತ್ತಲಾಂ
ಸತಿಸಹಿತ ರಾಘವಂ । ಸಂತಸದಿ ಪುರಕೆ ಬಂದಿರ್ದನೆಂದೆನುತ ಬಾಲಗೆ
ಮುನಿಪತಿ ಪೇಳ್ದನು ॥ ಕಂತು ಜನಕನ ಚರಿತೆಯಿದನು ಕೇಳ್ದವರಿಗ । ತ್ಯಂತ
ಸೌಖ್ಯವನಿತ್ತು ಧರೆಯೊಳನವರತ ನಿ। ಶ್ಚಿಂತೆಯಲಿ ಸಲಹುವನು ಕಣ್ವಪುರ
ದೊಡೆಯ ಶ್ರೀಕೃಷ್ಣಂ ಕಟಾಕ್ಷದಿಂದ ॥

# ಶ್ರೀರಾಮ ಪಟ್ಟಾಭಿಷೇಕ

## ಭೂಮಿಕೆಗಳು

ದಶರಥ
ಸುಮಂತ್ರ
ವಸಿಷ್ಠಮುನಿ
ರಾಮ
ಲಕ್ಷ್ಮಣ
ಭರತ
ಗುಹ
ಯುಧಾಜಿತ್ತು
ಸಖಿಯರು
ಸೀತೆ
ಭರದ್ವಾಜರು
ಕಾಕಾಸುರ
ಶತ್ರುಘ್ನ
ಕೌಸಲ್ಯೆ
ಕೈಕೆ
ಸುಮಿತ್ರೆ
ಮಂಥರೆ

–ಇತ್ಯಾದಿ

---

# ಶ್ರೀರಾಮ ಪಟ್ಟಾಭಿಷೇಕ

### ಶಾರ್ದೂಲ ವಿಕ್ರೀಡಿತಂ

ಶ್ರೀರಾಮಂ ದಿವಿಜೌಘವಂದಿತ ಪದಂ ಸಾಕೇತವಾಸಂಪರಂ।ಪಾರಾವಾರ ಗಭೀರಮಾದಿಪುರುಷಂ ತ್ರೈಲೋಕ್ಯನಾಥಂ ಪ್ರಭುಮ್ ॥ ಧೀರಂ ರಾವಣ ಮೇಘ ಚಂಡಮರುತಂ ಸುಜ್ಞಾನಕಲ್ಪದ್ರುಮಂ । ಕಾರುಣ್ಯಾಂಬುಧಿ ಜಾನಕೀ ಪತಿಮಹಂ ಧ್ಯಾಯಾಮಿ ಚಿತ್ತೇ ಸದಾ ॥

### ನಾಟರಾಗ - ಝಂಪೆ ತಾಳ

ಜಯ ಜಾನಕೀಕಾಂತ । ಜಯ ಸಾಧುಗುಣವಂತ । ಜಯತು ಮಹಿಮಾನಂತ । ಜಯ ಭಾಗ್ಯವಂತ ॥ ಜಯ ಜಯತು ಜಯತು ॥ ಪ ॥ ದಶರಥಾತ್ಮಜ ವೀರ । ದಶಕಂಠಸಂಹಾರ । ಪಶುಪತಿಯ ವರಮಿತ್ರ । ಪಾವನ ಚರಿತ್ರ ॥ ಕುಸುಮ ಬಾಣ ಸ್ವರೂಪ । ಕುಶಲುಕೀರ್ತಿಕಲಾಪ । ಅಸಮ ರಾಕ್ಷಸ ಶಿಕ್ಷ । ಅಂಬುಜದಳಾಕ್ಷ ॥ ಜಯ ಜಯತು ಜಯತು ॥ ೧ ॥ ಸಾಮಗಾನವಿಲೋಲ । ಸಾಧುಜನ ಪರಿಪಾಲ । ಕಾಮಿತಾರ್ಥ ಪ್ರದಾತ । ಕೀರ್ತಿ ವಿಖ್ಯಾತ ॥ ಸೋಮ ಸೂರ್ಯಪ್ರಕಾಶ । ಸಕಲಲೋಕಾಧೀಶ । ಶ್ರೀಮಹಾರಘುವೀರ । ಸಿಂಧುಗಂಭೀರ ॥ ಜಯ ಜಯತು ಜಯತು ॥ ೨ ॥ ಸಕಲ ಶಾಸ್ತ್ರವಿಚಾರ । ನಿಖಿಳ ಪಾಪವಿದೂರ । ವಿಕಸಿತಾಂಬುಜವದನ । ವಿಶ್ವಮಯ ಸದನ ॥ ಸುಕೃತಮೋಕ್ಷಾಧೀಶ । ಸಾಕೇತ ಪುರವಾಸ । ಭಕ್ತ ವತ್ಸಲ ರಾಮ । ಭಳಿರೆ ನಿಸ್ಸೀಮ ॥ ಜಯ ಜಯತು ಜಯತು ॥ ೩ ॥

### ಮತ್ತೇಭ ವಿಕ್ರೀಡಿತಂ

ಹರಿಗಂ ವೀರಗಣಾಧಿಪಂಗೆ ಶಿವಗಂ ಗೌರೀಂದಿರಾ ವಾಣಿಗಂ ಕರುಣಾ ವಾರ್ಧಿವಸಿಷ್ಠನಾರದರಿಗಂ ಸಾಕ್ಷಾತ ಆಚಾರ್ಯಗಂ ॥ ಪರಮೋಷ್ಟ್ಯಾದಿ ಸುರೇಂದ್ರದೇವತತಿಗಂ ಸಾತ್ವೀಕಸನ್ಮಾರ್ಗಿಗಂ । ಪರಮೋಲ್ಲಾಸದೊಳೆಲ್ಲ ರಿಂಗೆರಗುತಂ ನಾ ಪೇಳ್ವೆ ಸಂತೋಷದಿಂ ॥



ಶಾರ್ದೂಲವಿಕ್ರೀಡಿತಂ

ಧಾತ್ರೀಗುತ್ತಮ ಕಣ್ವನಾಮಪುರದೊಳ್ ನಿಂತಿರ್ದ ಶ್ರೀಕೃಷ್ಣ ನಾ । ತತ್ಪಾದಾಂಬುಜ ದಿವ್ಯನಾಮವರದಿಂದೀ ಪಾರ್ವತೀನಂದನಾ ॥ ಚಿತ್ರೀಸಾಕೃತಿ ತಾಳರಾಗ ವಿಧದಿಂ ರಾಮಾಯಣಂ ಪೇಳ್ವುದಂ । ಭಕ್ತಿಧ್ಯಾನದಿ ಕೇಳ್ದು ಪುಣ್ಯ ಕಥೆಯಂ ಸಂತೋಷವಮಂ ತಾಳ್ವುದು ॥

ದ್ವಿಪದಿ

ವಾಲ್ಮೀಕಿ ಮಹಮುನಿಪನೊಲಿದು ಕುಶಲವರ್ಗೆ । ರಾಮಾಯಣಾ ಮೃತವ ಪೇಳುತಿರಲವರ್ಗೆ ॥ ೧ ॥ ಮುನಿರಾಯ ಕೇಳಯ್ಯ ಮೊದಲಿಂದ ಕಥೆಯ । ಮನಸಿನಲಿ ಗ್ರಹಿಸಿದೆವು ಮತ್ತೆ ಸಂಗತಿಯ ॥ ೨ ॥ ಸೀತಾಸ್ವಯಂ ವರದ ಮುಂದೆ ಮತ್ತೇನು । ತಾತನಾಜ್ಞೆಯ ರಘುಜ ತಾಳ್ದ ಪರಿಗೇನು ॥ ೩ ॥ ರಾಮಲಕ್ಷ್ಮಣರೇಕೆ ರಾಜ್ಯವನು ಬಿಟ್ಟು । ಗ್ರಾಮ-ಭೂಮಿಯನೆಲ್ಲ ಭರತನಿಗೆ ಕೊಟ್ಟು ॥ ೪ ॥ ಕಾನನಾಂತದಿ ದಿನವ ಕಳೆದರಿನ್ನೆಂತು । ಜಾನಕಿಯ ಸಹಿತ ಘೋರದಡವಿಯಲಿ ನಿಂತು ॥ ೫ ॥ ಖರದೂಷಣಾದಿಗಳ ಕೊಂದ ಬಗೆ ಹೇಗೆ । ದುರುಳೆ ಶೂರ್ಪಣಖಿಗವಮಾನವದು ಹೇಗೆ ॥ ೬ ॥ ಪೇಳಬೇಕೆ ಮಗೆನುತ ಪಾದಕಭಿನಮಿಸಿ । ಬಾಲತರು ಕೇಳಿದರು ಬಹುವ್ಯಸ್ತವೆರಸಿ ॥ ೭ ॥ ತರಳರಾಡಿದ ನುಡಿಗೆ ಮುನಿಪ ನಸುನಗುತ । ಎರಡು ಕೈದಣೆಯುಲಪ್ಪಿದನು ಭಳಿರೆನುತ ॥ ೮ ॥ ಅರುಹುವೆನು ನಿಮಗೆ ಮುಂದಾದ ಕಾರಣವ । ತರಳರಿರ ಕೇಳಿರೈ ತಿಳಿದು ಓರಣವ ॥ ೯ ॥

ಮಧ್ಯಮಾವತಿ ರಾಗ - ತ್ರಿವುಡೆ ತಾಳ

ವೀರ ದಶರಥ ನೃಪತಿಯಿನಕುಲ । ವಾರಿಧಿಗೆ ಪ್ರತಿಚಂದ್ರನು ॥ ಧಾರಿಣಿಯ ನಾಳ್ತಿರಲು ಕುಶಿಕ ಕು । ಮಾರರನು ಕರೆದೊಯ್ಯಲು । ಯಜ್ಞ ಕೆಂದು ॥ ೧ ॥ ಜನಕರಾಯನ ಧನುವನತ್ತಿಯೆ । ಜನಕಜೆಯು ಸಹಿತಾಗಿ ರಾಘವ ॥ ಮುನಿಯ ಯಾಗವ ಕಾಯ್ದು ಯೋಧ್ಯೆಗೆ । ಘನಪರಾಕ್ರಮಿ ಬಂದನು । ರಾಮಚಂದ್ರ ॥ ೨ ॥ ಒಂದು ದಿನ ಕೇಕೇಯರಾಯನ । ಕಂದ ನೊರ್ವ ನೃಪಾಲನು ॥ ಬಂದಯೋಧ್ಯಾಪುರಕೆ ಭಕ್ತಿಯೊ । ಳಂಘ್ರಿಗೆರಗಲು ಕಂಡನು । ದಶರಥೇಂದ್ರ ॥ ೩ ॥

### ತೋಡಿ ರಾಗ - ಝಂಪೆತಾಳ

ಜಯ ಜಯ ಮಹೀಪತೇ । ದಶರಥನೃಪಾಲ ॥ ಪ ॥ ಕ್ಷೇಮವೇ ನೃಪತಿಲಕ । ಪರಿವಾರಗಳಿಗೆಲ್ಲ । ರಾಮಲಕ್ಷ್ಮಣರುಗಳು । ಬಂದರೇ ಪುರಕೆ ॥ ॥ ೧ ॥ ತಂದೆ ಕಳುಹಿದರಿಂದ । ಬಂದೆನಿಲ್ಲಿಗೆ ನಿಮ್ಮ । ಕಂದ ಭರತ ಶತ್ರುಘ್ನ । ರಿಂದೊಮ್ಮೆಲೆನುತ ॥ ೨ ॥ ಶಸ್ತ್ರವಿದ್ಯಾಭ್ಯಾಸ । ವನು ಮುಗಿಸಿದಾ ಮೇಲೆ । ಪುತ್ರರನು ಕರೆತಂದು । ಒಪ್ಪಿಸುವೆನೆಂದ ॥ ೩ ॥

### ಶಾರ್ದೂಲ ವಿಕ್ರೀಡಿತಂ

ಎಂದಾ ರಾಯನ ಮಾತ ಕೇಳಿ ನೃಪತೀ ಸಂದೇಹವಂ ಮಾಡುತಾ । ಇಂದೀ ಬಾಲರು ಬುದ್ಧಿಸಾಲದಿವರಂ ಬಿಟ್ಟೆಂತು ನಾ ನಿಲ್ವೆನೋ ॥ ಕಂದರ್ಪೋಪಮರೂಪರಿಬ್ಬರುಗಳಂ ತಾನಪ್ಪಿ ಮುದ್ದಾಡುತಾ । ಒಂದಾ ಗುರ್ವರು ವಿದ್ಯೆಯಂ ಪಠಿಸಬೇಕೆಂದಾಗಲಿಂತೆಂದನು ॥

### ಕಾಂಭೋಜಿ ರಾಗ - ಏಕತಾಳ

ಪುತ್ರ ನೀ ಬಾರೋ ಭರತ ಶತ್ರುಘ್ನ ನೀನಿತ್ತ ॥ ಆರ್ತಿಯಿಂದ ಕೇಳಿ ಕಾರ್ಯ । ದುತ್ತಮಾಂಗಳನು ॥ ೧ ॥ ಕೇಕಯ ನೃಪಾಲ ನಿಮ್ಮ । ಕಾಣ-ಬೇಕೆಂದೆನುತ ॥ ಬೇಕಾದಂಥ ವಸ್ತುಗಳ । ತಾ ಕಳುಹಿಸಿದನು ॥ ೨ ॥ ಪೋಗಿ ಬೇಗ ಬನ್ನಿರೆನ್ನು । ತಾಗ ಮಕ್ಕಳನ್ನು ॥ ಬೇಗದಿಂದ ಕಳುಹಿಸಿದ । ನಾಗ ಧರಣೀಶ ॥ ೩ ॥

### ಕಂದ

ಬಾಲಕರೀರ್ವರನಾ ಭೂ । ಪಾಲನ ಕಯ್ಗಿತ್ತಿ ಕೊಟ್ಟು ಬೇರುಡು-ಗೊರೆಯಂ ॥ ಶೀಲರ್ ನಡೆಯಲ್ ಕಂಡಾ । ಲೀಲೆಯೊಳವನೀಶನಿಂತು ಮಂತ್ರಿಗೊಳೆಂದಂ ॥

### ರೀಗುಪ್ತಿ ರಾಗ - ಝಂಪೆತಾಳ

ಮಂತ್ರಿ ಮಹವೀರಾ ಸು । ಮಂತ್ರ ಬಹುಧೀರ ॥ ಅಂತರಂಗದಿ ಪೇಳ್ವೆ । ನೀ ತಿಳಿದು ಪೇಳು ॥ ೧ ॥ ಒಡಲು ನೆಲೆಯೊಂದು ಬಹು । ಕಾಲ ಪರಿಯಂತ ॥ ಪೊಡವಿಯಾಳಿದೆ ನಿನ್ನು । ಕಡು ವೃದ್ಧನಾದೆ ॥ ೨ ॥ ಪೊಡವಿ ಯನು ರಾಘವಗೆ । ಕೊಡುವೆ ನಾನದಕೆ ॥ ಪೊಡವಿ ಪತಿಗಳ ಕರೆಸು । ಪುರವ

ಸಿಂಗರಿಸು ॥ ೩ ॥ ಇಂತಾ ವಸಿಷ್ಠ ಮುನಿ ಮಂತ್ರಿಗಳ ಕೂಡೆ ॥ ಅಂತರಂಗದಿ ದಶರ । ಥೇಂದ್ರ ಮಾತಾಡೆ ॥ ೪ ॥

ಪುನ್ನಾಗ ರಾಗ - ಅಷ್ಟತಾಳ

ಪಾಳೆ ರಾಮಚಂದ್ರಗಭಿ । ಷೇಕವಾಗುವುದೆಂದು । ಕೇಳಿದಳು ಮರೆ ಯಲ್ಲಿ ನಿಂದು । ಮಂಥರೆ ಪೋಗಿ । ಹೇಳಿದಳಾ ಕೈಕೆಯೊಳಿಂತೆಂದು ॥

ಘಂಟಾರವ ರಾಗ - ಏಕತಾಳ

ಬಾಲೆ ಕೇಳ್ ಪೂಮಾಲೆ ಚಾರು । ಶೀಲೆಯಿಂದು ನಿನ್ನ ಕಾಂತ । ಭೂಲೋಕವ ರಾಮನಿಗೆ । ಪಾಲಿಸಬೇಕೆಂದು ಹೀಗೆ ॥ ಬಾಲೆ ॥ ೧ ॥ ಮಂತ್ರಿ ವಸಿಷ್ಠರ ಕೂಡೆ । ಅಂತರಂಗದಿ ಮಾತಾಡೆ । ನಿಂತು ನಾ ಕೇಳಿದೆ ಮಾತ । ಕಾಂತೆ ಕೇಳಿದಾವ ನೀತಿ ॥ ಬಾಲೆ ॥ ೨ ॥ ಮಂಥರೆ ಕೇಳು ಒಳ್ಳಿತು । ಚಂದ ವಾಯಿತದಕೇನು । ಕಂದ ರಾಮಚಂದ್ರನ ಆ । ನಂದವ ನೋಡುವ ನಾಳೆ ॥ ಬಾಲೆ ॥ ೩ ॥

ಪಹಡಿ ರಾಗ - ಏಕತಾಳ

ಧರಣಿಯಧಿಪತಿತ್ವ । ರಾಮಗಾದರೆ ನಿನ್ನ । ಭರತಗಾತನಲಿ ಚಾ । ಕರಿಯಹುದಮ್ಮ ॥ ೧ ॥ ತರುಣಿ ಜಾನಕಿ ಪಟ್ಟ । ದರಸಿಯಾಗುವಳು ನೀ । ನಿರತ ಸೇವಕ ವೃತ್ತಿ । ಪರಿಚಾರಿಯಾದೆ ॥ ೨ ॥ ಆಡಿಕೊಂಡರೆ ಮುನ್ನ । ಚಾಡಿಯೆಂಬರು ಎನ್ನ । ನಾಡಮಾತಲ್ಲ ನೀ । ನೋಡಿಕೋ ಮನದಿ ॥ ೩ ॥

ವಸಂತ ತೋಡಿ ರಾಗ - ಏಕತಾಳ

ಈ ಮಾತಾಡುವರೆ ಆಳಿ । ಏ ಹುಚ್ಚು ಮೂಳಿ । ಕಾಮಿನಿಯರೊಳ್ ನಿವಾಳಿ ॥ ರಾಮನು ಹಿರಿಯವನಾಗಿದ್ದ ಮೇಲೆ ಈ । ಸೀಮೆಯ ಭರತ- ನಾಳುವುದಿದು ಲೋಕಕೆ ಸರಿಯೆ । ಗುಣ ಮೆರೆಯೆ । ಇದು ಪರಿಯೇ ನೀನೇ ನರಿಯೆ ॥ ೧ ॥ ಮಕ್ಕಳು ನಾಲ್ವರೊಳಗೆ । ತಮ್ಮೊಳು ಭೇದ । ಎಕ್ಕಿ ನಡೆವರೆ ಹೀಗೆ ॥ ಇಕ್ಕೆಲದವರಿದ ಕೇಳಿದರೆಯು ನಿನ್ನ । ಸೊಕ್ಕ ಮುರಿದು ಬಾಯ್ ಹೊಯ್ವರು । ಸುಮ್ಮಗೆ ಹೋಗೇ ಮುದಿ ಗೂಗೆ । ಸತ್ತ ಹಾಗೆ । ಚಾಡಿಯ ನಿನಗೆ ॥ ೨ ॥

**ಕಂದ**

ಸೊಕ್ಕಿದ ಹೆಣ್ಣಿಂದವಳಂ ಜಕ್ಕುಲಿಸಿಯೆ ಹೋಗು ನಾಯೆ ಸುಮ್ಮನೆ ಯೆನಲುಂ ॥ ಹೊಕ್ಕಳು ಹೃದಯವ ಮಾಯಾ । ರಕ್ಕಸಿ ಕದಡಿದಳು ಕೈಕೆ ಯಂತಃಕರಣಂ ॥

**ಕೇದಾರಗೌಳ ರಾಗ - ಏಕತಾಳ**

ಸಖಿ ನೀ ಪೇಳಿದ ಮಾತು । ಸಕಲವು ಲೇಸಾಯಿತು । ಯುಕುತಿಯೇ ನಿದಕಿನ್ನು । ಎನ್ನೊಳ್ ಪೇಳು ಕಂಡುದನ್ನು ॥ ಸಖಿ ॥ ೧ ॥ ಎಂದರೆ ಆ ಮಾತ ಕೇಳಿ । ಮಂಥರೆ ಧೈರ್ಯವ ತಾಳಿ । ಮಂದಗಜಗಮನೆ ಕೇ । ಳೊಂದು ಯುಕ್ತಿಯುಂಟದಕೆ ॥ ಸಖಿ ॥ ೨ ॥ ಹಿಂದೆ ಮೆಚ್ಚಿ ನಿನಗೆ ಆ ನ । ರೇಂದ್ರ ಕೊಟ್ಟ ಮಾತೆರಡ । ಇಂದು ಕೇಳು ಕೊಟ್ಟ ಮೇಲೆ । ಮುಂದೆ ಹೇಳು ಕಾರ್ಯ ಬಾಲೆ ॥ ಸಖಿ ॥ ೩ ॥ ಈರೇಳು ವರ್ಷ ರಾಮ । ಅರಣ್ಯದೊಳಿರ ಬೇಕು । ಧಾರಿಣಿಯನೆನ್ನ ಪುತ್ರ । ಭರತಗೆ ಕಟ್ಟಬೇಕು ॥ ಸಖಿ ॥ ೪ ॥ ಎಂದು ಕೇಳು ಕಾಂತನೊಳು । ಸಂದೇಹವ ಮಾಡಬೇಡ । ಮುಂದೆ ಕಾರ್ಯವೆಲ್ಲ ಲೇಸು । ಇಂದೀವರಾಕ್ಷಿ ಕೇಳ್ ನೀನು ॥ ಸಖಿ ॥ ೫ ॥

**ಶಂಕರಾಭರಣ ರಾಗ - ತ್ರಿವುಡೆ ತಾಳ**

ಸುತಗೆ ಪಟ್ಟವ ಕಟ್ಟಬೇಕೆಂಬ । ಮತದೊಳಂದು ಕೈಕಯಿೊ ॥ ಅತಿ ಶಯದ ಛಲದಿಂದ ತೆಗೆದಳಾ । ಭರಣಗಳನು ॥ ೧ ॥ ತೊಟ್ಟ ತೊಡುಗೆಯ ನೆಲ್ಲವನು ತೆಗೆ । ದಿಟ್ಟು ಕಡೆಗಾ ಮಾನಿನಿ ॥ ಇಟ್ಟ ಕಸ್ತುರಿ ತಿಲಕವನು ಕೈ । ಗೊಟ್ಟು ಕೆದರಿ ॥ ೨ ॥ ಮಾಸಿದೊಸನವ ಮುಸುಕಿ ಮಂಚಕೆ । ಹಾಸಿದುದನೇ ಪಸರಿಸಿ ॥ ಶ್ರೀ ಸದಾಶಿವ ನೀನೆ ಗತಿಯೆಂದು । ಮರುಗುತಿಹಳು ॥ ೩ ॥ ಬಣ್ಣಗುಂದಿದಳಬಲೆ ಬಲು ಬಲು । ಕ್ಲೇಶದಿಂದಾ ಕರಗುತ । ಕಣ್ಣ ನೀರನು ತುಂಬಿ ದುಗುಡದಿ ಪವಡಿಸಿದಳು ॥೪ ॥

**ವಚನ**

ಇತ್ತಲಾ ಕೈಕಯಿ ಮಹಾಕ್ಲೇಶದಿಂದಿರಲಾಗಿ ಅತ್ತಲಾ ಸಕಲ ಸನ್ನಾಹ ಮಾಡಿದರದೆಂತೆನೆ:

ಸಾಂಗತ್ಯ ರಾಗ - ರೂಪಕ ತಾಳ

ಪಟ್ಟಾಭಿಷೇಕವ ಮಾಡಬೇಕೆನುತಲಿ । ಪಟ್ಟಣ ಸಿಂಗರಿಸಲಿಕೆ ॥ ಸೃಷ್ಟಿ ಪಾಲಕನ ಅಪ್ಪಣೆಯಿಂದ ಕರೆಸಿದ । ರಷ್ಟ ದಿಕ್ಕಿಂದ ಚಿತ್ರಕರ ॥ ೧ ॥ ಬಣ್ಣ ಗಾರರು ಬಂದು ನೆರೆದರು ಅಪೇಲಿ । ಮಣ್ಣೆಸೊಷ್ಮರ ಕರೆಸಿವರು ॥ ಚಿನ್ನದ ಕೆಲಸ ಕತ್ತಿಗೆಯ ಪಾಂಚಾಲರು । ಪನ್ನೊಂದುನೂರು ಕೂಡಿವರು ॥ ೨ ॥ ಅಗೆದು ಪಟ್ಟಿಸಿದರು ನೆಲಗಳ ಸಮನಾಗಿ । ಜಗುಲಿ ಗೋಡೆಗಳ ಸಾರ ಣೆಯು ॥ ಸೊಗಸಾದ ಚಪ್ಪರ ಮೇಲುಗಟ್ಟುಗಳಿಂದ । ನಗರವ ಸಿಂಗರಿಸಿ ದರು ॥ ೩ ॥ ಮುತ್ತಿನುಪ್ಪರಿಗೆ ಜಾವಡಿ ಕೋಣೆ ನಡುಮನೆ । ಸುತ್ತಲು ಬಿಗಿದ ಪಚ್ಚೆಗಳ ॥ ಪುತ್ಥಳಿ ಬೊಂಬೆ ಬಾಗಿಲ ದಾರಂದದ ಮನೆ । ಹತ್ತು ಸಾವಿರವ ಮಾಡಿದರು ॥ ೪ ॥ ತೋರಣ ಕುರುಜು ಮೇರುವೆ ತೋಟ ಕೆರೆಗಳ । ಕೇರಿಕೇರಿಯ ಮನೆಮನೆಯ ॥ ಭೇರಿ ಡಮಾಮಿ ಮದ್ದಳೆ ತಾಳಗತಿಯಿಂದ । ಸಾರಿ ಡಂಗುರವ ಹೊಯ್ಸಿದರು ॥ ೫ ॥ ಅಷ್ಟದಿಕ್ಕಿನೊಳಿಪ್ಪ ಅರಸು ಬಲ್ಲಾಳರ್ಗೆ । ಕಟ್ಟಿದರುಡುಗೊರೆಗಳನು ॥ ಪಟ್ಟಾಭಿಷೇಕಕ್ಕೆ ಪಯಣದಿ ಬರಲೆಂದು । ಸೃಷ್ಟಿ ಪಾಲಕ ಕಳುಹಿದನು ॥ ॥ ೬ ॥ ಛಪ್ಪನ್ನ ದೇಶದ ಭೂಮಿ ಪಾಲರು ನಡೆ । ತಪ್ಪ ಸಂಭ್ರಮವನೇನೆಂಬೆ ॥ ಇಪ್ಪತ್ತು ಲಕ್ಷಾನೆ ಕುದುರೆ ದಂಡಿಗೆಯಿಂದ । ಒಪ್ಪಿದರಂದು ಸಂದಣಿಸಿ ॥ ೭ ॥ ವಸುಧೆ ಪಾಲಕರೆಲ್ಲ ತೆರಳಿ ಬಂದವರನ್ನು । ದಶರಥ ನೃಪನಿದಿರ್ಗೊಂಡು ॥ ಎಸೆವ ಬಿಡಾರವನಿತ್ತ ವರನು ಸತ್ಕ । ರೆಸಿದನತ್ಯಂತ ವೈಭವದಿ ॥ ೮ ॥

ವಾರ್ಧಿಕ

ಕುಶನೆ ಕೇಳಿಂತಯೋಧ್ಯಾಪುರದ ಸಂಭ್ರಮವ । ವಶಮಲ್ಲ ಪೇಳಿ ತುದಿ ಗಾಣಿಸುವಡೆಂದೆನಗೆ । ಪಸರಿಸಿತು ಮುಂದಿ ಕುದುರೆಗಳ ಸಂ । ದಣಿಯಿಂದ ನಾನಾರವಂಗಳಿಂದ ॥ ವಸುಧೆ ಓಗ್ಗಿದಳು ಕೆಂಧೂಳಿದ್ದು ನಭವನುಂ ಮುಸುಕೆ ದಿಗ್ಗಜ ಬೆದರೆ ಕೂರ್ಮನೆದೆಗೆಟ್ಟು ಫಣಿ । ಕುಸಿದ ಸುರರಾಕಾಶದೊಳಗೆ ಜಯಜಯಮೆಂದು ದೇವದುಂದುಭಿ ಮೊಳಗಿತು. ॥ ೧ ॥

ಭೈರವಿ ರಾಗ - ಝುಂಪೆ ತಾಳ

ಪನ್ನೀರ ರಾಮನಿಗೆ ಪಂಕಜಾಕ್ಷಿಯರೆರೆದು । ಚಿನ್ನಗಳ ತೊಡಿಸಿದರು । ಚಿನುಮಯಾತ್ಮಕಗೆ ॥ ೧ ॥ ಅಗರು ಚಂದನ ಗಂಧ । ಕಸ್ತೂರಿ ಲೇಪನವ ।

ಸೊಗಸಾಗಿ ರಚಿಸಿದರು । ಶೃಂಗಾರದಿಂದ ॥ ೨ ॥ ಸಿಂಹಾಸನವನೇರು । ಶ್ರೀರಾಮ ನೀನೆಂದು । ಬ್ರಾಹ್ಮಣರು ಪರಸಿದರು । ಬಹಳ ಬಗೆಯಿಂದ ॥ ೩

ಸೌರಾಷ್ಟ್ರ ರಾಗ - ತ್ರಿವುಡೆ ತಾಳ

ಪಟ್ಟದಾನೆಯು ಕರದಿ ಮಾಲೆಯು । ಕೊಟ್ಟು ಚಿನ್ನದ ಕಲಶದಲ್ಲಿ ವ । ಸಿಷ್ಠ ಮುನಿ ಮಂತ್ರೋದಕವ ನೆರೆ । ಪಿಡಿದು ನಿಂದು ॥ ೧ ॥ ವೊಳಗಿದುವು ಬಹುವಾದ್ಯತಿಂಥಿಣಿ । ಗಳ ರವಂಗಳ ಘೋಷದಿಂದಲಿ । ನಳಿನಲೋಚನನೆದ್ದು ಗುರುವಿಗೆ । ಕರವ ಮುಗಿದ ॥ ೨ ॥ ಸುರವರರು ಕೊಂಡಾಡೆ ಗಾಯಕ । ರಿರದೆ ಗೀತವ ಪಾಡೆ ನಾಟ್ಯದ । ತರುಣಿಯರು ಕುಣಿದಾಡೆ ವಾದ್ಯಗಳ್ । ಮೊರೆಯೆ ಕೂಡೆ ॥ ೩ ॥

ಭಾಮಿನಿ

ಜನಕ ಜನನಿಯರಿಂಗೆ ರಾಘವ । ಘನತರದಿ ಕೈಮುಗಿದು ತಮ್ಮಯ । ಮನೆಯ ದೈವವ ಬೇಡಿ ಗುರುಹಿರಿಯರಿಗೆ ತಲೆವಾಗಿ ॥ ನೆನೆಸಿ ಪೊಡ ಮಟ್ಟನು ಸುಮಿತ್ರೆಗೆ । ಜನನಿ ಕೈಕಯಿ ಕಾಣದಿರೆ ಲ । ಕ್ಷ್ಮಣನ ಕಾಣುತ ತಂದೆ ದಶರಥರಾಯಗಿಂತೆಂದ ॥

ಭೈರವಿ ರಾಗ - ಝಂಪೆತಾಳ

ಜನಕ ಕಿರುಜನನಿಯಿಹ । ವನಜಮುಖಿ ಕೈಕಯೊ । ಜನರ ಸಭೆ ಯೊಳಗೆಲ್ಲಿ । ಕಾಣೆ ನಾನವಳ ॥ ೧ ॥ ಏಕೆ ಭರತನ ಮಾತೆ । ಈ ಕಡೆಗೆ ಬರಲಿಲ್ಲ । ನೀ ಕರೆದು ತಾರನುಜ । ಲಕ್ಷ್ಮಣನೆ ವೀರ ॥ ೨ ॥ ತಿಳಿಸಲಿಲ್ಲವೆ ಮೊದಲೆ । ತಾಯಿ ಕೈಕಾಮ್ಮನಿಗೆ । ಬಲು ಬೇಗ ಕರೆಕೊಂಡು । ನೀ ಬಾರೊ ತಮ್ಮ ॥ ೩ ॥

ದೇಶಿ ರಾಗ - ರೂಪಕತಾಳ

ಎನಲು ಲಕ್ಷ್ಮಣ । ಘನದಿ ಬಂದನು । ಜನನಿಯಾಗಿಹ । ಕೈಕೆಯಲ್ಲಿಗೆ ॥ ೧ ॥ ಜಯ ಜಯಾ ಮಹಾ । ಕಮಲಲೋಚನೆ । ಭಯನಿವಾರಣೆ । ಭಾಗ್ಯಶಾಲಿನಿ ॥ ಚಿಂತೆಯೇಕವ್ವ । ನಿಮ್ಮ ಮನಸಿಗೆ । ಸಂತಸದಿಂದ । ಅಣ್ಣ ರಾಮಗೆ ॥ ೩ ॥ ಪೊಡವಿಪತಿತನ । ಕೊಡುವ ಭೂಪತಿ । ತಡೆಯುದಲ್ಲಿಗೆ ।



ತೆರಳು ಬೇಗದಿ ॥ ೪ ॥ ಭೂಮಿಪಾಲರು । ಸಹಿತ ಕಾಯ್ವರು ಭಾಮಿನೀ ಮಣಿ । ಭ್ರಮರಕುಂತಳೆ ॥ ೫ ॥ ಲಗ್ನಕೈದಿದೆ । ಶೀಘ್ರದಿಂದಲಿ । ವಿಘ್ನ ವಾಗಿದೆ । ನೀವು ಬಾರದೆ ॥ ೬ ॥ ಅಗ್ರಗಣ್ಯನು । ಅಣ್ಣ ರಾಘವ । ಉಗ್ರ ನಾಗುವ । ಪೋಗದಿದ್ದರೆ ॥ ೭ ॥

### ಪಂತುವರಾಳಿ ರಾಗ - ತ್ರಿವುಡೆತಾಳ

ಲಕ್ಷ್ಮಣ ಮಹವೀರ ನಿನ್ನೊಳಾಡುವುವೇನು । ಲಕ್ಷವಾದರು ಬಾರೆ ಕಾರಣವು ಬೇರೆ ॥ ೧ ॥ ಹುಡುಗ ನೀನರಿಯೆ ಹೋಗತಿಬೇಗದಲಿ ನಮ್ಮ । ಪೊಡವಿಪಾಲಕನಿಲ್ಲಿ ಬರಲು ಹೇಳಮ್ಮ ॥ ೨ ॥ ತಡವ ಮಾಡುವುದೇಕೆ ತರಳ ಪೋಗುವುದಕ್ಕೆ । ನಡೆ ನಡೆ ಬರಲೆನ್ನ ಕಾಂತ ಮೋಹನ್ನ ॥ ೩ ॥ ಎನಲು ಲಕ್ಷ್ಮಣನುದು ಘನ ವೇಗದಲಿ ಬಂದು । ಜನಕನಿದಿರು ನಿಂದು ಸಭೆಯೊಳಿಂ ತೆಂದ ॥ ೪ ॥

### ಸಾವೇರಿ ರಾಗ - ಏಕತಾಳ

ರಾಘವ ಬಿನ್ನಹ । ಕೈಕಯಿದೇವಿಯ । ಆಗಮ ಬೇರಾಗಿದೆ । ಹೋಗಿ ನೋಡಿದೆನು ॥ ೧ ॥ ಬಾಗಿಲುಗಳನೆಲ್ಲ । ಹಾಕಿ ಮಂಚದ ಮೇಲೆ । ರೋಗ ಬಂದವರಂತೆ । ಬಹಳ ದುಃಖದಲಿ ॥ ೨ ॥ ಮಲಗಿದಿರಿಯೇಕೆಂದು । ಮಾತ ನಾಡಿಸಿದರೆ । ಒಳವನೆನ್ನೊಳು ಪೇಳ । ಲಿಲ್ಲವಾ ಜನನಿ ॥ ೩ ॥ ದಶರಥಪಿತ ನೊಳು । ಮಾತುಗಳುಂಟಂತೆ । ವಸುಧೇಶನನು ಬರ । ಪೇಳ್ದಳಾಕಾಂತೆ ॥ ೪ ॥ ಲಕ್ಷ್ಮಣನಿಂತೆಂದು । ಪೇಳೆ ಭೂಪಾಲ ತಾ । ನಾ ಕ್ಷಣದಲಿ ಬಂದು । ಕೈಕಯಿಯ ಕಂಡ ॥ ೫ ॥

### ಕಾಂಭೋಜಿ ರಾಗ - ಏಕತಾಳ

ಏನಾಯಿತಂಬುಜನೇತ್ರೆ ಮಾನಿನಿಯರ ಮೌಳಿ ॥ ನೀನೇಕೆ ಚಿಂತಿಸು ತಿಪ್ಪೆ । ಪೇಳಬೇಕೀಗೆನಗೆ ॥ ೧ ॥ ಆನನವೇಕೆ ಬಾಡಿತು ಅಂಬುಜದಳಾಕ್ಷಿ ॥ ಈ ವಿರೋಧಗಳಿದೇಕೆ । ಕೋಮಲಾಂಗಿ ಪೇಳೆ ॥ ೨ ॥ ವಲ್ಲಭ ಕೇಳೆನ್ನ ಮನ ದಲ್ಲಿರುವ ಕ್ಲೇಶ ॥ ವೆಲ್ಲ ನಿನ್ನೊಡನೆ ಪೇಳ್ವೆ । ಕಲ್ಯಾಣಾಂಗ ಕೇಳು ॥ ೩ ॥ ಒಂತೆ ನೀ ಕೊಟ್ಟ ಮಾತೆರ । ಡುಂಟು ನಿನ್ನ ಮೇಲೆ ॥ ಸಂತೋಷವ ಮಾಡಿಕೊಡು । ಸಂದೇಹವ ಬಿಟ್ಟು ॥ ೪ ॥ ಕಾಂತೆ ಕೇಳಿಷ್ಟೊಂದು

ಮಾತಿ । ಗಿಂಥದೊಂದು ಸಿಟ್ಟಿ ॥ ಅಂತರಂಗ ಶುದ್ಧವಾಗಿ । ಬೇಡಿಕೋ ನಾ ಕೊಟ್ಟೆ ॥ ೫ ॥ ನೇಮಪೆಂದೆನುತ್ತ ಕಯ್ಯ । ಮೇಲೆ ಕಯ್ಯ ತಟ್ಟು ॥ ಕಾಮರೂಪ ಸಿದ್ಧವೆಂದು । ಕೊರಳನು ನೀ ಮುಟ್ಟು ॥ ೯ ॥ ಅಂಬುಜ ಲೋಚನೆಯಿನಿ । ತೆಂಬ ಮಾತ ಕೇಳಿ । ಕುಂಭಿನೀಪಾಲ ಕೈಕೆಗೆ । ನುಬುಗೆಯ ಕೊಟ್ಟ ॥ ೭ ॥ ಭೂಮಿಯ ನೀನೆನ್ನ ಪುತ್ರ । ಭರತನಿಂಗೆ ಕೊಟ್ಟು ॥ ರಾಮಚಂದ್ರನನೀ ಹೊತ್ತೇ । ವನವಾಸಕಟ್ಟು ॥ ೮ ॥

### ವಾರ್ಧಿಕ

ಕುಶನೆ ಕೇಳಿಂತು ಮನುಜರು ನೆನೆದುಮೊಂದು ವಿಧಿ । ವಶದೊಳೊಂ ದಾಯ್ತು ವಿೂರುವರಾರು ಕಲ್ಪಿತವ । ವಸುಧೇಶ ಕೊಟ್ಟ ನಂಬುಗೆ। ಮೂರ್ಛಿತನಾಗಿ ಹಮ್ಮೈಸಿ ಬಿದ್ದಿರ್ದನು ॥ ಉಸುರಲಾರದೆ ಮೂರು ಗಳಿಗೆ ಪರ್ಯಂತ ತನು । ವಶವಿಲ್ಲದಂತಾಯ್ತು ಸರ್ವೇಂದ್ರಿಯಂಗಳುಂ । ಬಿಸಜ ಲೋಚನೆ ಕೈಕೆಯಂ ನೋಡಿ ದೈನ್ಯದಿಂ ದಶರಥೇಂದ್ರಂ ನುಡಿದನು ॥

### ನೀಲಾಂಬರಿ ರಾಗ - ಝಂಪೆ ತಾಳ

ಕಂಬು ಕಂಠಿನಿ ಚಾರು ಶೀಲೆ । ಕಮಲ ಮುಖಿ । ಕುಂಭಕುಚೆ ವೃತ್ತ ಳಿಯ ಬೊಂಬೆ ಪ್ರತಿರಂಭೆ ॥ ಕಂಬು ॥ ಪ ॥ ಮಕ್ಕಳಿಲ್ಲದೆ ಬಹಳ ಕಾಲ । ನಾನಿರಲು ದುಃಖಿಮೊಳಗಾಗ ಮುನಿಪಾಲ ॥ ಬಂದೆನಗೆ । ಅಕ್ಕರಿಂದುಪದೇಶವಿತ್ತುದಿದು ಮೂಲ ॥ ಕಂಬು ॥ ॥ ೧ ॥ ಕ್ರತುಮುಖದಿ ಪಡೆದ ಸುಕುಮಾರ । ರೂಪಿ ನಲಿ । ರತಿಪತಿಯ ಪೋಲ್ವ ರಘುವೀರ ॥ ಆರಣ್ಯ । ಗತಿಯೊಳಿರತಕ್ಕವನೆ ಶ್ರುತಿ ವಚನದೂರ ॥ ಕಂಬು ॥ ೨ ॥ ಅರೆನಿಮಿಷ ಮಾತ್ರ ರಾಘವನ । ನಾ ಬಿಟ್ಟು । ಇರಲಾರೆನಯ್ಯೊ ಮೋಹನನ ॥ ಇನ್ನೆಂತು । ಕರೆದು ವಿಪಿನಕೆ ಕಳುಹಲೀಗ ಸಣ್ಣವನ ॥ ಕಂಬು ॥ ೩ ॥

### ಮತ್ತೇಭ ವಿಕ್ರೀಡಿತಂ

ಛಲದಿಂ ಕೈಕೆಯಿರುತ್ತಿರಲ್ ದಶರಥಂ ಶೋಕಾಬ್ಧಿಯಿಂದಾಳುತಂ ।
ಸಲೆ ಹೃತ್ಪಂಕಜ ಬಾಡಿತಗ್ನಿ ಮಸಗಲ್ ಕಣ್ಣೋಳ್ ಜಲಂ ಬೀಳುತಂ ॥

ಕಳುಹಲ್ ನುವನನಲ್ಲಿ ವೇಗ ಖತಿಲೆಂದು ವಾಕ್ಯಮಂ ಕೇಳುತಂ । ಖಳ ಸಂಹಾರಕ ರಾಮಚಂದ್ರ ಬರುತಂ ಭೂಪಾಲಗಿಂತೆಂದನು ॥

ತೋಡಿ ರಾಗ - ಏಕತಾಳ

ತಾತ ನೀಮಗೀಗ ಬಂದು । ದೇತರ ಚಿಂತೆ ॥ ಪ ॥ ಭೂತಳದೊಳಿ ವೃಂತದ । ನಾ ತರುವೆ ನಿಮ್ಮ ಮನದ । ಭೂತನಾಥನಡ್ಡ ಬಂದ । ರಾತು ಕೊಂಬೆನು ನಾನೆಂದ । ॥ ತಾತ ॥ ೧ ॥ ಅಷ್ಟದಿಕ್ಪಾಲಕರ ಕೂಡೆ । ಕಷ್ಟ ಬಂದ ರುಜೆ ನಾನು । ಸೃಷ್ಟಿಗೀಶ ನಿಮ್ಮ ಮನದ । ಭೀಷ್ಟವ ಪೇಳಿ ಸುಳ್ಳಲ್ಲ ॥ ತಾತ ॥ ೨ ॥ ಅಲ್ಲಿ ಕೂಡಿದವರೆಲ್ಲ । ಸೊಲ್ಲಿಸುತ್ತ ನಗುವರಲ್ಲ । ಎಲ್ಲ ರಾಯರು ಸಾಗುವ । ರಲ್ಲ ಬುದ್ಧಿವಂತರೆಂದು ॥ ತಾತ ॥ ೩ ॥ ದೇಶದ ರಾಯರಿಗೆಲ್ಲ । ಬೇಸರಿಕೆ ಪುಟ್ಟಿತಲ್ಲ । ಈಸು ದಿನವಿಲ್ಲದ ಪರಿ । ಹಾಸದ ಮಾತು ಬಂತಲ್ಲ ॥ ತಾತ ॥ ೪ ॥

ವಚನ

ಈ ರೀತಿಯಿಂದ ಪೇಳುವಂತಹ ಮಗನ ಮಾತಿಗೆ ದಶರಥರಾಯನು ಉತ್ತರವ ಕೊಡದೆ ಇರಲಾಗಿ ಆ ಕೈಕಯಿ ಏನೆಂದಳು ಎಂದರೆ -

ಶಂಕರಾಭರಣ ರಾಗ - ತ್ರಿವುಡೆತಾಳ

ಕೇಳು ರಾಘವ ನಿನ್ನಹಿತ ಮಾ । ತಾಡದಿರುವಾ ಪರಿಯನು ॥ ಪೇಳು ವೆನು ಸಿಟ್ಟಾಗದಿರು ಇನ । ವಂಶಜಾತ ॥ ೧ ॥ ಭರತಗಿತ್ತನು ರಾಜ್ಯವೆಲ್ಲವ । ಧರಣಿಪಾಲನು ನಿನ್ನನು । ಕರೆದು ಗಹನಕೆ ಕಳುಹಲಾರದೆ । ಮರುಗುತಿಹನು॥ ॥ ೨ ॥ ಇನ್ನು ಯೋಚನೆಯೇಕೆ ರಾಘವ । ಚಿಂತೆ ಬೇಡವು ದಿಟವಿದು ॥ ಮುನ್ನ ನೀನು ಅರಣ್ಯವಾಸಕೆ । ಪಯಣವಾಗು ॥ ೩ ॥

ಬಿಲಹರಿ ರಾಗ - ಏಕತಾಳ

ಲೇಸನಾಡಿದೆಯವ್ವ ಈ ಸ್ವಲ್ಪ ಕೆಲಸಕೆ । ಈಸು ಚಿಂತೆಗಳೇಕೆ ಹೇ ಸುಗುಣಾಢ್ಯೆ ॥ ಏಸು ದಿನ ಅರಣ್ಯವಾಸದೊಳಿರಬೇಕು । ಆ ಸುದ್ದಿ ಯೆನಗೀಯೆ ಹೇ ಶಶಿವದನೆ ॥ ೧ ॥ ಈರೇಳು ವರುಷ ಕಾನನವಾಸ ಕಳೆದು ನೀ । ಬಾರಯೋಧ್ಯೆಗೆ ಮತ್ತೆ ಶ್ರೀರಾಮಚಂದ್ರ ॥ ಬೇರೇನು ಸಂದೇಹ

ಏವರೊಳು ಮಾಡಬೇಡ । ಚಾರು ತಂದೆಯು ಮನಸು ಈ ರೀತಿಯೊಳಲು ॥ ೨ ॥ ಜನಕ ನೀವ್ ಚಿಂತಿಸದಿರಿ ಕೈಕಾದೇವಿಯು । ಮನಸಿನ ವ್ರತವನ್ನು ಸಲಿಸಿ ಬರುವೆನು ॥ ಎನುತ ಕೈಮುಗಿದ ಬಾಲನ ಕಂಡು ದಶರಥ । ಮನ ಕರಗಲು ಚಿಂತಾಮನದೊಳಿಂತೆಂದ ॥ ೩ ॥ ಸಣ್ಣವ ನೀನೆಂತರಣ್ಯದೊಳಿರುವೆಯೊ । ಪುಣ್ಯಹೀನ ನಾನೆಂದ ಕಣ್ಣನೀರಿಂದ ॥ ಚಿಣ್ಣನನಪ್ಪಿ ಮುದ್ದಿಸಿ ದಶರಥ ಬಲು । ಬಣ್ಣಿಸಿ ಮರುಗಿ ಕಾರ್ಪಣ್ಯದೊಳ್ ಬಿಡದೆ ॥ ೪ ॥ ದುಷ್ಟಾತ್ಮ ನಾನಯ್ಯೊ ಏಕಿನ್ನು ಜತರದಿ । ಪುಟ್ಟಿದೆ ರಾಮಚಂದ್ರ ರವಿಕೋಟಿ ಸಾಂದ್ರ ॥ ಎಷ್ಟು ಹೇಳಲಯ್ಯೊ ವಿಧಿ ಪಣೆಯೊಳು ಬರೇ ದಿಟ್ಟುದಲ್ಲದೆ ಇವಳ ನಿಷ್ಠೂರವಲ್ಲ ॥ ೫ ॥ ತಂದೆ ನೀವೇಕಿನ್ನು ನೆನೆದು ಮರುಗುವಿರಿ । ಕಂದರ್ಪಾಂತಕನಾಣೆ ಭಯವಿಲ್ಲ ತನಗೆ ॥ ಮುಂದೆ ರಾಜ್ಯವನ್ನೆಲ್ಲ ಭರತಗೆ ಕೊಟ್ಟು ನೀವ್ । ಚಂದದಿ ಸುಖವಾಗಿರೆಂದು ಕೈಮುಗಿದ ॥ ೬ ॥ ವಂದಿಸಿ ದಶರಥನೆಡೆಯಿಂದ ರಾಮಚಂದ್ರ । ಬಂದನು ತನ್ನರಮನೆಗೆ ಶೀಘ್ರದಲಿ ॥ ಬಂದು ಕೌಸಲ್ಯಾದೇವಿಗೆರಗಿ ಬಿನ್ನವಿಸಿದ । ತಂದೆ ಕೈಕೆಯು ವ್ರತವೊಂದನುಳಿಯದೆ ॥ ೭ ॥

### ಸಾಂಗತ್ಯ ರಾಗ - ರೂಪಕತಾಳ

ಶರಣಮ್ಮ ತಾಯೆ ನಾನಿಂದು ಕೈಕೆಯ ಮನ । ವ್ರತಕೆಗೋಸುಗವೊಂದು ಕಾರ್ಯ ॥ ಮರುಗದಿರೀರೇಳು ವರುಷ ಅರಣ್ಯದಿ । ಚರಿಸಿ ಬರುವೆ ನಿಮ್ಮ ಬಳಿಗೆ ॥ ೧ ॥ ಧರಣಿಪಾಲಕ ಭಾಷೆ ಕೊಟ್ಟ ಕಾರಣದಿಂದ । ಭರತಗಾಯಿತು ರಾಜ್ಯವೆಲ್ಲ ॥ ವರ ಕೈಕಾಮ್ಮನ ಮನವನ್ನು ಮೆಚ್ಚಿಸಿಕೊಂಡು । ಸ್ಥಿರವಾಗಿ ಬಾಳಿ ನೀವೆಲ್ಲ ॥ ೨ ॥ ನೀಡಿರಪ್ಪಣೆಯನ್ನು ಸತ್ಯವಿದ್ದರೆ ಕಾಡು । ನಾಡಾಗಿ ಕಣ್ಗೆ ರಂಜಿಪುದು ॥ ಬೇಡ ಮತ್ತೊಂದು ಯೋಚನೆ ಪುಣ್ಯವಿದ್ದರೆ । ನೋಡುವೆ ನಿಮ್ಮ ಪಾದವನು ॥ ೩ ॥ ನುಡಿದ ಮಾತನು ಕೇಳಿ ಸಿಡಿಲಪ್ಪಳಿಸಿದಂತೆ । ಮಡದಿ ಮೂರ್ಛಿತಳಾದಳಾಗ ॥ ಬಿಡಲಾರದಪ್ಪಿ ಮುದ್ದಿಸಿ ತನ್ನ ಕುವರನ । ಒಡನೆ ಹೀಗೆಂದಳಾ ಜನನಿ ॥ ೪ ॥

### ನೀಲಾಂಬರಿ ರಾಗ - ಏಕತಾಳ

ಏನು ಬುದ್ಧಿ ನೆನೆದೆಯಯ್ಯೊ । ರಾಮ ರಾಮ । ನೀ ನನ್ನ ಕೊಂದು । ಕಾನನಕ್ಕೆ ಪೋಗು । ರಾಮ ರಾಮ ॥ ದಾನವರು ತಿನ್ನರೇನೊ ।

ರಾಮ ರಾಮ । ನಿನ್ನ ಕೈವಿಡಿದ । ಮಾನಿನಿಗಿನ್ನೇನು ಗತಿಯೊ । ರಾಮ ರಾಮ ॥ ೧ ॥ ಒಂದು ಗಳಿಗೆ ನಿನ್ನ ಬಿಟ್ಟು । ರಾಮ ರಾಮ । ಇರಲಾರದಾನ । ರೇಂದ್ರ ಭ್ರಾಂತನಾದನೇನೋ । ರಾಮ ರಾಮ ॥ ಇಂದು ಕೈಕೆಯೀ ಬೇಕಾಯ್ತೆ । ರಾಮ ರಾಮ ॥ ಹೇಗಾದರು ನಿನ್ನಿಂದ ಕೈಕೆಗೇನು ಬಾಧೆ । ರಾಮ ರಾಮ ॥ ೨ ॥ ಭರತನಾಳಲಯ್ಯೊ ರಾಜ್ಯ । ರಾಮ ರಾಮ । ನಾವ್ ಬಡವರಂತೆ । ಶರೀರ ಮಾತ್ರವಾಗಿರುವ । ರಾಮ ರಾಮ ॥ ತರವಲ್ಲ ಪೋಗುವುದಿಂದು । ರಾಮ ರಾಮ । ಸೀತಾಂಗನೆ ಬಲು । ಕರಗಿ ಕರಗಿ ಮರುಗುವಳಲ್ಲೊ । ರಾಮ ರಾಮ ॥ ೩ ॥ ಒಂದು ಎರಡು ದಿವಸವಲ್ಲ । ರಾಮ ರಾಮ । ಈರೇಳು ವರುಷ । ವೆಂದಿಗೆ ತೀರುವುದಯ್ಯೊ । ರಾಮ ರಾಮ ॥ ತಂದು ಕಂಡವರ ಮಕ್ಕಳ । ರಾಮ ರಾಮ । ನಂಬಿಸಿ ಅವರ । ನಿಂದು ಕೊರಳ ಕೊಯ್ವರೇನೊ । ರಾಮ ರಾಮ ॥ ೪ ॥

### ಕೇದಾರಗೌಳ ರಾಗ - ಅಷ್ಟ ತಾಳ

ಕಣ್ಣನೀರಬುಧಿಯೊಳಾಳುವ ಜನನಿಯ । ಪುಣ್ಯಪುರುಷ ನೋಡುತ್ತ ॥ ಬಣ್ಣಗಾರಿಕೆಯಲ್ಲ ತಾಯ್ತಂದೆಯರ ಮಾತ । ನುಣ್ಣದುರಿಯಲಾಗದು ॥ ೧ ॥ ಜಾನಕಲಕ್ಷ್ಮಣರರಿಯರು ಬುದ್ಧಿಯ । ನೀನಿದ್ದು ತಿಳುಹಿಸಮ್ಮ ॥ ತಾ ನೊಂದುಕೊಂಬಳರಿತರೆ ಪೋಗುವ ಸುದ್ದಿ । ನೀನಾಕೆಗರುಹಬೇಡ॥ ೨ ॥ ಧಾರಿಣೀಪತಿ ಮುಪ್ಪಿನವನು ಲಕ್ಷ್ಮಣ ಬಾಲ । ನಾರಿ ಸಣ್ಣವಳು ಸೀತೆ ॥ ಬೇರೆ ಬೇರವರ ರಕ್ಷಿಸಿಕೊಳ್ಳೆನುತ ಬಿಲ್ಲ । ನೂರಿ ಕೈಮುಗಿದು ನಿಂದ ॥ ೩ ॥

### ವಾರ್ಧಿಕ

ತರಳನಾರಣ್ಯವಾಸವ ಕೇಳ್ದು ಕೌಸಲ್ಯೆ । ತರಹರಿಸಲಾರದಾದಿತ್ಯ ನುರುತರ ಕಿರಣ । ದುರಿಯೊಳಗೆ ಬಾಡಿದೆಳೆಲತೆಯಂತೆ ಮೊಗಗುಂದಿ ದೆಸೆದೆಸೆಗೆ ಬಾಯ್ಬಿಡುತಲಿ ॥ ಪರಿಪರಿಯ ದುಃಖದಲಿ ಮರುಗುತಿಹ ಜನನಿಯಂ । ಶರಜಾಕ್ಷ ಸಂತಯಿಸಿ ಪರಕೆಯಂ ಕೈಗೊಳುತ । ಪೊರಮಡಲು ದೂರದಿಂ ಕಂಡು ಜಾನಕಿ ಪತಿಯ ಸೆರಗ ಪಿಡಿದಿಂತೆಂದಳು ॥

### ಸಾವೇರಿ ರಾಗ - ತ್ರಿವುಡೆತಾಳ

ರಘುವೀರ ನೀನೆನ್ನನಗಲಿ ಪೋಗುವೆಯ । ಜಗದೊಳಗೆನ್ನ ಕೊರಳ ಕೊಯ್ಯುವೆಯ ॥ ಅಗಜೆಯರಸನ ಬಿಲ್ಲೆತ್ತಿದಂದಿಗು ನಿನ್ನ । ಅಗಣಿತಾಶ್ರಯ

ಬಿಟ್ಟು ಇರಲಿಲ್ಲವಯ್ಯ ॥ ಪೋಗುವುದುಚಿತವೇನೈ । ನೀನೆನ್ನನಗಲಿ।ಪೋಗುವು ದುಚಿತವೇನೈ ॥ ೧ ॥ ಕಲಕೀರವಾಣಿ ಕೇಳ್ ಕಾಂತೆ ಮಮ ಪ್ರಿಯೆ । ಸುಲಲಿತ ಮಂಜುಳ ತರರೂಪೆ ॥ ನಳಿನಲೋಚನೆ ಬಹೆ ಕಿರಿದು ದಿವಸದಲ್ಲಿಹೇ ಬಳಲಬೇಡವೆ ಕಾಮನರಗಿಣಿಯೆ ॥ ಸುಮ್ಮನೆ ಮರುಗದಿರೆ । ಜಾನಕಿ ನೀನು। ಸುಮ್ಮನೆ ಮರುಗದಿರೆ ॥ ೨ ॥ ತರವಲ್ಲ ನಿನ್ನನೊಂದರೆ ನಿಮಿಷವು ಬಿಟ್ಟು । ಇರಲಾರೆ ಕಾಂತ ಶಿರೋಮಣಿಯೆ ॥ ಕರಮುಗಿಯುವೆನನ್ನ ಕರೆದೊಯ್ಯೊ ಮೋಹನ್ನ । ಕರುಣಸಾಗರ ಸ್ವಾಮಿ ಭಕ್ತಸುಪ್ರೇಮಿ ॥ ಪೋಗುವುದು ಚಿತವೇನೈ । ನೀನೆನ್ನನಗಲಿ । ಪೋಗುವುದುಚಿತವೇನೈ ॥ ೩ ॥ ಫಲವೇನೆ ನಿನಗಿಷ್ಟು ನಿಲ್ಲೆಂದರೆನ್ನೊಳು । ನಳಿನಾಕ್ಷಿ ನೀ ಬಂದು ಬಳಲಲೇಕೆ ॥ ಬಲು ಕಾಡಿನೊಳು ದಿನವ ಕಳೆವ ಉಪಾಯವೇನು । ಖಳರ ಬಾಧೆಯು ಕಾಣೆ ಕಾಂತೆ ನಿನ್ನಾಣೆ ॥ ಸುಮ್ಮನೆ ಮರುಗದಿರೆ । ಜಾನಕಿ ನೀನು। ಸುಮ್ಮನೆ ಮರುಗದಿರೆ ॥ ೪ ॥ ಬಿಸಜಾಕ್ಷ ಎನ್ನ ವಂಚಿಸಿ ಪೋದೆಯಾದರೆ । ವಿಷವ ಕುಡಿದು ಸಾವುದಲ್ಲದೆ ನಾನು ॥ ಹುಸಿದರೆ ನಿನ್ನಾಣೆ ಜನಕನ ಪದದಾಣೆ । ದಶರಥನೃಪನಾಣೆ ಅಸುರವೈರಿ ॥ ಪೋಗುವುದುಚಿತವೇನೈ । ನೀನೆನ್ನನಗಲಿ । ಪೋಗುವುದುಚಿತವೇನೈ ॥ ೫ ॥

### ವಾರ್ಧಿಕ

ಬೇಡವೆಂದರೆ ಮಾತ ಕೇಳದುರೆ ಬಿದ್ದು ಹೊರ । ಳಾಡಿ ಸೆರಗಂಬಿಡದೆ ಹೊರಳುತಿಹ ಜಾನಕಿಯ । ನೋಡಿ ರಾಘವನೊಡಂಬಡಿಸುತಿಹ ವಾರ್ತೆಯಂ ನಾಡಜನರಿಂದ ಕೇಳ್ದು ॥ ರೂಢಿಪಾಲಕ ರಾಮ ರಾಜ್ಯಮಂ ಬಿಟ್ಟೆನ್ನ । ಜೋಡಗಲಿ ಪೋಪನೆಂಬುದಕಾಗಿ ಲಕ್ಷ್ಮಣಂ । ಕೇಡಾದಳೀ ಕೈಕೆಯೆಂದು ತನ್ನ ಗ್ರುಜನ ಕೂಡೆ ಬಂದಿಂತೆಂದನು ॥

### ಮೂರವಿ ರಾಗ - ಮಟ್ಟೆತಾಳ

ಅಣ್ಣದೇವ ನೀ । ನ್ನೆದುವುದೆಲ್ಲಿ । ಪುಣ್ಯವಾರಿಧಿ । ಪುರುಷರತ್ನನೆ ॥ ॥ ೧ ॥ ಇನಕುಲೇಂದ್ರನೆ । ಏನು ಭಾವನೆ । ಮನಸಿಜನಯ್ಯ । ಮನ ವಿದೇನಯ್ಯ ॥ ೨ ॥ ಪೊಡವಿ ಕೈಕೆಗೆ । ಮೂರಿ ಹೋಯಿತೆ । ದೃಢದಿ ಪಾಲಿಸೊ । ಭಕ್ತವತ್ಸಲ ॥ ೩ ॥

### ಕಾಂಬೋಡಿ ರಾಗ - ಏಕತಾಳ

ತಮ್ಮ ಇನಿತೇಕೊ ಕೋಪ । ಸುಮ್ಮನೆ ಇರಪ್ಪ ॥ ಸಮ್ಮತವಲ್ಲವೊ ಸತ್ಯ । ಧರ್ಮವ ಮೀರುವುದು ॥ ೧ ॥ ತಾತನು ಪೇಳಿದೊಂದು । ಮಾತ ಮೀರಲಿಂದು ॥ ಪಾತಕ ಪೊದ್ದುವುದಯ್ಯ । ನೀ ತಿಳಿದು ನೋಡು ॥ ೨ ॥ ನಾರಿ ಜಾನಕಿಯು ಸಹಿತ । ಅರಣ್ಯದೊಳಿದ್ದು ॥ ಈರೇಳು ವರುಷದ ಮೇಲೆ। ಊರಿಗೆ ಬರುವೆನು ॥ ೩ ॥

### ಪಂತುವರಾಳಿ ರಾಗ - ಮಟ್ಟೆತಾಳ

ರಾಘವ ನೀನಿಂದು ವನಕೆ । ಪೋಗುವುದು ಬದ್ಧವಾದರೆ । ಈಗ ನಾನು ಸಹಿತ ಬರುವೆ । ಪೋಗುವ ಮೂವರು ॥ ೧ ॥ ವನಜನಯನ ನಿನ್ನ ಬಿಟ್ಟು । ದಿನವ ಕಳೆಯಲಾರೆ ನಿನ್ನ । ಅನುಜನಾದರೆ ಕೂಡಿಕೊಂಡು । ವನಕೆ ಪೋಗಯ್ಯ ॥ ೨ ॥ ಮೇದಿನೀಶ ರಾಮ ನಿನ್ನ ಪಾದವನ್ನು ಅಗಲಿ ನಾನು । ಮೇದಿನಿಯೊಳಿರೆನು ತಾಯ । ಪಾದದಾಣೆಯು ॥ ೩ ॥ ಎನುತ ಲಕ್ಷ್ಮಣಾಂಕ ತನ್ನ । ಧನು ಶರವ ತೆಗೆದುಕೊಂಡು । ಜನನಿಯಂಘ್ರಿಗೆರಗಿ ಪೇಳ್ದ । ಮನದೊಳಿದ್ದುದ ॥ ೪ ॥ ಅಮ್ಮ ರಾಮಚಂದ್ರನು ನೀ । ತಮ್ಮನವರ ಕೂಡಿಕೊಂಡು । ನಿರ್ಮಲದಿ ವನಕೆ ಪೋಪ । ರಂತೆ ಶೀಘ್ರದಿ ॥ ೫ ॥ ಕಳೆಯಲಾರೆ ಬಿಟ್ಟು ದಿನವ । ನಳಿನ ನೇತ್ರನೆರಡು ಪದವ । ತಿಳುಹಿ ರಾಮ ನೊಡನೆ ಮಾತೆ । ಕಳುಹುಯೆನ್ನನು ॥ ೬ ॥

### ಶಂಕರಾಭರಣ ರಾಗ - ರೂಪಕತಾಳ

ಲೇಸು ಮಗನೆ ರಾಮ ವನಕೆ । ಪೋಪನಾದರೆ ॥ ಐಸೆ ಕಾರ್ಯವೀ ಮುಹೂರ್ತ । ಬೇಸರಿಲ್ಲದೆ ॥ ೧ ॥ ದೃಢ ಮನಸ್ಸಿನಲ್ಲಿ ರಾಮ । ನೊಡನೆ ಪೋಗಲು ॥ ಅಡವಿಯೇ ರಾಜ್ಯ ನಾಲ್ಕು । ಕಡೆಯೊಳಾಹುದು ॥ ೨ ॥ ಸೀತೆಯನ್ನು ಮನದಿ ಎನ್ನ । ರೀತಿ ನೋಡಿಕೊ ॥ ತಾತ ರಾಮಚಂದ್ರನೆಂದು । ಮಾತನಾಡಿಕೊ ॥ ೩ ॥

### ಕಂದ

ಕಂದಗೆ ಬುದ್ಧಿಯ ಪೇಳ್ದಾ । ಚಂದ್ರಾನನೆ ಬೇಗ ರಾಮನಲ್ಲಿಗೆ ಬಂದು। ನಿಂದಿರ್ದಾಕೆಯು ಕ್ಷಣಾತ । ವಂದಿಸೆ ರಾಘವನೊಳೆಂದಳಂಬುಜನಯನ ॥

### ತೋಡಿ ರಾಗ - ಏಕತಾಳ

ಧಾರಿಣಿಯಧಿ ಪತಿತ್ವ । ಭರತನಿಗೆ ಕೊಟ್ಟು ನೀನು । ನಾರಿ ಜಾನಕಿಯು ಸಹ । ಅರಣ್ಯಕೀಗ ಪೋಪೆಯ ॥ ೧ ॥ ಲಕ್ಷ್ಮಣ ನಿನ್ನನ್ನು ಬಿಟ್ಟೊಂ । ದು ಕ್ಷಣ ನಿಲ್ಲುವನಲ್ಲ । ರಕ್ಷಿಸಿಕೊ ನೀ ಹೋದಲ್ಲಿ । ಅಕ್ಷಯಶಾಯುಷ್ಯವಿರಲಿ ॥ ೨॥ ಸ್ವಸ್ತಿಯಹಾಗಲೆಂದು ತನ್ನ । ಪುತ್ರನಾದ ಲಕ್ಷ್ಮಣನ್ನ । ಭಕ್ತಿಯಿಂದ ಶ್ರೀರಾಮನ । ಹಸ್ತದಿ ಕೊಟ್ಟಳು ಮಗನ ॥ ೩ ॥

### ವಚನ

ಇಂತೆಂದ ಸುಮಿತ್ರೆಯಂ ಬೀಳ್ಕೊಂಡು ಸೀತಾಲಕ್ಷ್ಮಣರಸೊಡಗೊಳುತ ಪಿತನಾದ ದಶರಥನ ಬಳಿಗಂ ಬಂದು ಶ್ರೀರಾಮಚಂದ್ರನುವಿನೆಂದನು ಎಂದರೆ-

### ಘಂಟಾರವ ರಾಗ - ಝಂಪೆತಾಳ

ತಾತ ಬಿನ್ನವಿಸುವೆನು । ಕೇಳೆನ್ನ ಮಾತ ॥ ಪ ॥ ನಾರಿಮಣಿ ಜಾನಕಿಯು । ಲಕ್ಷ್ಮಣನು ಸಹಿತೀಗ । ಅರಣ್ಯಕೆ ಬರುವೆನೆಂ । ದಳಲುತ್ತೆ ದಾರೆ ॥ ೧ ॥ ಏನು ಮಾಡುವುದು ವಿಧಿ । ಬರೆದುದಾಯಿತು ಮುಂದೆ । ನೀನು ಸುಖದಿಂದಲಿರು । ಧಾರಿಣೀಪಾಲ ॥ ೨ ॥

### ನೀಲಾಂಬರಿ ರಾಗ - ತ್ರಿವುಡೆತಾಳ

ರಾಘವ ವಿಪಿನಕೆ ಜಾನಕಿ । ಸಹಿ । ತೀಗಲೀ ಲಕ್ಷ್ಮಣ ಮೊದಲಾಗಿ ॥ ಹೀಗೆ ಮೂವರು ನೀವು ಮಾತಾಡಿ । ಕೊಂಡು । ಪೋಗುವುದಡವಿಗೆ ಬದ್ಧವೆ ॥ ೧ ॥ ಕಾಡಿನೊಳಗೆ ಬಹು ಮೃಗಗಳು । ನಿಮ್ಮ । ಪೀಡಿಸ ದಿರುವುವೆ ನೀ ಪೇಳು ॥ ಮೂಢ ರಕ್ಕಸರಿದ್ದ ಠಾವಲ್ಲಿ । ಸೀತೆ । ನೋಡಿ ಯಂಜದೆ ಸುಮ್ಮನಿಹಳೇನ್ನೆ ॥ ೨ ॥ ಹಸಿವಾಗಲಡವಿಯೊಳೇನುಂಟು । ನಿದ್ರೆ । ಮುಸುಕೆ ಕಾಡಿನೊಳ್ ಮಲಗುವಿರೆಂತು ॥ ಬಿಸಿಲು ಗಾಳಿಯನೆಂತು ತಡೆವಿರಿ । ಪಾಲು । ಮೊಸರು ಬೆಣ್ಣೆಯನೆಂತು ಬಿಡುವಿರಿ ॥ ೩ ॥ ಸಾವ ಕಾಲಕೆ ಕಂಡೆ ಭಾಗ್ಯವ । ಕೊಟ್ಟ । ದೇವರೆನಗಾಯುರಾರೋಗ್ಯವ ॥ ಯಾವ ವೇಳೆಗೆ ತಂದೆ ಕೈಕೆಯ । ಎನ್ನ । ಜೀವಕ್ಕೆ ಮುಪ್ಪಾದ ಈಕ್ಷೆಯ ॥ ೪ ॥

### ಸಾಂಗತ್ಯ ರಾಗ - ರೂಪಕ ತಾಳ

ವನವಾಸಕಯ್ದು ಬರುವೆವೆಂದು ಮೂವರು । ಜನಕನ ಪಾದಕೆ ನಮಿಸಿ॥ ವನಿತೆ ಕೈಕಾದೇವಿಗಭಿವಂದಿಸಲು ಕಂಡು । ಮನದೊಳಿದ್ದುದನರುಹಿದಳು ॥ ೧ ॥ ಅರಣ್ಯದಡೆಗೆ ಶೃಂಗಾರವಲ್ಲೆನುತ ಭಂ । ಗಾರ ವಸ್ತುಪನೆಲ್ಲ ಕಳಚಿ ॥ ಬೇರೆಬೇರವರಿಗೆ ನಾರುವಸ್ತ್ರಂಗಳ । ನಾರಿ ಕೈಕೆಯು ಕೊಟ್ಟಳಾಗ ॥ ೨ ॥ ಪಟ್ಟೆ ಸೀರೆಯ ಬಿಟ್ಟು ಚಿನ್ನವ ತೆಗೆದಾಗ । ಕೊಟ್ಟ ವಲ್ಕಲವ ಕಾಣುತ್ತ ॥ ಸೃಷ್ಟಿ ದೇವಿಯೆ ನೀ ನೋಡೆಂದು ಕಂಬನಿದುಂಬಿ । ಉಟ್ಟಳು ಜನಕನ ಪುತ್ರಿ ॥ ೩ ॥

### ಭಾಮಿನಿ

ಗುರುವಸಿಷ್ಠಾದ್ಯಖಿಳ ಹಿರಿಯರ । ಚರಣಕಭಿವಂದಿಸುತ ಮೂವರು । ವರ ಮಹಾಮಂದಿರವ ಪೊರಟರು ಪೂರ್ವಮುಖವಾಗಿ ॥ ಕರದೊಳಗೆ ಬಿಲ್ ಬಾಣ ಗಜ ರಥ । ತುರಗ ಜನರ ಸಮೇತ ತೆರಳಲು । ನೆರೆಮನೆಯ ನಾರಿಯರು ಕಂಡಿಂತೆಂದರಡಿಗಡಿಗೆ ॥

### ನೀಲಾಂಬರಿ ರಾಗ - ಏಕತಾಳ

ಅಕ್ಕ ನೋಡಿಂಥಾ ಬಾಲರ । ದೇಶಾಧಿಪ ವ । ನಕ್ಕೆ ಕಳುಹುವನಲ್ಲೆ ॥ ಮುಕ್ಕಣ್ಣ ಶಿವನೆ ಬಲ್ಲ । ಕೈಕೆ ತಾನಿಂಥಾ । ಮಕ್ಕಳ ಹೆರಲಿಲ್ಲವೆ ॥ ೧ ॥ ಹದಿನಾಲ್ಕು ವರುಷ ಬಿಟ್ಟು । ಕೌಸಲ್ಯಾದೇವಿ । ಯೆದೆಯೆಂತು ನಿಲ್ವುದವ್ವ ॥ ಮದನ ಕೋಟಿ ತೇಜನಲ್ಲೆ । ಲಕ್ಷ್ಮಣ ನೋಡೆ । ಮದುಮಗನಂತಿಹನು ॥ ೨ ॥ ಎಲ್ಲರಂತಲ್ಲವೆ ಜೀವ । ಸುಮಿತ್ರೆಗೇನು । ಕಲ್ಲೆದೆಯಾಯಿತವ್ವ ॥ ಫುಲ್ಲಲೋಚನೆ ಸೀತೆಯ । ತಾಯಿತಂದೆಗ । ಳೆಲ್ಲಿರ್ಪರೇನೆಂಬರೊ ॥ ೩ ॥ ಎಷ್ಟು ತಪವ ಗೈಯ್ದರು । ಇಂಥಾ ಚೆಲ್ವರು । ಪುಟ್ಟುವರೇನೆಯಕ್ಕ ॥ ಸೃಷ್ಟಿಗೆ ಸೂರ್ಯನಲ್ಲೆ । ಹೀಗಾದ ಮೇಲೆ । ಕೆಟ್ಟಿತಯೋಧ್ಯಾಪುರ ॥ ೪ ॥

### ಕಾಪಿರಾಗ - ಅಷ್ಟತಾಳ

ಬಂದರು ರಾಮಲಕ್ಷ್ಮಣರು । ಆನೆ। ಮಂದಿ ಕುದುರೆ ತೇರು ಸಂಗಡ ಬರಲು ॥ ಬಂದರು ॥ ಪ ॥ ಕೇರಿಕೇರಿಗಳನ್ನು ಕಳೆದು । ತಮ್ಮ ಊರು ತಾಯ್ತಂದೆಯ ಹಂಬಲ ತೊರೆದು ॥ ಏರಿ ಕಂಬನಿ ಧರೆಗಿಳಿದು । ಮುಂದೆ ।

ಸಾಗಿಪ್ಪ ಸಂಸಾರ ಹಂಬಲ ತರಿದು ॥ ಬಂದರು ॥ ೧ ॥ ಮಾತಾಪಿತರ ಮೊಗ ನೋಡಿ । ಸುಮ್ಮ । ನೇತಕೀ । ಕ್ಲೇಶವೆಂದೆನುತ ಮಾತಾಡಿ ॥ ಪ್ರೀತಿ ಯಿಂದವರ ಕೊಂಡಾಡಿ । ನಾನಾ । ರೀತಿಯಿಂದವರೊಳಪ್ಪಣೆಯನ್ನು ಬೇಡಿ ॥ ಬಂದರು ॥ ೨ ॥

**ಭಾಮಿನಿ**

ಊರ ಪೊರವಂಟವರು ಗಂಗಾ । ತೀರ ಪರಿಯಂತರದಿ ನಿಂತಾ । ಬೇರೆ ಬೇರೆಲ್ಲರಿಗೆ ಕರಗಳ ಮುಗಿದು ಬೀಳ್ಕೊಟ್ಟು ॥ ಸಾರಿ ನದಿಯನು ಮಂತ್ರಿಸಹ ರಥ । ವೇರಿ ನಡೆದರು ಮುಂದೆ ಪಯಣದಿ । ಮೂರು ದಿನ ದಲಿ ನಿಂತು ರಾಮ ಸುಮಂತ್ರಗಿಂತೆಂದ ॥

**ನೀಲಾಂಬರಿ ರಾಗ - ತ್ರಿವುಡೆತಾಳ**

ಮಂತ್ರೀಶ ಕೇಳಯ್ಯ ನಿನ್ನೊಳು । ವೇಳು । ವಂಥಾದೇನುಂಟು ಒಲ್ಲವನೊಳು ॥ ಚಿಂತಿಪ ಜನಕ ಮುಪ್ಪಿನ ಕಾಲ । ವೆಂದು । ನೀಂ ತಿಳಿ ದೆಲ್ಲರ ಸಲಹಿಕೊ ॥ ೧ ॥ ಭರತಶತ್ರುಘ್ನರು ಬರಲಿಲ್ಲ । ಬೇಗ । ಕರೆಸಿ ಕೊಳ್ಳಲಿ ಹೇಳು ಧರಣೀಶ ॥ ವರಜನನಿಯರು ಚಿಂತಿಸುವರು । ಭರತ । ಗರುಹು ಚಂದದಿ ನೋಡಿ ಸಲಹಲಿ ॥ ೨ ॥ ಮನಸಿನೊಳಗೆ ಭೇದವೆಣಿಸದೆ । ನಾ ಬಾ । ಹನಕ ಒಕ್ಕಲುಗಳ ದಣಿಸದೆ ॥ ಘನತೆಗೆ ಕಡಿಮೆಯೆಂದೆಣಿಸದೆ । ಧರ್ಮ । ಪೆರಸಿ ರಕ್ಷಿಸ ಹೇಳು ಭರತಗೆ ॥ ೩ ॥

**ಮಾರವಿ ರಾಗ - ಏಕತಾಳ**

ಈ ತೆರದಲಿ ಮಂತ್ರಿಯು ಕಳುಹಿಸಿ ರಘು । ನಾಥ ಮುಂದಡಿಯಿಡಲು॥ ಸೀತಾದೇವಿಯು ಲಕ್ಷ್ಮಣ ಸಹ ಬರ । ಲಾತ ಗುಹನು ಕಂಡ ॥ ೧ ॥ ನೂತನ ವಿದು ದಶರಥನಣುಗರು ಎಂಬ । ರೀತಿಯು ನೆರೆ ತಿಳಿದು ॥ ಪ್ರೀತಿಯಿಂದ ಕಾಣಿಕೆಯಿತ್ತು ನುತಿಸುತ । ಮಾತಾಡಿಸಿದನವ ॥ ೨ ॥

**ತೋಡಿ ಗೌಳ ರಾಗ - ಏಕತಾಳ**

ಎನ್ನಯ ಕುಲದೇವೇಶ । ರಾಮಚಂದ್ರ । ಪಾದ । ವನ್ನು ಕಂಡು ಧನ್ಯನಾದೆ । ರಾಮಚಂದ್ರ ॥ ವಹಾನವಾಧಿಪತಿ ನೀನು । ರಾಮಚಂದ್ರ ।

ರಾಜ್ಯವನ್ನು ಬಿಟ್ಟು ಪೋಪ್ರದೆಲ್ಲಿ । ರಾಮಚಂದ್ರ ॥ ೧ ॥ ಕಂಜದಳ ನೇತ್ರೆ ಸೀತೆ । ರಾಮಚಂದ್ರ । ಕಣ್ಗೆ । ರಂಜಿಪ ಲಕ್ಷ್ಮಣ ಸಹ । ರಾಮಚಂದ್ರ । ಸಂಜೆಯಾಯಿತು ಈ ಹೊತ್ತು । ರಾಮಚಂದ್ರ । ನಾಳೆ । ಮುಂಜಾನೆ ಯೆದ್ದು ಪೋಗಯ್ಯ । ರಾಮಚಂದ್ರ ॥ ೨ ॥

ವಾರ್ಧಿಕ

ಗುಹನಿಂತು ಪ್ರಾರ್ಥನೆಯ ಮಾಡುತ್ತ ಸಕಲ ಸ । ನ್ನಹವ ಕೊಡ ಲಲ್ಲಿದ್ದರಾ ದಿವಸ ರಾತ್ರೆಯಲಿ । ಮಿಹಿರೋದಯಕ್ಕೆ ಮೊದಲೆದ್ದು ಯೋಚಿಸಿದ ಬೆಳಗಾದರೆನ್ನಗಲಿಕೆಯನು ॥ ಸಹಿಸಲಾರದೆ ಶೋಕದಿಂ ಬಂದ ಪುರಜನರು । ಗಹನದೆಡೆಗಯ್ತಪ್ಪರಿವರ ಕೊಂಡೊಯ್ಯುವುದು । ವಿಹಿತ ಮಲ್ಲೆನುತಂತರಂಗದಲಿ ಬೇಡರಧಿಪಗೆ ರಾಮನಿಂತೆಂದನು

ವಸಂತ ರಾಗ - ಆದಿತಾಳ

ಶರಣ ಗುಹನೆ ಬಾರಿತ್ತ ಯಾ । ರರಿಯದಂತೆ ನಮ್ಮ ಮಾ । ಪರನು ಮಾತ್ರ ದಾಟಿಸೊ ನದಿ । ಪರಮ ಶೌರ್ಯ ॥ ೧ ॥ ಬೆಳಗಾದ ಮೇಲೆನ್ನ ಬಿಡರು । ಇಲ್ಲಿ ಮಲಗಿದವರು ಬಹು । ಛಲವ ಮಾಳ್ಪರು ಸಂಗಡ । ಬರುವೆ ವೆಂದು ॥ ೨ ॥ ಎಂದಡೆ ಗುಹ ರಾಮ । ಚಂದ್ರ ಸೀತೆ ಲಕ್ಷ್ಮಣರ । ಚಂದದಿ ದಾಟಿಸಿದ ನಾವೆ । ಯಿಂದ ಗಂಗೆಯ ॥ ೩ ॥

ವಾರ್ಧಿಕ

ಮಿಹಿರ ಕುಲಜರು ದೇವನದಿಯನುತ್ತರಿಸುತಲಿ । ಬಹುದೂರ ನಡೆದು ಬರುತಲಿ ಮುಂದೆ ತಪದಿ ನಿ । ಸ್ಪೃಹನಾಗಿ ನಿತ್ಯಾತ್ಮಧ್ಯಾನದಲಿ ಮೆರೆವ ಭಾರದ್ವಾಜನಂ ಕಂಡರು ॥ ವಿಹಿತ ಮಾರ್ಗದಲಿ ತಪವಿರುವ ಮುನಿಗೆರಗಿದಡೆ। ಬಹುಮಾನದಿಂದಲತಿ ಪರಸಿ ಮನ್ನಿಸಿದನಿವ । ರಹುದು ರವಿಕುಲದರಸುಗಳು ನೀವು ಬಂದ ಹದನೇನೆಂದು ಬೆಸಗೊಂಡನು॥

ಭೈರವಿ ರಾಗ - ಝಂಪೆತಾಳ

ದಶರಥನೃಪಾಲನೊಳು । ವಸುಧೆಯನು ಬೇಡಿ ಪೊರ । ಡಿಸಿದ ಳೆಮ್ಮನು ಕೈಕೆ । ಎಸೆವ ಮುನಿಪಾಲ ॥ ೧ ॥ ಬೇಡವೆಂದರೆ ಮಾತ ।

ಕೇಳದೀ ಜಾನಕಿಯು । ಕೂಡೆ ಬಂದಳು ಅಳುತ । ಕಾಡೊಳಿಹರೆನುತ ॥ ॥ ೨ ॥ ಯಾರು ಪೇಳ್ದರು ಮಾತ । ಮೀರಿ ಲಕ್ಷ್ಮಣಸೀತ । ಸೇರಿ ಬಂದಮ ವನಕೆ ಸೌಖ್ಯವೆಂದೆನುತ ॥ ೩ ॥ ಈರೇಳು ವರುಷ ಸಮ । ಗಾರಣ್ಯದೊಳ ಗಿಹರೆ । ತೋರಿಕೊಡಿ ಸುಸ್ಥಳವ । ಕಾರುಣ್ಯದಿಂದ ॥ ೪ ॥ ಎನಲು ರಾಘವ ಕೇಳು । ಮುಂದಿರುವ ಪರ್ವತದಿ । ದನುಜರಟ್ಟುಳಿಯಲ್ಲಿ । ಪಾರ ದಿನ್ನಯ್ಯ ॥ ೫ ॥ ದಿನದಿನಕೆ ಬೇಕಾದ । ಫಲಗಳಿಹುದದರೊಳಗೆ । ಅನು ಮಾನ ಬೇಡ ಇರಿ । ಮನಶುದ್ಧವಾಗಿ ॥ ೬ ॥ ಚಿತ್ರಮಯವಾಗಿರುವ । ಚಿತ್ರಮೂರುತಿಗಳನು । ಚಿತ್ರಕೂಟಕೆ ಮುನಿಪ । ತಾ ಕಳುಹಿಸಿದನು ॥ ೭ ॥ ಚಿತ್ರತರವಾಗಿರುವ । ಚಿತ್ರವನಗಳ ನೋಡಿ । ಚಿತ್ತ ಶುದ್ಧದೊಳಲ್ಲಿ । ಇರುತಿರ್ದರವರು ॥ ೮ ॥

### ವಾರ್ಧಿಕ

ಮತ್ತೆ ಬಹು ರಮ್ಯತರವಾದ ಗಿರಿ ಸೌಭಾಗ್ಯ । ಚಿತ್ರಕೂಟದೊಳಿರ್ದ ರಿತ್ತಲುಂ ದಶರಥ ನೃ । ಪೋತ್ತಮಂ ಕೌಸಲ್ಯೆಯರ ಮನೆಗೆ ಬಂದು ನಿಜ ಪುತ್ರರಂ ನೆನೆನೆನೆಯುತ ॥ ಚಿತ್ತದಲಿ ಕಡುನೊಂದು ಚಿಂತಿಸುವ ಸಮಯದಲಿ। ಹತ್ತಿರಕೆ ನಡೆತಂದ ಮಂತ್ರೀಶನಂ ಕಂಡು । ಉತ್ತರವ ದೇಶದೊಳಗೆಲ್ಲಿ ಪರಿಯಂತೆನ್ನ ತರಳರಯ್ದಿದರೆನ್ನುತ ॥

### ಭೈರವಿ ರಾಗ - ಝಂಪೆತಾಳ

ಮಂತ್ರಿ ಮಮ ಬಾಲಕರ । ಎಲ್ಲಿ ಬಿಟ್ಟು ಬಂದೆ । ಕಾಂತೆ ಜಾನಕಿ ನಡೆದು । ಪೋದಳೇ ಮುಂದೆ ॥ ೧ ॥ ಬರುವ ಸಮಯದಿ ನಿನ್ನ । ಕಿವಿ- ಯೊಳಾಡಿದುದೇನು । ಬರುತವೆಂದರೊ ಆಸೆ । ತೊರೆದರೇನಯ್ಯ ॥ ೨ ॥ ಈಸು ಭಾಗ್ಯವನೆಲ್ಲ । ಬಿಟ್ಟೆನ್ನ ಸುತರು ವನ । ವಾಸಕಯ್ದಿದರಲ್ಲೊ । ಅಯ್ಯಯ್ಯೊ ವಿಧಿಯೆ ॥ ೩ ॥ ತರಹರಿಸುತಿದೆ ಪ್ರಾಣ । ನಾನಿನ್ನೇನ ಮಾಡಿಲ್ಲ। ಕರೆಸು ಭರತನ ಮಂತ್ರಿ । ಬಾರಕರ ಕಳುಹಿ ॥ ೪ ॥ ಅರನಿಮಿಷ ಮಾತ್ರ ಯುಗ । ವಾಗುತಿದೆಯೆನಗೀಗ । ತರುಣಿಯರ ಮೂವರನು ಕರೆಸಯ್ಯ ಬೇಗ ॥ ೫ ॥

### ಕೇಗುಪ್ತಿ ರಾಗ - ಏಕತಾಳ

ಎಂದಿನಂತೇಕೆ ಬಾರ । ರಾಮಚಂದ್ರ ॥ ಕಣ್ಣ । ಮುಂದೇತಕೆ ಸುಳಿ ದಾಡನು । ರಾಮಚಂದ್ರ ॥ ೧ ॥ ಬಿಲ್ಲು ವಿದ್ಯೆಗಳ ತೋರೋ ರಾಮಚಂದ್ರ॥

ಹಿಂದೆ । ನಿಲ್ಲುವ ಲಕ್ಷ್ಮಣನ ಕಾಣೆ । ರಾಮಚಂದ್ರ ॥ ೨ ॥ ಎಲ್ಲಿಗೆ ಪೋದಳು ಸೀತೆ । ರಾಮಚಂದ್ರ ॥ ನ । ಮ್ಮೆಲ್ಲರ ಬಿಟ್ಟು ಪೋದಿರೆ । ರಾಮಚಂದ್ರ ॥ ೩ ॥

### ನೀಲಾಂಬರಿ ರಾಗ - ಏಕತಾಳ

ಏಕೆ ನಿಂದಿರುವೆ ಮಂತ್ರಿ । ಬುದ್ಧಿಗಳೆಲ್ಲ । ಆ ಕಡೆಗಾಯಿತಲ್ಲ ॥ ಕೌಸಲ್ಯೆ ಎಲ್ಲಿದ್ದಾಳೆ । ಕರೆ ಸುಮಿತ್ರೆಯ । ಕೈಕೆಯು ಬರಲು ಹೇಳು ॥ ೧ ॥ ಭರತ ಶತ್ರುಘ್ನರುಗಳ । ಕರೆಯ ಪೋದವರು । ಬರುತಾರೋ ಇಲ್ಲವೇನೊ॥ ಗುರು ತಾನೆಲ್ಲಿಗೆ ಪೋದನು । ಕರೆಸಯ್ಯ ಬೇಗ । ವರ ಶಾಸ್ತ್ರವರಿತ ವಿಪ್ರರ ॥ ೨ ॥ ಮೇಲು ಶ್ವಾಸವುಕ್ಕಿತಲ್ಲ । ಇಂಥಾ ವೇಳ್ಯದಿ । ಬಾಲಕರೊಬ್ಬರಿಲ್ಲ ॥ ಮೇಲಾದ ಮಂತ್ರಿಗಳೆಲ್ಲಿ । ಕರೆಸಯ್ಯ ಬೇಗ । ನಾಲ್ವರು ಕರಣೀಕರ ॥ ೩ ॥ ಬಾಲರೆನ್ನ ಮಕ್ಕಳಿಗೆಲ್ಲ । ಬುದ್ಧಿಯ ಪೇಳಿ । ಪಾಲಿಸು ರಾಜ್ಯವೆಲ್ಲ ॥ ಬಾಳ ಠಾಣ್ಯ ರಾಹುತರು । ಅವರವರಿಗೆ ತಕ್ಕ । ಹೇಳಿ ಕೇಳಿ ನೀ ಪಾಲಿಸು ॥ ೪ ॥ ಸೋಮವಂಶಜರಿಂದಲು । ಇದು ದೊಡ್ಡಿತಯ್ಯ । ಹೇ ಮಂತ್ರಿ ಧರ್ಮ ವೆಗ್ಗಳ ॥ ರಾಮಲಕ್ಷ್ಮಣರರಿಯರು । ಅವರ್ ಬಂದ ಮೇಲೆ । ಸಾಮೂಲ ವಾಗಿ ಹೇಳು ॥ ೫ ॥ ಯಾರೇನ ಮಾಡುವರು । ಮನುಜರಿಗೆ । ಪ್ರಾರಬ್ಧ ಬೆನ್ನ ಬಿಡದು ॥ ಶ್ರೀರಾಮ ರಾಮ ರಾಮಾ । ರಾಜೀವನೇತ್ರ । ನಾರಾಯಣ ನಾರಾಯಣ ॥

### ವಾರ್ಧಿಕ

ಧಾರಿಣೀ ಪತಿ ಮಾತು ಮಾತಾಡಿದಂತೆ ಎದೆ । ಯಾರಿ ಕಣ್ಮುಚ್ಚಿ ನಾಲಗೆ ಸೆಳೆದು ದಂತದಡಿ । ಯಾರಿದುವು ರಕ್ತದೋಸರಣಿಗಳ್ ಶ್ವಾಸ ಸಂಚಾರ ವಿಲ್ಲದೆ ಹೋಯಿತು ॥ ಮೂರು ಮಂದಿಯು ಪಟ್ಟದರಸಿಯ ರಿದನು ಕಂಡು । ಹೇರಾಳ ದುಃಖದಲಿ ಬಾಡಿ ಬಸವಳಿದು ಬಳಿ । ಕೂರಜನ ಮಧ್ಯದಲಿ ಬಾಯ್ಬಿಡುತ ಹಲುಬಿದರು ಪತಿಯಳಿದ ಕ್ಲೇಶದಿಂದ ॥

### ಆನಂದ ಭೈರವಿ ರಾಗ - ಆದಿತಾಳ

ಕಾಂತನೇಕೆ ಮಾತನಾಡ । ನಯ್ಯಯ್ಯೋ । ಈತ । ಗಿಂಥ ಮರಣ ಬಂದು ದೇತ । ಕಯ್ಯಯ್ಯೋ ॥ ಕಂತುರೂಪಿನಂಥ ದೇಹ । ವಯ್ಯಯ್ಯೋ ।

ನವೊ । ಳಂತರಂಗದಂಥ ಮೊಹ । ವಯ್ಯಯ್ಯೋ ॥ ೧ ॥ ಪುಣ್ಯವೇನೆಂದು ತಿಳಿಯ । ದಯ್ಯಯ್ಯೋ । ಮೆಯ್ಯ । ಬಣ್ಣಗುಂದಿ ತಣ್ಣಗಾಯಿ । ತಯ್ಯಯ್ಯೋ ॥ ಕಣ್ಣು ಮೇಲಕುಪ್ಪರಿಸಿ । ತಯ್ಯಯ್ಯೋ । ಅಗ್ರ । ಗಣ್ಯನೆಚ್ಚರಳಿದನಲ್ಲ ॥ ಅಯ್ಯಯ್ಯೊ ॥ ೨ ॥ ಕಾರಣವೇನೆಂದು ತಿಳಿಯ । ದಯ್ಯಯ್ಯೋ । ಸುಕು । ಮಾರರೊಬ್ಬರಿಲ್ಲದಾಗ । ಅಯ್ಯಯ್ಯೋ ॥ ಧಾರಣಿಪಾಲಕನಿಂತು । ಅಯ್ಯಯ್ಯೋ । ನಮ್ಮ । ಗಾರುಮಾಡಿ ಪೋದ ನಲ್ಲ । ಅಯ್ಯಯ್ಯೋ ॥ ೩ ॥

ಕಂದ

ಕಾಂತನ ಮೆಯ್ಯೊಳು ಬಿದ್ದಾ । ಕಾಂತೆಯುರಳುತಿರುವ ವೇಳೆ ಬಂದಾ ಮುನಿಪಂ ॥ ಸಂತವಿಸಲು ಬೇಕೆನುತಲಿ । ಚಿಂತೆಯ ಬಿಡಿರೆಂದು ತಕ್ಕ ನೀತಿಯ ಪೇಳ್ದಂ ॥

ಸಾಂಗತ್ಯ ರಾಗ - ರೂಪಕತಾಳ

ಬಾಲೆಯರಿರ ಕೇಳಿ ಬಲು ಕ್ಲೇಶದಿಂದೀಗ । ಗೋಳಿಟ್ಟು ಮೊರೆಯಿಡ ಲೇಕೆ ॥ ಕೇಳಿದ ಜನರು ಮತ್ತೇನ ಪೇಳುವರು ಭೂ । ಪಾಲರಿಗಿದು ಯೋಗ್ಯ ವಲ್ಲ ॥ ೧ ॥ ಹೆಮ್ಮಕ್ಕಳಿರ ನೀವು ಕೂಗಿಯಾಡಿದರಿಂದ । ಬ್ರಹ್ಮನ ಲಿಖಿತ ತಪ್ಪುವುದೆ ॥ ಕರ್ಮ ಬಂಧಗಳು ಕಟ್ಟೆಳೆವ ವೇಳೆಗೆ ಮಿಕ್ಕ । ಧರ್ಮ ದೈವ ಗಳು ರಕ್ಷಿಪವೇ ॥ ೨ ॥ ಗಾಳಿ ಸಿಡಿಲು ಮಳೆ ಹೊಯ್ಯಬೇಡೆಂದು ಕೈ । ತೋಳನೆತ್ತಿದರೆ ನಿಲ್ಲುವುದೆ ॥ ಬಾಲಕರಿಲ್ಲದ ವೇಳೆಯೆಂದರೆ ಯಮ । ನಾಳು ಗಳದನು ಕೇಳುವರೆ ॥ ೩ ॥ ನೆಲೆಯಿಲ್ಲ ತನುವಿಗೆ ಮಳೆಗಾಲದಲಿ ತುಂಬಿ । ಹೊಳೆಯಲ್ಲಿ ನೆರೆ ಪುಟ್ಟುವಂತೆ ॥ ನಳಿನ ಸಂಭವ ಬರೆದಾ ದಿನ ಸಂದರೆ । ಉಳಿವರೆ ನಿಮಿಷ ಪ್ರಾಣಿಗಳು ॥ ೪ ॥ ಈ ತೆರದಲಿ ನಾನಾ ರೀತಿಯ ಪೇಳ್ದು ಸು । ನೀತೆಯರನು ಒಡಂಬಡಿಸಿ ॥ ಭೂತಳಾಧಿಪನ ತೈಲದೊಳಿಟ್ಟು ಭರತ ನಿ । ದ್ದಾ । ಠಾವಿಗೋಲೆ ಕಳುಹಿದನು ॥ ೫ ॥ ಬಂದನು ಭರತನಾಕ್ಷಣದೊಳೋದು ತಲಿದ । ರುಂದವೇನೆಂದು ಕೇಳಿದನು ॥ ಒಂದುಳಿಯದೆ ಮುನಿ ಪೇಳಲು ಧರೆಗೆ ಹಾ । ಯೆಂದು ಮೂರ್ಛಿತನಾಗುತದ್ದು ॥ ೬ ॥ ಪ್ರಳಯ ಕಾಲದ ರುದ್ರನಂತೆಯಾರ್ಭಟಿಸಿ ಕಂ । ಗಳ ಮೇಲೆ ಕಿಡಿಗೆದರಿದನು ॥ ಹೊಳೆವ

ಖಡ್ಗವ ಕೊಂಡು ಮಾತೆಯ ಕಡಿವೆನೆಂ । ದಿಳಿಯೆ ಸುಮಂತ್ರ ಬೋಧಿಸಿದ ॥ ೭ ॥

ಭೈರವಿ ರಾಗ - ಝಂಪೆತಾಳ

ಎನಗಾಗಿ ಶ್ರೀರಾಮ । ವನಕೆ ತೆರಳಿದ ಮೇಲೆ । ಅನುಮಾನವೇ ನೆನ್ನ । ಜನನಿಯೇ ಇವಳು ॥ ೧ ॥ ಈ ನರೇಂದ್ರನು ತೀರಿ । ಹೋದ ಮೇಲೆನಗಾಗಿ । ನಾನೆಂತು ಮೊಗದೋರ್ವೆ । ದಾನವಾಂತಕಗೆ ॥ ೨ ॥ ಅಗ್ರಜನ ಪೊರಡಿಸಿದ । ಆ ದೋಷ ಪಿತೃವಧೆಯು । ಅಗ್ನಿಯೊಳಗಲ್ಲದೇ । ಹೋಗ ದೆನ್ನಗಲಿ ॥ ೩ ॥ ಕಣ್ಣನೀರನು ತುಂಬಿ । ಕರಗಿ ಭರತನು ಮನದಿ । ಎಣ್ಣಿಸಿದ ನೊಂದು ಅರೆ । ಗಳಿಗೆ ಪರಿಯಂತ ॥ ೪ ॥ ಕೌಸಲ್ಯೆಯರ ದುಃಖ । ಕಾಂಬುದಕೆ ಮುನ್ನವೇ । ಸಾವುದೇ ಲೇಸೆಂದು । ತಾ ತಿಳಿದನಂದು ॥ ೫ ॥ ಹೀಗೆಂದು ಭರತನಣೆ । ಯಾಗೆ ಕಂಡು ಸುಮಂತ್ರ । ರಾಘವನು ಪೇಳ್ದ ಮಾ। ತಾಗ ಪೇಳಿದನು ॥ ೬ ॥ ರೂಢಿಪಾಲಕಗೊಡನೆ । ಸಂಸ್ಕಾರ ಕರ್ಮವನು । ಮಾಡಿದಾಕ್ಷಣದೊಳಗೆ । ಭರತ ಪೊರಪಂಟ ॥ ೭ ॥

ಶಾರ್ದೂಲ ವಿಕ್ರೀಡಿತಂ

ನಾನಾ ಸೈನ್ಯವ ಕೂಡಿಕೊಂಡು ಪುರಕಂ ಶತ್ರುಘ್ನನಂ ನಿಲ್ಲಿಸೀ ।
ಕಾಣಲ್ ಬೇಕು ನರೇಂದ್ರ ಪಾದಯುಗಮೆಂದಾ ನದಿಗಳಂ ದಾಂಟುತಂ ॥
ಪಾಮಂ ಮೂವರು ತಾಯ್ಗಳುಂ ಸಹಿತಲಯ್ತಾರುತಿಪ್ಪುದಂ ಕಾಣುತಂ ।
ಏನೆಂದಾಲಿಸಿ ಕೋಪದಿಂ ರಘುಜಗಾ ಸೌಮಿತ್ರಿಯಿಂತೆಂದನೂ ॥

ಶಂಕರಾಭರಣ ರಾಗ - ಮಟ್ಟೆತಾಳ

ಅಣ್ಣ ನೋಡು ಭರತ ರಾಜ್ಯ । ತನ್ನದಾಯಿತೆಂಬ ಗರ್ವ । ವನ್ನು ತೋರ ಬರುವ ನಮ್ಮ । ಕಣ್ಣ ಇದಿರಿಗೆ ॥ ೧ ॥ ವಿಣ್ಣಗಿರಿ ನೀವು ನೇರಳೆ । ಹಣ್ಣ ಕೆಡಹಿದಂತೆ ಬಲವ । ಬನ್ನಬಡಿಸಿ ಬಿಡುವೆ ಕ್ಷಣದಿ । ನಿನ್ನ ಕರುಣದಿ ॥ ॥ ೨ ॥ ಸಮ್ಮಗಿರು ಭರತ ಬರುವ । ಧರ್ಮವನು ಅರಿಯೆ ನೀನು । ಹೆಮ್ಮೆ ಗಾರನಲ್ಲ ಗುಣದಿ। ನಮ್ಮ ಸಹಜನು ॥ ೩ ॥ ಎಂದು ತಮ್ಮ ಮಾಡುತಿರಲು । ಬಂದು ಭರತ ರಥವನಿಳಿದು । ನಿಂದು ರಾಮಚಂದ್ರನಡಿಗೆ । ವಂದಿಸಿದನು ॥ ೪ ॥ ಪಾದಕೆರಗಿದನುಜನನು ವಿ । ನೋದದಿಂದಲಪ್ಪಿ ಬಳಿಕ । ಆದರಿಸಿ ನುಡಿದ ತನ್ನ । ಸೋದರನೊಳು ॥ ೫ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಬಂದೆಯಾ ಇನವಂಶವಾರಿಧಿ । ಚಂದ್ರನಾ ಬರುವಾಗ ನಿನ್ನೊಡನೆಂದುದಿಲ್ಲವೆನುತ್ತ ಮನದಲಿ । ನೊಂದೆಯೋನ್ಯೆ ॥ ೧ ॥ ಎಂದು ಬಂದೆಯಯೋಧ್ಯಪುರಕಿದ । ನೆಂದು ಕೇಳಿದೆ ನಮ್ಮ ವಾರ್ತೆಯ । ಎಂದು ಪೊರಟರಿ ಜನನಿಯರು ಸಹ । ಮಂದಿರವನು ॥ ೨ ॥ ಕ್ಷೇಮವೇ ದಶರಥ ಪಿತಗೆ ವರಿ । ರಾಮನೇ ಶತ್ರುಘಗೆ ಮೊದಲಾ । ದಾ ಮಹಾ ಪ್ರಜೆಗಳಿಗೆ ಕುಶಲವೆ । ಸೀಮೆಯೊಳಗೆ ॥ ೩ ॥ ಏನು ಮುಖದಲಿ ಕಾಂತಿ ತಗ್ಗಿತು । ನೀನು ಜನನಿಯರೊಡನೆ ನಾನಿಹ । ಕಾನನಾಂತಕೆ ಬಂದುದೇತಕೆ । ಮಾನ ನಿಧಿಯೆ ॥ ೪ ॥

### ಬೆಹಾಗ್ ರಾಗ - ಏಕತಾಳ

ಜಯ ಜಯ ಶ್ರೀ ರಾಮಚಂದ್ರ । ಜಯ ಜಯ ರವಿಕೋಟಿಸಾಂದ್ರ ಜಯ ಜಯ ಭಾನುಕುಲೇಂದ್ರ । ಜಯ ಜಯ ಉಪೇಂದ್ರ ॥ ಜಯ ॥ ೧ ॥ ಅಣ್ಣಾಶ್ರಿತ ಪೋಷ ಕೇಳು । ನಿನ್ನ ಪಿತ ಕಳುಹಿದ ಮೇಲೆ । ಅನ್ನ ಉಣ್ಣದೆಂಟು ದಿನಕೆ । ಇನ್ನು ನಾನು ಹೇಳಬೇಕೆ । ಜಯ ॥ ೨ ॥ ಇನ ಕುಲಾಧಿಪನಿಂದಿಗೆ । ದಿನ ಮೂರಾಯ್ತು ನೀನಿಲ್ಲದ । ಮನಕ್ಲೇಶದಿಂದ ಕರಗುತ । ಅನಿಮಿಷರ ಪುರಕಯ್ದಿದನು ॥ ಜಯ ॥ ೩ ॥

### ವಾರ್ಧಿಕ

ಇಂತೆಂದು ಭರತನಾಡಿದ ಮಾತ ಕೇಳ್ದು ಬಲು । ಚಿಂತಾ ಸಮುದ್ರದೊಳಗಾಳ್ದು ಲಕ್ಷ್ಮಣ ಮೂರ್ಛೆ । ಯಿಂ ತಳೆದ ಶಿವ ಶಿವಾಯೆನುತಲಂಗನೆ ಧರೆಗೆ ಹಮ್ಮೈಸಿ ಬಿದ್ದಿರ್ದಳು ॥ ಇಂತು ಮಾಡಿತೆ ದೈವಮಿನಕುಲದ ಸೌಭಾಗ್ಯ । ಚಿಂತಾಮಣಿಯ ಬೆಳಕು ತಗ್ಗಿತೇ ಹರ ಹರಾ । ಎಂತಿರ್ದಡೇನು ಮಿನ್ನೇನಾದಡೇನೆನುತ ಕಾಂತೆ ಜಾನಕಿ ನುಡಿದಳು ॥

### ನೀಲಾಂಬರಿ ರಾಗ - ರೂಪಕತಾಳ

ಇನ್ನಾರನ್ನನು ಗುಣದಲಿ । ಮನ್ನಿಸಿ ಮನ್ನಿಸಿ ಕರೆವರು । ಕಣ್ಣಲಿ ಕಾಣದೆ ಹೋಯಿತೆ । ಪುಣ್ಯವೆ ಹಾ ವಿಧಿಯೆ ॥ ೧ ॥ ಪಾವನ ಗುಣ

ವರ್ಣಿಸುವರೆ । ಸಾವಿರ ಬಾಯ್ ಇರಬೇಕು । ಯಾವರಿಗಿಂಥಾ ಮನ । ಸಿದೆ । ದೇವರಿಗೆ ಸಮಾನ ॥ ೨ ॥ ಒಂದೇ ದಿನವಾದರು ಮನ । ನೊಂದ ನ್ನೊಳು ನುಡಿದರಿಯನು । ತಂದೆ ತಾಯಿಗಳಾದರೂ । ಬಂದಪರೇ ಹೀಗೆ ॥ ೩ ॥ ಎಷ್ಟರ ಸಂಕಟಪಟ್ಟನೊ । ಮಕ್ಕಳ ನೋಡುವೆನೆನ್ನುತ । ಲೆಷ್ಟೆಮ್ಮನು ಕರೆ ಕರೆವುತ । ಬಿಟ್ಟನೊ ಪ್ರಾಣವನು ॥ ೪ ॥ ಒದಗುವರಾಪತ್ತಿಗೆನುತಲಿ । ಮದುವೆಯ ಮಾಡಿದ ಮಗನಿಗೆ । ತುದಿಗಾಲಕೆ ನಾವಿದ್ದಿ । ಲ್ಲದ ಹಾಗಾಯ್ತಲ್ಲ ॥ ೫ ॥ ಹೊತ್ತಲ್ಲದ ಹೊತ್ತಿನಲಿ ನೃ । ಪೋತ್ತಮನಳಿದನೆ ಹಾಯೆನು । ತತ್ತೆಯ ಮೊಗ ನೋಡುತ ಬಲು । ಅತ್ತಳು ಜನಕಸುತೆ ॥ ೬ ॥

### ವಾರ್ಧಿಕ

ಪೋದ ಮಾವನ ಗುಣವ ವರ್ಣಿಸುತ ಜನಕ ಸುತೆ । ಪಾದದಡಿಯಲಿ ಬಿದ್ದು ಹೊರಳುತಿರೆ ಕೌಸಲ್ಯೆ । ಮೇದಿನೀ ಸುತೆಯ ತೆಗೆದಪ್ಪಿ ಸಂತೈಸಿ ಕಂಬನಿಯ ಸೆರಗಿನಿಂದ ತೊಡೆದು ॥ ಆದರಿಸುತವರು ಮೂವರು ಜನನಿಯರು ಸಹಿತ । ಪೋದರಾ ನದಿಯೆಡೆಗೆ ಗುರುಮುಖದಿ ಸ್ನಾನ ಕ । ರ್ಮಾದಿಗಳ ರಚಿಸಿದರು ವಿಪ್ರ ಮುಖದಿಂದ ವಿಧಿ ವಿಹಿತದಿಂ ನ್ಯಾಯದಿಂದ ॥ ೧ ॥ ವೇದೋಕ್ತ ಮಂತ್ರದಿಂದ ಪರ ಕರ್ಮಂಗಳಂ । ಸಾಧಿಸಿಯೆ ದಾನ ದಕ್ಷಿಣೆ ಹೋಮ ನೇಮದಿಂ । ಮೇದಿನೀಶಗೆ ಸ್ವರ್ಗವಂ ಕೊಳಿಸಿ ಸಕಲ ಪಿತೃಜನವ ಸಂತುಷ್ಟಿಪಡಿಸಿ ॥ ಆ ದಿವಸ ಉಪವಾಸದಿಂದಿರ್ದು ಮರುದಿನದೊಳಾ ದಯಾಂಬುಧಿ ರಾಮ ಕೌಸಲ್ಯೆ ಸುಮಿತ್ರೆಯರ । ಪಾದಕೆರಗುತ ಸಕಲ ಮುನಿ ಜನರ ಮುಂದೆ ಧೈರ್ಯೋದ್ಧಾಮನಿಂತೆಂದನು ॥ ೨ ॥

### ತೋಡಿ ರಾಗ - ಏಕತಾಳ

ಬಂದುದು ಲೇಸಾಯಿತು ನೀವು । ಹೀಗಾದ ಮೇಲೆ । ನೊಂದು ಮಾಳ್ಪುದಿನ್ನೇನು ನಾವು ॥ ಎಂದಿಗಾದರೊಂದು ದಿನ ಸಿದ್ಧ । ಈ ದೇಹ ನಾಶ । ಹೊಂದದದೇ ನಿಲ್ಲದಿರು ಬದ್ಧ ॥ ೧ ॥ ನೋವು ಸಂತೋಷವೆಂಬು ದೆಲ್ಲ । ಸಂಸಾರಿಗಳಿ । ಗಾವರಿಗಾದರು ಉಂಟಲ್ಲ ॥ ಸಾವು ಹುಟ್ಟು ಸುಖ ದುಃಖಗಳು । ಅರಿಯದ ಹಾಗೆ । ನೀವು ಚಿಂತಿಸುವುದೇತಕೆ ॥ ೨ ॥ ಭರತನ ಮಾತೊಂದ ವಿಚಾರದೆ । ಸೂರ್ಯವಂಶದ । ದೊಡ್ಡತನಕ್ಕೆ ಕುಂದು ತಾರದೆ ॥

ಅರಿತು ದಾನ ಧರ್ಮಂಗಳಲ್ಲಿ । ಕಡಿಮೆಯೆನಿಸದೆ । ನಿರಿತನದಿಂದಾಳಿ ನೀವಲ್ಲಿ ॥ ೩ ॥ ತೆರಳಿ ನೀವೆಲ್ಲ ಊರಿಗೆ , ನಾವು ಈರೇಳು । ವರುಷದ ಮೇಲ್ ಬಹೆವಲ್ಲಿಗೆ ॥ ತರಳ ಶತ್ರುಘ್ನನು ನೀನು । ಒಡೆ ಬುದ್ಧಿಯೊ । ಳಿರುತೆಮ್ಮ ರಾಜ್ಯವ ನೀನಾಳು ॥ ೪ ॥ ಕಂದ ಪೋಗಯೋಧ್ಯಾನಗರಕ್ಕೆ । ಆನೆ ಕುದುರೆ । ಮಂದಿ ರಾಜ್ಯವನಾಳಾವುದಕ್ಕೆ ॥ ಅಂದಿನ ದಿನಕೆ ನಾನು ಲಕ್ಷ್ಮಣ । ಜಾನಕಿ ಸಹಿತ । ಬಂದೇನು ಪಟ್ಟಣಕೆ ತತ್‌ಕ್ಷಣ ॥ ೩ ॥

### ಕೇದಾರಗೌಳ ರಾಗ - ಅಷ್ಟ ತಾಳ

ಅಣ್ಣ ನೀವ್ ಮೂವರಾರಣ್ಯದೊಳಿರುವಾಗ । ಬಣ್ಣವೆ ತನಗೆ ಊರು ॥ ಪುಣ್ಯ ಪುರುಷ ನಿನ್ನ ಪಾದವ ಬಿಡೆನೆಂದು । ಕಣ್ಣನೀರನು ತುಂಬಿದ ॥ ೧ ॥ ಹೆಮ್ಮಕ್ಕಳೊಳಗೆ ಗಯ್ಯಾಳಿ ಕೈಕಯಿ ದೇವಿ । ತಮ್ಮ ನಾಡಿದ ಮಾತಿಗೆ ॥ ಸಮ್ಮನೆ ರಾಜ್ಯವ ಬಿಡುವುದು ನೀತಿಯೆ । ನಿಮ್ಮ ಮನಸಿನೊಳಗೆ ॥ ೨ ॥ ನಿರ್ಮಲದಲಿ ಜ್ಯೇಷ್ಠ ಸುತನಿರಲಾತನ । ತಮ್ಮಗೆ ರಾಜ್ಯವುಂಟೆ ॥ ಸಮ್ಮತವಲ್ಲದಿದ್ದರೆ ನಾನಯೋಧ್ಯೆಗೆ । ಜನ್ಮಾಂತರಕೂ ಪೋಗೆ ॥ ೩ ॥ ಕೋಪಿಸಿಕೊಂಡು ನೀ ಜರೆದರೆ ದಿಟವಾಗಿ । ಪೋಪೆ ಮತ್ತೊಂದೂರಿಗೆ ॥ ಭೂಪ ನಿನ್ನಂತರಂಗವೆ ಸಾಕ್ಷಿಯಿದಕೆಂದು । ತಾಪದಿ ನಿಂದಿರ್ದನು ॥ ೪ ॥

### ಕಂದ

ಎಂದಾ ಭರತನ ಮಾತಿಗೆ । ಅಂದೆಲ್ಲರು ಬದ್ಧವೆಂದು ಕರಗಳ ಮುಗಿಯಲ್ ॥ ಬಂದಾ ಕೈಕಯಿ ದೇವಿಯು । ಚಂದದಿ ರಾಮನೊಡನೆಂದ ಳೊಂದುತ್ತರಮಂ ॥

### ಬೇಹಾಗ್ ರಾಗ - ಅಷ್ಟ ತಾಳ

ಮಂಥರೆಯ ಮಾತ ಕೇಳಿ । ಮಂದ ಬುದ್ಧಿಯಿಂದ ನಾನು । ಎಂದ ಮಾತಂತರಂಗಕ್ಕೆ । ತಂದುಕೊಳ್ಳಬೇಡ ರಾಮ ॥ ಮಂಥರೆ ॥ ೧ ॥ ಬಂದ ಯೋಧ್ಯಾಪುರಕೆ ತ । ಮ್ಮಂದಿರ ನೀ ಕೂಡಿಕೊಂಡು । ಚಂದದಿಂದ ರಾಜ್ಯ ವಾಳು । ಎಂದೊಡಂಬಡಿಸಿದಳು ॥ ಮಂಥರೆ ॥ ೨ ॥

ವಚನ

ಇಂತೆಂದ ಕೈಕಯಿಯ ಮಾತಿಗೆ ಶ್ರೀರಾಮನು ಉತ್ತರವಂ ಕೊಡದೆ ಭರತನ ಕೂಡೆ ಏನೆಂದನು ಎಂದರೆ -

ಭೈರವಿ ರಾಗ - ಝಂಪೆತಾಳ

ತಮ್ಮ ಕೇಳಿನ ಕುಲದ । ರಾಯರಲಿ ಜನಿಸಿರ್ದು । ಧರ್ಮವೆ ಸತ್ಯವನು । ಬಿಟ್ಟು ನಡೆಯುವುದು ॥ ೧ ॥ ಪಿತನ ವಾಕ್ಯವ ಮೀರಿ । ಪಿಂತೆ ನಡೆದವರುಂಟೆ । ಅತಿರೇಕವಿದು ಲೋಕ । ಕತಿ ಚೋದ್ಯವಮ್ಮ ॥ ೨ ॥ ಹದಿನಾಲ್ಕು ವತ್ಸರದ । ತುದಿಯ ಮರುದಿನ ಬಂದು । ಒದಗುವೆನು ಪಟ್ಟಣಕೆ । ಇದು ಕಪಟವಲ್ಲ ॥ ೩ ॥ ಅನಿತು ದಿನ ರಾಜ್ಯವನು । ಆಳಿ ಕೊಂಡಿರು ನೀನು । ಮನಸಿನೊಳಗನು ಮಾನ । ಮತ್ತೇನು ಬೇಡ ॥ ೪ ॥ ಎನ್ನೊಡನೆ ಜನಿಸಿರ್ದ । ತಮ್ಮನಾದರೆ ನೀನು । ಎನ್ನ ಮಾತನು ಕೇಳು । ಎರವಿಲ್ಲದಾಳು ॥ ೫ ॥

ಕಂದ

ಈ ಪರಿಯಿಂದಲಿ ತಮ್ಮನ । ಭೂಪಾಲಕ ದೈನ್ಯದಿಂದ ಒಡಬಡಿಸಲ್ಕಂ ॥ ಕೋಪಿಸಿಕೊಂಡಗ್ರಜನೊಳು । ಚಾಪವ ಹಸ್ತದಲಿ ಪಿಡಿದು ಮತ್ತಿಂತೆಂದಂ ॥

ವಸಂತ ಭೈರವಿ ರಾಗ - ಏಕತಾಳ

ಅಣ್ಣ ಕೇಳೀರೇಳು । ವರುಷದ ಮರುದಿನ । ಉಣ್ಣದಿರ್ಪೆನೊಂಭತ್ತು । ತಾನು ಪರಿಯಂತ ॥ ೧ ॥ ಅಗ್ರಜ ನೀವಷ್ಟ । ರಲಿ ಬಾರದಿದ್ದರೆ । ಅಗ್ನಿ ಕುಂಡದೊಳಳಿವೆ । ನಿನ್ನಾಣೆ ದಿಟವು ॥ ೨ ॥ ಮರೆತುಹೋಗದೆ ದಿನ । ವರಿತುಕೋ ಲಕ್ಷ್ಮಣ । ಶರತುದಿಯಲಿ ಬರೆ । ದಿರಿಸೊಂದು ಕಡೆಯ ॥ ೩ ॥ ಸೇವೆಗನುತ ತನ್ನ । ಪಾವನಾಂಘ್ರಿಯೊಳಿಟ್ಟ । ಹಾವುಗೆಯನು ಕೊಟ್ಟು । ಹರಸಿ ಬೀಳ್ಕೊಟ್ಟ ॥ ೪ ॥

ಭಾಮಿನಿ

ಜನಕಜಾಸುತ ಕೇಳು ಕೈಕಯಿ । ತನುಜ ತೆರಳಿದ ಬಳಿಕ ತಿಂಗಳು । ದಿನವ ಕಳೆದರು ವಿಪಿನ ವಿಲಸಿತ ಚಿತ್ರಕೂಟದಲಿ ॥ ವನಿತೆ ಸಹಿತ ತದೀಯ

ಶೈಲದ । ವನವಿಹಾರೋದ್ಯೋಗ ಕೇಳೀ । ಜನಿತ ಮಾನಸನಾಗಿ ತೊಳಲಿದ ನಡವಿಯಲಿ ರಾಮ ॥ ೧ ॥ ಬಂದನಿವರಾಶ್ರಮಕೆ ಲಕ್ಷ್ಮಣ । ನಿಂದ ಬಾಣಿಸ ವಾದ ನಾನಾ । ಕಂದಮೂಲ ಫಲಂಗಳಲಿ ಕಳೆದರು ಮಹಾಕ್ಷುಧೆಯ ॥ ಕಂದ ಕೇಳ್ಕೆ ಬಳಿಕ ಸಮಯ ಎ । ದೆಂದು ಸಾರಿದನಿವರ ಶಾಪದ । ಲೊಂದಿ ಕೊಂಡಿರ್ದಾ ಜಯಂತನು ಕಾಕರೂಪದಲಿ ॥ ೨ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಸಾರುತಿದೆ ಪದ ಸೋಂಕಿಗಾ ಸತಿ । ಕ್ರೂರವಾಯಸಕಂಜಿ ಪತಿಯ ಶರೀರವನು ಬಿಗಿಯಪ್ಪುತಾಜರಿ । ಸಿದಳು ಭೀತಿಯಲಿ ॥ ೧ ॥ ವೀರ ಕೇಳ್ ವಾಯಸದ ಪದನಖ । ಧಾರೆ ಭುಜದಲಿ ಬೀಳೆ ಬಳಿಕಸು । ರಾರಿ ಕೋಪಿಸು ತಿಟ್ಟನಾ ಖಳ । ನನು ತೃಣಾಸ್ತ್ರದಲಿ ॥ ೨ ॥ ಆವ ದೇವರ ಮರೆಯ ಪೊಕ್ಕರು । ಕಾವ ದೇವರ ಕಾಣೆ ರಾಘವ । ದೇವನಸ್ತ್ರದ ಮಹಿಮೆ ಯೆಂತುಟೊ । ಶಿವ ಮಹಾದೇವ ॥ ೩ ॥ ಅರಿದು ಬಳಿಕಿಂದ್ರನು ಜಯಂತನ। ಜರೆದು ಕಳುಹಿದನೀ ಮಹಾಸ್ತ್ರವ । ತರುಬುವವರಿಲ್ಲಾ ಮಹಾತ್ಮನ । ಮರೆಯ ಪೋಗುಯೆನುತ ॥ ೪ ॥ ತಿರುಗಿ ಕಾಕಾಸುರನು ರಾಮನ । ಶರಣ ಜನ ವತ್ಸಲನೆ ನಿರುಪಮ । ಶರಣದೇಹಿಕ ದೇವ ತನ್ನನು । ಕಾಯ ಬೇಕೆಂದ ॥ ೫ ॥

### ಭಾಮಿನಿ

ಶರವಿದೆಮ್ಮದಮೋಘ ಮರೆಹೊ । ಕ್ಕರನು ಸಲಹುವ ಬಿರುದು ಸಂದಿಹು । ದೆರಡುಗುಣ ನಮಗೀ ಧರಿತ್ರಿಯೊಳೆಂದು ರಘುನಾಥ ॥ ಸರಳಿ ಗೊಂದವನಕ್ಷಿಯನು ಕೊ । ಡೆರಡು ಕಡೆಗೊಂದಾಲಿಯನು ಎ । ಸ್ತರಿಸಿ ಕರುಣದಲಾ ಜಯಂತನ ರಕ್ಷಿಸಿದ ರಾಮ ॥

### ಮಂಗಲಂ ಧವಳಾರ ರಾಗ - ಏಕತಾಳ

ಮಂಗಲ ಸೀತಾರಾಮನಿಗೆ । ಜಯ । ಮಂಗಲ ಮುನಿಜನ ಪ್ರೇಮ ನಿಗೆ ॥ ಮಂಗಲಂ ಜಯ ಮಂಗಲಂ ॥ ಪ ॥ ವೇದಗಳ್ ನಾಲ್ಕನು ತಂದವಗೆ । ಮೋದಿಸಿ ಬೆನ್ನೊಳು ಪೊತ್ತವಗೆ ॥ ಕ್ರೋಧದಿ ಹಿರಣ್ಯನ

ಸೀಳ್ದವಗೆ । ಅದ್ಭುತ ನರಹರಿಯಾದವಗೆ ॥ ಮಂಗಲಂ ಜಯ ಮಂಗಲಂ ॥ ೧ ॥ ಧರಣಿಯನಳೆಯಲು ಬಂದವಗೆ । ಧರಣೀ ಪತಿಗಳ ಕೊಂದವಗೆ ॥ ತರಣಿ ಕುಲಜ ಶ್ರೀ ರಾಮನಿಗೆ । ಗರುಡಗಮನ ಶ್ರೀಕೃಷ್ಣನಿಗೆ ॥ ಮಂಗಲಂ ಜಯ ಮಂಗಲಂ ॥ ೨ ॥ ನಿರ್ವಾಣದಲಿ ನಿಂತವಗೆ । ತೀವ್ರ ಗತಿಯ ಹಯ ವೇರುವಗೆ ॥ ಸರ್ವಕಾರ್ಯಗಳ ಕರ್ತೃವಿಗೆ ಸರ್ವೇಶ್ವರಗೆ ಸುರಾರ್ಚಿತಗೆ ॥ ಮಂಗಲಂ ಜಯ ಮಂಗಲಂ ॥ ೩ ॥

# ಪಂಚವಟಿ - ವಾಲಿಸುಗ್ರೀವರ ಕಾಳಗ

## ಭೂಮಿಕೆಗಳು

ರಾಮ
ಲಕ್ಷ್ಮಣ
ರಾವಣ
ಮಾರೀಚ
ರಾವಣ ಸನ್ಯಾಸಿ
ಜಟಾಯು
ಕಬಂಧ
ಸುಗ್ರೀವ
ವಾಲಿ
ಹನುಮಂತ
ಅಂಗದ
ಕಪಿಗಳು
ಮಾಯಾ ಮೃಗ
ಋಷಿಗಳು

ಶೂರ್ಪನಖಿ
ಮಂಡೋದರಿ
ಅಯೋಮುಖಿ
ಸೀತೆ
ಶಬರಿ
ತಾರೆ
ಮಾಯಾ ಶೂರ್ಪನಖಿ

---

# ಪಂಚವಟಿ - ವಾಲಿಸುಗ್ರೀವರ ಕಾಳಗ
## (ಅರಣ್ಯ ಕಾಂಡ - ಕಿಷ್ಕಿಂಧಾಕಾಂಡ)

### ಶಾರ್ದೂಲ ವಿಕ್ರೀಡಿತಂ

ರಾಮಂ ಲಕ್ಷ್ಮಣ ಸೇವಿತಂ ಜನಕಜಾ ಪ್ರೇಮೋಕ್ತಿ ಸಂಪ್ರೀರಿತಮ್ ।
ತಂ ಮಾರೀಚ ಮೃಗಾನುಧಾವನಚಣಂ ಭಾಮಾವಿಯೋಗಾಸ್ಪದಮ್
ಸೋಮಾಸ್ಯಾತ್ಮವಧೂವಿಮಾರ್ಗಣ ಪರಂ ಪ್ರಾಜ್ಞ್ಯಾರ್ಕಜೇಶಾರ್ಚಿತಮ್ ।
ಶ್ರೀಮದ್ವಾಲಿ ವಿಮುಕ್ತಿದಾನ ಚತುರಂ ಕಾಮಾಭಮೀಶಂ ಭಜೇ ॥

### ವಾರ್ಧಿಕ

ಭರತ ಚತುರಂಗಸೇನೆಯುನೆಲ್ಲ ಕರಕೊಂಡು । ಮರಳಿ ಶ್ರೀರಾಮಗಭಿವಂದಿಸುತ ಹಿಂತೆರಳೆ । ಬರೆ ಮಾತೆಯರು ಸಹಿತ ಗಂಗೆಯಂ ದಾಂಟಿ ಪುರವರಕೆ ಕಳುಹಿಸುತೆಲ್ಲರ ॥ ವರಮಂತ್ರಿಗಳಿಗೆ ಸೀಮೆಯು ಪಾರುಪತ್ಯಮಂ । ವಿರಚಿಸುತ ಶತ್ರುಘ್ನನಂ ಪುರದೆ ನಿಲಿಸಿ ನೆಲೆ । ಸಿರಲು ನಂದಿಗ್ರಾಮದೊಳಗಿತ್ತ ಶ್ರೀರಾಮ ಮುನಿಗಳೊಡನಿಂತೆಂದನು ॥

### ಶಂಕರಾಭರಣರಾಗ - ರೂಪಕತಾಳ

ಬಂದು ಬಹಳ ದಿವಸ ನಮ್ಮ । ನುಳುಹಿಕೊಂಡಿರಿ ॥ ಇಂದು ಪರ್ಯಂತ ಬಿಡದೆ । ಸಲಹಿಕೊಂಡಿರಿ ॥ ೧ ॥ ಮುಂದೆ ಪೋಪೆವಿನ್ನು ನಾವು । ಕಳುಹಿರೆಮ್ಮನು ॥ ಒಂದು ದಿನವು ಮರೆವುದಿಲ್ಲ । ಮನದಿ ನಿಮ್ಮನು ॥ ೨ ॥ ದಂಡಕಾರಣ್ಯದೆಡೆಗೆ । ದಾರಿಯಾವುದು॥ಹಿಂಡು ಮುನಿಗಳಿಪ್ಪವನದ । ತಂಡವಾವುದು ॥ ೩ ॥ ಎನುತ ರಾಮ ಕೈಯ ಮುಗಿವು । ತೆಂದ ಮಾತಿಗೆ ॥ ಮುನಿಗಳಿರುವ ವನದ ಗುರುತ।ಪೇಳ್ದರಾತಗೆ ॥ ೪ ॥ ಮುಂದೆ ರಾಮ ನಡುವೆ ಸೀತೆ । ಹಿಂದೆ ಲಕ್ಷ್ಮಣ ॥ ಅಂದು ಚಿತ್ರಕೂಟದಿಂದ । ಪೊರಟರಾಕ್ಷಣ ॥ ೫ ॥ ಬನ್ನಬಡಿಸಿ ಶಂಬುಕಾಸು । ರನನು ಗೆಲಿದರು ॥ ಬಿನ್ನವಿಸುವ ಋಷಿಗಳಾಶ್ರ । ಮವನು ಕಳೆದರು ॥ ೬ ॥

ವಾರ್ಧಿಕ

ಗಿರಿ ಸರಸಿ ಕಾನನಂಗಳ ಗುಹೆಯು ಕಲ್ಗಳೊಳು । ತೆರಳಿದರು ಬಹುದಿನ ದೊಳುಪವಾಸವಿರ್ದು ಬೇ । ಸರಿಸಿ ಚಳಿಗಾಳಿ ಮಳೆ ಬಿಸಿಲ ಝಳದೊಳಗೆಣ್ಣೆ ನೀರಿಲ್ಲದಿರುವಟ್ಟುಳಿ ॥ ಭರದ ನಿದ್ರೆಯು ತೊರೆದು.ರಾಕ್ಷಸರುಗಳ ಕಂಡು । ಪರಿ ಪರಿಯು ಸಿಂಹ ಶಾರ್ದೂಲ ಗರ್ಜನೆಯ ನಿ । ಷ್ಠುರತೆಯೊಳು ಬಸವಳಿವು ತೋಂದು ದಿನ ಕಾಂತನಿಗೆ ಧರಣಿ ನಂದನೆ ನುಡಿದಳು ॥

ಆನಂದ ಭೈರವಿರಾಗ - ಅಷ್ಟತಾಳ

ಕಾಂತರಾಮಚಂದ್ರ । ದೇಪ।ಚಿಂತೆ ಹೆಚ್ಚಿತೆನ್ನ ಜೀವ । ಅಂತರಿಸದಿರದು ಬೇಗ । ಎಂತು ನಡೆದು ಪೋಪುದೀಗ ॥ ಕಾಂತ ॥ ೧ ॥ ನಡೆಯಲಾರೆನಯ್ಯೊ ಮುಂದೆ । ಅಡವಿಯಲ್ಲೊ ನೋಡು ಹಿಂದೆ । ನಡುಗುತಿಹುದು ಕೈಕಾಲು । ಒಡೆದುದೇತಕಯ್ಯ ಹೇಳು ॥ ಕಾಂತ ॥ ೨ ॥ ಜನಕನನ್ನು ಕಾಣದೆನ್ನ । ಮನಸು ಬಹಳ ಕರಗುತಲಿದೆ । ಕನಸಿನಲ್ಲಿ ಕಂಡೆತಾಯ । ನೆನೆದು ಬಡವಾದೆ ಪ್ರಿಯ ॥ ಕಾಂತ ॥ ೩ ॥

ವಾರ್ಧಿಕ

ಬಸವಳಿದು ಸೀತೆ ಪ್ಯೆಗುಂದಿ ಕಾಲೊಡೆದು ನೆರೆ । ಬಸಿವರುಣಧಾರೆ ಯಲಿ ಬಟ್ಟೆ ಕೆಸರಾಯ್ತು ಮಾ । ತುಸಿರಲಾರದೆ ಬಿದ್ದಳಬುಜಾಕ್ಷಿ ತಲೆ ತಿರುಗಿ ಕಣ್ಣಾಲಿ ಮೇಲೆತ್ತಿತು ॥ ಕುಶನೆ ಕೇಳದನು ಲಕ್ಷ್ಮಣ ಕಂಡು ರಾಮನೊಡ । ನುಸಿರೆ ರಾಘವನೆತ್ತಿ ಕಮಲದೆಲೆಯಲಿ ನೀರ । ಪಸರಿಸಿಯೆ ಕಣ್ಗೊತ್ತಿ। ಅಮೃತ ಹಸ್ತದಿ ಪ್ಯೆಯ ತಡವರಿಸುತಿಂತೆಂದನು ॥

ಕಾಂಬೋಧಿಮಿಶ್ರರಾಗ - ಏಕತಾಳ

ದೃಷ್ಟಿಸಿ ನೋಡಿದೆಯೇನೋ । ತವಮ್ಮಾ ತಮ್ಮಾ ॥ ಜಾನಕಿ ಬಂದು । ಕಷ್ಟಬಟ್ಟಳಲ್ಲೊ ಬರಿದೆ । ತವಮ್ಮಾ ತವಮ್ಮಾ ॥ ಹೊಟ್ಟೆಗನ್ನವಿಲ್ಲದೆ ನಡೆದು । ತಮ್ಮಾ ತಮ್ಮಾ॥ ಆದರೀಂದಾ ಕಂ । ಗೆಟ್ಟು ಮೂರ್ಛೆಯಾದಳಲ್ಲೊ । ತಮ್ಮಾ ತಮ್ಮಾ ॥ ೧ ॥ ಜನಕನುದರದಲ್ಲಿ ಜನಿಸಿ । ತಮ್ಮಾ ತಮ್ಮಾ ॥ ಎನ್ನ ಕೈವಿಡಿದು । ಇನಿತು ಭಾಗ್ಯವುಂಡಳಲ್ಲೊ । ತಮ್ಮಾ ತಮ್ಮಾ॥ ಘನತೆಯಿಲ್ಲ ಮುಂದಿವಳಿಂದ

ತವಮ್ಮಾ ತವಮ್ಮಾ ॥ ಅಯೋಧ್ಯೆಯಲ್ಲಿ । ವನಿತೆಯನ್ನು ಬಿಟ್ಟುಬಾರೊ। ತವಮ್ಮಾ ತವಮ್ಮಾ ॥ ೨ ॥

ಸಾವೇರಿರಾಗ - ರೂಪಕತಾಳ

ರಘುಕುಲೇಂದ್ರ ರಾಮ ನಿನ್ನ । ಅಗಣಿತಾಶ್ರಯವನು ಬಿಟ್ಟು । ಅಗಲಲಾರೆ ನಿಮಿಷ ನಾನು । ಸುಮ್ಮನೇತಕೊ ॥ ೧ ॥ ನೀರ ನಿನ್ನ ನಿಲ್ಲಿ ಬಿಟ್ಟು । ಊರೊಳೇನು ಭಾಗ್ಯವುಣಲಿ । ಬೇರೆ ಮತಗಳಿಲ್ಲವಯ್ಯ । ನೀರ ಜೇಕ್ಷಣ ॥ ೨ ॥ ಎನಲು ಸೀತೆ ರಾಮನತ್ರಿ । ಮುನಿಪನಾಶ್ರಮಕ್ಕೆ ಬಂದು । ಘನವಿವೇಕದಿಂದ ಶಿಳಿದ । ಧರ್ಮಶಾಸ್ತ್ರವ ॥ ೩ ॥ ಅನಸೂಯಾದೇವಿ ವಿಭೂ । ಷಣವ ಕೊಡಲು ತೆಗೆದುಕೊಂಡು । ವನದಿ ಹರುಷದಿಂದ ಮುಂದೆ । ದಿನವ ಕಳೆದರು ॥ ೪ ॥

ವಾರ್ಧಿಕ

ತಿಂಗಳೊಂದತ್ರಿಮುನಿಯಾಶ್ರಮದೊಳಿದ್ದು ರಘು । ಪುಂಗವಂ ಬಳಿ ಕೆದ್ದನಲ್ಲಿಂದ ಮುಂದೆ ಕರು । ಣಂಗಳಿಂ ಜಮದಗ್ನಿಯಂ ಕಂಡು ಖಳ ವಿರಾಧನ ಮುರಿದು ಮಾರ್ಗದೊಳಗೆ ॥ ಕಂಗೊಳಿಪ ದಂಡಕಾರಣ್ಯಕೈತರದು ಶರ । ಭಂಗಋಷಿಯಂ ನುಡಿಸಿ ಮೈತ್ರಾವರುಣಿಯಲ್ಲಿ । ಸಂಗಡಿಸಿ ಕುಂಭಸಂಭವನಲ್ಲಿ ಗೈತರಲಗಸ್ತ್ಯ ಮುನಿ ಕಂಡಂದನು ॥

ರಾಗಬಿಲಹರಿ - ತ್ರಿವುಡೆತಾಳ

ರಾಮ ಹರೇ । ರಘುರಾಮ ಹರೇ ॥ ಪ ॥ ಭೂಮಿಪಾಲಕ ಚಾರು । ಶೀಲ ಸಜ್ಜನಪಾಲ ॥ ರಾಮ ಹರೇ ॥ ಅ ॥ ಖರದೂಷಣ ದಶ । ಶಿರ ಮುಂ ತಾದಸು । ರರ ಸಂಹರಿಸುವ । ಶರವೀ ಚಾಪ । ನೀ ಕೊಳುಭೂಪ । ರವಿ ಕುಲದೀಪ । ಸಂಪೂರ್ಣ ಪ್ರತಾಪ ॥ ರಾಮ ಹರೇ ॥

ಕಂದ

ಚಾಪವ ಕೊಟ್ಟು ಮುನೀಂದ್ರಗೆ । ಭೂಪಾಲಕ ಕೈಯ ಮುಗಿದು ಪೊರಟಲ್ಲಿಂದಂ ॥ ಈ ಪರಿ ವನಗಳ ಕಾಣುತ । ತಾ ಪರಮೋಲ್ಲಾಸದಿ ರಾಮ ಸೀತೆಗೆ ಪೇಳ್ದಂ ॥

### ದ್ವಿಪದಿ

ಕಂಡೆಯಾ ಜನಕಸುತೆ ಕಡು ವಿಚಿತ್ರಗಳ । ದಂಡಕಾವನದೊಳಿಹ ಸಕಲ ವಸ್ತುಗಳ ॥ ೧ ॥ ಇದೆ ಲವಂಗ ವಿಳಂಗ ಕುರವ ಕದಳಿಗಳು । ಇದೆ ಕಕ್ಕೆ ಕಲಕು ಕಮ್ಮರದ ನಿಕರಗಳು ॥ ೨ ॥ ಬಿದಿರು ಬಿಲ್ವ ತಮಾಲ ಮಾವು ಜಂಬೀರ । ಕದಳಿ ಪನಸ ಕಪಿತ್ಥ ದ್ರಾಕ್ಷಿ ಖರ್ಜೂರ ॥ ೩ ॥ ಕಾಡ್ಗೋಣ ಕಾಡೆಮ್ಮೆ ಕಾಡಾನೆಗಳನು । ಕಾಡ್ಗೋಳಿ ಕಾಡ್ನಾಯಿ ಮಾರ್ಜಾಲಗಳನು ॥ ೪ ॥ ಊರ್ಣಿ ಜಂಬುಕವು ಕೋಡಗಾದಿಗಳ । ಕರನಾಲ್ಕರಿಂದಿಪ್ಪ ಜೋಡುಮುಸುಡುಗಳ ॥ ೫ ॥ ಕಸ್ತೂರಿಮೃಗ ಚಮರಿ ಸಕಲ ಜಂತುಗಳ । ಇತ್ತಲಿದೊ ಮುಂಗುಸಿಯ ಪೊಗದ ಚೆಂದಗಳ ॥ ೬ ॥ ಶುಕಪಿಕಂಗಳ ನೋಡು ನುಡಿವ ವಚನಗಳ । ಪ್ರಕಟದಿಂ ವಿಪಿನದ ಸಮಸ್ತ ಪಕ್ಷಿಗಳ ॥ ೭ ॥ ಇಂತೆಂದು ತೋರಿಸುತಲಿವರು ನಡೆತಂದು ॥ ಸಂತಸದಿ ಪಂಚವಟಿಯನು ಪೊಕ್ಕರಂದು ॥ ೮ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ನೋಡಿ ನಿರ್ಮಲ ಜಲಸಮೀಪದಿ । ಮಾಡಿಕೊಂಡರು ಪರ್ಣಶಾಲೆಯ । ರೂಢಿಪಾಲರು ಪಂಚವಟಿಯೊಳಾ । ಕಾಡಿನೊಳಗೆ ॥ ೧ ॥ ವನದ ಫಲಗಳ ಕೊಯ್ದು ಲಕ್ಷ್ಮಣ । ದಿನದಿನದೆ ತಾ ತಂದುಕೊಡುವನು । ವನದೊಳತಿ ಸುಖದಿಂದ ಕಳೆದರು । ದಿನವ ಕೆಲವು ॥ ೨ ॥ ಒಂದು ದಿನವಲ್ಲಿರುವ ಋಷಿಗಳು । ಬಂದು ರಾಮನ ಚರಣಕೆರಗುತ । ಲೆಂದರಾ ರಾಕ್ಷಸರ ಕೃತ ನಿ । ರ್ಬಂಧಗಳನು ॥ ೩ ॥

### ಘರಜು ರಾಗ - ಅಷ್ಟತಾಳ

ಚಿತ್ತವಿಸಯ್ಯ ರಾಮ । ಧೂರ್ತ ದನುಜನೊಬ್ಬ ಬಂದು । ವ್ಯರ್ಥ ವಂಚಿಸುತ್ತ ನಮ್ಮನು । ಯಜ್ಞಶಾಲೆಯ । ಕಿತ್ತು ಬಿಸಾಡಿಪೋದನು ॥ ೧ ॥ ಮತ್ತೊಬ್ಬ ಖಳನು ದೂರ । ನಿತ್ತುಕೊಂಡು ಕಲ್ಲಲಿಟ್ಟು । ಹತ್ತುಗಾಯವ ಮಾಡಿದ । ಮೂಗಿಂದ ಬಹ । ನೆತ್ತರವ ನೀ ನೋಡಿದ್ಯಾ ॥ ೨ ॥ ಘಂಡ ದೈತ್ಯರಿಬ್ಬರು ಮುಂ । ಕೊಂಡು ಬಂದು ನಮ್ಮ ಯಜ್ಞ । ಕುಂಡಕೆಂಜಲ ನಿಟ್ಟರು । ವ್ಯಾಘ್ರಚರ್ಮವ । ಕೊಂಡು ಕೂಡಿ ಓಡಿಪೋದರು ॥ ೩ ॥ ಮೂರು ಮಂಡೆಯವನೊಬ್ಬ । ಘೋರದಾನವನು ಬಂದು । ನಾರುವಸ್ತ್ರವ ಸೆಳೆದ । ಜಪಗಳ ಮಾಳ್ಪ । ಹಾರವ ಕಡಿದೋಡಿದ ॥ ೪ ॥

ವಾರ್ಧಿಕ

ಎಂದು ಹುಯ್ಲಿಟ್ಟ ಋಷಿಗಳ ಮಾತ ಕೇಳ್ದು ರಘು । ನಂದನನು ನಸುನಗುತ ಬೆದರದಿರಿ ರಕ್ಕಸರ । ಕೊಂದು ಕೊಡುವೆನು ತಾಳಿ ಕಿರಿದು ದಿನ ದೊಳಗೆ ತಾನೆಂದೊಡಂಬಡಿಸಿ ಬಳಿಕ ॥ ಹಿಂದೆ ಕಳುಹಿದನವರ ಸಂತೈಸಿ ಮುನಿ ವಧುಗ । ಳೆಂದ ಮಾತು ನೆನೆದು ಜನಕಸುತೆ ಭೀತಿಯಲಿ । ನೊಂದು ಕೊಡುವಳಾಗಿ ಭಯದಿಂದ ಕಾಂತನೊಳು ಕರವ ಮುಗಿದಿಂತೆಂದಳು ॥

ಯರಕಲ ಕಾಂಬೋಧಿ ರಾಗ - ಆದಿತಾಳ

ವನಜಲೋಚನ ಕೇಳ್ಮುಂದೆ । ಘನವಾದ ಘೋರಡವಿಯಂತೆ । ಅನು ವಿಲ್ಲದ ಗಹ್ವರವಂತೆ । ಅಲ್ಲಿ ರಕ್ಕಸರು । ಮನೆಮಾಡಿಕೊಂಡಿಹರಂತೆ । ಹಿಂದೆ ಅನೇಕ । ವನಿತೆಯರು ಸಿಕ್ಕಿಹರಂತೆ ॥ ಈ ವಿಪಿನದೊಳಿರುವುದು ಕಷ್ಟ ರಾಘವ ॥ ೧ ॥ ರಾತ್ರಿಂಚರನಾಥನಾಗಿ । ಮತ್ತೊಬ್ಬ ಖಳನಿರುವನಂತೆ । ಮಸ್ತಕಗಳು ಹತ್ತುಂಟಂತೆ । ಆ ಮೇಲವಗೆ । ಹಸ್ತಗಳಿಪ್ಪತ್ತುಂಟಂತೆ । ಹೆಣ್ಣುಗಳೆಂಬ । ಪಿತ್ತತಲೆಗೇರಿಹುದಂತೆ ॥ ಈ ವಿಪಿನದೊಳಿರುವುದು ಕಷ್ಟ ರಾಘವ ॥ ೨ ॥

ವಾರ್ಧಿಕ

ಅಗ್ಗಳದ ದನುಜರಟ್ಟುಳಿಯನಾಲಿಸಿ ರಾಮ । ಶೀಘ್ರದಿಂ ಜನಕ ನಂದನೆಗೆ ಧೈರ್ಯವನೊರೆವು । ತುಗ್ರಶರಚಾಪವಂ ಕೈಯೊಳಗೆ ಪಿಡಿದು ಶೌರ್ಯಾಗ್ನಿಯಿಂ ಪ್ರಜ್ವಲಿಸಲು ॥ ಭೋರ್ಗರೆವ ರಕ್ಕಸರ ದಂಡು ಬಾಯ್ಬಿಟ್ಟೊದರೆ । ನಿರ್ಘೋಷದಬ್ಬರದ ಗಮಕದಾರ್ಭಟೆಯ ಸಿಡಿ । ಲಬ್ಬರದ ಬೊಬ್ಬೆಯಿಂ ಶೂರ್ಪನಖಿ ಬಂದಳಾ ಕಾನನಕೆ ಕುಲಗೇಡಿಯು ॥

ಕಲ್ಯಾಣಿ ರಾಗ - ಅಷ್ಟತಾಳ

ಆರೆಲೊ ಮನುಜ । ವನದೊಳಿಪ್ಪ । ನಾರೆಲೊ ಮನುಜ ॥ ಪ ॥ ಬಾರಿಬಾರಿಗೆ ಮೈಯ ವಾಸನೆ । ತೋರುತಿದೆ ಹೊಸಗಮರು ನಿಶಿಚರ ॥ ವೀರರೆಲ್ಲರು ಬನ್ನಿರೆಮ್ಮಯ । ಪಾರಣೆಗೆ ತುತ್ತಾಗಿ ಬಂದವ ॥ ನಾರೆಲೊ ಮನುಜ ॥ ೧ ॥ ಇಷ್ಟುಕಾಲದೊಳೊಬ್ಬರಿಲ್ಲಿಗೆ । ಥಟ್ಟನೇ ತನಗಂಜಬಾರರು ॥ ದಿಟ್ಟರಿವರಿಂದಾರು ನೋಳ್ಪರೆ । ದೃಷ್ಟಿ ಗೋಚರವಿಲ್ಲ ಬಂದವ ॥ ನಾರೆಲೊ

ಮನುಜ ॥ ೨ ॥ ಬಿಂಡಬಿಂಡವ ಜೇರಿ ಜೇರೀ । ತುಂಡುತುಂಡಾಗೆಸಗಿ ನುಂಗುವೆ । ಕೆಂಡದಲಿ ಸುಟ್ಟವರೆಲುಬುಗಳ । ಸುಂಡು ತೇಗುವೆ ನೀಗ ಬಂದವ । ನಾರೆಲೊ ಮನುಜ ॥ ೩ ॥

## ಮತ್ತೇಭವಿಕ್ರೀಡಿತಂ

ಇಂತಾ ರಾಕ್ಷಸಿ ಭೀಕರಾಕೃತಿಯೊಳಂ ಕೂಗಿಟ್ಟು ಬಂದಿರ್ದಳಾ । ಪೃಥಿವೀ ಕುಗ್ಗಿತು ಪರ್ವತಂಗಳದುರಲ್ ನಾಲ್ದೆಸೆಗಳಂಜುತ್ತಲೇ ॥ ಅತಿ ಬೇಗಂ ರಘುವೀರ ಚಾಪಶರಮಂ ಪಿಡಿಯಲ್ಕೆ ಕಂಡಾಗಳಾ । ಮಿಥಿಲೇಂದ್ರ ಕುಲಜಾತೆಯಂಜಿ ಬಳಿಕಂ ತಾ ಕಾಂತಗಿಂತೆಂದಳೊ ॥

## ಘಂಟಾರವ ರಾಗ - ತ್ರಿವುಡೆತಾಳ

ರಾಘವ ನೀ ಎನ್ನ ಬಿಟ್ಟು । ಪೋಗದಿರಯ್ಯ । ಈಗ ಬಂದಳು ರಾಕ್ಷಸಿ । ಕೂಗುತಾಳೆ ಆರ್ಭಟಿಸಿ ॥ ರಾಘವ ॥ ೧ ॥ ಲಕ್ಷ್ಮಣ ತಾನೆಲ್ಲಿದ್ದಾನೊ । ರಾಕ್ಷಸಿಯ ಕಂಡನೇನೊ । ದಾಕ್ಷಿಣ್ಯವಿಲ್ಲವೆ ನಮ್ಮ । ಭಕ್ಷಿಸುವಳು ನೋಡು ನೀನು ॥ ರಾಘವ ॥ ೨ ॥ ವ್ಯರ್ಥವಾಗಿ ಬಂದೆವು ಮುನಿ । ಪೋತ್ತಮರ ಮಾತಮೀರಿ । ಮೃತ್ಯು ಮುಂದೆ ಬಂದಳ್ಮಾರಿ । ತುತ್ತುಗೊಂಬಳೀಸಾರಿ ॥ ರಾಘವ ॥ ೩ ॥

## ತೋಡಿರಾಗ - ಏಕತಾಳ

ಅಂಜಬೇಡೆಲೆ ಸೀತೆ । ಮಿಥಿಲೇಂದ್ರ ಕುಲಜಾತೆ । ಭಂಜಿಸುವೆ ರಾಕ್ಷಸಿಯ । ಕುಂಜರಗಮನೆ ॥ ೧ ॥ ಕಣ್ಣ ಮುಚ್ಚಿಕೊ ನೀನು । ಕಾಡರೂಪಿನವ ಇವಳ । ಹೆಣ್ಣು ಮೂಳಿಯ ಕೊಂದು । ಮಣ್ಣಗೂಡಿಸುವೆ ॥ ೨ ॥ ಎದು ಧೈರ್ಯವ ಪೇಳೆ ॥ ಬಂದು ರಾವಣನ ದೂರ । ದಿಂದ ನೋಡಿದಳಸುರೆ । ಚಂದವಾಗಿರಲು ॥ ೩ ॥ ಕಂಡರೆ ಮದನನಂಥ । ಗಂಡುಸಾಗಿಹನೀತ । ಕೊಂಡೊಯ್ಯು ಮನೆಗೆನ್ನ ॥ ಗಂಡನಂ ಮಾಳ್ಪೆ ॥ ೪ ॥

## ದ್ವಿಪದಿ

ಎನುತ ನಿಜಮನದೊಳಗೆ ಯೋಚನೆಯ ಮಾಡಿ । ಘನವಾದ ದೇಹ ವನು ಕುನಿಸಿ ಮರೆಮಾಡಿ ॥ ೧ ॥ ಮಾಯಕದ ರೂಪಿನಲಿ ಮತ್ತೊಂದು ಬಗೆಯ । ಕಾಯವನು ಧರಿಸಿದಳು ಕಪಟದಾಕೃತಿಯ ॥ ೨ ॥ ಹದಿನಾರು

ವತ್ಸರದ ಹೆಣ್ಣಾದಳವಳು । ಮುದದಿಂದ ಶೃಂಗಾರವಾಗಿ ಮತ್ತವಳು ॥ ೩ ॥ ಪೂಗೋಲನುರು ಪಟ್ಟದಾನೆಯುಂದದಲಿ । ರಾಘವನ ಬಳಿಗೆ ನಡೆತಂದಳೊಲವಿನಲಿ ॥ ೪ ॥ ಕರವ ಮುಗಿದಳು ಬಳಿಕ ಕಂಡು ರಘುಪತಿಯ । ಅರುಹಿದಳು ಕಾರ್ಯಗಳ ಅಂತರ ಸ್ಥಿತಿಯ ॥ ೫ ॥

### ಗೌಳರಾಗ - ಆದಿತಾಳ

ರಾಘವ ನರಪತೇ । ಶೃಣುಮಮ ವಚನಂ । ನೀ । ಗುಣನಿಧಿಯೆಂದು । ನಿನ್ನ ಸೇರಿದೆ ಬಂದು ॥ ರಾಘವ ॥ ಪ ॥ ಅತಿಕುಲವತಿ ನಾನು ॥ ಪೃಥಿವಿ ಪಾಲಕ ನೀನು । ರತಿದೇವಿಗೆಣೆ ನಾನು । ಮನುಮಥ ನೀನು ॥ ರಾಘವ ॥ ೧ ॥ ಸರಸಿಜಾಂಬಕಿ ನಾನು । ತರಣಿಪ್ರಕಾಶ ನೀನು । ವರ ಬಿಂಬಾಧರೆ ನಾನು ಅರಗಿಣಿ ನೀನು ॥ ರಾಘವ ॥ ೨ ॥ ಕವಲು ಮನವ ಬಿಟ್ಟು । ತವಕದಿ ದಯವಿಟ್ಟು । ಸವಿ ತಂಬುಲವ ನೀಡು । ಸರಸ ಮಾತಾಡು ॥ ರಾಘವ ॥ ೩ ॥ ಎಲ್ಲಿ ನೋಡಿದರೆನ । ಗಿಲ್ಲ ಒಪ್ಪುವ ಜನ । ಬಲ್ಲತನದಿ ನೆರೆಯೊ । ಬಲುಬೇಗ ಕರೆಯೊ ॥ ರಾಘವ ॥ ೪ ॥

### ಕಾಂಬೋಧಿ ರಾಗ - ಏಕತಾಳ

ಮದನನ ಪಟ್ಟದ ರಾಣಿ । ಮೊದಲೆ ಬಂದುದಿಲ್ಲ ॥ ಚದುರೆ ಸಣ್ಣವಳೊಬ್ಬಳ । ಮದುವೆಯಾದನಲ್ಲ ॥ ೧ ॥ ಒಂದು ಚೂರಿಗೆರಡು ಒರೆಯು ಹೊಂದುವುದೆ ಪೇಳು । ಮುಂದಗಮನೆ ಪೇಳ್ವೆ ನಿನಗಿ । ನೊಂದು ಯತುನ ಕೇಳು ॥ ೨ ॥ ನಮ್ಮಿಂದ ನೂರ್ಮಡಿ ಚೆಲುವ । ತಮ್ಮನಿಗೆ ಪ್ರಾಯ । ಗಮ್ಮನೆ ನೀ ಪೋಗಿ ತೋರು । ನಿನ್ನಲ್ಲಿದ್ದುಪಾಯ ॥ ೩ ॥ ವಂಚನೆಯಿಲ್ಲದೆ ಪೋಗು । ಚಂಚಲಾಕ್ಷಿ ಬೇಗ ॥ ಪಂಚಬಾಣನುರುಬೆಯಿಂದ । ಮುಂಚೆ ಕೂಡುವನೀಗ ॥ ೪ ॥

### ಭೈರವಿ ರಾಗ - ರೂಪಕತಾಳ

ಭರದಿಂದ ಬಂದಳಬ್ಜಲೋಚನೆ । ರಾಮಚಂದ್ರ ಹೇಳಿದಂಥ ಮಾತಿ । ನಂದವನ್ನು ಬಣ್ಣಿಸುತ್ತ ॥ ಭರ ॥ ಪ ॥ ಕನ್ನಡಿಯನು ತೆಗೆದು ನೋಡುತ । ಮೊಗವು । ಚೆನ್ನಾಗಿಹುದೆಂದತಿ ನಗಾಡುತ । ಮತ್ತೆ ।

ತನ್ನೊಳ್ವ್ಯಾನೆ ಮಾತನಾಡುತ । ತನಗೆ । ಕನ್ಯೆಯರೊಳಗೆಣೆಯಿಲ್ಲೆನ್ನುತ ॥ ಭರ ॥ ೧ ॥ ಕುರುಳ ಕೈಬೆರಳಿಂದ ತಿದ್ದುತ । ಪುಷ್ಪ । ಸರದ ಪರಿಮಳ ದೊಳೋಲಾಡುತ । ಮುಂದು । ವರಿದ ತಿಲಕ ಸೆರಗಿಂದೊರೆಸುತ । ನೋಡಿ । ತರಳ ಲಕ್ಷ್ಮಣನೆಡೆಯ ಹೊದ್ದುತ ॥ ಭರ ॥ ೨ ॥

### ಮಿಶ್ರತೋಡಿರಾಗ - ಅಷ್ಟತಾಳ

ಕಾಮಸನ್ನಿಭ ಮಾತ ಕೇಳು । ಪೇಳಿ । ರಾಮ ಕಳುಹಿದ ಖಿದಿ ನೊಳು । ನಾ ಮನವಿಟ್ಟು ಕೃಪಾಳು । ನಿನ್ನೊ । ಳ್ಕಾಮಿಸಿ ಖಂಡೆ ಮೋಹ ದೊಳು ॥ ಇನ್ನು ತಾಮಸಗೊಳದಿರು ॥ ತಾಳೆಲಾರೆಮ ನೀಸು । ಪ್ರೇಮ ದಿಂದಲೆ ಕೂಡು । ಸರಸ ಮಾತಾಡು ॥ ೧ ॥ ನೆರೆಮನಸಿನ್ನ ಮೇಲಿಟ್ಟು । ಇಕ್ಕೊ । ಗುರುಕುಚವೆರಡ ನೀ ಮುಟ್ಟು । ನೆರೆದ ಚೆಂದುಟಿಗೆ ಬಾಯಿಟ್ಟು । ಚ । ಪ್ಪರಿಸು ಸುರತಸುಖಕೊಟ್ಟು ॥ ಎನ್ನ । ವಿರಹವ ನಿಲಿಸು ಕಾ । ತರವನ್ನು ಮರೆಸು ಕ । ಣ್ದೆರೆದೆನ್ನ ನೋಡು ಕಾ । ರುಣ್ಯದಿಂದಲೆ ಕೂಡು ॥ ೨ ॥

### ಮಿಶ್ರಬಿಲಹರಿ ರಾಗ - ಅಷ್ಟತಾಳ

ಮಂದಗಮನೆ ಇಂಥಾ ಸುದ್ದಿ । ಯೊಂದನೆನ್ನೊಳಾಡದಿರು । ಮುಂದೆ ಬ್ರಹ್ಮಚಾರಿ ನಾ ಕಾಣೆ ॥ ಬಂದ ದಾರಿಗೆ ಸುಂಕವಿಲ್ಲ । ತಂದೆರಣ್ಣನ ಗುರುತ ವನ್ನು । ಚೆಂದದಿಂ ಕೂಡುವೆನೆಂದನು ॥ ೧ ॥ ಬಂದು ಮಾತನಾಡುತಿದ್ದಿ । ಕಂಡರತಿ ಚೆಲುವೆ ನಿನ್ನ । ಗಂಡನಾರು ದೇಶವಾವುದು ॥ ಪುಂಡರೀಕ ಲೋಚನೆ ಭೂ । ಮಂಡಲೇಶ ರಾಮದೇವರ । ಕಂಡುದೆಲ್ಲಿ ಪೋಗು ಸುಮ್ಮನೆ ॥ ೨ ॥ ಎಂದ ಮಾತ ಕೇಳಿ ಧೈರ್ಯ । ಗುಂದಿ ಕೋಪಾಕ್ರಾಂತ ಳಾಗಿ । ಬಂದಳು ಶ್ರೀರಾಮನಲ್ಲಿಗೆ ॥ ಚೆಂದವಾಯ್ತು ರಾಘವ ನಿ । ನ್ನಿಂದ ಬುದ್ಧಿವಂತ ತಮ್ಮ । ನೆಂದರಾ ಜಾನಕಿಯು ನಕ್ಕಳು ॥ ೩ ॥

### ಶಂಕರಾಭರಣ ಮಿಶ್ರರಾಗ - ಅಷ್ಟತಾಳ

ಏಕಪತ್ನಿಯ ವ್ರತ ನಿನಗೆ । ಬ್ರಹ್ಮಚಾರಿತ್ವ । ಸಾಕರಿಸುತಿದೆ ತಮ್ಮ ನಿಗೆ ॥ ಬೇಕಂತೆ ಗುರುತವಾತನಿಗೆ । ಪಾಲಿಸಯ್ಯ ಎ । ವೇಕದಿಂದನುಜ

ಲಕ್ಷ್ಮಣಗೆ ॥ ೧ ॥ ನಗೆಗೇಡ ಮಾಡಿದಿರಲ್ಲ । ಸುಮ್ಮನೆ ಬಂದು । ಹಗುರ ಮಾದೆನು ನಿಮಗಲ್ಲ ॥ ಹಗರಣಗೈವುದು ಸಲ್ಲ । ಎನ್ನ ವಂಚಿಸಿ । ಮಿಗುವರಿ ವುದು ಸಮನಲ್ಲ ॥ ೨ ॥ ಚದುರೆ ಬಾ ಬಾರೆಂದು ಕರೆದು । ರಾಮನಂಬಿನ । ತುದಿಯೊಳಗ್ಗೊಗನು ಕೊಯ್ಯಲ್ಬರೆದು । ಒದಗಿ ತೋರಿಸು ಬೆನ್ನ ಸರಿದು । ಈ ಕುರುಹ ನೋ । ಡಿದರೆ ಕೊಡುವ ನಲಿನಲಿದು ॥ ೩ ॥ ಎಂಬ ವಚನವನು ಕೇಳಿ ಕಡೆಗೆ । ರಾಮನ ಬಳಿ । ಯಿಂದ ಬಂದಳು ತಮ್ಮನೆಡೆಗೆ ॥ ವಂದಿಸಿ ದಳು ಪಾದದೆಡೆಗೆ । ಬೆನ್ನ ನೋಡು ನೋ । ಡೆಂದು ರಾಕ್ಷಸಿ ಪೇಳ್ದ ನುಡಿಗೆ ॥ ೪ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಅಣ್ಣನಾಜ್ಞೆಯ ನೋಡಿ ಲಕ್ಷ್ಮಣ । ತನ್ನ ಮನದಲಿ ತಾನೆ ನಗುತಲಿ । ಕನ್ನೆ ಪ್ರಾಯದ ಚದುರೆ ಬಾ ಪೋ । ಪನ್ನಕಾರಿ ॥ ೧ ॥ ಇತ್ತ ಬಾರೆಂದೆನುತ ಹಸ್ತವ । ನೆತ್ತಿ ತವಕದೊಳೆರಡು ಮೊಲೆಗಳ । ನೊತ್ತಿ ಎಳೆದಾ ಖಡುಗದಿಂ ದಲಿ । ಕತ್ತರಿಸಿದ ॥ ೨ ॥ ಕೆತ್ತಿದನು ನಾಸಿಕವನುದ್ದಕೆ । ರಕ್ತಮಾಂಸಗಳು ದುರೆ ಭಯದಲಿ । ಮತ್ತೆ ಕೂಗಿದಳಸುರೆ ಶರಧಿಯು । ಬತ್ತುವಂತೆ ॥ ೩ ॥ ನೋಡುವಳು ಮಾಂಸಗಳ ಮೊಲೆಯೊ । ಡಾಡುವಳು ಬಾಯ್ದೆಗೆದಸುರೆ ಹೊರ । ಳಾಡುವಳು ಮನದೊಳಗೆ ಜಾನಕಿ । ನೋಡಿ ಬೆದರೆ ॥ ೪ ॥

### ಮಾರವಿರಾಗ . ಅಷ್ಟತಾಳ

ರಾಘವ ಕೇಳು ಲೇಸಾಯಿ । ತೀಗ ನೀ ಮಾಡಿಸಿದುದು । ಆಗಲಾಗಲಿ ತಾಳು । ತಾಳದಕೇನು ॥ ೧ ॥ ಎನ್ನಗ್ರಜರಿಗಿದನೆಂದು ನಿನ್ನ । ಸತಿಯಳ ತಂದು । ಬನ್ನ ಬಡಿಸದಿದ್ದರೆ ನಾ। ಹೆಣ್ಣಿನ ಕುಲವೆ ॥ ೨ ॥ ಎತ್ತ ಹೋದರು ಬಿಡದೆ । ಮತ್ತೆ ನಿನ್ನ ಹೆಂಡತಿಯು । ನೆತ್ತಿಕೊಂಡೊಯ್ಯದಿರಲು । ಹೊತ್ತ ದ್ದು ಮೊಲೆಯೆ ॥ ೩ ॥ ಸೃಷ್ಟಿ ಈರೇಳರೊಳ್ಪ । ಚ್ಚಿಟ್ಟುಕೊಂಡಿದ್ದರಿವಳ । ಬಿಟ್ಟು ಹೋದೆನಾದರೆ ನಾನುಟ್ಟದ್ದು ಸೀರೆಯೆ ॥ ೪ ॥

### ವಾರ್ಧಿಕ

ಫಂಥಗಳನಾಡಿ ಮೊಲೆವೂಗಿನುರಿಗೌಷಧಿಯು । ಮಂತ್ರಗಳನೆಸಗಿ ಪೋಬೊದಳುತ ಕನಲಿ ತ । ನ್ನಂಶರಂಗದಲಿ ಹಗೆವಿಡಿದು ನಾನಾ ತೆರದಿ

ಚಿಂತಿಸುತ ನಡೆತಂದಳು ॥ ಎಂತಾದಡಾ ರಾಮಲಕ್ಷ್ಮಣರ್ಗಳಿಗೆ ಕೇ । ಡಂ ತಾರದಿರೆನೆಂದು ಶೀಘ್ರದಿಂದೈದಿ ವ್ಯ । ತ್ಯಾಂತಮಂ ಖರದೂಷಣಾದಿಗಳ ಬಳಿಯಲ್ಲಿ ನಿಂತುಕೊಂಡಿಂತೆಂದಳು ॥

### ತೋಡಿ ಮಿಶ್ರ ನೀಲಾಂಬರಿ ರಾಗ - ಏಕತಾಳ

ಅಣ್ಣ ಕೇಳಿಂತೆನಗಾದುದೆ । ಈ ಮಾನಭಂಗ । ಹೆಣ್ಣು ಜನ್ಮಕೊಡಗಿ ಪೋದುದೆ ॥ ಕಣ್ಣಾರೆ ನೋಡಬಾರದೆ । ಎನ್ನಯ ಮೈಯ । ಬಣ್ಣವ ಕಂಗಳಿಗೆ ತೋರದೆ ॥ ೧ ॥ ದಶರಥರಾಯನ ಮಕ್ಕಳಂತೆ । ಇಬ್ಬರು ತಮ್ಮ । ವಸುಧೆಯನು ಬಿಟ್ಟಿಹರಂತೆ ॥ ಅಸಮ ಸಾಹಸಿಗಳಾಗಿಹರಂತೆ । ಏನೆಂದು ವ । ರ್ಣಿಸುವೆನಯ್ಯೊ ರಾಘವನ ಕಾಂತೆ ॥ ೨ ॥ ತಮ್ಮನಾದ ಲಕ್ಷ್ಮಣನು ತಾನು । ಎನ್ನೆರಡು ಕುಚವ । ಸುಮ್ಮನೀಗ ಕೊಯ್ದು ಬಿಟ್ಟನು ॥ ಹೆಮ್ಮೆಯಿಂದ ಮೂಗ ತರಿದನು । ಎನ್ನಗ್ರಜರು । ನಿಮ್ಮಂತವರಿದ್ದೀಗಾದೆನು ॥ ೩ ॥ ಪುಂಡರೀಕನೇತ್ರೆಯೋರ್ವಳು ರಾಮಚಂದ್ರಗೆ । ಹೆಂಡತಿಯಾಗಿರುವಳವಳು ॥ ಕಂಡರೆ ರಂಭೆಯಂತಿರುವಳು । ವೇಗದಿ ಕದ್ದು । ಕೊಂಡು ಬಂದರೆ ನಿನಗಾಪಳು ॥ ೪ ॥

### ಭೈರವಿ ರಾಗ - ಝಂಪೆ ತಾಳ

ದುರುಳೆಯಾಡಿದ ನುಡಿಯ । ದುಷ್ಟ ಖರ ಕೇಳುತ್ತ । ಶಿರವ ತೂಗಿದನಂದು । ಹರ ಹರಾ ಎಂದು ॥ ೧ ॥ ತಂಗೀ ಪರಿ ಮಾನ । ಭಂಗವೆಸಗಿದ ಮೇಲೆ । ಏಂಗಡದಿ ನಾವಿದ್ದು । ಇನ್ನೇನು ಫಲವು ॥ ೨ ॥ ಅಸುರರೊಳಗಾರಿಹರು । ಅಸಮ ಸಾಹಸರೆಂದು । ಕುಶಲದೊಳು ಕರೆದೆಂದ । ತ್ರಿಶಿರನೆಂಬವನು ॥ ೩ ॥ ರಾಮಲಕ್ಷ್ಮಣರ ನಿ । ರ್ನಾಮವೆಸಗುತ ರಣದಿ । ಕಾಮಿನಿಯ ತಾರೆಂದ । ಕಡು ತವಕದಿಂದ ॥ ೪ ॥

### ಕಂದ

ಅಗ್ರಜನೆಂದುದ ಕೇಳ್ದು । ತ್ಯುಗ್ರದೊಳಾ ತ್ರಿಶಿರನಾಗ ಚಾಪವ ಗೊಳುತಂ ॥ ಶೀಘ್ರದಿ ಶ್ರೀರಾಮನ ವ । ರ್ಣಾಗ್ರಹದೆಡೆಗೈದಿ ನುಡಿದನತಿ ಗರ್ಜಿಸುತಂ ॥

ಭೈರವಿ ರಾಗ - ಮಟ್ಟೆ ತಾಳ

ಆರೆಲೋ ಮುಂದಿರುವ ಧೀರನೆ । ಸಂಗ್ರಾಮ ಶೂರ । ನಾರೆಲೋ ಮುಂದಿರುವ ಧೀರನೆ ॥ ಪ ॥ ಮೂರು ತಲೆಯನೀಕ್ಷಿಸೆನ್ನ । ಶೂರತನವು ಬೇಡ ನಿನ್ನ । ಬೇರು ಸಹಿತ ಕಡಿದು ಕಡಿದು । ಸೂರು ತುಂಡು ಮಾಳ್ಪೆ ನೀಗ ॥ ಆರೆಲೋ ॥ ೧ ॥ ತಂಗಿಯಾದ ಶೂರ್ಪನಖೆಯು ॥ ಪೆಂಗಳೆಂದು ನೋತದವಳ । ತುಂಗಕುಚವ ಕೊಯ್ದು ನಾಸಿ। ಕಂಗಳನ್ನು ತರಿದ ಮೂಢ॥ ಆರೆಲೋ ॥ ೨ ॥ ಪುಂಡ ಹುಡುಗ ಲಕ್ಷ್ಮಣನ । ಕಂಡ ಮಾತ್ರದಲ್ಲಿ ಅವನ । ಖಂಡಖಂಡ ಬಗಿದು ಸಿಗಿದು । ಕೆಂಡದಲ್ಲಿ ಸುಟ್ಟು ತಿನುವೆ ॥ ಆರೆಲೋ ॥ ೩ ॥

ನಾದನಾಮಕ್ರಿಯೆರಾಗ - ಮಟ್ಟೆ ತಾಳ

ಈ ಪರಿಯಲಿ ಭಾಷೆಗಳನು । ಭೂಪನೊಡನೆ ಪೇಳ್ದು ಕರದ । ಚಾಪವನ್ನು ನೆಗಹಿ ಶರವ । ಕೋಪದಿಂದ ಬಿಡಲು ರಾಮ । ಮಾಪುಗೈದು ತಿರುಗಿ ನೋಡಿದ । ಬಳಿಕ ಸುಪ್ರ । ತಾಪದಿಂದ ಶರವ । ಹೂಡಿದ ದನುಜ ರೊಡನಾ।ಟೋಪದಿಂದ ಯುದ್ಧ ಮಾಡಿದಾ ॥ ಆರೆಲೋ ಮದಾಂಧ ವೀರನೆ ॥ ೧ ॥ ಜಡಿದು ಚಾಪವನ್ನು ಬಾಣ । ಬಿಡಲು ಗಿರಿಗಳದುರುವಂತೆ । ನಡುಗೆ ಮುನಿಗಳಮರರಂಜೆ । ಧಡಿಗ ರಕ್ಕಸನುಬ್ಬಟಿಗೆ । ಮಡದಿ ಬಾಯ ಬಿಡುತ ಲಿರ್ದಳು । ಲಕ್ಷ್ಮಣಾಖ್ಯ । ನೆಡೆಗೆ ಬೇಗದಿಂದ ಸಾರ್ದಳು । ಧುರವ ಕಾಣು। ತೊಡನೆ ಮನದಿ ಬೆದರುತಿರ್ದಳು ॥ ಏನನೆಂಬೆನೆಂದಿನಾಹವ ॥ ೨ ॥ ದುಷ್ಟ ದನುಜನೊಡನೆ ತಾನ । ದೆಷ್ಟು ಕಾದಲೆನುತ ಶರವ । ಬಿಟ್ಟು ರಾಮ ರಣದೊಳಗಿ। ದ್ದಷ್ಟು ಬಲವನೆಲ್ಲ ಯಮನ। ಪಟ್ಟಣಕ್ಕೆ ಸೇರಿಸಿದನು । ಜನಕ ಸುತೆಗೆ । ನೆಟ್ಟ ಭಯವ ಹಾರಿಸಿದನು । ಮಡಿದ ಹೆಣನ । ಬೆಟ್ಟ ಸತಿಗೆ ತೋರಿಸಿದನು ॥ ಪೇಳಲೇನು ರಣಚರಿತ್ರವ ॥ ೩ ॥ ಈಸು ಬಲವನೆಲ್ಲ ಸವರಿ । ದಾ ಸಮರ್ಥಿಕೆಯನು ಕೇಳಿ । ದೋಸಗತಿಯೊಳಿವರ ಗೆಲುವ । ಭಾಷೆಯನ್ನು ಮಾಡಿ ಬಂದ ದೂಷಣಾಸುರನನು ಮಡುಹಿದ । ಅವನ ತಲೆಯ । ಘಾಸಿ ಮಾಡಿ ಧರಣೆಗಿಳುಹಿದ ॥ ರಘುಜ ಮಹೋ । ಲ್ಲಾಸ ದಿಂದ ಶರವ ತುಡುಕಿದ ॥ ಒರೆಯಲೇನು ಧುರದ ಭಂಗವ ॥ ೪ ॥

ವಾರ್ಧಿಕ

ಕುಶನೆ ಕೇಳಾ ದೂಷಣ ತ್ರಿಶಿರರೊಡನೆ ರಾ । ಕ್ಷಸರುಗಳು ಬಂದು ಕಾಳಗ ಕೊಟ್ಟು ಮಡಿಯೆ ನಾ । ಲ್ಕೆಸೆ ತುಂಬುವಂತೆ ಮಾರ್ಬಲ ಸಹಿತ ಖರನೆಂಬ ಅಸುರ ತಾನಿದಿರಾದನು ॥ ಮುಸಲದಲಗು ಕಣೆಯ ಕಂಪನ ಶೂಲ ಖಡ್ಗ ಪೇ । ರ್ಮುಸಲ ಮುದ್ಗರ ಪಿಂಡಿವಾಳ ಪಲ್ಲಿಹವಂಟ। ಪೆಸರಾಯುಧಂ ಗಳನು ಸಹಿತ ಮುಂದಿಳುಹುತಾರ್ಭಟಿಸಿದಾ ಕೋಪದಿಂದ ॥

ಪಂಚಾಗತಿ ರಾಗ - ಮಟ್ಟೆತಾಳ

ಘೋರ ರೂಪಿನಿಂದ ಖರನು । ಭಾರಿ ಶರವನೆಸೆಯಲದನು । ವೀರ ರಾಘವಾಂಕ ಕಡಿದು । ವಾರಿಣೆಸಿದನು ॥ ೧ ॥ ಘೋರ್ಗರೆವೃತ ಖಳನು ಬಹಳ । ಉಗ್ರದಿಂದಲಾರ್ಭಟಿಸೆ । ಸ್ವರ್ಗ ಲೋಕ ಸಹಿತಲಿಳೆಯು । ಗರ್ಘ ನಡುಗಿತು ॥ ೨ ॥ ಅರ್ಗಳಾಸ್ತ್ರ ಪಿಂಡಿವಾಳ । ಮುದ್ಗರಾ ಮುಸುಂಡಿಗಳನು। ಶೀಘ್ರದಿಂದ ಬಿಡಲು ದನುಜ । ಭಾರ್ಗವೇಶಗೆ ॥ ೩ ॥ ತಂಡತಂಡದಾಯುಧ ಗಳ । ತುಂಡು ತುಂಡು ಮಾಡಿ ರಾಮ । ಕೆಂಡ ಕಣ್ಣೊಳುದುರೆ ಕೋಪ । ಗೊಂಡು ಗಜರುತ ॥ ೪ ॥ ಗಂಡುಸಹುದು ಛಾಪ್ರ ಛಳಿರೆ । ಕಂಡೆ ನಿನ್ನ ಶೌರ್ಯಗಳನು । ಭಂಡ ಫಡಫಡೆನುತ ಧನುವ । ತುಂಡುಗೈದನು ॥೫॥ ಬಿಟ್ಟು ಚಾಪವನ್ನು ಖರನು । ಮುಷ್ಟಿಯಿಂದಲೆರಗೆ ರಾಮ । ಸೃಷ್ಟಿಗೊಡೆಗೆ ಸೀತೆ ಕಂ । ಗೆಟ್ಟು ನಡುಗುತ ॥ ೬ ॥ ಕೆಟ್ಟೆನೆಂದು ಮನದಿ ಮರುಗ । ಲಷ್ಟ ರೊಳಗೆ ಎದ್ದು ರಾಮ । ದುಷ್ಟ ನಿಗ್ರಹಕ್ಕೆ ಮನವ । ಕೊಟ್ಟನಾಗಲೆ ॥ ೭ ॥ ಮತ್ತೆ ತೆಗೆದು ಮೂಲ ಶರವ । ಶಕ್ತಿಯಿಂದ ತೊಟ್ಟು ತಿರುವ । ನೆತ್ತಿ ಸೆಳೆದು ಬಿಡಲು ಬೆದರಿ । ತಾ ತ್ರಿಲೋಕವು ॥ ೮ ॥ ಮೃತ್ಯು ಬಾಯಿದೆರೆದ ತೆರದಿ । ಸುತ್ತಿ ಶರವು ಹೂಂಕರಿಸುತ । ಮಸ್ತಕಕ್ಕೆ ತಗಲಿ ಕೊರಳ । ಕತ್ತರಿ ಸಿದುದು ॥ ೯ ॥

ಮತ್ತೇಭ ವಿಕ್ರೀಡಿತಂ

ಇನವಂಶಾಂಬುಧಿ ಚಂದ್ರ ರಾಘವ ಮಹಾ ರಕ್ಷೌಘಮಂ ಕೊಲ್ಲಲೂ । ಮನಸಂತೋಷದೊಳಿರ್ದರಿತ್ತಲು ಮಹಾ ಮೌನೀಜನಂ ತೋಷದಿ ॥ ಅನುವಂ ಕಂಡುರ ದೇವ ದುಂದುಭಿಗಳುಂ ಧ್ವನಿಗೈಯಲಾಕಾಶದಿ । ಇನಿತಾ ನಂದದಿ ಮಂಗಲೋತ್ಸವ ಮಹಾ ಶ್ರೀರಾಮನಿಂಗಾದುದು ॥

# ಸೀತಾಪಹಾರ

### ವಾರ್ಧಿಕ

ಮುನಿಪ ಕೇಳ್ಕೆ ಮುಂದೆ ರಾಮಲಕ್ಷ್ಮಣರುಗಳು । ವನ ಪಂಚವಟಿ ಯೊಳಂದೇಸ ಮಾಡಿದರು ಶೂ । ರ್ಪನಖಿ ಮತ್ತೆ ನಾದಳು ವಿವರವ ನವ್ಯ ಮನಕೆಳವಡುಸಿರಸ್ತುತ ॥ ತನಯರೀರ್ವರು ಕರವ ಮುಗಿದು ಬೇಗೊಳಲು ಮುನಿ । ವಿನಯದಿಂ ಬಾಲಕರ ತೆಗೆದಪ್ಪಿ ಮನ್ನಿಸುತ । ಗುಣದಿಂದ ಪೇಳಿದನು ಮುಂದಿನ ಪ್ರಸಂಗಗಳ ವನಜನಾಭನ ಚರಿತವ ॥

### ನಾದನಾಮ ಕ್ರಿಯೆ ರಾಗ . ಅಷ್ಟ ತಾಳ

ತನಯರು ಕೇಳಿ ದೃಢಮೊಳಂದು । ಶೂ । ರ್ಪನಖಿ ತನ್ನಂತರಂಗದಿ ನೊಂದು ॥ ಇನಿತಾದ ವೃತ್ತಾಂತಗಳನಿಂದು । ರಾ । ವಣಗೆ ತಾ ಪೋಗಿ ಪೇಳುವೆನೆಂದು ॥ ೧ ॥ ರಾಘವ ಮಾಡಿದ ಮಾಟಕ್ಕೆ । ತಮ್ಮ । ಲಕ್ಷ್ಮಣ ನೋಡಿದ ನೋಟಕ್ಕೆ ॥ ಮೂಗು ಮೊಲೆಯ ಕೊಯ್ದ ಕೋಪಕ್ಕೆ । ತಾನು । ಸಾಗಿ ಬಂದಳು ಲಂಕಾ ದ್ವೀಪಕ್ಕೆ ॥ ೨ ॥ ಮಂಡೆ ಮುಂದೆಯ ಹೊಯ್ದ ಕೊಳುತ್ತ । ತುಂಬಿಕೊಂಡು ಕಣ್ಣಲಿ ನೀರ ಸುರಿಸುತ್ತ ॥ ಕೆಂಪದಂದದಿ ರೌದ್ರ ತಾಳುತ್ತ । ಅಲ್ಲಿ । ಕಂಡಸುರರಿಗಿದನರುಹುತ್ತ ॥ ೩ ॥ ಹೀಗೆಂದು ತನಗೆ ತಾನೆಂದಳು । ತೆಂಕ ಸಾಗರದೆಡೆಯಲ್ಲಿ ನಿಂದಳು ॥ ಹೇಗೆ ದಾಟುತ ಪಾಪಿ ಬಂದಳು । ತಾ । ನಾಗಿ ಲಂಕೆಗೆ ಕೇಡ ತಂದಳು ॥ ೪ ॥

### ಭಾಮಿನಿ

ಲವನೆ ಕೇಳ್ಸುರನರಭುಜಂಗಮ । ಭುವನದಲ್ಲಣ ದಶವದನನು । ತ್ಸವದೊಳೊಡ್ಡೋಲಗದೊಳಿದ್ದನು ಬಹಳ ವಿಭವದಲಿ ॥ ಪವನಶಿಖಿ ಯಮ ನಿಋತಿ ಹರಿ ವೈ । ಶ್ರವಣ ವರುಣಾದಿಗಳು ಬೆಸಸೇ । ನವಗೆತವಗೆನುತಿದ್ದರಿದ್ದ ಸೆಯಲಿ ದಶಾನನನ ॥ ೧ ॥ ಶುಕ ಮಹೋದರ ವೀರ ದೇವಾಂ । ತಕ ನರಾಂತಕ ಕುಂಭಯೂಪಾಂ । ಬಕ ನಿಕುಂಭ ತ್ರಿಶಿರ ಯುದ್ಧೋನ್ಮತ್ತನತಿಕಾಯ ॥ ಮಕರಲೋಚನ ಕಲಿ ವಿರೂಪಾ । ಕ್ಷಕ ಸುಮಾಲಿ ಸುರೇಂದ್ರಜಿತು ದ । ಕ್ಷಕ ಹಯಗ್ರೀವಾದಿ ರಕ್ಕಸರದ್ದರಪಂಮಿತ ॥ ೨ ॥ ವೀರ

ವಿದ್ಯುಜ್ಜಿಹ್ವ ದುರ್ಮುಖ । ಸಾರಣಾಸುರ ಶೋಣಿತಾಕ್ಷಕ । ಘೋರಬಲ
ಧೂಮ್ರಾಕ್ಷ ವಿದ್ಯುನ್ಮಾಲಿ ಶಾರ್ದೂಲ ॥ ಘೋರತರ ದುರ್ದರ್ಶನಾದಿ ಕು ।
ಮಾರಕರು ಸಚಿವರು ಸಮಸ್ತ ವಿ । ಶಾರದರು ಪವಮಲ್ಲಿರಿದ್ದರು ಮುಂದೆ
ರಾವಣನ ॥ ೩ ॥ ಅಣುಗ ಕೇಳಾ ಸಮಯದಲಿ ನೆರೆ । ಹಣಿದ ಮೂಗಿನ
ಹರಿದ ತುಟಿಗಳ । ಜುಣುಗು ಕಿವಿಗಳ ಜರಿದ ಹುಣ್ಣಿನ ಕೊರೆದ ಕದಪುಗಳ ॥
ಪ್ರಣದ ದುರ್ಗಂಧದ ಮಹಾ ಭೀ । ಷಣದ ರಕ್ಕಸಿ ಬಂದಳಾ ರಾ । ವಣನ
ರಚಿತ ಸಭಾಂತರಾಳಕೆ ಮೃತ್ಯುರೂಪಿನಲಿ ॥ ೪ ॥

### ನಾದನಾಮಕ್ರಿಯೆ ರಾಗ - ಅಷ್ಟತಾಳ

ದಶಕಂಠನನುಜೆಯ ಕಂಡನು । ಕಾಣು । ತಸುರ ಚಿತ್ತದಿ ಭ್ರಮೆ
ಗೊಂಡನು ॥ ಎಸೆವ ಓಲಗವ ಬೀಳ್ಕೊಂಡನು । ಅತಿ । ಕುಶಲದಿಂದೊಳ
ಗದ್ದು ಬಂದನು ॥ ೧ ॥ ತಂಗಿಯು ಕರೆದು ಮಾತಾಡಿದ । ಮಾನ । ಭಂಗದ
ಪರಿಯೆಲ್ಲ ನೋಡಿದ ॥ ಹಿಂಗದ ರೌದ್ರವ ತಾಳಿದ । ಅಂತ । ರಂಗವಿದೇನೆಂದು
ಕೇಳಿದ ॥ ೨ ॥

### ದ್ವಿಪದಿ

ಏನು ಹೊಡೆಯಿತು ಮಾರಿ ತಂಗಿ ನಿನಗೆನುತ । ದಾನವರ ಅರಸ
ಬೆಸಗೊಂಡ ನಸುನಗುತ ॥ ೧ ॥ ಊನವನು ತಂದೆ ಖಳ ವಂಶಕ್ಕೆ ನೀನು ।
ಮಾನಭಂಗವನೆಸಗಿದವನ ಹೆಸರೇನು ॥ ೨ ॥

### ಕಾಂಬೋಧಿ ರಾಗ - ಝಂಪೆತಾಳ

ಕೇಳಣ್ಣ ನಿನ್ನೊಳೀ ಮಾನಭಂಗದ ಪರಿಯ । ಹೇಳಲೇನಿನ್ನು ಧರೆ
ಯೊಳಗೆ ॥ ಬಾಳಿರುವೆನೆಂತಕಟ ಸಂಭವಿಸಿತಪಹಾಸ್ಯ । ದೂಳಿಗವನೊರೆವೆ
ವಿಸ್ತರಿಸಿ ॥ ೧ ॥ ದಶರಥನ ಸುತರಾದ ರಾಮಲಕ್ಷ್ಮಣರೆಂಬ । ಹೆಸರುಳ್ಳ
ವೀರರಿಬ್ಬರಿಗೆ ॥ ವಸುಧೆಯೊಳಗಿದಿರಿಲ್ಲ ನೋಡಿದರೆ ಬಾಲಕರು । ಅಸಮ
ಸಾಹಸರು ಕೇಳಣ್ಣ ॥ ೨ ॥ ರಾಮನೆಂಬಾತನಿಗೆ ರಾಜಿಸುವಳೋರ್ವ ಸತಿ ।
ಕಾಮನರಗಿಣಿಯಂತೆ ತರುಣಿ ॥ ಕಾಮಿನಿಯ ಕಂಡು ಮರುಳಾಗ
ದವರಾರುಂಟು । ಭೂಮಿಯೊಳು ಜೋಡಿಲ್ಲವಳಿಗೆ ॥ ೩ ॥ ನಾಗವೇಣಿಯ
ಕಂಡು ಸೈರಿಸದೆ ಮನವು ನಿನ । ಗಾಗಿ ಕೈಯಿಕ್ಕಿದೆನು ಸತಿಗೆ ॥ ಆಗ ಲಕ್ಷ್ಮಣನೆಂಬ

ಹುಡುಗನೆನ್ನೆರಡು ಮೊಲೆ । ಮೂಗು ಸಹ ಕೊಯ್ದು ರಣಶೂರ ॥ ೪ ॥ ಖರದೂಷಣಾದಿಗಳ ಸಂಹರಿಸಿ ಪಂಚವಟಿ । ವರ ದಂಡಕಾರಣ್ಯದೆಡೆಯ ॥ ಸ್ಥಿರವಾಗಿ ನೆಲೆಸಿರುವ ನಮ್ಮವರನೆಲ್ಲ ಯಮ । ಪುರಕೆ ಕಳುಹಿಸಿದನಾ ರಾಮ ॥ ೫ ॥ ದಾನವರ ಸಂಹರಿಸಿ ನಮ್ಮವರ ಪೊಳಲೆಲ್ಲ । ದಾನಗಳ ಕೊಟ್ಟ ಋಷಿಗಳಿಗೆ ॥ ಏನು ಹೋದರು ಹೋಗಲೆಂತಾದಡಾಗಲಾ ಮಾನಿನಿಯ ತರಬೇಕು ಸಿದ್ಧ ॥ ೬ ॥

### ಸಾರಂಗ ರಾಗ - ಅಷ್ಟತಾಳ

ಅಂಥಾ ಚೆಲುವೆಯೇನೆ । ಜಾನಕಿ ದೇವಿ । ಅಂಥಾ ಚೆಲುವೆಯೇನೆ ॥ ಪ ॥ ಅಂಥಾ ಚೆಲುವೆಯೇನೆ ಕಾಂತೆ ಜಾನಕಿದೇವಿ। ಕಾಂತೆಯರೊಳು ಮಂಡೋದರಿಗಿಂತ ಸೊಬಗೇನೆ ॥ ಅ ॥ ತರಬೇಕು ತರುಣಿಯಳ । ಕಾಮನ ಮುಂಗೈ । ಯರಗಿಣಿಯಂತಿಹಳ ॥ ಸ್ಮರನ ಸಿಂಗಾಡಿ ಪುರ್ಬಿನ ನೀರೆ ಮಲ್ಲಿಗೆ । ಪರಿಮಳಿಸುವ ಮೈಯ ವರಕರಿಗಮನೆಯ ॥ ೧ ॥ ಪನ್ನಂಗ ನಿಭವೇಣಿಯ । ಪಂಕಜದೆಸ । ಳ್ಗಣ್ಣ ಕಡು ಜಾಣೆಯ ॥ ಹೊನ್ನ ಪುತ್ಥಳಿ ಬೊಂಬೆಯಂತೆ ರಾಮನ ಕೈಯ । ಕನ್ನಡಿಕದಪಿನ ಕಡುಸುಪ್ರವೀಣೆಯ ॥ ೨ ॥ ಕಿರುನಗೆ ಮೊಗದೋಜೆಯ । ಲಾವಣ್ಯ ಭಾ । ಸ್ಕರ ಕೋಟಿನಿಭತೇಜೆಯ ॥ ವರಕುಂಭಕುಚೆಯ ಸರೋಜ ಗಂಧಿನಿಯ ಕೇ । ಸರಿ ಮಧ್ಯೆ ವರ ಶುಕವಚನೆ ಶುಭಾಂಗಿಯ ॥ ತರಬೇಕು ॥ ೩ ॥

### ಕಂದ

ತಂಗಿಯ ಸವಿನುಡಿಯಂ ಕೇ । ಳ್ದಂಗಜಶರ ತಾಗಿ ರಾವಣ ಭ್ರಮೆಗೊಳುತಂ ॥ ಆಗನೆ ಮಂಡೋದರಿಗೀ । ಸಂಗತಿಯನ್ನೊರೆವೆನೆನುತವಳ ಕರೆದೆಂದಂ ॥

### ಭೈರವಿ ರಾಗ - ಝಂಪೆತಾಳ

ಜನಕನಂದನೆಯಂತೆ । ಸೀತೆಯೆಂಬವಳಂತೆ ॥ ಘನ ಸೊಬಗಿನವಳಂತೆ । ರಾಘವನ ಕಾಂತೆ ॥ ೧ ॥ ತರಲು ಪೋಪೆನು ನಾನು । ತಂದರಾಕೆಯು ನೀನು॥ ಎರಕವಾಗಿರುವ ಬಗೆ । ಪೇಳಬೇಕೆನಗೆ ॥ ೨ ॥

### ತೋಡಿ ರಾಗ - ಅಷ್ಟತಾಳ

ತರವಲ್ಲ । ಕಾಂತ । ತರವಲ್ಲ ॥ ಪ ॥ ತರವಲ್ಲವಿದು ಲೋಕ ಮಾತೆ ಜಾನಕಿಯು । ತರುವೆನೆಂದೆನುತ ಪೋಗುವುದು ಆ ಸತಿಯು ॥ ತರವಲ್ಲ ॥ ಅ ॥ ನಾರಾಯಣ ಸ್ವಾಮಿಯಾ ರಾಮಚಂದ್ರ । ಚಾರು ಲಕ್ಷ್ಮಣನೆಂಬಾತ ಉರಗೇಂದ್ರ ॥ ನಾರಿ ಜಾನಕಿ ಎಂಬವಳೆ ಲಕ್ಷ್ಮೀದೇವಿ । ಧಾರಿಣಿಯೊಳಗವ ತರಿಸಿದರ್ಸಾರಿ ॥ ತರವಲ್ಲ ॥ ೧ ॥ ಖರದೂಷಣಾದ್ಯರು ಬಡವರೆ ನೋಡು । ನೆರೆ । ಮುಂದೆ ಬಾಳುವುದರಿತು ಮಾತಾಡು ॥ ಕರಗಳ ಮುಗಿದು ಬೇಡುವೆ ದಯಮಾಡು । ತರುಣಿಯ ತಳ್ಳಿಗೆ ಹೋದರೆ ಬಂತು ಕೇಡು ॥ ತರವಲ್ಲ ॥ ೨ ॥ ಕುಲವೇ ಸಂಹಾರವಾಗುವ ಕಾಲ ಬಂತು । ಇಳೆಯೊಳ್ಬಾಳಿರುವಂಥ ಋಣವೆಲ್ಲ ಸಂತು ॥ ಇಳೆಯ ನಂದನೆ ಸಿಕ್ಕಲೇತಕೀ ಭ್ರಾಂತು । ಉಳಿಯದು ಪ್ರಾಣ ನಾ ಸಾರಿದೆನಿಂತು ॥ ತರವಲ್ಲ ॥ ೩ ॥

### ಶಂಕರಾಭರಣ ರಾಗ - ಏಕತಾಳ

ವಲ್ಲಭೆ ನೀನಿಂಥ ಮಾತ । ನೆನ್ನೊಳು ಪೇಳುವರೇನೆ ॥ ಹುಲ್ಲೆ ಘೋರ ಸಿಂಹವನ್ನು । ಕೊಲ್ಲುವುದೇನೆ ॥ ೧ ॥ ಎಳ್ಳಿನಷ್ಟು ಕಿಚ್ಚು ಮನೆಗ । ಳೆಲ್ಲ ಸುಡದೆ ನಿಲುವುದುಂಟೆ ॥ ಒಳ್ಳಿತಲ್ಲೀ ಬುದ್ಧಿ ಬರಿದೆ । ಕೆಡಬೇಡ ಕಾಂತ ॥ ೨ ॥ ಮಾನಿನೀ ಕೇಳಿಲಿಗಳು ಮ । ದ್ದಾನೆಯ ಸಂಹರಿಸಲುಂಟೆ ॥ ದಾನವರಿಗು ಮಾನವರಿಗು । ಸಮವೇನೆ ಕಾಂತೆ ॥ ೩ ॥ ಕಾಣದೆ ಕುಣಿಯೊಳು ಬಿದ್ದ । ಡಾನೆಯಾದರೇನು ಕಡೆಗೆ ॥ ಶ್ವಾನನಿಂದ ಕಡೆಯಲ್ಲವೇ । ನೀ ನೋಡು ಕಾಂತ ॥ ೪ ॥ ಕಿಚ್ಚಿಗಿರುವೆ ಮುತ್ತಲುಂಟೆ । ಬಚ್ಚಲು ಮಾಳಿಗೆಯು ಸರಿಯೆ॥ ಹೆಚ್ಚುಕಡಿಮೆಯಿಲ್ಲವೇನೆ । ಅಮೃತ ಗರಳವೆ ॥ ೫ ॥ ಮೆಚ್ಚಿ ಪರರ ಪೆಣ್ಗೆ ಮನಸ । ಹುಚ್ಚಾದಾತಗಮೃತ ವಿಷವು ॥ ಕಿಚ್ಚು ನೀರೊಳುರಿವುದುಂಟೆ । ಹೆಚ್ಚಿನ ಕಾಂತ ॥ ೬ ॥ ಈರೇಳು ಲೋಕದೊಳುಳ್ಳ । ಪಾರುಪತ್ಯವೆನಗಿದ್ದಂತೆ॥ ನಾರಿ ಹುಲ್ಲು ಮನುಜರ್ಗೆಲ್ಲ। ನಾನಂಜುವೆನೇನೆ ॥ ೭ ॥ ಬೇರು ಕಡಿದ ಮೇಲೆ ವೃಕ್ಷ । ಜಾರದೆ ನಿಲ್ಲುವುದುಂಟೆ ॥ ಮಾರಿ ಬಡವ ವೇಳೆಗಾರು । ಬಾರರು ಕಾಂತ ॥ ೮ ॥ ಬಂದುದೆಲ್ಲ ಬರಲಿದರಿಂದ । ಮಂದಗಮನೆ ಸೀತೆಯನ್ನು ॥ ತಂದಲ್ಲದೆ ಬಿಡೆನು ಕಾಣೆ । ಚಂದಿರವದನೆ ॥ ೯ ॥ ತಂದೆ

ತಾಯ್ಗಳಾಣೆ ನಿಮಗೆ । ತಂದರೆ ಜಾನಕಿಯ ಮನೆಗೆ ॥ ಕುಂದುಪ್ರಶ್ನೈಶ್ವರ್ಯ ವೆಲ್ಲ । ವಿಂದೆನ್ನ ರಮಣ ॥ ೧೦ ॥

ಕಂದ

ಕೋವಿದ ನೀತಿಯ ಮಾತನು । ಭಾವಕಿ ತಾ ಪೇಳ್ದು ಪರಸ ನೊಡ ಬಡಿಸಿದೊಡಂ ॥ ರಾವಣ ಕೇಳದೆ ತನ್ನಯ । ಮಾವ ಮಾರೀಚನ ಬಳಿಗೆ ಬಂದಿಂತೆಂದಂ॥

ಕೇದಾರಗೌಳ ರಾಗ - ಆದಿತಾಳ

ಮಾರೀಚ ನಿಶಾಚರ ಸಂತತ । ವೀರ ಮನೋಹರ । ವಿಕ್ರಮ ಶೌರ್ಯ ॥ ಮಾರಾಂಗ ಶರೀರ ಮನೋಹರ । ಕಾರುಣ್ಯ ಸಮುದ್ರ ಗಂಭೀರ ॥ ೧ ॥ ದಶರಥನ ಸುತರಿಬ್ಬರು ಪುಡುಗರು । ವಸುಧೆಯೊಳತಿ ಶೋಭಿಪರಂತೆ ॥ ಕುಶಲದಿಂ ಖರ ದೂಷಣ ತ್ರಿಶಿರರ । ಪೆಸರಡಗಿಸಿಯೆಸ ದಿಹರಂತೆ ॥ ೨ ॥ ರಾಘವನೆಂಬಾತನಿಗೊರ್ವಳು ಸತಿ । ನಾಗಕನ್ನಿಕೆಯ ಪೋಲುವಳಂತೆ ॥ ಪೋಗುವೆ ನಾ ತರುವುದಕೀ ಪೊನ್ಮೃಗ । ವಾಗಿಯೆ ನೀ ನಲಿವಾಡವೇಕಲ್ಲಿ ॥ ೩ ॥ ರಾವಣ ನೀ ಬಲು ಸಾಹಸಿಯಯ್ಯ । ದೇವರ್ಕಳ ದೇವನು ಶ್ರೀರಾಮ ॥ ಕೇವಲ ನರಜನ್ಮದಿ ಜನಿಸಿ । ಭೂವಲಯದಿ ತಿರು ಗಾಡುವರವರು ॥ ೪ ॥ ತತ್ಕಾಂತೆಯ ತಂದರೆ ವಂಶಕೆ । ಮತ್ಕಂಟಕವಲ್ಲದೆ ಸುಖವೆ ॥ ತತ್ಸಂಗತಿ ಬೇಡ ನಿಧಾನಿಸು । ಮತ್ಕಿಂಚಿತ ಮಾತ ನೀ ಕೇಳು ॥ ೫ ॥

ಭಾಮಿನಿ

ರಾಮನಾರೆಂದರಿಯಲಾ ಸು । ತ್ರಾಮ ಮುಖ್ಯರ ದೂರಿನಲಿ ಬಳಿ । ಕೀ ಮಹೀಭಾರಕರ ಭಂಜಿಸಲೆಂದು ನರನಾಗಿ ॥ ಆ ಮಧುದ್ವಿಷನವ ತರಿಸಿ ದನು । ನೀ ಮರುಳಳಾ ಸುಲಭವೇ ರವಿ । ತಾಮಸಿಗೆ ತಾಮಸವನಂಗೀ ಕರಿಸಬೇಡೆಂದ ॥ ೧ ॥ ಸಿಕ್ಕಲರಿಯಳು ಸೀತೆ ಸಿಕ್ಕಿದ । ಡಕ್ಕಲರಿಯಳು ಸತ್ಯವಿದು ಕೈ । ಯಿಕ್ಕಿ ಕದನಕೆ ಸೋಲಲರಿಯನು ರಾಮನಿದು ಸಿದ್ಧ ॥ ಸೊಕ್ಕಿ ಹರಿ ಕರಿಯೊಡನೆ ಸೆಣಸುವುದಕ್ಕಜವಲಾ ಲೋಕಕಂಟಕ । ಕಿಕ್ಕಿದಿರು ಸಾರಿದನು ನಿನ್ನನುಜಾತ್ಮಜರನೆಂದ ॥ ೨ ॥ ಎಲೆಲೆ ಪಾಪಿ ಪರಾಂಗನೆಗೆ

ಮಾನ । ವೆಳಸಲಿಸುವಂತವರವರ ಹೆಂ । ಗಳದ ಮಿಂಡರು ತಪ್ಪದಿದು ತಾ ಸುಪ್ರಸಿದ್ಧವಲೆ ॥ ಅಳಿವು ತನಗಿಮ್ಮಡಿಸ ಬಾರದು । ಖಳ ಶಿರೋಮಣಿ ಹೀಗು ಹಿಂದಕೆ । ಸುಲಭವಲ್ಲ ಸುಬಾಹು ಹರನ ವಿರೋಧ ನಿನಗೆಂದ ॥ ೨ ॥

ಮುಸುಡ ಕಂಡರೆ ರಾಮು ಶರ ಖಿಂ । ಡಿಸದೆ ಬಿಡುವುದೆ ನಮ್ಮನಕಟಾ। ಮುಸುಕಿಕೊಂಡಿದೆ ನಿನ್ನನುನ್ಮಾದಗ್ರಹಾವೇಶ ॥

### ಕೇದಾರಗೌಳ ರಾಗ - ಆದಿತಾಳ

ಸಾಕೆಲವೋ ಬಲ್ಲೆನು ನಾನು । ಏಕವರ ನೀ ಕೊಂಡಾಡುವೆಯೊ ॥ ನಾ ಕೊಲ್ಲುವೆ ಪೋಗದಿರೆ ಎನೆ । ತಾ ಕೈಮುಗಿದ್ಯೆದುಪನೆಂದ ॥

### ಭಾಮಿನಿ ಅರ್ಧ

ಇವನ ಕೈಯಲಿ ಸಾವುದರಿಂದ ರಾ । ಘವನ ಬಾಣದಿ ಮಡಿದೆ ನಾದರೆ । ದಿವಿಜಲೋಕವ ಪಾಲಿಸುವ ಶ್ರೀರಾಮು ತನಗೆಂದ ॥

### ಪಂತುವರಾಳಿ ರಾಗ - ಅಷ್ಟತಾಳ

ಪೋಗುವೆ । ದಮ್ಮಯ್ಯ । ಪೋಗುವೆ ॥ ಪ ॥ ನಿನ್ನ ಕೈಯಲಿ ಪೆಟ್ಟು ತಿಂದು ಸಾವುದರಿಂದ । ನರಕಪೇ ಸಾಧ್ಯವಹುದು ತನಗಿಂದು ॥ ರಾಮನ ಬಾಣಮೊಳಸುವ ನೀಗಿದರೆ ನಾ । ನೀರೇಳು ಲೋಕದ ಮೋಕ್ಷವ ಪಡೆವೆ ॥ ಪೋಗುವೆ ॥

### ಭಾಮಿನಿ

ಆದಡೆಲವೋ ಕೇಳು ತೋರ್ಪೆ । ರೈದು ತಲೆಗಳ ಬೈತಿಡುತ ಬಲು । ಗೈದುಗಳ ಬಿಸುಟಡಗಿಸೀ ರಾಕ್ಷಸ ಕಳೇಬರವ । ಐದೆ ತಾಪಸವೇಷವನು ಬಳಿ। ಕೈದು ಪರವನಿತಾವ್ಯಸನಿಗಳಿ । ಗಾದ ಪರಿಯನು ಹೊರುವ ಪಾಪಕೆ ಹೊರಗು ತಾನೆಂದ ॥

### ಶಾರ್ದೂಲ ವಿಕ್ರೀಡಿತಂ

ಮಾರೀಚಂ ಮೃಗವಾಗಿ ಪಂಚವಟಿಗಂ ಬಂದಾಗಲೋಡಾಡಲೂ । ಸೌರಮ್ಯಾತಿಶಯಪ್ರಧಾನಕರದಿಂ ಕಂಡಾಗಲಾ ಜಾನಕೀ ॥ ಚೋರತ್ವಂಗಳ

ಮಾಯದಾಕೃತಿಯನೆಂದಾ ಕಾಂತೆ ತಾ ಕಾಣದೇ । ಭೂರಿ ವಿಸ್ಮಿತೆಯಾಗಿ ಕಾಂತ ನೊಡನಂ ತಾ ದೈನ್ಯದಿಂದೆಂದಳೂ ॥

**ತೋಡಿ ರಾಗ - ಆದಿತಾಳ**

ಅಡವಿಯೊಳಿಂದು ನಾನಿರುವ ವೇಳೆಯೊಳೊಂದು । ಕಡು ಚೆಲುವಿನ ಮೃಗ ಬಂತು ಶ್ರೀರಾಮ ॥ ೧ ॥ ನೋಡಿ ಜಾನಕಿ ಭ್ರಮೆಗೂಡಿ ತನ್ನರಸನ। ಕೂಡೆ ಬೇಡಿದಳು ತಾನೇಕಾಂತದಿಂದ ॥ ೨ ॥

**ಬೇಗಡೆ ರಾಗ - ಅಷ್ಟತಾಳ**

ನೋಡಿದೆಯ । ರಾಮ । ನೋಡಿದೆಯ ॥ ಪ ॥ ದೊಡ್ಡ ಕಾಡಿನಿಂದ ಲೋಡಿ ಬಂದು । ಆಡುವಂಥ ಪೊಮ್ಮಿಗವ ॥ ನೋಡಿದೆಯ ॥ ಅ ॥ ಚಿನ್ನದ ಹಾಗಿರುವ ಮೈಯು । ಬಣ್ಣದ ಸುತ್ತಲು ಪಂಜ । ವರ್ಣದ ರೇಖೆಯು ಬಂದ । ಚೆಂದವ ನೋಡು ॥ ಸಣ್ಣ ಸಣ್ಣ ಕಾಲು ಬೆರಳು । ಸಾಲಿನುಗುರ ಭಾವಂಗಳ । ತನ್ನಂಗ ದಿನ್ನಂಗ ದಿಕ್ಕಿಟ । ತೋ ಎಂದು ಕುಣಿವ ಮೃಗವ ॥ ನೋಡಿದೆಯ ॥ ೧ ॥ ಜಗದೇಕ ವೀರನೆ ಕೈಯು । ಮುಗಿದು ಬೇಡುವೆ ದಮ್ಮಯ್ಯ । ಹಗಲು ರಾತ್ರಿ ಕುಣಿಸಿಕೊಂಡು । ಸೊಗ ದೊಳಿರುವೆನು ॥ ಸುಗುಣ ನಿನಗೆ ನಾ ಬೇಕೆಂಬ । ಬಗೆಯುಲ್ಲಿ ಸ್ನೇಹವಿದ್ದ । ರಗಲಿ ಓಡಿ ಹೋಗದ ಮುನ್ನ । ಮೃಗವ ಹಿಡಿದು ತಾ ಮೋಹನ್ನ ॥ ನೋಡಿದೆಯ ॥ ೨ ॥

**ಕೇದಾರಗೌಳ ರಾಗ - ಅಷ್ಟತಾಳ**

ಅರಸಿ ನೀ ಸುಮ್ಮನೆ ಭ್ರಮೆಗೊಳ್ಳಬೇಡವೆ । ಸರಸದ ಮೃಗವಲ್ಲವು ॥ ಸರಸಿಜಾಂಬಕಿ ನಿನ್ನ ಮರುಳುಮಾಡಲು ಬಂದ। ದುರುಳರ ಕಪಟ ಕಾಣೆ ॥ ೧ ॥ ಕಪಟದಾಕೃತಿಯೆಂದು ಕಾಂತ ನೀನೆನ್ನ ಚಾ । ಳಿಪ್ಪುದೆಲ್ಲ ಬಲ್ಲೆ ನಾನು ॥ ಅಪರೂಪವಿದ ಕಂಡು ಬಯಸಿದರೆನಗೊಂದು । ಉಪಕಾರ ಮಾಡೊ ನೀನು ॥ ೨ ॥ ನಾಡ ಮಾತಲ್ಲ ರಾಕ್ಷಸರು ಮಾಯಕದಿಂದ । ಲಾಡುವ ನಾಟ್ಯ ಕಾಣೆ ॥ ಬೇಡ ಸುಮ್ಮನೆ ಕಡ್ಡಿ ಮುರಿದು ಸಾರಿದೆನತ್ತ । ನೋಡಬೇಡದನು ನೀನು ॥ ೩ ॥ ಕಾಡಿನ ಮೃಗದಿಂದ ಕೇಡು ಬಂತಾದರೆ । ನೋಡಿಕೊಂಬೆನು

ಬಂದುದ ॥ ನೋಡದಿದ್ದರೆ ಒಂದು ಕ್ಷಣ ಜೀವ ನಿಲ್ಲದು । ಬೇಡಿಕೊಂಬೆನು ನಿನ್ನನು ॥ ೪ ॥ ಕೆಟ್ಟ ಮೇಲೆ ಬುದ್ಧಿ ಬರುವುವು ನೀ ಗಂಟು । ಕಟ್ಟಿಕೊ ಸೆರಗಿನಲಿ ॥ ದಿಟ್ಟೆ ಹೆಂಗಸು । ನಿನ್ನ ಛಲ ಬೇಡವಿದರಿಂದ । ಕಷ್ಟ ಬಪ್ಪುದು ತಪ್ಪದು ॥ ೫ ॥ ಎಷ್ಟು ಚಾಳಿಸಿದರು ನಾನೀ ಮಾತನು ಕೇಳಿ । ಬಿಟ್ಟವಳಲ್ಲ ನಿನ್ನ । ಸಿಟ್ಟು ಬಂದರು ಬರಲಿದ ತಾರದಿದ್ದರೆ । ಬಿಟ್ಟಪೆ ಪ್ರಾಣವನು ॥ ೬ ॥

### ಭಾಮಿನಿ

ಚಂಚಲಾಕ್ಷಿಯೆ ಕೇಳರಣ್ಯದಿ । ಸಂಚರಿಪ ಮೃಗಕಂಬನೆಸೆದರೆ । ಪಂಚತುವನೈದಿದರೆ ಮಾಡುವುದೇನು ನೀನದನು ॥ ಪಂಚಬಾ । ಣನ ಪಿತನೆ ಕೇಳಸು । ವಂಚಿಸುತ ಮೃಗ ಮಡಿದುದಾದರೆ । ಕಂಚುಕವ ರಚಿಸುವೆನು ಚರ್ಮವ ತೆಗೆದು ಪ್ರೀತಿಯಲಿ ॥ ೨ ॥

### ನೀಲಾಂಬರಿ ರಾಗ - ಝಂಪೆತಾಳ

ಅನುಜ ಲಕ್ಷ್ಮಣ । ಜನಕನಂದನೆ । ಮೃಗಮನೋಚಿತೆ । ಯಾದ ಳಲ್ಲಯ್ಯಾ ॥ ತರಲು ಪೋಪೆ ನಾ । ಬರುವ ತನಕ ನೀ । ಧರಣಿಜಾತೆಯ । ಕಾಯ್ದುಕೊಳ್ಳಯ್ಯ ॥ ೧ ॥ ಅಗ್ರಜವೀರ । ಸ್ವಲ್ಪ ಕೆಲಸಕೆ । ಉಗ್ರದೀದಲೆ । ತೆರಳಲೇತಕೆ ॥ ಶೀಘ್ರದಿಂದೆನ್ನ । ಕಳುಹಬಾರದೆ ಆ । ಭೃಗ್ರದೀದ ನಾ । ಕೊಂಡು ಬರುವೆನು ॥ ೨ ॥ ಆಗದ ಗದು । ನಿನ್ನ ಕೈಯಲಿ । ಸಾಗದಾ ಮೃಗ ಕಪಟ ವಿದ್ಯೆಯು ॥ ತಾಗು ಕಟ್ಟಿನ ಬಗೆಯನರಿವುದು । ಈಗ ಶಾಲೆಯೊ । ಳಿರು ನಿಧಾನದಿ ॥ ೩ ॥ ಎಷ್ಟು ದಿವಸಕೆ । ಬರುವೆ ರಾಘವ । ಸೃಷ್ಟಿಜಾತೆಯು । ನಾನು ಒಬ್ಬನೆ ॥ ನಿಮಿಷ ಮಾತ್ರಕೆ । ಬರುವೆ ಲಕ್ಷ್ಮಣ । ಅನಕ ಸೀತೆಯ ಕಾಯ್ದುಕೊಳ್ಳಯ್ಯ ॥ ೪ ॥

### ವಾರ್ಧಿಕ

ಎನುತ ತಮ್ಮಗೆ ಬುದ್ಧಿಯಂ ಪೇಳಿದಾಕ್ಷಣವೆ । ಕನಕ ಮೃಗವಂ ರಾಮ ಬೆಂಬತ್ತೆ ವೇಗದೊಳು । ಘನತರದ ಘೋರಡವಿಗೈದಿತಾ ದನುಜ ಮೃಗ ರಾಘವಂ ಕೋಪದಿಂದ ॥ ದಣಿದು ಶರಮಂ ಬಿಡಲು ಓ ಲಕ್ಷ್ಮಣಾ ಎಂದು । ಧ್ವನಿಗೈದು ಮಾರಿಚ ಪ್ರಾಣವಂ ಬಿಡಲಾಗಿ । ವನಿತೆ ಜಾನಕಿ ಕೇಳ್ದು ರಾಮನೇ ನಿಜವೆಂದು ಮೈದುನನೊಳೀತೆಂದಳು ॥

### ಕೋಡಿ ರಾಗ - ಆದಿತಾಳ

ಮುಗುದ ಕೇಳಿದೆನಯ್ಯ ಮೃಗವಲ್ಲ ರಾಕ್ಷಸರು । ರಘುವೀರನನು ಹೋ ಹೋ ಕೊಲ್ಲುವರೇನೈ ॥ ಜಗದೇಕವೀರ ಕೂಗುವ ಧ್ವನಿ ಕೇಳಿತು । ಮಿಗುವರಿಯಿತು ಕಾರ್ಯ ಸಹಜ ಸೌಮಿತ್ರ ॥ ನೋಡಿಬಾರಯ್ಯ ಹೋಗಿ । ಏನಾಯಿತೆಂದು ॥ ೧ ॥ ರಾಮನ ಧ್ವನಿಯಲ್ಲ ಜಾನಕಿ ನೀ ಕೇಳು । ಯಾಮಿನೀ ಚರರವಸಾನಕಾಲದಲಿ ॥ ತಾಮಸದಿಂದತ್ತುದಲ್ಲದೆ ಸಂಗ್ರಾಮ । ಭೀಮನ ದನುಜರು ಕೊಲುವುದುಂಟೆ ॥ ಬರಿದೆ ಚಿಂತಿಸಬೇಡವೆ । ಜಾನಕಿ ಕೇಳು ॥ ೨ ॥ ಪೇಳಿದರೆನ್ನರಸನ ಧ್ವನಿ । ಯಷ್ಟಕ್ಕೂ ನಾನದನರಿಯೆನೆ ॥ ಸೃಷ್ಟಿಪಾಲನ ಪ್ರಾಣದಟ್ಟುಳಿಗೊದಗದೆ ॥ ಬಿಟ್ಟು ಸುಮ್ಮನೆ ಹಾಳು ನೆಪವದೇಕಯ್ಯ ॥ ನೋಡಿಬಾರಯ್ಯ ಪೋಗಿ । ಏನಾಯಿತೆಂದು ॥ ೩ ॥

### ಕಾಂಬೋಧಿ ರಾಗ - ರೂಪಕತಾಳ

ದೇವಿ ಕೇಳ್ ದೃಢ । ರಾಮಚಂದ್ರನು । ದೇವತಾಂಶ ಸಂ। ಜೀವನಲ್ಲವೆ॥ ಆ ವಿಭು ಮಹಾ । ಸ್ವತಂತ್ರಮೂರ್ತಿಯು । ಆವನಾದರೂ । ಕೊಲ್ಲಲಾಪನೆ ॥ ೧ ॥ ಏನು ಲಕ್ಷ್ಮಣ । ಮನದ ಸಂಶಯು । ಆ ನರೇಂದ್ರಗೆ । ಪ್ರಾಣ ಸಂಕಟ ॥ ನೀನು ಸುಮ್ಮನೆ । ತಡವ ಮಾಡದೆ । ಪ್ರಾಣನಾಥನ । ನೋಡಿ ಬಾರಯ್ಯ ॥ ೨ ॥ ತಾಯೆ ಕೇಳವ್ವ । ರಾಕ್ಷಸರ್ಗಳ । ಮಾಯವಲ್ಲದೆ । ಶ್ರೀರಾಮನೇಯಲ್ಲ ॥ ಈ ವನಾಂತದಿ । ಬಿಟ್ಟು ಪೋದರೆ । ಕಾಯಜೋಪಮ। ಕೋಪಿಸುವನು ॥ ೩ ॥ ಬಾಲಕಾ ನಿನ್ನ । ಭಾವವೇನಯ್ಯ । ಶ್ರೀಲಲಾಮನು । ಅಳಿದಮೇಲೆನ್ನ ॥ ಆಳುವೆನೆಂಬ । ಆಸೆಯಿಂದಲಿ । ಆಲಸ್ಯದಿಂದ । ಕುಳಿತೆ ನಿಶ್ಚಯ ॥ ೪ ॥

### ವಾರ್ಧಿಕ

ಕಾಮಿನಿಯ ಕಠಿನತರ ವಾಕ್ಯಮಂ ಕೇಳ್ದು ಶ್ರೀ । ರಾಮರಾಮಾ ಎಂದು ಕರ್ಣವೆರಡಂ ಮುಚ್ಚಿ । ಭೂಮಿಯೊಳಗೇಳಾಜ್ಞೆಯಂ ಬರೆದಿದಂ ಮೀರಿ ಮುಂದಡಿಯನಿಡದಿರೆಂದು॥ ಸೋಮಾರ್ಕ ಭೂಮಿದೇವಿಯು ಸಾಕ್ಷಿಯಾಗಿಟ್ಟು। ತಾ ಮನದಿ ನೊಂದುಕೊಂಡಾಕ್ಷಣದೊಳೈದಿದಂ । ರಾಮಚಂದ್ರನ ಪಾದ ದೆಡೆಗಿತ್ತಲಾದ ವೃತ್ತಾಂತಂಗಳಂ ಲಾಲಿಸಿ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ದೇವ ಲಕ್ಷ್ಮಣನಿಂತು ಮಣಿದಾ । ದೇವಿಯರ ಬಳಿಯಿಂದ ಪೊರಡಲು। ದೇವತೆಯರಿಗೆ ಸೆರೆಯಬಿಡುವ । ಕಾಲ ಬಂತು ॥ ೧ ॥ ಕಾವಿವಸನವು ಕೈಯ ಜಪಸರ । ಕೋವಿದಂಡ ಕಮಂಡಲುಗಳಿಂ । ರಾವಣನು ಸಂನ್ಯಾಸಿವೇಷವ । ತಾಳಿ ಬಂದ ॥ ೨ ॥

### ಪೂರ್ವಿ ರಾಗ - ಅಷ್ಟತಾಳ

ಭಿಕ್ಷೆಯು ನೀಡೇ ದೇವಿ । ಸಂನ್ಯಾಸಿಗೆ । ಭಿಕ್ಷೆಯು ನೀಡೇ ದೇವಿ ॥ ಪ ॥ ಕುಕ್ಷಿಗಾಧಾರವಿಲ್ಲದೆ ದೇಶ ದೇಶ ಪ್ರ । ದಕ್ಷಿಣೆಗೈದಿಲ್ಲಿ ಬಂದೆ ಕಾಣಮ್ಮ ॥ ॥ ಭಿಕ್ಷೆಯು ॥ ೧ ॥ ಆವ ದೇಶವು ನಿಮಗಾವ ರಾಜ್ಯವು ಅಮ್ಮ । ಈ ವಿಪಿನದೊಳೊಬ್ಬಳಿರುವೆಯೇಕಮ್ಮ ॥ ಭಿಕ್ಷೆಯು ॥ ೨ ॥ ಸುರರೊ ಕಿನ್ನರರೊ ಭೂಸುರರೊ ದಾನವರೊ ಎಂದರಿಯದೆ ನಾ ಕೇಳ್ವ ಪರಿಯ ಕಾಣಮ್ಮ ॥ ಭಿಕ್ಷೆಯು ॥ ೩ ॥

### ಸಾಂಗತ್ಯ ರಾಗ - ರೂಪಕತಾಳ

ಲೇಸಾಯಿತ್ತೆ ಸಂನ್ಯಾಸಿಯೆ ನಿಮ್ಮ ಚರಣಕ್ಕೆ । ಸಾಸಿರ ಶರಣೆಂಬೆ ನಾನು ॥ ಬೇಸರಟ್ಟಿತು ನಿಮ್ಮ ಪಾದದರ್ಶನದಿ ಸಂ । ತೋಷವಾಯಿತು ಎನ್ನ ಮನಕೆ ॥ ೧ ॥ ದೇಶಾಯೋಧ್ಯಾಪುರವಾಸಿಗಳಯ್ಯ ನಾ । ವಾ ಸೂರ್ಯಕುಲದರಸುಗಳು ॥ ವಾಸಿಪಂಥದ ಮೇಲೆ ಸೋದರ ಸಹಿತಿಲ್ಲಿ । ವಾಸವಾಗಿಹನೆನ್ನ ರಮಣ ॥ ೨ ॥ ಕಂಡೊಂದು ಮೃಗವ ನಾ ಬಯಸಿದಡದ ನಿನ್ನು । ಕೊಂಡು ಬರಲು ರಾಮ ಪೋದ ॥ ಪುಂಡರೀಕಾಕ್ಷ ಬಾರದೆ ಹೊತ್ತಾದುದರಿಂದ । ಅಂಡಲೆಯುತ ತಮ್ಮ ನಡೆದ ॥ ೩ ॥ ಅಡಿಗೆ ಊಟ ಗಳೆಂಬ ಗೊಡವೆಯೆ ನಮಗಿಲ್ಲ । ಅಡವಿ ಫಲಾಹಾರದೊಳಗೆ ॥ ಕೊಡುವೆ ನೆಂದರೆ ತಮ್ಮನಾಜ್ಞೆಯ ಮೀರಿ ಮುಂ । ದಡಿಯಿಡಬೇಡವೆಂದಿಹನು ॥ ೪ ॥

### ಸಾವೇರಿ ರಾಗ - ಅಷ್ಟತಾಳ

ಅದನಾದರು ಕೊಡಬಾರದೆ । ಬಲು । ಹಸಿತೃಷೆಯಿಂದ ದಣಿದು ಬಂದಂತ ಸಂನ್ಯಾಸಿಗೆ ॥ ೧ ॥ ನೆವನ ಹೇಳುವುದೇತಕೆ । ನಾ ದೇಹಿಯೆಂ । ಧರೆ ನಾಸ್ತಿಯೆನಬಹುದೆ ॥ ಶಿವನಾಣೆ ನಾ ಮೂರು ದಿನದೊಳೇನೊಂದಾ

ಹಾ । ರವ ಗೊಳ್ಳದಿಲ್ಲಿಗಿಂದು । ಹಸಿದು ಬಂದವನು ॥ ೨ ॥ ಧರ್ಮವುಳ್ಳವರು ನೀವು । ದಾಕ್ಷಿಣ್ಯ ಸ । ದ್ಧರ್ಮದಿ ನಡೆವವರು ॥ ಧರ್ಮವಿಡಿದು ನಾವು ಶಪಿಸಿ ಪೋದರೆ ವಂಶ । ನಿರ್ಮೂಲವಹುದು ಕಾಣೆ । ಈಶ್ವರನಾಣೆ ॥ ೩ ॥ ದನುಜರಟ್ಟುಳಿ ಬಾಧೆಗೆ । ಅಂಬಿನ ತುದಿ । ಮೊನೆಯಲ್ಲಿ ಬರೆದ ರೇಗೆ ॥ ಇನಿತು ಬಂದವರೀಗೆ ಭಿಕ್ಷವು ಕೊಡಬೇಡೆಂ । ದೆನುತ ಪೇಳಿದ ಮಾತುಂಟೆ । ರಾಮನ ಕಾಂತೆ ॥ ೪ ॥

### ವಾರ್ಧಿಕ

ನಾನಾ ಪ್ರಕಾರದಲಿ ಖಳ ಕಪಟದಿಂ ನುಡಿದು । ಮಾನಿನಿಯ ಮನದ ಸಂಶಯವು ನಿವೃತ್ತಿಯ ಮಾಡ । ಲೇನು ಬಂದರು ಬರಲೆಂದೆನುತ ಜ್ಯೋಯಂ ದಾಟುತವನಿಸುತೆ ನಡೆತಂದಳು ॥ ದಾನವನು ತನಗೆ ಸಿಕ್ಕಿದಳೆಂದು ನೆಲ ಸಹಿತ । ಲಾನಿತಂಬೆಯ ರಥದಿ ಉಪ್ಪರಿಸುತ್ತೈದಿದಂ । ಭಾನುಮಾರ್ಗದಿ ಬರುವ ವೇಳೆಯಲಿ ಮೊರೆಯಿಟ್ಟಳಾ ಸೀತೆ ನೆಲನದುರಲು ॥

### ಬಿಲಹರಿ ರಾಗ . ಏಕತಾಳ

ವಿಪಿನದೊಳಿರೆ ನಾನಿಂದು । ಒಬ್ಬ । ಕಪಟದ ಯತಿ ನಡೆತಂದು ॥ ಗುಪಿತದೊಳೊಯ್ಯೆ ಹಾಯೆಂದು । ವರ ಚಪಲಾಕ್ಷಿ ಕೂಗಿದಳಂದು ॥ ೧ ॥ ಧರಣಿದೇವತೆಗಳಿರಾ । ಹೇ । ತರಣಿ ನಭಶಶಿಗಳಿರಾ ॥ ಹರ ಸರಸಿಜಭವಗಳಿರ। ಹೇ । ಸುರಮುನಿ ಗಂಧರ್ವರಿರಾ ॥ ೨ ॥ ದಶರಥ ಭೂಪನ ಸೊಸೆಯು । ವರ । ಬಿಸಜಾಕ್ಷ ರಾಮನರಸಿಯು ॥ ಅಸುರ ಕದ್ದೊಯ್ಯೆ ಜಾನಕಿಯು । ಮಂ । ದಿಸುವೆನು ಬಿಡಿಸಿರೊ ಸತಿಯ ॥ ೩ ॥

### ಸೌರಾಷ್ಟ್ರ ರಾಗ . ಅಷ್ಟತಾಳ

ಹೆಣ್ಣು ಜನ್ಮವೆ ಸಾಕು ಎನ ಕಂಡು ಮರೆಯಿರೊ । ರಾಮ ರಾಮ ॥ ಬಂದು । ಕಣ್ಣಲಿ ಕಾಣಬಾರದೆ ಎನ್ನ ವಿಧಿಯು ಶ್ರೀ । ರಾಮ ರಾಮ ॥ ೧ ॥ ಜನಕರಾಯಗೆ ಮಗಳಾಗಿ ನಾ ಜನಿಸಿದೆ । ರಾಮ ರಾಮ ॥ ವರ । ವನಜಾಕ್ಷಿ ಭೂಮಿದೇವಿಗೆ ಮಗಳಾದೆ । ರಾಮ ರಾಮ ॥ ೨ ॥ ದಶರಥ ನೃಪತಿಗೆ ಸೊಸೆಯಾಗಿ ಜನಿಸಿದೆ । ರಾಮ ರಾಮ ॥ ಚೆಲ್ವ । ಬಿಸಜಾಕ್ಷ ರಾಮನರಸಿಯಾಗಿ

ಜನಿಸಿದೆ । ರಾಮ ರಾಮ ॥ ೩ ॥ ಪೊಡವಿಯೊಳುವೆನೆಂದು ದೃಢವಾಗಿ ನಂಬಿದೆ । ರಾಮ ರಾಮ ॥ ಕಾ । ರಡವಿಯೆ ಗತಿಯೆಂದು ಬರೆದನಂಬುಜ ಭವ । ರಾಮ ರಾಮ ॥ ೪ ॥

ವಾರ್ಧಿಕ

ಪರಿಪರಿಯ ದುಃಖದಲಿ ಮರುಗಿ ಬಾಯ್ಬಿಡುತ ಕೇ । ಸರಿಯ ವಶ ವಾದ ಮೃಗದಂತೆ ಮಿಡುಕುತ್ತಲಾ । ಧರಣಿನಂದನೆ ಕಠಿನವಾಗಿ ಭೀಕರ ದೀರ್ಘಸ್ವರದಿಂದ ಕೂಗುತಿರಲು ॥ ಶರಣಜನರಸಿಕ ಸಾಧುಗಳರಸ ಬಲುಧೀರ॥ ವರಪಕ್ಷಿರಾಜ ಸನ್ಮಾರ್ಗ ಸಂಚರಣ ಸ । ತ್ವರದ ಕರುಣಾಶರಧಿಯಹ ಜಟಾಯುವು ಬಂದು ದನುಜನಂ ತಡೆದೆಂದನು ॥

ನಾದನಾಮಕ್ರಿಯೆ ರಾಗ - ಅಷ್ಟತಾಳ

ಎಲ್ಲಿಗೆ ಒಯ್ಯುವೆಯೊ ಸೀತೆಯ । ಬಿಡು । ಕಳ್ಳ ರಕ್ಕಸ ಜಗನ್ಮಾತೆಯ ॥ ಒಳ್ಳಿತೆ ನಿನಗೆ ಈ ರೀತಿಯು । ಕಂಡೆ । ನೆಲ್ಲ ನಾ ನಿನ್ನ ವಿಭೂತಿಯ ॥ ೧ । ದಾರಿಯ ಬಿಟ್ಟತ್ತ ಕಡೆ ಸಾರು । ಇಂಥ । ಪಾರುಪತ್ಯಗಳ ಕೊಟ್ಟವರ್ಯಾರು॥ ಗಾರುಗೆಡದೆ ಬಿಟ್ಟ ತಿನಬೇಡ । ಕೈ । ಮೀರಿತು ಎನ್ನದೆಂದೆನ ಬೇಡ ॥ ೨ ॥ ಕಳ್ಳರು ಕದ್ದುಕೊಂಡೊಯ್ವಾಗ । ಕೇಳ್ವ । ದೆಲ್ಲ ವಿಚಾರವಿಂದೆನಗೀಗ ॥ ಒಳ್ಳೆ ಮಾತಿನ ಮೇಲೆ ಬಿಡು ನೀನು । ಬಿಟ್ಟು । ಕಳ್ಳರಕ್ಕಸ ಅತ್ತ ನಡೆ ನೀನು ॥ ೩ ॥ ಸತ್ತ ಪ್ರಾಣಿಗಳ ತಿಂಬಾತಗೆ । ಇಂಥ । ದೂರ್ತ ದುರ್ವಚನ ವಿದೇತಕೆ ॥ ಮತ್ತೆ ದಾರಿಯ ಬಿಟ್ಟು ಸುಮ್ಮನೆ । ಹೋಗತ್ತತ್ತ ನಡೆ ನಡೆ ಗಮ್ಮನೆ ॥ ೪ ॥ ಭಕ್ಷಿಸದನಕ ಹೋಗೆನು ನಿನ್ನ । ಎಂದು । ಪಕ್ಷಿ ರಾಜೇಂದ್ರ ಹೊಡೆದ ಮುನ್ನ ॥ ರಾಕ್ಷಸನದ ಕಂಡು ಜಿದರಿದ । ಇಪ್ಪ । ತ್ರಕ್ಷಿಯೊಳಗೆ ಕಿಡಿಗೆದರಿದ ॥ ೫ ॥ ಬಾಣವ ಖಗಪತಿಗೆಸೆದನು । ಪಕ್ಷಿ । ತ್ರಾಣದೊಳದನು ಖಂಡಿಸಿದನು ॥ ಕಾಣುತ ಗದೆಯ ಬಿಸಾಡಿದ । ಕಚ್ಚಿ । ಕೇಣವಿಲ್ಲದೆ ತುಂಡು ಮಾಡಿದ ॥ ೬ ॥ ಅಬ್ಬರಿಸುತ ಬನ್ನ ತಿರುಹಿದ । ರಕ್ತ । ಕೊಬ್ಬಿ ಕೈ ಮುಷ್ಟಿಯಿಂದೆರಗಿದ ॥ ಇಬ್ಬರು ಸಮ ನಾವು ಶಕ್ತಿಗೆ । ಕಾದ । ಲೊಬ್ಬರು ಬೇರೊಂದು ಯುಕ್ತಿಗೆ ॥ ೭ ॥ ಮರ್ಮವ ತಿಳಿದು ಕಾದುವ ನಾವು । ಸತ್ಯ । ಧರ್ಮಮಾರ್ಗದಲಿ ಬಾರದು ನೋವು । ಶರ್ಮವಿಡಿದು ಸೆಣಸಿದೆವಲ್ಲ ।

ನವು । ಗೊಮ್ಮೆ ಸೋಲ್ಗೆಲವು ಕಾಣಿಸಲಿಲ್ಲ ॥ ೮ ॥ ಎನ್ನಸು ಉಂಗುಷ್ಠದೆಡೆ ಯಲ್ಲಿ । ಪಕ್ಷಿ । ನಿನ್ನ ಪ್ರಾಣ ಯಾವ ಕಡೆಯಲ್ಲಿ ॥ ಮುನ್ನ ತಾ ಕಪಟ ವೆಂದರಿಯದೆ । ಪಕ್ಷಿ । ತನ್ನದೆಂದನು ಸತ್ಯ ಮರೆಯದೆ ॥ ೯ ॥ ಹಕ್ಕಿ ಪಕ್ಕಿಯ ಪಕ್ಷಿ ಜಾತಿಗೆ । ಪ್ರಾಣ । ರೆಕ್ಕೆಯೊಳಿಹುದೆಂದನಾತಗೆ । ರಕ್ಕಸನದ ಕೇಳಿ ಗ್ರಹಿಸಿದ । ಪಕ್ಷಿ । ಸಿಕ್ಕಿದನೆಂದ್ಧರುಷ ತಾಳಿದ ॥ ೧೦ ॥ ಮಾಣದೆ ಖತಿಯೊಳದ ಬಡೆದನು । ಪಕ್ಷಿ । ತ್ರಾಣಗುಂದಿಯೆ ಭೂಮಿ ಹಿಡಿದನು ॥ ೧೧ ॥

### ಸೌರಾಷ್ಟ್ರ ರಾಗ - ತ್ರಿವುಡೆ ತಾಳ

ಮಾಯಕದ ನುಡಿಯೆಂದು ತಿಳಿಯದೆ । ಕಾಯಮರ್ಮವನುಸಿರೆ ರಾಕ್ಷಸ । ರಾಯ ಬಡೆಯಲು ಬಿದ್ದನಾಗ ಜ । ಟಾಯು ಶರಣ ॥ ೧ ॥ ವರವ ಕೊಟ್ಟಳು ಸೀತೆ ರಾಮನ । ಚರಣವನು ಕಂಡರುಹುವನಕವು । ಮರಣವಿಲ್ಲೆಂದೆನಲು ಕೊಂಡಂ । ಬರದಿ ನಡೆದ ॥ ೨ ॥

### ಭಾಮಿನಿ ಅರ್ಧ

ಈಕೆಯರಸನು ಬಹುದು ಹುಸಿ ನೀ । ನಾಕನಗರಿಗೆ ತೆರಳು ಜಂಬುಕೆ । ಕಾಕತತಿ ಗುಡುಗಾಡಿಸದ ಮುನ್ನೆಂದನಸುರೇಂದ್ರ ॥

### ಕಂದ

ದುರುಳಂ ಮಾಯದಿ ಸೀತಾ । ತರುಣಿಯನಪಹರಿಸುತೊಡನೆ ಗಗನಾಂತರದೊಳ್ ॥ ಶರಧಿಯ ದಾಂಟುತ ಲಂಕಾ । ಪುರಕೈದಲು ಲಕ್ಷ್ಮಣ ಬಂದಗ್ರಜಗೆಂದಂ ॥

### ಸಾವೇರಿ ರಾಗ - ಝಂಪೆತಾಳ

ರಾಘವಾ ಸಾಕೇತಪತೇ । ಕೇಳ್ಕಮಲನೇತ್ರ ॥ ಪ ॥ ನೀ ಮೃಗವ ಬೆಂಬತ್ತಿ ಪೋದಮೇಲೆನ್ನೊಳಿಂ । ದಾ ಮಹಾ ಜನಕಸುತೆಯುಸುರನುಡಿ ಕೇಳ್ದು ॥ ೧ ॥ ಕಠಿನತರ ಮಾತುಗಳ ಕಾಂತೆ ಪೇಳ್ದುದರಿಂದ । ಲಟವಿಗೈ ತಂದೆನ್ನೆ ನಿನ್ನರಸಿಕೊಳುತ ॥ ೨ ॥ ಅಂಜುವಳು ಜನಕಸುತೆಯೊಬ್ಬಳೇ ವನ ದೊಳಗೆ । ಕಂಜಸಖಕುಲಜಾತ ಕೀರ್ತಿವಿಖ್ಯಾತ ॥ ೩ ॥

### ವಾರ್ಧಿಕ

ಮೃಗವ ಕೊಂದಾ ದಶರಥಾತ್ಮಜರು ಬರಲೊಂದು । ಮೃಗವ ನಿರ್ಮಿಸಿಕೊಂಡು ಜಾನಕಿಗೆ ಕೊಡಲೆನುತ । ಮಿಗೆ ವಹಿಲದಿಂ ಬಂದು ಪರ್ಣ ಶಾಲೆಯಲಿ ನೋಡಿದರೆ ಸತಿಯಿಲ್ಲದಿರಲು ॥ ಹಗಲು ಕತ್ತಲೆಯಾಗಿ ಸಿಡಿಲೆರಗಿ ದಂತೆ ನಾ। ಲಿಗೆ ಸೆಳೆದುದೆದೆಯಾರಿ ಲಕ್ಷ್ಮಣಂ ನಡುಗಿ ಕೈ। ಮುಗಿದು ನಿಂದಿರೆ ಸೀತೆಯೇನಾದಳೆಂದು ಚಿಂತಿಸುತನುಜನೊಡನೆಂದನು ॥

### ನೀಲಾಂಬರಿ ರಾಗ - ಝಂಪೆತಾಳ

ಸಹಜ ಲಕ್ಷ್ಮಣ । ಸರಸಿಜೇಕ್ಷಣ । ಮಹಿತಳಾಸುತೆ । ಮಂಜುಳಾ ಕರೆ ॥ ವಿಹಿತಭಾಷಿಣಿ । ಹಿಮಕರಾನನೆ । ಗಹನದಿ ಬಿಟ್ಟು । ಮೋಸವಾಯಿತು ॥ ೧ ॥ ಎತ್ತ ಪೋದಳೋ । ಏನನಾದಳೋ । ಮತ್ತಕಾಶಿನಿ । ಮಂದ ಗಾಮಿನಿ ॥ ಪೃಥ್ವಿಜಾತೆಯ । ಕಾಣದೆನ್ನಯ । ಚಿತ್ತ ಚಂಚಲ । ವಾಯಿತಲ್ಲಲಾ ॥ ೨ ॥

### ಕಾಂಬೋಧಿ ರಾಗ - ಝಂಪೆತಾಳ

ಅಡವಿ ಗಿಡ ಮರ ಕಲ್ಲುಗಳ ನೋಡಲರಸಿನದ । ಪುಡಿಯಂತೆ ತೋರು ತಿದೆ ತಮ್ಮ ॥ ಒಡಲೊಳುರಿತಾಪ ಬೇರ್ವಿಡಿದು ಜಠರಾಗ್ನಿಯಲಿ । ನಡುಗು ತಿದೆ ಕೈಕಾಲು ತಮ್ಮ ॥ ೧ ॥ ನುಡಿವೆನೆಂದರೆ ಗಂಟಲೆಡೆಯ ನರಗಳನೊತ್ತಿ । ಹಿಡಿದ ತೆರನಪ್ಪುದಲೆ ತಮ್ಮ ॥ ಮಡದಿ ಜಾನಕಿಯೆಂಬ ರತುನವನ್ನು ಕಾಣ ದಡಿ । ಯಿಡಲಾರೆನಯ್ಯಯ್ಯೊ ತಮ್ಮ ॥ ೨ ॥ ತಂದೆತಾಯ್ಗಳ ಬಿಟ್ಟು ಬಂಧು ಬಳಗವ ತೊರೆದು । ಒಂದೇ ಮನಸ್ಸಿನಲಿ ತಮ್ಮ ॥ ಎಂದೆಂದಿಗೂ ಎನ್ನ ಪಾದವೇ ಗತಿಯೆಂದು । ಹೊಂದಿಕೊಂಡಿರ್ದಳ್ಳೆ ತಮ್ಮ ॥ ೩ ॥ ಮುಂದುವರಿಯಿತು ಕಾರ್ಯ ಕಪಟಮೃಗವ್ಯಸನದೊಳು । ನಿಂದು ಕೇಡಾ ಯ್ತಲ್ಲ ತಮ್ಮ ॥ ಇಂದು ನೀನೇನ ಪೇಳಿದರು ರಾಕ್ಷಸರ ನಿ । ರ್ಬಂಧಕೊಳ ಗಾದಳಲೆ ತಮ್ಮ ॥ ೪ ॥ ಹಾಳು ಬದುಕಿಗೆ ಹೋಗುವಾಗಲೇ ನಿನ್ನೊಡನೆ । ಹೇಳಲಿಲ್ಲವೆ ಮೊದಲೆ ತಮ್ಮ ॥ ಕೀಳು ಮೇಲೆಂಬುದನು ತಿಳಿಯದವಳೆಂದ ನುಡಿ । ಕೇಳಿ ನೀ ಬರಬಹುದೆ ತಮ್ಮ ॥ ೫ ॥ ಏಳು ಜನ್ಮಾಂತರದಿ ತಪವ ನೆಸಗಿದಡಿಂಥ । ಬಾಲೆ ಕೈ ಸೇರುವಳೆ ತಮ್ಮ ॥ ಖೂಳ ರಕ್ಕಸರ ನಿರ್ಬಂಧ ದುಃಖವನೆಂತು । ತಾಳುವಳೊ ದಿನದಿನವು ತಮ್ಮ ॥ ೬ ॥

ಶಂಕರಾಭರಣ ರಾಗ - ಮಟ್ಟೆ ತಾಳ

ಅಗ್ರಜಾ ಮಹಾಪರಾಕ್ರಮ । ಧೀರವೀರ । ಅಗ್ರಜಾ ಮಹಾಪರಾಕ್ರಮ ॥ ಪ ॥ ಪುಂಡರೀಕವದನ ಸುಪ್ರ । ಚಂಡ ಸಾಹಸಾಗ್ರಗಣ್ಯ । ಕುಂಡಲೀಂದ್ರಶಯನ ಧರಣಿ । ಮಂಡಲಾಧಿ ನಾಯಕ ವರ । ಖಂಡಪರಶುಮಿತ್ರ ರಾಜಿತ ॥ ಸಕಲ ಬ್ರ । ಹ್ಮಾಂಡ ಸರ್ವಲೋಕ ಪೂಜಿತ । ನಿಖಿಳ ಬ್ರ । ಹ್ಮಾಂಡ ಸರ್ವ ನಿಶಿತ ಭಾಷಿತ ॥ ಅಗ್ರಜಾ ॥ ೧ ॥ ಲೋಕಮಾತೆ ಸೀತೆಸಪ್ತ । ಲೋಕ ಮಧ್ಯಲೋಕ ಬ್ರಹ್ಮ । ಲೋಕ ವಿಷ್ಣುಲೋಕ ಶಿವನ । ಲೋಕದೊಳಗೆ ಇದ್ದರೀಗ । ನಾ ಕರೆದುಕೊಂಡು ಬರ್ಪೆನು ॥ ನಿನ್ನ ಪಾದ । ದಾ ಕಮಲದಿದಿರು ತೋರ್ಪೆನು । ಬರಿದೆ ಚಿಂತೆ । ಯೇಕೆ ಧೀರನಾಗಿರ್ಪುದು ನೀನು ॥ ಅಗ್ರಜಾ ॥ ೨ ॥ ಎಂದು ಲಕ್ಷ್ಮಣಾಂಕ ಕೋಪ । ದಿಂದ ಧನುಶರಗಳ ಪಿಡಿದು । ಚಂದದಿಂದಲಣ್ಣನಡಿಗೆ । ವಂದಿಸುತ್ತ ಪರ್ಣಶಾಲೆ । ಯಿಂದ ಪೊರಡಲಾಗ ಕಾಣುತ ॥ ರಾಮಭದ್ರ । ನಂದು ವತ್ಸ ನಿಲುನಿಲೆನ್ನುತ । ಸಂತೈಸಿ ನಡೆದ । ರೊಂದೆ ಬುದ್ಧಿಯಿಂದಲರಸುತ ॥ ಅಗ್ರಜಾ ॥ ೩ ॥

ದ್ವಿಪದಿ

ರಾಮಲಕ್ಷ್ಮಣರು ಬಲು ರಣ ಪರಾಕ್ರಮರು । ಆ ಮಹಾ ಪಂಚವಟಿಯಿಂದ ತೆರಳಿದರು ॥ ೧ ॥ ಕಾನನಾಂತರದಿ ತಪಸಿರುವ ಋಷಿಗಳನು । ಜ್ಞಾನ ಶರಧಿಗಳೆನಿಪ ಋಷಿಪತ್ನಿಯರನು ॥ ೨ ॥ ಕಾಣುತಲೆ ಬೆಸಗೊಂಡು ಬಳಿಕ ಖಗಮೃಗವಾ । ಮಾನಿನಿಯ ಕೇಳಿದರು ಮತ್ತೆ ಕೌತುಕವ ॥ ೩ ॥ ನಾನಾ ಪ್ರಕಾರದಲಿ ಹುಡುಕಿ ನಡ ತರುತ । ಆ ನರೇಶ್ವರರು ಘೋರಡವಿಯನು ಪೊಗುತ ॥ ೪ ॥ ಹುಲಿ ಕರಡಿ ಸಿಂಹ ಶಾರ್ದೂಲಗಳ ನೋಡಿ । ಕಳವಳಿಸುತತಿ ಧೈರ್ಯದಿಂದ ಮಾತಾಡಿ ॥ ೫ ॥ ಹರಿಣ ನರಿ ಶರಭ ಕಾಡ್ಗೋಣಗಳ ಹಿಂಡ । ಪರಿಪರಿಯ ಬಿಲಗಳಲಿ ಮೊರೆಯೆ ಮೃಗತಂಡ ॥ ೬ ॥ ಅರಸಂಚೆ ನವಿಲು ಕೋಗಿಲೆ ಚಕೋರಗಳ । ಪರಿಕಿಸುತ ವನದಿ ನದಿಗಳ ದಾಂಟಿ ಬಹಳ ॥ ೭ ॥ ದೂರ ಪಥ ನಡೆದು ಪೊಂದುತ ಬೇಸರವನು । ದಾರಿಯಲಿ ಮುಂದೆ ಕಂಡರು ಜಟಾಯುವನು ॥ ೮ ॥ ಈತನೆಮ್ಮಯ್ಯನಿಗೆ ಸಖಿಸರುಣಾತನುಜ । ಮಾತಾಡಿಸು ತಮ್ಮ ಸಂಪಾತಿಗನುಜ ॥ ೯ ॥ ಆರಿಂದ

ಬಂತು ನಿನಗೀ ಮರಣಮೊಸಗೆ । ಕಾರಣವನೆಮಗೆ ತಿಳುಹೆಂದು ದಯವೆಸಗೆ ॥ ೧೦ ॥ ಶ್ರೀ ರಾಮನೇ ಬಂದನೆಂಬುದನು ತಿಳಿದು । ಭೂರಿ ಭಯಭಕ್ತಿ ಯೊಳಗಿಂತೆಂದನೊಲಿದು ॥ ೧೧ ॥

### ತೋಡಿ ರಾಗ - ತ್ರಿವುಡೆತಾಳ

ಪಾಲಯ ರಘುವೀರ ಪರಮ ಪವಿತ್ರ । ಮೂಲೋಕದೊಡೆಯನೆ ಕೇಳು ಬಿನ್ನಪವ ॥ ಪ ॥ ಖೂಳ ರಾವಣ ಕದ್ದುಕೊಂಡು ಜಾನಕಿಯನು । ಮೇಲಂಬರದಿ ಪೋಪ ವೇಳೆಯೊಳ್ ನಾನು ॥ ೧ ॥ ಬಾಲೆ ಕೂಗುವ ಶಬ್ದ ಕೇಳಿ ರಾವಣನೊಳು। ಕಾಳಗಕಿದಿರಾಗಿ ಕಾದಿದೆ ಪೋಗಿ ॥ ೨ ॥ ಮುಂಚೆ ಸಂಗರ ದಲ್ಲಿ ಗೆದ್ದೆ ನಾನಸುರನ । ವಂಚನೆಯಿಂದೆನ್ನ ಕೊಂದನಸುರೇಂದ್ರ ॥ ೩ ॥ ತರುಣಿ ಜಾನಕಿ ನಿಮಗರುಹಿ ಸಾಯೆನುತಲಿ । ವರವಿತ್ತಳದರಿಂದಲಿರುವೆನು ನಿನ್ನ ॥ ೪ ॥ ಕರುಣವಿದ್ದಿರಲೆಂದು ಚರಣದಡಿಯೊಳ್ಬಿದ್ದು । ಸುರಪುರಕೈದಿದ ವರಖಗಪತಿಯು ॥ ೫ ॥

### ಕಂದ

ಸುರಪುರಕೈದಿದ ಪಕ್ಷಿಯು । ವರಪಿತಗೆ ಸಮವೆಂದು ತಿಳಿದು ಸಂಸ್ಕಾರ ವನುಂ ॥ ವಿರಚಿಸಿ ಮತ್ತಾ ಸೀತೆಯು । ದುರುಳಗೆ ಸಿಕ್ಕಿದಳೆಂಬುದನರಿ ದಿಂತೀದಂ ॥

### ರೇಗುಪ್ತಿ ರಾಗ - ಏಕತಾಳ

ಸ್ಮರನರಗಿಣಿ ಸತಿಯರ ಶಿರೋಮಣಿ ದಶ । ಶಿರವಶವಾದಳಲ್ಲೊ ತಮ್ಮ ॥ ದುರುಳ ಬಾಧಿಸುವ ನಿರ್ಬಂಧಕ್ಕೆ ತಾನಿಂತು । ಗುರಿಯಾಗಿ ಬಾಳ್ವ ಳಲ್ಲೊ ತಮ್ಮ ॥ ೧ ॥ ಹರಿಣದ ನೆವದಿಂದಲೆನ್ನ ಕಳುಹಿ ನಿನ್ನ । ಭರದಿಂದಟ್ಟಿ ದಳಲ್ಲೊ ತಮ್ಮ ॥ ತರಣಿಯುರಂತರಂಗದ ನಿಜವಾರಿಗಿ । ನ್ನರಿವಡಸಾಧ್ಯ ವಲ್ಲೊ ತಮ್ಮ ॥ ೨ ॥ ತಾನೆ ಬಯಸಿ ಪೋಗಿಹಳೊ ಬಲಾತ್ಕಾರದಿ ದ । ಶಾನನನೊಯ್ದನೇನೊ ತಮ್ಮ ॥ ಏನೆಂದು ತಿಳಿಯಲುಬಹುದಂತರಂಗವು । ಮಾನಿನಿಯರ ಮನಸು ತಮ್ಮ ॥ ೩ ॥ ಮೂಢ ರಕ್ಕಸ- ತನ್ನ ಭ್ರಮೆಯಿಂದ ಲಾಕೆಗೆ । ಮಾಡದಿರ್ಪನೆ ಹಾನಿ ತಮ್ಮ ॥ ಕಾಡಿನೊಳಗೆ ಬಂದು ಸಿಕ್ಕಿ

ಮಾನಿನಿಯು ಹೋ । ಗಾಡಿದನೆಂಬರಲ್ಲೊ ತಮ್ಮ ॥ ೪ ॥ ರಾವಣನೆಂಬ ನಿಶಾಚರನಿರುವಂಥ ಠಾವನರಿಯೆವಲ್ಲೊ ತಮ್ಮ ॥ ಈ ವಿಪಿನದಿ ಸುತ್ತಿ ದಣಿದೆವಲ್ಲದೆ ಮುಂದೆ । ಜೀವವುಳಿಯದಲ್ಲೊ ತಮ್ಮ ॥ ೫ ॥

ವಾರ್ಧಿಕ

ರಘುವೀರ ಕೇಳಂಬುನಿಧಿ ಮೇರೆ ತಪ್ಪಿದರು । ಹಗಲರಸನಿರುಳುದಿಸಿ ಬೆಳಗಿದರು ಜನಕಸುತೆ । ಯುಗುರೆಡೆಗೆ ಕಲ್ಮಷಂ ಸೋಂಕುವುದೆ ಕಪಟ ವಾದಿಗಳ ದುರ್ನುಡಿಯೇತಕೆ ॥ ಹಗರಣವ ಬಿಡು ಮುಂದೆ ನಡೆಯೆಂಬ ತನ್ನ ತ । ಮ್ಮಗೆ ಮೆಚ್ಚಿ ಬರುತಿರುವ ವೇಳೆಯೊಳ್ ಮಾರ್ಗದಲಿ । ಪಗೆತನದಿ ಬಾಯಿ ಬಿಡುತೊದರುತ್ತ ಶೂರ್ಪನಖಿ ಮಗಳಧೋಮುಖಿ ಬಂದಳು ॥

ಕಾಪಿ ರಾಗ - ಅಷ್ಟ ತಾಳ

ತಿನಿಸು ಸಿಕ್ಕಿತು ಎನಗೊಂದು । ಔ । ತಣವ ಮಾಡುವೆ ಬಂಧು ಬಳಗಕ್ಕೆ ಇಂದು ॥ ಪ ॥ ಮನುಜರ ಮಾಂಸವ ಮೆಲದೆ । ಬಹಳ । ದಿನ ವಾಯಿತದರಿಂದಾತುರವೆದ್ದು ನಲಿದೆ ॥ ಮನೆಗೊಯ್ದ್ನಿವರನ್ನು ಕೊಲದೆ । ಭೂತ । ಗಣಕುಣಿಸುವೆ ರಕ್ತವನ್ನು ನಾ ನಿಲದೆ ॥ ೧ ॥ ಗಂಟಲ ತರಿದಿವರುಗಳ । ಮಾಂಸ । ದೆಂಟುಬಗೆಯಲೆಸಗುವೆನು ಶಾಕಗಳ ॥ ವಂಟಿಗೆ ಹಾಸಿ ಚರ್ಮಗಳ । ನಮ್ಮ । ನೆಂಟರಿಷ್ಟರಿಗಿಕ್ಕುವೆನು ಕಜ್ಜಾಯಗಳ ॥ ೨ ॥ ಎದೆಯ ಗುಂಡಿಗೆಯನ್ನೆ ಮುರಿದು । ಹೊಸ ತು । ಪ್ಪದಲಿ ತಾಳಿಸುತ ಬೆಣ್ಣೆಯನಿಕ್ಕಿ ಹುರಿದು ॥ ಬದಿಯೆಲುಬುಗಳ ನುಗ್ಗರಿದು । ಎನ್ನ । ಮದುವೆಯಾದವನ ಸಂಗಡ ಉಂಬೆ ನಲಿದು ॥ ೩ ॥ ತಿಂಬೆನೆನುತ ಬಾಯ ಕಳೆದು । ಮೃತ್ಯು । ವೆಂಬೊಲು ಬರಲು ಲಕ್ಷ್ಮಣ ಬೇಗ ತಿಳಿದು ॥ ಅಂಬ ಬಿಲ್ಲಿನೊಳಿಟ್ಟು ಸೆಳೆದು । ಕೊಲ್ವೆ । ನೆಂಬುದರೊಳು ರಾಮ ನಿಲಿಸಿದ ತಡೆದು ॥ ೪ ॥ ಕೊಲಬಾರದಯ್ಯ ಈ ಹೆಣ್ಣ । ಕೊಂದು । ಫಲವೇನು ಸ್ತ್ರೀಹತ್ಯದೊಳಗಿಲ್ಲ ಬಣ್ಣ ॥ ಕಳವು ತಪ್ಪಿದರೆ ಸಾಕಣ್ಣ । ಹೀಗೆಂ । ದೊಳಗನುಜಂಗೆ ಸೂಚನೆಗೈದ ಕಣ್ಣ ॥ ೫ ॥ ತಾಟಕಿಯನು ಹೇಗೆ ಹಿಂದೆ । ನೀ ಮು । ಹಾಟೋಪದೊಳಗೇಕೆ ಸಮರದಿ ಕೊಂದೆ ॥ ಸೂಟಿಯಿಂ ಬಪ್ಪಳು ಮುಂದೆ । ಇಂಥ । ನಾಟಕತನದ ಮಾತೆನ್ನೊಳೇಕೆಂದೆ ॥ ೬ ॥ ಗಾಧಿಸುತನ

ಮಾತಿನಿಂದಾ । ಗಿ ನಾ । ನಾ ದುರಾತ್ಮೆಯು ಭೇದಿಸಿದೆನೆಲೆ ಕಂದ ॥ ಈ ದುಷ್ಟೆ ಯಳಿನಾದ್ದರಿಂದ । ಮಾನ । ಭೇದಿಸಿ ಜತನದಿ ನೀ ಕಳುಹೆಂದ ॥ ೭ ॥

ವಾರ್ಧಿಕ

ಅಣ್ಣನಂತರ್ಭಾವಗಳ ತಿಳಿದು ಲಕ್ಷ್ಮಣಂ । ಉನ್ನತದ ಕುಚವೆರಡ ನಾಸಿಕವನಂದು ಚ್ಛೈ । ತನ್ನದಿಂ ಕತ್ತರಿಸಲಾಗಧೋಮುಖಿದನುಜೆ ತನ್ನ ತಾಯಂ ಪೋಲ್ದಳು ॥ ಬನ್ನಬಡುತವಳು ಸಾಗಿದಳು ಬೊಬ್ಬಿಡುತಲವ । ರನ್ನು ಬೈವುತಲಿತ್ತ ರಾಮಕ್ಷ್ಮಣರುಗಳ । ರಣ್ಯದೊಳು ಮುಂದೊತ್ತಿ ಬರೆ ಕಬಂಧನ ಕರಗಳನು ಕತ್ತರಿಸಲೆಂದನು ॥

ಶಂಕರಾಭರಣ ರಾಗ - ಏಕತಾಳ

ಜಯ ಜಯ ರಾಮಚಂದ್ರ । ಜಾನಕಿ ಸದ್ಗುಣಸಾಂದ್ರ । ಮಾಯ ಮೋಹರಹಿತ ಶುಭ । ಕಾಯ ಪಾಹಿ ಮಾಂ ॥ ೧ ॥ ಹಿಂದೆ ದನುವೆಂಬ ನಾಮ । ಗಂಧರ್ವೇಶನಯ್ಯು ತನ್ನ । ನಂದು ಸ್ಥೂಲಶಿರದ ಮೌ । ನೀಂದ್ರ ಶಾಪದಿ ॥ ೨ ॥ ಬಂದೆ ನಾ ರಾಕ್ಷಸ ಜನ್ಮ । ಕಿಂದ್ರ ವಜ್ರದಿಂದ ಶಿರವ । ನಂದು ಕಡಿದನದರಿಂದ ಕ । ಬಂಧನಾದೆನು ॥ ೩ ॥ ಇಂದು ಶಾಪವಿಮೋಚನ। ವಂದಿಪೆ ನೀ ಕಾಯೊ ಮುನ್ನ । ಮುಂದೆ ಪೆಶಬರಿ ಇಳ್ವಳು ಹೋ । ಗೆಂದ ಗಂಧರ್ವ ॥ ೪ ॥

ಕಂದ

ಕರುಣಿಸಿ ಮುಂದೈತರಲಾ । ವರ ಶಬರಿಯು ಭಕ್ತಿಯಿಂದ ರಘುವರ ನಡಿಗಂ ॥ ಹರುಷದಿ ಪೊಡಮಡುತಲಿ ತಾ । ಗುರುಭಾವದೊಳಂಬುಜಾಕ್ಷಿ ಬಲು ನುತಿಸಿದಳು ॥

ರೇಗುಪ್ತಿ ರಾಗ - ಅಷ್ಟತಾಳ

ಪಾಲಯ ಮಾಂ ಪಾಹಿ ರಾಮ । ಸಮರನಿಸ್ಸೀಮ ॥ ಪ ॥ ಕಾಲ ಭಯನಾಶನ ಶ್ರೀ । ಲೋಲ ವೈಕುಂಠದೀಶ ॥ ಪಾಲಯ ॥ ಅ ॥ ಅಂಗಜ ಕೋಟಿ ಲಾವಣ್ಯ । ಆಶ್ರಿತ ಜನವರೇಣ್ಯ ॥ ತುಂಗವಿಕ್ರಮ ಕಾರುಣ್ಯ । ಸಂಗೀತಲೋಲಾಗ್ರಗಣ್ಯ ॥ ಪಾಲಯ ॥ ೧ ॥ ಕಬಂಧ ಪೇಳ್ದ ಮಾತಿಗೆ ।

ನೀ ಬಂದ ಕಾರ್ಯದ ರೀತಿಗೆ ॥ ಇಭರಾಜ ವರದನೆನ । ಗಭಯವಿತ್ತು ಪೊರೆ ದೇವ ॥ ಪಾಲಯ ॥ ೨ ॥

ನವರೋಜು ರಾಗ - ಆದಿತಾಳ

ಮಧುರತರಾಂಬುಜ ವದನೆ । ಮದಗಜ ಸನ್ನಿಭಗಮನೆ ॥ ಪದುಮ ದಳಾಯತನಯನೆ । ಪರಮ ಪತಿವ್ರತೆ ಶಬರಿ ॥ ೧ ॥ ಪಂಚವಟೀ ವನ ದೊಳಿರೆ । ಮಮ ತರುಣೀ ಜನಕಸುತೆ ॥ ವಂಚಿಸುತಾ ದಶಶಿರನು । ತಾನೊಯ್ದಾ ಸೀತೆಯನು ॥ ೨ ॥ ಆತನ ಕಾಣದರಿಂದ । ಅರಸುತ ಬಂದೆ ಕಬಂಧ ॥ ರೀತಿಯ ಪೇಳಲು ನಮಗೆ । ಬಂದೆವು ನಾವ್ ನಿನ್ನೆಡೆಗೆ ॥ ೩ ॥ ದಾರಿ ಯಾವುದು ತರುಣಿ । ತೋರಿಕೊಡೌ ನಾರಿಮಣಿ ॥ ಚಾರು ಸರೋವರ ದೆಡೆಗೆ । ಪೋಗಲು ಬೇಕೀಗೆಮಗೆ ॥ ೪ ॥ ರಾಘವ ಕೇಳೀಪಥದಿ । ಸಾಗಿದರಾ ಸುರವನದಿ ॥ ಈಗ ಸರೋವರವಿದ್ದು । ತೊರುವುದೇ ಪಂಪೆಯದು ॥ ೫ ॥

ವಾರ್ಧಿಕ

ಕರವ ಮುಗಿದಿಂತೆಂದ ಶಬರಿಗೊಲಿದಾ ರಾಮ । ಕರುಣೆಸುತ ಸದ್ಗತಿಯ ಮುಂದೆ ಪಂಪಾಸರೋ । ವರದೆಡೆಗೆ ಬಂದು ಮಜ್ಜನವೆಸಗೆ ಕಮಲವನು ತರುಣಿಯೆಂದೇ ಭ್ರಮಿಸುತ ॥ ಸ್ಮರನ ಬಾಣದ ವೇಧೆಯಿಂದ ಸಂತಪಿಸುತ್ತ । ಮರೆದು ನಿಜ ದೇಹಮಂ ಬಳಿಯೊಳಿಹ ನಿಜ ಸಹೋ । ದರ ನೊಳುರೆ ಚಿತ್ತಚಾಂಚಲ್ಯದಿಂದುಸಿರಿದಂ ಮನಬಂದ ತೆರದಿಂದಲಿ ॥

ನವರೋಜು ರಾಗ - ಆದಿತಾಳ

ಜಲಜದಳಾಯತನಯನೆ । ಜಲಜಮುಖಿ ಮಹೀತನುಜೆ ॥ ಜಲಜ ದೊಳೀತಕೆ ಬಂದು । ನೆಲಸಿಹಳ್ಕೆ ಸತಿಯಿಂದು ॥ ೧ ॥ ಜನಕಸುತೆ ಜನಿರಹಿತೆ। ಮನಸಿಜಮೋಹನರುಚಿರೆ । ಕನಕಮಯಪಾತನುವುಳಕೆ । ಮುನಿನಮಿತೇ ಮಮ ವನಿತೆ॥ ೨ ॥ ನಾರಿಯ ಕೈಗಳ ನೋಡು। ತೋರುತಿದೆ ಕುಚವೆರಡು ॥ ನೀರೊಳ ಗೇತಕೆ ಬಂದು । ಸೇರಿಹಳಂಗನೆಯಿಂದು ॥ ೩ ॥ ಕಡುಕಮಲಾ ಸಖಿ ಕಿರಣ । ಸುದುತಿದೆ ಮೈಯಾಭರಣ ॥ ಗಿಡಮರನಾ ತಂಪಿನಲಿ । ಇಡು ಎನ್ನ ಮಮ ಸಹಜ ॥ ೪ ॥

ರೇಗುಪ್ತಿ ರಾಗ - ತ್ರಿವುಡೆತಾಳ

ರಘುವೀರಾಂಬುಜ ವದನ । ಈ ಮರುಳು ಮಾ । ತಿಗೆ ಏನೆಂಬನು ಸುಜಾಣ ॥ ಪ ॥ ಇರುಳು ಮೂಡುವನೆ ಸೂರ್ಯ । ಇದು ಚಂದ್ರನ । ಕಿರಣವಾಗಿತುದಣ್ಣಯ್ಯ ॥ ಸರಸಿಜದರಳಲ್ಲವೆ । ನೀರೊಳು ಸೀತೆ । ಇರುವು ದುಂಟೆ ರಾಘವ ॥

# ವಾಲಿಸುಗ್ರೀವರ ಕಾಳಗ

## (ಕಿಷ್ಕಿಂಧಾಕಾಂಡ)

ವಾರ್ಧಿಕ

ಇರದೆ ಮೃದುವಚನದಿಂದಗ್ರಜನ ತಾಪಮಂ । ಪರಿಹರಿಸಿ ಲಕ್ಷ್ಮಣಂ ಸರ್ವೋಪಚಾರದಿಂ । ಸರಸಿಜದ ದಳಗಳಿಂ ತಣ್ಣೀರ ಹನಿಗಳಂ ತಳಿದು ಚೇತನ ಗೊಳಿಸಲು ॥ ತರುನೆರಳನಾಂತಿರಲು ಋಷ್ಯ ಮೂಕದೊಳಿರ್ಪ । ತರಣಿಸುತ ಸುಗ್ರೀವ ಕಂಡು ವಾಲಿಯ ಭಯದಿ । ಸರಸಿಜೋದ್ಭವ ಸುತಾದಿಗಳ ಪತ್ತಿರಕೆ ಕರೆದಾಗಲವನೊಡನೆಂದನು ॥

ಮಧ್ಯಮಾವತಿ ರಾಗ - ಏಕತಾಳ

ವಾನರೇಶ್ವರರೆಲ್ಲರು ಕೇಳಿ । ಏನು ಸೋಜಿಗವೆಂದು ತನಗೀಗ ಪೇಳಿ ॥ ಪ ॥ ತರಣಿ ಪ್ರಕಾಶದಿಂದ ಪಂಪಾತೀರಕೆ ಬಂದ । ಲ್ಲಿರುವಂಥ ವೀರರ್ಯಾ ರೆಂದು ನೋಡಿ ॥ ದುರುಳನಗ್ರಜನು ಸಂಹರಿಸಬೇಕೆನುತೆನ್ನ । ಕರೆಸಿ ತಾನಿವ ರನು ಕಳುಹಿಸಿರುವನೊ ॥ ವಾನರೇಶ್ವರ ॥ ೧ ॥ ವೈರಿಗಳಾಗಲಿವರು ಹಿತ ರಾಗಲಿ । ಮಾರುತಾತ್ಮಜ ನೀನು ಪೋಗಿ ಬಾರಯ್ಯ ॥ ಬೇರೊಂದು ರೂಪಿ ನಿಂದವರಿರ್ಪ ಬಳಿಗೈದಿ । ಕಾರಣೀಕರ ಕಂಡು ಕರೆತಾ ಶೀಘ್ರದಲಿ ॥ ವಾನರೇಶ್ವರ ॥ ೨ ॥

ವಾರ್ಧಿಕ

ಸಾರತರವಾಗಿ ಸುಗ್ರೀವ ಪೇಳಿದ ಮಾತ । ಸೋರಂತೆ ಕೇಳುತಾಕ್ಷಣ ದೊಳಲ್ಲಿಂ ಚಿಗಿದು । ಹಾರಿ ನಿಜರೂಪಮಂ ಬಿಟ್ಟು ಬಾಲ ಬ್ರಹ್ಮಚಾರಿ ವೇಷವ

ತಾಳುತ ॥ ವೀರರೆಡೆಯನು ಸಾರ್ದು ವಿನಯದಿಂ ವಂದಿಸುತ । ಶೂರ ರಘು ಕುಲವನಧಿರಾಕಾನಿಶಾಕರರ । ಯಾರು ನೀವೆಲ್ಲಿಗೈದುವಿರೆಂದು ಬೆಸಗೊಂಡನ ಪ್ರತಿಮ ಮರುತಾತ್ಮಜ ॥

### ದೇಶ ರಾಗ - ಏಕತಾಳ

ಯಾವಲ್ಲಿಂದ ಬಂದಿರಯ್ಯ । ನೀವು ಬಾಲಕರಿರ ॥ ಮುಂದೆ।ಯಾವಲ್ಲಿಗೆ ಪಯಣವಯ್ಯ । ಜಾಣ ಬಾಲಕರಿರ ॥ ೧ ॥ ಊರಾವುದು ತಂದೆ ತಾಯ್ಗಳಾರು ಬಾಲಕರಿರ ॥ ನಿಮ್ಮ । ಘೋರಡವಿಗೆ ಕಳುಹಿದವರು । ಯಾರು ಬಾಲಕರಿರ ॥ ೨ ॥ ಪೆಸರದೇನು ನಾಚದೆನ್ನೊ । ಳುಸಿರಿ ಬಾಲಕರಿರ ॥ ನೀವು । ಋಷಿ ಗಳಂತೆ ವೇಷದಿ ಸಾ । ಹಸದ ಬಾಲಕರಿರ ॥ ೩ ॥ ಕಾನನ ಕಾನನ ಮುಡುಕುವು । ದೇನು ಬಾಲಕರಿರ ॥ ಸುಂದ । ರಾನನ ಬಾಡಿರುವುದೇಕೆ । ಜಾಣ ಬಾಲಕರಿರ ॥ ೪ ॥

### ಕೇದಾರಗೌಳ ರಾಗ - ಅಷ್ಟತಾಳ

ಧರೆಯೊಳತ್ಯಧಿಕವೆಂದೆನಿಪಯೋಧ್ಯಾಪುರ । ದರಸನ ಸುತರು ನಾವು॥ ವರ ಪಿತನಾಜ್ಞೆಯಿಂದಡವಿಯೊಳ್ವದಿನಾಲ್ಕು । ವರುಷವಿರಲು ಬಂದೆವು ॥ ೧ ॥ ಹಿರಿಯ ನಾನೇ ರಾಮ ತಮ್ಮ ಲಕ್ಷ್ಮಣನೀತ।ಭರತ ಶತ್ರುಹರೀರ್ವರು॥ ಇರುವರೂರೊಳಗನುಜಾತರೆನ್ನಯ ಮೋಹ । ದರಸಿ ಜಾನಕಿಯೆಂಬಳು ॥ ೨ ॥ ದುರುಳ ರಾವಣ ನಾವಿಲ್ಲದ ವೇಳೆಯಲಿ ಸೀತಾ । ತರುಣಿಯನೊಯ್ಯ ಲಂದು ॥ ಶರಣ ಜಟಾಯು ಪೇಳ್ದುದರಿಂದ ನಾವಿಲ್ಲಿ । ಗರಸಿ ಕೊಂಡೈ ತಂದೆವು ॥ ೩ ॥ ತೋರುವ ಗಿರಿ ಯಾವುದದರೊಳಗಿರುವವ ।ನ್ಯಾರು ನಿನ್ನಯ ಪೆಸರು ॥ ಭೋರನೆ ತಿಳುಹೆನಲತಿ ಭಕ್ತಿ ಭಾವದಿ । ಮಾರುತಾತ್ಮಜನೆಂದನು ॥ ೪ ॥

### ಭಾಮಿನಿ

ಜೀಯ ನೀವೀಗೆಂದ ವಾನರ । ರಾಯ ಸಚಿವರು ನಾವು ನಮ್ಮಯ । ತಾಯಿ ತಂಗಿ ತದೀಯ ಕಪಿಕುಲ ಸಾರ್ವಭೌಮಂಗೆ ॥ ವಾಯುವೆನ್ನಯ ತಾತನೆನ್ನಭಿ । ಧೇಯ ಹನುಮನು ಎಂದು ಮಿಕ್ಕಿನ । ಮಾಯೆಯುವರಾವ ಳ್ಗೆನುತ ನುತಿಸಿದನು ಪಾದಕೆರಗಿ ॥

ಧನ್ಯಾಸಿ ರಾಗ - ಅಷ್ಟತಾಳ

ಪಾಹಿ ಪಂಕಜದಳಲೋಚನ । ಮುಕ್ತಿಂ । ದೇಹ್ಯಹಲ್ಯಾಶಾಪ ವಿಮೋಚನ ॥ ಮಹಾಂತ ಗುಣನಿಧಿ । ಮಹಿಮ ಸಜ್ಜನಪಾಲ ॥ ಪಾಹಿ ॥ ೧ ॥ ಅಂಗಜಪಿತ ಪಾಪನಾಶನ । ಬಾಣ । ಭಂಗ ಉತ್ತಮ ಗರುಡಾಸನ ಸಂಗರಹಿತ ದೇವೋ। ತ್ತುಂಗ ನೀಲನಿಭಾಂಗ ॥ ಪಾಹಿ ॥ ೨ ॥ ಲೋಕನಾಯಕ ಸದ್ವಿಚಾರಣ । ಕರು । ಣಾಕರ ದುರಿತ ಸಂಹರಣ ॥ ಸಾಕೇತಪುರವಾಸ। ಶರಣು ರಾಮಚಂದ್ರೇಶ ॥ ಪಾಹಿ ॥ ೩ ॥

ಮೆಚ್ಚುಗೌಳ ರಾಗ - ಅಷ್ಟತಾಳ

ಮರುಳು ಮಾತೆನ್ನೊಡನುಸಿರುವುದೇತಕೆ । ತೆರಳತ್ತ ಬ್ರಹ್ಮಚಾರಿ ॥ ಮರುತ ಸಂಜಾತನ ಬಗೆಯ ಕೇಳಿರುವೆ ಭೀ । ಕರ ಕಳೇವರ ನಾತನು ॥ ಹನುಮಂತನು ॥ ೧ ॥ ನಿಜವೇಷವಿದ ನೋಡು ಹನುಮಂತ ನಾ ನಿನ್ನ । ಭಜಕನಾಗಿರುವೆನಯ್ಯ ॥ ಅಜಸುರಾದಿಗಳು ಪೂಜಿಸುವಂಥ ಪಾದದ । ನಿಜ ಭಕ್ತಿ ನೀಡೊ ರಾಮ ॥ ಸಮರನಿಸ್ಸೀಮ ॥ ೨ ॥ ಸಾಕಯ್ಯ ಬಳೆದುದು ಭೂವ್ಯೋಮ ಪಾತಾಳ । ಲೋಕವ ನಡುಗಿಸಿದಿ ॥ ಹೇ ಕಪಿವರ ಮೊದಲಂದವ ಧರಿಸು ವಿ । ವೇಕದ ಮತಿಯಿದೆಂತು ॥ ನಿನಗೆ ಬಂತು ॥ ೩ ॥ ಹಿಂದೆ ಬಾಲ್ಯ ದೊಳೆನ್ನ ಮಾತೆಯಂಜನ ದೇವಿ । ಎಂದ ಉಪದೇಶದಲಿ ॥ ಸಂದರ್ಶನದಿ ಜನ್ಮ ಸಫಲವಾಯಿತು ದಯ । ದಿಂದೊಲಿದಿಷ್ಟವೀಯೊ ॥ ನೀ ಕಾಯೊ ॥ ೪ ॥ ಸುಗ್ರೀವನೆಂಬ ಮರ್ಕಟನು ನಿನ್ನೀ ಪಾದಾ । ನುಗ್ರಹ ಬಯಸಿಹನು॥ ಅಗ್ರಜ ವಾಲಿಯ ಭಯದಿಂದ ಈ ಪರ್ವ । ತಾಗ್ರದೊಳಿಹ ದಯ ॥ ಮಾಡ ಬೇಕಯ್ಯ ॥ ೫ ॥ ಮಾರುತಾತ್ಮಜ ನಿನ್ನ ಸಂಗತಿಗಳನು ವಿ । ಚಾರಿಸಲೇ ಕರಿತೇ ॥ ತೋರಿಬೇಗದೊಳೀಗ ಸಖ್ಯವ ಮಾಡಿಸು । ಸಾರಸಸಖಿ ಸುತನ ॥ ಸುಗ್ರೀವನ ॥ ೬ ॥ ಉಗ್ರಗಧಸ್ತಿಸಂಜಾತನು ತವ ಪಾದಾ । ನುಗ್ರಹ ಬಯಸಿಹನು ॥ ಅಗ್ರಜವಾಲಿಯ ಭಯದಿಂದಲೀ ಪರ್ವ । ತಾಗ್ರದಿ ನೆಲ ಸಿರುವ ॥ ನಾವ್ ಪೋಗುವ ॥ ೭ ॥

ಕಂದ

ಈ ಪರಿಯುಸುರುತ ಮಾರುತಿ । ಭೂಪಾಲರ ನಿಜಪೆಗಲಿನೊಳೇರಿಸು ತ್ತೈತಂ-॥ದಾ ಪರ್ವತಕವದಿರ ಪ್ರ।ತಾಪವೆನುಸುರಿದನಂದಾ ಭಾಸ್ಕರಸುತಗಂ ॥

ಘಂಟಾರವ ರಾಗ - ರೂಪಕತಾಳ

ಭಾನು ನಂದನ । ವಾನರೇಶ್ವರ ॥ ನೀನು ಲಾಲಿಸು । ಮಾನಸವಿಟ್ಟು ॥ ೧ ॥ ರಾಮನೀತನು । ರಾಜೀವಾಕ್ಷನು ॥ ಭೂಮಿಪಾಲಕ । ಭಾನು ವಂಶಜ ॥ ೨ ॥ ಸಾಕೇತಾಧಿಪ । ನಾದ ದಶರಥ ॥ ನಾ ಕುಮಾರರು । ಅನುಜಲಕ್ಷ್ಮಣ ॥ ೩ ॥ ಮಾತೆ ಕೈಕೆಯು । ಮಾತಿಗೋಸುಗ ॥ ಈತ ರಾಘವ । ಸೀತೆಯು ಸಹ ॥ ೪ ॥ ಧಾರಿಣೀಪತಿ । ಧರ್ಮ ಮಾರ್ಗದಿ ॥ ಘೋರಡವಿಯಲಿ । ವಾಸಿಸುತ್ತಿರೆ ॥ ೫ ॥ ಪಂಚವಟಿಯೊಳು । ಪೋಗಿ ರಾವಣ ॥ ವಂಚನೆಯಿಂದ । ಒಯ್ದು ಸೀತೆಯ ॥ ೬ ॥ ಕೊಂಡು ಪೋದರೆ । ಕಾಡು ದಾರಿಯ ॥ ಕಂಡುಕೊಳ್ಳುತ್ತೈ । ತಂದರಿಲ್ಲಿಗೆ ॥ ೭ ॥ ಕಾರಣೀಕರು । ಕಂಡರೀರ್ವರು ॥ ಸೂರಿಯಾತ್ಮಜ । ಸುಲಭರಲ್ಲಯ್ಯ ॥ ೮ ॥

ಘಂಟಾರವ ರಾಗ - ಅಷ್ಟತಾಳ

ರಾಮ ಹರೇ ರಾಮ । ರಾಮ ಹರೇ ರಾಮ । ರಾಮ ಹರೇ ಪಾಹಿ । ರಾಮ ಹರೇ ॥ ಪ ॥ ಭೀಮಪರಾಕ್ರಮಿ ಭಕ್ತರಕ್ಷಾಮಣಿ । ಕೋಮಲ ರೂಪ ಹರೇ ॥ ಅ ॥ ಇಕ್ಷ್ವಾಕುವಂಶ ಭೂಪಾಲರು ಧರ್ಮಾಸಂ । ರಕ್ಷಕರಧಿಕ ರಲ್ಲೈ ॥ ಮಮಾ । ಪೇಕ್ಷೆಯಿಂದೊಂದುಂಟು ಕೇಳಿ ನೀ ನ್ಯಾಯವ । ನೀಕ್ಷಿಸಿ ಸಲಹಬೇಕು॥ ೧ ॥ ಅಗ್ರಜವಾಲಿ ಪರಾಕ್ರಮದಿಂದೆನ್ನ । ನಿಗ್ರಹಿಸಲು ಬಗೆದು ॥ ತಾ ಮ । ಹೋಗ್ರದಿ ಹೊರಗಟ್ಟಿ ಕೂಡಿಕೊಂಡಿರುವ ವಾ । ಣಿಗ್ರಹಣದ ಸತಿಯು ॥ ೨ ॥ ಶೌರ್ಯಬಲಾನ್ವಿತನಾತನ ಭಯಕಾಗಿ । ಸೂರ್ಯನಪ್ಪಣೆಯಿಂದ ॥ ಮುನಿ । ವರ್ಯ ಮಾತಂಗ ಶಾಪವಿದ್ದುದರಿಂದ। ಧೈರ್ಯದಿಂದಿರುವೆನಿಲ್ಲಿ ॥ ೩ ॥ ರಾವಣನೆಂಬ ನಿಶಾಚರನನು ಹಿಂದೆ । ಕೋಪಿದ ಹಿಡಿದು ತಂದು ॥ ತಾರಾ । ದೇವಿಯಂಗದನ ತೊಟ್ಟಿಲಿಗೆ ಕಟ್ಟಿದ। ನೀತ । ದೇವೇಂದ್ರ ಸುಕುಮಾರಕ ॥ ೪ ॥ ದೇವತೆಗಳು ಸಹ ಅಂಜುವರಣ್ಣನ। ಶಿವ ಪರಾಕ್ರಮಕೆ ॥ ರಾಮ । ದೇವ ನಾವಿಬ್ಬರು ಜೋಡಾದೆವೀ ವಾಲಿ । ರಾವಣರಿಂದ ಹೀಗೆ ॥ ೫ ॥ ಕಣ್ಣಾರೆ ಕಂಡರೆ ಬಿಡುವೆನೆ ಸೀತೆಯ । ನೆನ್ನ ಮನೋಃಪ್ರೀತಿಯ ॥ ನಿನ್ನ । ಅಣ್ಣನ ಪಾಡೇನು ವಾಲಿಯ ಕೊಂದೀಗ । ಮಣ್ಣುಗೂಡಿಸುವೆನೆಂದ ॥ ೬ ॥ ಜಾಣ ನೀನಾದರೆ ನೋಡು ಕೈಯೊಳಗಿದ್ದ । ಬಾಣಘಾತಂಗಳನು ॥ ವಾಲಿ । ಪ್ರಾಣವ ಕೊಂಡೊಂದು ನಿಮಿಷದಿ ನಿನ್ನಯ । ರಾಣಿಯ ನಿನಗೀವೆನು ॥ ೭ ॥

ನಾದನಾಮಕ್ರಿಯೆ ರಾಗ - ಅಷ್ಟತಾಳ

ಅಮಮ ವಾಲಿಯ ರಾಮ ಕೊಂದರೆ। ಸತಿ । ರುಮೆಯ ಬಿಡಿಸಿ ನೀನು ತಂದರೆ ॥ ನಿಮಿಷದೊಳೀ ಸೇನೆ ಸಹ ಬಂದು । ಪಾದ । ಕಮಲದ ಸೇವೆ ಮಾಡುವೆನೆಂದು ॥ ೧ ॥ ನುಡಿದ ಮಾತಿಗೆ ಎರಡಿಲ್ಲದೆ । ಇಕ್ಕೊ । ಕೊಡುವೆ ನಂಬುಗೆ ಮಾತಷ್ಟಲ್ಲದೆ ॥ ಬಿಡದೆ ಕೈತಟ್ಟುತೊಬ್ಬೊಬ್ಬರು । ಒಂದೆ । ದೃಢಮನದವರಾದರಿಬ್ಬರು ॥ ೨ ॥ ತನ್ನೆಯನಸುರ ಕದ್ದೊಯ್ವಾಗ । ತನ್ನ । ಚಿನ್ನಗಳೆಲ್ಲವ ತೆಗೆದಾಗ ॥ ಎನ್ನ ಪರ್ವತ ಕಿಟ್ಟಳದ ನಾನು । ಕಟ್ಟಿ । ಚೆನ್ನಾಗಿಟ್ಟಿರುವೆ ನೋಡಿದ ನೀನು ॥ ೩ ॥ ಎಂದು ಸರ್ವಾಭರಣಗಳನ್ನು । ಬೇಗ । ತಂದು ಕೈಯಲಿ ಕೊಟ್ಟವುಗಳನ್ನು ॥ ಇಂದಿರೆಯರಸನು ನೋಡಿದ । ಮನ । ನೊಂದು ಬಹಳ ಚಿಂತೆ ಮಾಡಿದ ॥ ೪ ॥

ನೀಲಾಂಬರಿ ರಾಗ - ಆದಿತಾಳ

ಕಂಜಾನನೆ ಕಲಕೀರವಾಣಿ । ಸಂಜೀವನೆ ಸರಸಕಲಾಪೆ ॥ ಮಂಜುಳ ತರಂಗಿಣಿ ಮನೋಹರೆ । ಕುಂಜರಗಮನೆ ನಿಧಾನೆ ॥ ೧ ॥ ಫಣಿವೇಣಿಯ ಕುಚಗಳ ಮಧ್ಯದಿ । ಕುಣಿದಾಡುವ ಸರವಿದೆ ಸಹಜ ॥ ಮಣಿಕಂಕಣ ಮುದ್ರಿಕೆಗಳ ಸರ । ಪಣೆಯಂದವ ಬಣ್ಣಿಸಲೇನ್ನೈ ॥ ೨ ॥ ಲೋಲಾಕ್ಷಿಯ ಕರ್ಣದೊಳೊಪ್ಪುವ । ಓಲೆಯೊಳಿರಿಸಿದ ಮೌಕ್ತಿಕವು ॥ ಬಾಲಾರ್ಕನ ಜರೆಯುವ ಮೂಗುತಿಗಿಟ್ಟ । ನೀಲದ ಹರಳಿದಕೊ ಸಹಜಾತ ॥ ೩ ॥ ನೋಡವಳಾಭರಣವ ಸಹಜವೆ । ಚೂಡಾಮಣಿ ನಾಸ್ತಿಯಿದರೊಳಗೆ ॥ ಮೂಢಾತ್ಮಕನೊಪ್ಪಂಜಿಕೆಗೆ ಬೀ । ಸಾಡಿದಳೆಲ್ಲಿಯೊ ಎನಲೆಂದ ॥ ೪ ॥ ಕಾಲುಂಗುರ ಬಲ್ಲೆನು ಹೊರತಾಗಿ । ಮೇಲಾದಾಭರಣವನರಿಯೆ॥ ನೀಲಾಳಕ ನಿರ್ಮಲ ಗುಣನಿಧಿ ನೀ । ನೀ ಪರಿ ಚಿಂತಿಸಲೇಕೆ ॥ ೫ ॥

ವಾರ್ಧಿಕ

ಇನಸುತನು ಕೊಟ್ಟ ಸರ್ವಾಭರಣಮಂ ಕಂಡು । ಮನಸಿನಲಿ ನೊಂದು ಕೊಂಡವನಾಗಿ ಮತ್ತೊಡನೆ । ಕವಸಕಂಡೆಚ್ಚರಿಕೆದೋರ್ವಂತೆ ಕ್ಲೇಶಂಗಳಮ ಮರೆವುತಾಕ್ಷಣದೊಳು ॥ ಜನಕನಂದನೆಗಿಡುವ ಪುಣ್ಯವಿರಲವಳು ಬರು ।

ವನಕ ತೆಗೆದಿರಿಸು ಸುಗ್ರೀವ ನೀನಿನ್ನು ಸುರ । ಪನ ಸುತನ ಸಂಗರಕೆ ಬರ
ಹೇಳೆನಲ್ ಶಕ್ತಿ ಪರಿಕಿಸಲು ಮನದಂದನು ॥

ಮಾರವಿ ರಾಗ - ಝಂಪೆತಾಳ

ರಾಘವ ಮಹಾವೀರ ಕೇಳು ಸುವಿಚಾರ । ಈಗೆನ್ನ ಸಂಶಯವ ಪರಿ
ಹರಿಸು ಪೂರ ॥ ಪ ॥ ದುಂದುಭಿಯ ಒಡಲಧರೆ। ಯಿಂದಲಮರೇಂದ್ರ ಸುತ।
ನೊಂದು ಪೊಳಿವನು ಸಹಸ । ದಿಂದಲೆತ್ತುವನು । ಇಂದು ನೀನೆತ್ತಿದರೆ ॥
ಸಂದೇಹ ಪೋಗಿ ಬಳಿ । ಕೊಂದೆ ಮಾತದಿಂದಲಿಹೆ । ನೆಂದು ಪೇಳಿದನು
॥ ೧ ॥ ಕಾಲತುದಿಯಿಂದ ಪೂ । ರೇಳು ಯೋಜನ ಬಿಸುಟ । ಪೋಲಿ
ತಾಳೆಯ ಮರಗ । ಳೇಳ ಕಡಿದಿಡಲು ॥ ಶ್ರೀಲೋಲ ಶರಣೆಂದು । ಕಾಲ್
ಗೆರಗಲು ರವಿಜ । ವಾಲಿಯನು ರಣಕೆ ಬರ । ಹೇಳೆಂದ ರಾಮ ॥ ೨ ॥ ರಘು
ವರನ ಸಾಹಸವ ಮಿಗೆ ಕಂಡು ಸುಗ್ರೀವ । ನಗಲಿ ಭಯವನು ಕೀರು
ಗಳೊಡನೆ ಬಂದು । ಜಗಳಕಣ್ಣನ ಕರೆಯ । ಲಗಣಿತ ಪರಾಕ್ರಮದಿ । ಹಗರಣ
ಕ್ಕೊದಗಿ ತ । ಮ್ಮಗೆ ನುಡಿದ ವಾಲಿ ॥ ೩ ॥

ಕಂಠಾಭರಣ ರಾಗ - ಮಟ್ಟೆತಾಳ

ಭಾನುತನುಜ ಭಳಿರೆಯನುಜ । ಬಂದೆಯಾ ಮಮಾ । ಏನು ಧೈರ್ಯ
ದಿಂದ ಕರೆದೆ । ಯೆಲೊ ಪರಾಕ್ರಮ ॥ ೧ ॥ ವಹಾನಿನಿಯನು ಬಿಡುವುದಕ್ಕೆ।
ಮನಸು ಬಾರದೆ ॥ ನೀನು ಕೆಡುವೆ ನೀತಿಯಲ್ಲ । ನಿನಗೆ ಸಾರಿದೆ ॥ ೨ ॥
ಹಾನು ಸತಿಯಕೊಡೆನು ಜವದಿ । ಮರಳಿ ಪೋಗೆಯಲಾ ॥ ನೀನು ಹಿಂದೆ
ಪಡೆದ ಭಂಗ । ವೆಲ್ಲ ಮರೆತೆಲಾ ॥ ೩ ॥ ಅಣಕವಲ್ಲ ಮೊದಲಿನಂತೆ । ಅಣ್ಣ
ರಣದಲಿ ॥ ಸೆಣಸಿ ನೋಡು ಸಲುಗೆಯಿಂದ । ಶೌರ್ಯಗುಣದಲಿ ॥ ೪ ॥
ಎಂದ ಮಾತ ಕೇಳಿ ಕೋಪ । ದಿಂದಲನುಜಗೆ ॥ ಒಂದು ಗಿರಿಯ ಕಳಚಿ
ಬಿಸುಟ । ನಂದು ರವಿಜಗೆ ॥ ೫ ॥ ಬರುವ ಗಿರಿಯ ಕಂಡು ದೊಡ್ಡ ।
ಪರ್ವತಂಗಳ ॥ ಸುರವನಣುಗನಂಗಕಿಟ್ಟ । ತರತರಂಗಳ ॥ ೬ ॥ ಮರ
ಮರಂಗಳುಭಯ ಬಲದೊ । ಳುರುಳ್ವ ಗಿರಿಗಳ ॥ ಮೆರೆವ ರಭಸಕಮರ
ರಂಜು । ತಿರುವ ಪರಿಗಳ ॥ ೭ ॥ ಅದ್ರಿಮರಗಳೆಲ್ಲ ತೀರಿ । ತಿಬ್ಬರಿದಿರಲಿ ॥
ಗುದ್ದು ತೊಡಹನೆ ಕೈಯ ಕಾಲೊ । ಳೊದ್ದು ಭರದಲಿ ॥ ೮ ॥ ಉರಕೆ

ಮುಷ್ಟಿಯಿಂದ ತಿವಿದ । ಭರದ ಪೆಟ್ಟಿಗೆ ॥ ತಿರುಗಿ ತಲೆಯು ಭಾನುತನುಜ । ನೊರಗೆ ಸೃಷ್ಟಿಗೆ ॥ ೯ ॥ ಬೀಳಲನುಜನಂಗಕೆರಡ । ಕಾಲೊಳೊದ್ದನು ॥ ಮೂಳ ಹೋಗುಸಾಯೆನುತ್ತ । ಮನೆಗೆ ನಡೆದನು ॥ ೧೦ ॥ ಹೋದನಣ್ಣ ನೆಂದು ತಿಳಿವು । ತಾಧರಿಸಿದನು ॥ ಕ್ರೋಧದಿಂ ಧರಾಧಿಪತಿಯ । ಮೂದ ಲಿಸಿದನು ॥ ೧೧ ॥

### ಘಂಟಾರವ ರಾಗ - ರೂಪಕತಾಳ

ವಿಶ್ವ ನಾಯಕ । ನಿನ್ನ ವಾಕ್ಯವ । ವಿಶ್ವಾಸವೆಂದು ನಂಬಿದೆನಿಂದು ॥ ೧ ॥ ಸೂರ್ಯವಂಶದ । ರಾಯರಾಡಿದ । ಕಾರ್ಯ ತಪ್ಪದು । ಕಪಟ ವಲ್ಲಿದು ॥ ೨ ॥ ಎನ್ನ ವೈರಿಯ । ಮುಂದೆ ನಿಲ್ಲಿಸಿ । ಕಣ್ಣಲಿ ಕಂಡೆ । ಚಿನ್ನಾಗಿಯೆ ॥ ೩ ॥ ಇನ್ನು ಸಾಕಯ್ಯ । ನಿನ್ನ ತಳ್ಳಿಯು । ವಹಾನವಾಧಿಪ । ಮಂಜುಳಾಕರ ॥ ೪ ॥ ಧೈರ್ಯ ತಾಳಯ್ಯ । ಸೂರ್ಯನಂದನ । ಕಾರ್ಯ ವೆಸಗಲು । ಮೋಸವಾಯಿತು ॥ ೫ ॥ ವಾಲಿಯ ನಿನ್ನ । ಕಾಣಲೀರ್ವರ । ಆಳಿಘೀದವೆ । ತಿಳಿಯದಾಯಿತು ॥ ೬ ॥ ನಿನ್ನ ಮೋಸದಿ । ಕೊಲಲು ಲೋಕದಿ । ಎನ್ನ ನಿಂದಿಸಿ । ಜರೆವರಲ್ಲಯ್ಯ ॥ ೭ ॥ ಬಾಲಕ ಗಜ । ಪುಷ್ಪದ ನಿಜ । ಮಾಲೆಯಿಟ್ಟರೆ । ಇವನ ಕೊರಳಿಗೆ ॥ ೮ ॥ ಮಲ್ಲ ಸಾಹಸ । ವಾಲಿ ಯನ್ನು ನಾ । ಕೊಲುವೆನೀಕ್ಷಣ । ಇಲ್ಲ ಸಂಶಯ ॥ ೯ ॥ ಮಗಧ ಜಾತೆಯ । ಮಗನ ರೀತಿಯ । ತೆಗೆದು ಮಾಲೆಯ । ಇಟ್ಟಡಿನಜಗೆ ॥ ೧೦ ॥ ತರಣಿನಂದನ । ತೆರಳು ಇನ್ನು ನೀ । ಧುರಕೆ ವಾಲಿಯ । ಕರೆದು ಬಾರಯ್ಯ ॥ ೧೧ ॥

### ಶಾರ್ದೂಲವಿಕ್ರೀಡಿತಂ

ಶ್ರೀರಾಮಾಖ್ಯನ ಮಾತ ಕೇಳ್ದು ರವಿಜಂ ಸದ್ಧೈರ್ಯದಿಂದಾಕ್ಷಣಂ । ಶೂರತ್ವಂಗಳ ತೋರ್ಪೆನೆಂದು ಬರುತಾ ಕಿಷ್ಕಿಂಧದಾ ದ್ವಾರದಿ ॥ ಘೋರಾ ಕಾರದಿ ಕೂಗೆ ಕೇಳ್ದು ಹರಿಜಂ ಕೋಪಾಗ್ನಿಯಿಂದೇಳಲು । ತಾರಾದೇವಿ ವಿವೇಕದಿಂದ ತಡೆದಾ ಪ್ರಾಣೇಶಗಿಂತೆಂದಳು ॥

### ಮುಖಾರಿ ರಾಗ - ಅಷ್ಟತಾಳ

ನೀತಿಯಲ್ಲ ಪೋಪುದಿಂದು । ನೀ ಕೇಳು ಮತ್ಪ್ರಾಣಕಾಂತ ॥ ಪ ॥ ಜಾತಾಂಗದ ಪೇಳಿದೊಂದು । ಮಾತ ಕೇಳಿದೆ ನಾನಿಂದು ॥ ಅ ॥ ಪುಂಡರೀಕ

ನೇತ್ರಪ ವಡಾ । ತರ್ಾಂಡಜಾತ ಸುಗ್ರೀವನು । ಕಂಡು ತವೊಳ್ಳಂತರಂಗ । ಗೊಂಡೇಕಾಂತದಿ ॥ ೧ ॥ ಚಂಡವಿಕ್ರಮ ರಾಮನ । ಹೆಂಡತಿಯನ್ನು ರಾವಣ । ಕೊಂಡು ಪೋಗಲಾ ರಕ್ಕಸನ । ಖಂಡಿಸಲಾಗಿ ॥ ೨ ॥ ನಿನ್ನ ಕೊಂದಾತನ ಸತಿ । ಯನ್ನು ಬಿಡಿಸಿಕೊಡುವೆನೆಂದು ವಡಾನವಾಧಿಪತಿಯು ಸತ್ಯ । ವನ್ನಿತ್ತ ನಂತೆ ॥ ೩ ॥ ನಿನ್ನ ತಮ್ಮ ಸೀತಾದೇವಿ । ಯನ್ನು ತರುವ ಬಗೆಗಾಗಿ । ತನ್ನ ಕಪಿಸೇನೆ ಸಹಿತ । ಸನ್ನಾಹವಾಗಿ ॥ ಬಂದು ರಾಮ ಸೇವೆ ವಹಾಳ್ವೆ । ನೆಂದು ಭಾಷೆ ಕೊಟ್ಟ ಮೇಲೆ । ಸಂದೇಹವಿಲ್ಲದೆ ತವೊ್ಮ । ಳೊಂದಾದರಂತೆ ॥ ೫ ॥ ದುಂದುಭಿಯ ಕಾಯುವ ಕಾ । ಲಿಂದ ಚಿಮ್ಮಿಯೋಜನಕ್ಕೆ । ಬಂದು ಬೀಳಲಾ ಮೇಲೆ ಕೇ । ಳೊಂದು ಕಾರ್ಯವ ॥ ೬ ॥ ಏಳು ತಾಳ ವೃಕ್ಷಗಳನು । ಸೀಳು ಮಾಡಲೀಗ ನಿಮ್ಮ । ಮೇಲೆ ಕೂಡಿ ಬಂದರಂತೆ । ಕಾಳಗಕೆಂದು ॥ ೭ ॥ ನಾಳೆ ನೋಡಿಕೊಂಬ ಯುದ್ಧ । ವೇಳೆಯಲ್ಲವಿಂದೆನುತ । ಕಾಲಮೇಲೆ ಬಿದ್ದು ತಾರೆ । ಹೇಳಿಕೊಂಡಳು ॥ ೮ ॥

ಶಂಕರಾಭರಣ ರಾಗ - ಅಷ್ಟತಾಳ

ಚಿತ್ರತರಾಂಗಿ ಕೇಳ್ಬಾಲೆ । ಚಿತ್ರವಾಯ್ತು ನಿನ್ನ ಮಾತು । ಮಿತ್ರಜಾತ ಗಂಜುವಂಥ । ವರ್ತವಾನವ್ಪಂಟೆ ಕಾಂತೆ ॥ ೧ ॥ ಧಾತ್ರಿಯೊಳೆನ್ನ ಧಟಿಗೆ ತ್ರಿ । ಮೂರ್ತಿಗಳಂಜುವರ್ಸೆ । ವತ್ತೆ ರಾಮಗೀವರೆಂಬ । ಮರ್ತ್ಯ ರಿಂದಲೇನಪ್ಪದು ॥ ೨ ॥ ಚಿತ್ತದಲ್ಲಿ ಶಂಕೆ ಬೇಡ । ವತ್ತೆ ನೋಡೆನ್ನ ಕೈವಾಡ । ಅತ್ತ ಹೋಗು ತಡೆಯಬೇಡ । ಮತ್ತಕಾಶಿನಿಯೆ ಗಾಢ ॥ ೩ ॥

ಭಾಮಿನಿ

ಪುರವ ಮುತ್ತಿರೆ ವೈರಿಸೇನೆಯು । ಶರಭ ಶತಬಲಿಗಜಗವಯ ಸಂ । ಗರಭಯಂಕರ ಸುಮುಖ ದುರ್ಮುಖ ಗಂಧವಾದನರ ॥ ಜರಿಯಗೆಡ ಹುತಲಂಗದನ ಪುರ । ಕಿರಿಸಿ ಜಾಂಬವ ಗಜ ಸುಷೇಣರ । ನೆರವಿಯಲಿ ನಡೆ ತಂದು ರವಿಜನ ತಡೆದನಾ ವಾಲಿ ॥

ಮಾರವಿ ರಾಗ - ಝಂಪೆತಾಳ

ಮತ್ತು ಮತ್ತನ್ನೊಡನೆ । ನಿತ್ತುಕೊಂಡೀ ರಣದಿ । ಉತ್ತರವ ಕೊಡುವೆ ಬಲು । ಧೂರ್ತ ಸುಗ್ರೀವ ॥ ಧೂರ್ತನಲ್ಲದಡೆನ್ನ । ಪತ್ನಿಯನು

ಸೆರೆವಿಡಿದು। ರಕ್ತಮುದದಿಂದ ಕೊಡ। ದಿಪ್ಪೆಂಆ ವಾಲಿ ॥ ೧ ॥ ತಮ್ಮನೆಂಬು ದರಿಂದ । ಧರ್ಮವರಿತೀಗ ಬಿಡೆ । ಶರ್ಮವಿಡಿದೀ ಪರಿಯ । ಹೆಮ್ಮೆ ಬಂತಲ್ಲ॥ ಹೆಮ್ಮೆಯಲ್ಲದಡಿನಿತು । ದುರ್ಮಾರ್ಗಿಯಹಾಗಿ ದು । ಷ್ಕರ್ಮಗತಿ ನಡೆಸು ವುದು । ಧರ್ಮವೇನಣ್ಣ ॥ ೨ ॥ ಮೊದಲೈದು ಬಾರಿ ನೋ । ಡಿದೆ ನಿನ್ನ ಶೌರ್ಯಗಳ । ನದನೆಲ್ಲ ಮರೆತು ಬಂ । ದಿದಿರಾದೆ ಕಳ ॥ ಇದನೋಡು ಹೊಸ ಪರಿಯ । ಕದನ ಕೌಶಲಗಳನು । ತುದಿಗಾಲ ನಿನಗೆ ಬಂ । ದೊದಗಿ· ತೀದರಿಯ ॥ ೩ ॥ ಬಾಯಿಂದ ಬಂದುದನು । ಬಗುಳಿ ನೀನೆನ್ನೊಡನೆ । ಸಾಯದಿರು ಪೆಟ್ಟಿನಲಿ । ಸಟೆಯಲ್ಲ ತಮ್ಮ ॥ ನ್ಯಾಯವುಸಿರಿದ ಮಾತು । ನಡತೆತಪ್ಪಿದ ಬಳಿಕ । ನಾಯಿಂದ ಕಡೆಯಾಗಿ । ಬೊಗಳುವುದು ಸಹಜ ॥ ೪ ॥ ಹೆಚ್ಚು ಮಾತುಗಳೇತ । ಕೆಚ್ಚರಿತು ಕೊಳ್ಳೆನುತ । ಕಿಚ್ಚಿನಂದದ ಶರವ । ನೆಚ್ಚಿನಾ ವಾಲಿ ॥ ಚುಚ್ಚರದಿ ಬಚ್ಚಿಪೊಸ । ಪೊಚ್ಚ ಕಣೆಗಳನೆಲ್ಲ ನುಚ್ಚು ನುರಿ ಗೈದ ಖತಿ । ಪೆಚ್ಚ ಸುಗ್ರೀವ ॥ ೫ ॥

ಪಂಚಾಗತಿ ರಾಗ - ಮಟ್ಟೆತಾಳ

ಜಾಣನಹುದೊ ಭಳಿರೆ ತಮ್ಮ । ತ್ರಾಣವನ್ನು ಕಂಡೆನೀಗ । ಲಾನಲಾ ಪಡಿದರ ಕೊಳ್ಳೊ । ಮಾಣದದ್ರಿಯ ॥ ಪಾಣದಂಥ ಗಿರಿಯ ಕಿತ್ತು । ಕಾಣುವಂತೆ ಮರನ ಕೊನೆಯ । ಭಾನುಸುತನು ಬಿಸುಟ ಸುರಪ । ಸೂನು ಪಿದಿರಿಗೆ ॥ ೧ ॥ ಬರುವ ಗಿರಿಯ ಕಂಡು ವಾಲಿ । ಕರದಿ ಪಿಡಿದು ಮುರಿವು ತದನು । ತಿರುಪಿ ಬಿಸುಟ ಕೋಪದಿಂದ । ತರಣಿ ತನುಜಗೆ ॥ ಭರಿತರೋಷ ದಿಂದಲದನು । ಮುರಿದು ಗರ್ಜಿಸುತ್ತ ದೊಡ್ಡ । ಪರುವತವನು ಬಿಸುಟ ನಿಂದ್ರ । ತರಳನದಿರಿಗೆ ॥ ೨ ॥ ತಂಡತಂಡ ದದ್ರಿಗಳನು । ಕೊಂಡುಕೊಂಡು ಬಿಸುಡುತಿರಲು ॥ ಚೆಂಡಿನಾಟವಾಯಿತಮರ । ತಂಡ ಬೆದರಲು ॥ ಹಿಂಡು ಹಿಂಡುಮರನ ಕಿತ್ತು । ಕೊಂಡು ತಂದು ಕೊಡುವರ್ಮಾತ್ತು । ದಂಡ ಗೈಯೊಳಿಡಲು ಸಮರ । ದಿಂಡುಗೆಟ್ಟಿತು ॥ ೩ ॥ ಅಷ್ಟದೆಸೆಯೊಳಿರುವ ವೃಕ್ಷ । ಬೆಟ್ಟವೆಲ್ಲ ತೀರಲಾಗ । ಮುಷ್ಟಿಯುದ್ಧದಲ್ಲಿ ಹೆಣಗು । ತಟ್ಟಿ ಸದೆ ದರು ॥ ಪೆಟ್ಟು ಪೆಟ್ಟಿಗೊಮ್ಮೆ ಕೂಗು । ಶಟ್ಟಿಬಡೆದು ಹಿಡಿದು ತಿವಿಯೆ । ಜಟ್ಟಿಕಾಳಗಕ್ಕೆ ಬೆದರಿ ॥ ತಷ್ಟ ದೆಸೆಗಳು ॥ ೪ ॥ ಇಂತು ಹೆಣಗುತವರು ಮನದಿ । ಪಂಥವಿಡಿದು ಬಿಡದೆ ಸೆಣಸ । ಲಂತರಂಗದೊಳಗೆ ರವಿಜ ।

ಚಿಂತಿಸಿದನು ॥ ಅಂತ್ಯಕಾಲ ಶರಣನಿಂಗೆ । ಬಂತೆನುತ್ತ ತಿಳಿದು ರಾಮ । ನಿಂತುಕೊಂಡು ಧನುವ ಮರೆಯೊ । ಳ್ಸಂತವಿಸಿದನು ॥ ೫ ॥ ರಾಮ ಶರವ ಪೂಡಿ ಸು । ತ್ರಾಮನಣುಗನಂಗಕೆಸೆಯೆ । ಭೂಮಿಗೊಡನೆ ಬಿದ್ದಕೀಶ । ಸ್ತೋಮದೊಡೆಯನು ॥ ಆ ಮಹಾರಾಮ ಶರವ । ವಾಮ ಹಸ್ತದಲ್ಲಿ ಓಡಿದು । ಭೂಮಿಪಾಲನೊಡನೆ ನುಡಿದ । ಸೇಮದಿಂದಲಿ ॥ ೬ ॥ ಬೋಧೆ ಯಿಂದ ಸಮರದೊಳಗೆ । ಸೋದರನ್ನ ಮೊಗವ ನೋಡಿ । ಕ್ರೋಧವಿಡಿದು ಜರೆವುತಿವರ । ಮೂದಲಿಸಿದನು ॥ ಏ ದುರಾತ್ಮ ಕಪಟ ವಿದ್ಯ । ಸಾಧಿಸಿದೆ ಛಳಿರೆ ಇಂ । ತಾದರೆಯು ಕೀರ್ತಿಬಂತು । ಮೇದಿನಿಯೊಳು ॥ ೭ ॥

### ಮೂರವಿ ರಾಗ - ಅಷ್ಟತಾಳ

ಜಾಣನಹುದಹುದೊ । ಸಂಗರಕತಿ । ತ್ರಾಣನಹುದಹುದೊ ॥ ಕ್ಷೋಣಿ ಯೊಳ್ ನಿನಗೆಣೆ । ಗಾಣೆ ಪರಾಕ್ರಮಿ । ಜಾಣನಹುದಹುದೊ ॥ ಪ ॥ ಇನವಂಶದರಸುಗಳೊಳಗೆ । ಹಿಂದೆ । ಜನಿಸಿದವರು ನಿನ್ನ ಕೆಳಗೆ ॥ ಘನ ಚೋರತನದ ಶಿಖಂಡಿ ವಿದ್ಯೆಯನೆಷ್ಟು । ದಿನ ಸಾಧಿಸಿದೆಯೊ ನೀನು । ಲಂಡಿಗಳ ದು । ರ್ಗುಣವ ಕೈಕೊಂಡೆಯೇನು । ನಿನ್ನಂಥ ಕು । ಜನರಿಲ್ಲ ಸಾಕ್ಷಿಗಿನ್ನು ॥ ರಾಘವ ಬಲು । ಜಾಣನಹುದಹುದೊ ॥ ೧ ॥ ಗಂಡ ನಿಲ್ಲದ ಹೆಂಗಳಂತೆ । ನಾಚಿ । ಕೊಂಡು ನೀ ಮರೆಯಲ್ಲಿ ನಿಂತೆ ॥ ಹೆಂಡತಿ ಗಾಗಿ ಕಂಡವರ ಮಾತಿನ ಮೇಲೆ । ಬಂಡಾಟಗಳ ಮಾಡಿದೆ । ಹಸ್ತದಲ್ಲಿ ಬಿಲ್ಗೊಂಡು ಬಾಣವ ಪೂಡಿದೆ । ಜೋಡಾಗಿದ್ದ । ಗಂಡುಸುತನ ನೋಡಿದೆ॥ ರಾಘವ ಬಲು । ಜಾಣನಹುದಹುದೊ ॥ ೨ ॥ ಲೇಸಾಯಿತಯ್ಯ ನಿನ್ನಂಗ । ಇನ್ನು । ಏಸು ಪೇಳಿದರು ಪ್ರಸಂಗ ॥ ಮೋಸದೊಳೆನ್ನ ತರಿದೆ । ನಿನಗಿದ ರಿಂದ । ಲೇಸು ಕೀರ್ತಿಗಳು ಬಂತು । ಕಾಯದೊಳಿದ್ದ । ಪಾಶದಾಸೆಗಳು ಸಂತು । ಮತ್ಸರವೆಂಬ ಘಾಸಿವಂಥಗಳೆನ್ನೆಂತು ॥ ರಾಘವ ಬಲು । ಜಾಣ ನಹುದಹುದೊ ॥ ೩ ॥

### ಭಾಮಿನಿ

ನೋಡಿದನು ಮುರಿದವನಿವನನ । ಲ್ಲಾಡಿದನು ತುದಿಬೆರಳನಹುದೈ । ಜೋಡಿಯಿಲ್ಲದ ಖರೆಯನಹೆ ಖದ್ಯೋತವಂಶದಲಿ ॥ ಪಾಡಗಾಣೆನು ನಿನಗೆ

ಸುರನರ । ರೂಢಿಜನರೊಗ್ಗಿನಲಿ ಹುಸಿದಡೆ । ಕೂಡಿಕೊಂಡ್ಯೆತಂದು ಕೊಲಿಸಿದೆ ತಮ್ಮನಾಣೆಂದ ॥ ೧ ॥ ಏಸು ದಿನ ಪರ್ಯಂತ ಬಿಡದ । ಭ್ಯಾಸಿಸಿದೆ ಹೇಳನುಗನಾಣೆ ವ । ನೌಕಸರೊಳೆನ್ನಾಣೆ ಹೇಳಿನ್ನೇಕೆ ಭಯ ನಿನಗೆ ॥ ವಾಸಿಯೊಳ್ಳಿತು ಗುರುವಿನಭಿ ವಿ । ನ್ಯಾಸವೆಂತುಟೊ ಶಿವಶಿವಾ ಕಾ । ಳಾಸ ತಪ್ಪದ ಕಳವಿನೆಸುಗೆಯು ಚಿತ್ರತರವೆಂದ ॥ ೨ ॥ ನೀನೆ ದಶರಥನೆಂಬ ನೃಪತಿಯ । ಸೂನು ಸಾಮ್ರಾಜ್ಯಕ್ಕೆ ಸಲ್ಲದೆ । ಕಾನನವ ಪೊಕ್ಕಬಲೆಯನು ಹೋಗಾಡಿವತಿ ಬಲನು ॥ ಹೀನ ವೃತ್ತಿಯ ಬಗೆಗೆ ಸಲ್ಲದ । ಮಾನನಿಧಿ ನೀನಹುದು ಮನದನು । ಮಾನವೀ ಪರಿ ತೋರುತಿದೆ ನಿನಗಾರು ಸರಿಯೆಂದ ॥ ೩ ॥ ಧರೆಯೊಳಗೆ ಮೃಗ ಮಾಂಸ ಭೋಜನ । ಕರಸುಗಳು ಮನ ಮಾಡುವುದು ದು । ಶ್ಚರಿತವಲ್ಲದು ಶಾಸ್ತ್ರದಲಿ ನಿಜ ಧರ್ಮಮಾರ್ಗದಲಿ ॥ ಪರಿಕಿಸಲು ಕೋಡಗದ ಮಾಂಸವು । ನರಪತಿಗಳಿಗೆ ಯೋಗ್ಯವೇ ಹೇ । ಳರಸ ಒರಿದಹ ಹೇಸಿಕೆಯ ಕೈಗೊಂಡೆ ನೀನೆಂದ ॥ ೪ ॥ ರಣದ ಮೇಲಭಿಲಾಷೆಯುಳ್ಳಡೆ । ಕೆಣಕಿ ನೋಡಿದಡರಿಯಬಹುದು । ಬ್ಬಣ ಶರಾಸನ ಸರಳ ಮರಿಗೆಯ ಹೊಂತಕಾರಿಗಳ ॥ ಹುಣುಗಿ ಮರೆಗೊಂಡೆಸೆವಲುಬ್ಧಕ । ರೆಣಿಕೆಯಲಿ ಕೈಮಾಡುವುದು ಭೂ । ಷಣವೆ ಭಟರಿಗೆ ಕೇಳಿದಿರೆ ಜಾಂಬವರು ನೀವೆಂದ ॥ ೫ ॥ ತರಣಿಕುಲದರಸುಗಳು ಧಾರ್ಮಿಕ । ರುರು ಸದಾಚಾರಿಗಳು ಸೂನೃತ । ಚರಿತರಖಿಳಾಗಮರು ಶುದ್ಧ ವಿಶುದ್ಧ ಗುಣಯುತರು । ನರಕಭೀತರು ಘನಕೃಪಾ ಸಾ । ಗರರು ನೀನವರನ್ವಯದಲವ । ತರಿಸತಕ್ಕವನಲ್ಲ ನಿನ್ನನ್ವಯವದೇನೆಂದ ॥ ೬ ॥ ಹಗೆತನವನೆಣಿಸುವರೆ ರಘು ಪೀ । ಳಿಗೆಯ ರಾಯರ ಕೊಂದುದಿಲ್ಲಾ । ಮಗುಳವರ ಸತಿಯರಿಗೆ ತಪ್ಪಿದುದಿಲ್ಲ ಜಗವರಿಯೆ ॥ ಮೃಗಕುಲೇಂದ್ರ ದ್ವೀಪಿಯುಹರದ । ನಿಗಳಿರಲು ಬಲಿಗಾಡ ನಿಕ್ಕಿದ । ಬಗೆಯ ನಾಣ್ನುಡಿ ತಪ್ಪದೀಗಲು ನಿನ್ನೊಳಾಯ್ತೆಂದ ॥ ೭ ॥ ನೆತ್ತಿಯೊಳು ಹರಜಡೆ ತ್ರಿಯಂಬಕ । ಸುತ್ತಿದುದು ವಲ್ಕಲವು ಶಿವ ಶಿವ । ಮೆತ್ತಿಕೊಂಡಿಹೆ ಭಸಿತ ಮೃತ್ಯುಂಜಯ ಮಹಾದೇವ ॥ ಹೊತ್ತ ಜೋಹಕೆ ಜಾಳಿ ಲೇಸಾ । ಯಿತ್ತು ನಿನಗುಪದೇಶ ಮಂತ್ರವ । ನಿತ್ತವನವರ್ತನವದೆಂತುಟೋ ನೋಡಬೇಕೆಂದ ॥ ೮ ॥ ಶಿಶುಮಹೀಸುರ ಭೂತ ಸಂತತಿ। ಪಶುಕುಲ ಪ್ರಮುಖಾದಿ ಹಿಂಸಾ । ವ್ಯಸನಿಗಳಿಗನ್ಯಾಯವಿನಿಶಿಲ್ಲೀ ಜಗತ್ತಿನಲಿ ॥

ಹೆಸರು ನೋಡಲು ನಿನ್ನ ನಾಮದ । ಜಸವು ರಮಣೀಯಕವು ಮನ ಕ । ರ್ಕಶತೆಯಾಗಿದೆ ಸಲ್ಲದೀ ಹೆಸರಕಟ ನಿನಗೆಂದ ॥ ೯ ॥ ಆಗಲದಕೇನೊಡಂ ಬಡಬಹು । ದಾಗಿತಪರಾಧತ್ವವೊಮ್ಮಿಗೆ । ಮೇಗೆ ಹೊತ್ತರೆ ಹೊಲ್ಲೆ ಹೇನಳಿವಿಂಗೆ ಸಂಸಾರ ॥ ಬೇಗ ನುಡಿ ಕೃತದೋಷಕಾರಿಗ । ಳಾಗಿ ನಾವ್ ನಡೆದೆಡೆಗಳೊಳ್ಪಡೆ । ಮೂಗರಾಗಿಹೆವೆಂದು ಕೊಂಡಾಡಿದನು ರೋಷದಲಿ ॥ ೧೦ ॥ ಇವನು ನಿನಗೆ ಸಹಾಯಿಯೇ ನೀ । ನಿವನ ಬಲದಲಿ ನಿನ್ನ ವೈರಿಯ । ತವಿಸುವುದು ತಪ್ಪಲ್ಲ ಕೂಡಿತು ದೈವವಿಬ್ಬರನು ॥ ಪವನದಲಿ ಪಾವಕನ ಕೂಡಿದ । ಹವಣ ಸಂಘಟಿಸಿದುದು ಬಲ್ಲರೆ । ಇವು ವಿಚಿತ್ರವು ಕಾಲಗತಿಯಿಂದರಸ ಕೇಳೆಂದ ॥ ೧೧ ॥ ಆ ಗರುವ ದಶಮುಖನ ಸಮರೋ । ದ್ಯೋಗ ಕಿವನೇ ನಿಲುವವನು ಗಡ । ಸಾಗರವನುತ್ತರಿಸುವಡೆ ಪರಿಗೋಲ ಹಂಗು ಗಡ ॥ ಹೋಗಿ ಶರಧಿಯ ದಾಟಿ ಪಗೆಯನು । ತಾಗಿ ತಲೆಯನು ಕೊಂಡು ತರುಣಿಯ । ಭೋಗಿಸುವಡಿದು ಮಿಗೆ ಭಗೀರಥ ಯತ್ನ ನಿನಗೆಂದ ॥ ೧೨ ॥ ಖಳನಿವನು ಹಗೆಯೆಂದು ಸೂಚಿಸ । ಲೆಳೆದು ತರಿಸನೆ ತನ್ನ ಬಾಲವ । ಕಳುಹಿ ಗಾಳದ ಬಲೆಗೆ ಸಿಲುಕಿದ ಮೀನಿನಂದದಲಿ ॥ ಬಲುಭಟರ ಜೀವಾಳಿಗಳನ । ಸ್ಖಲಿತ ಮೂರ್ಖರದೇನು ಬಲ್ಲರು । ಹಲುಬಿ ಮಾಡುವುದೇನು । ಕೇಳ್ಪ್ರಾರಬ್ಧವೆಮಗೆಂದ ॥ ೧೩ ॥ ಅರಿದೆನಾದರೆ ನಿನ್ನ ತೋಮರ । ವಿರಿಯ ಬಲ್ಲುದೆ ಎನ್ನವನು ಮಿಗೆ । ಮುರಿವೆನ್ನ ಬಾಣವನು ನನಗಿದು ಗಣ್ಯವಲ್ಲ ಕಣಾ ॥ ಜರಿದು ನುಡಿದಿನ್ನೇನು ಲೋಕದೊ । ಳಿರುವ ಭಟರೆಂದರಿಯರೇ ಸುರ । ರೆರೆಯ ಮೊದಲಾಗೆಲ್ಲ ನಿನ್ನೊಡನೆಂಬುದೇನೆಂದ ॥ ೧೪ ॥ ವಾಲಿಯಂಗದ ಶರವಿಡಿದು ಭೂ । ಪಾಲಕನ ಮೂದಲಿಸೆ ವಾನರ । ಜಾಲದೊಸರಿಕೆಯಲಿ ತಾರಾದೇವಿ ನಡೆತಂದು । ಬಾಲನಂಗದ ಸಹಿತ ವಾಲಿಯ ಮೇಲೆ ಬಿದ್ದಳುತಿರಲವರ ಜನ । ಪಾಲ ಸಂತೈಸುತ್ತ ಸುರಪ ಕುಮಾರಗಿಂತೆಂದ ॥ ೧೫ ॥

ಮಧ್ಯಮಾವತಿ ರಾಗ - ಏಕತಾಳ

ವಾನರರಧಿಪ ಕೇಳೆನ್ನ ಮಾತ । ನೀನೆನ್ನ ಜರಿಯುವುದೇಕಿಂದ್ರ ಜಾತ ॥
ದಾನವರುಗಳ ದುಷ್ಟರ ತಲೆಯರಿದು । ಕ್ಷೋಣಿ ಭಾರವನಿಳುಹುವುದೆಮ್ಮ

ಜಿರುದು ॥ ೧ ॥ ನ್ಯಾಯವೆ ತಮ್ಮನ ಸತಿಯ ಮುಟ್ಟುವುದು । ಹೇಯು ವಿದ್ದುದರಿಂದ ದೋಷ ತಟ್ಟಿದುದು ॥ ಪ್ರಾಯಶ್ಚಿತ್ತಗಳಿದು ಪರದೋಷಂ ಗಳಿಗೆ।ಕಾಯಖಂಡನವೆಂಬ ನಿಜಮಾತಿನೊಳಗೆ ॥ ೨ ॥ ಮುಂದಿನ್ನು ಬದುಕ ಬೇಕೆಂಬಾಸೆಯುಂಟೆ । ಹಿಂದೆ. ಕರವೆ ಬಾಣವದು ನೋಯದಂತೆ । ಒಂದೇ ಬುದ್ಧಿಯೊಳೆಲ್ಲ ಸತ್ಯವ ಬಿಡದೆ । ಚೆಂದವಾಗಿರುವುದು ಸರ್ವರು ಕಡೆಗೆ ॥ ೩ ॥

ವಚನ

ಇಂತೆಂದು ಶ್ರೀರಾಮಚಂದ್ರ ದೇವರು ಅಪ್ಪಣೆಯಂ ಕೊಡಲಾಗಿ ಆ ವಾಲಿಯು ಈತ ಸಾಕ್ಷಾತ್ ನಾರಾಯಣನೇ ಅವತಾರವೆಂದು ತಿಳಿದು ಈತನ ಬಾಣದಿಂದ ಮರಣಪಟ್ಟರೆ ತನಗೆ ಸಾಯುಜ್ಯ ಮುಕ್ತಿ ಆಗುವುದೆಂದು ನಿಶ್ಚಯಿಸಿ ಆ ಸ್ವಾಮಿಯೊಡನೆ ಏನೆಂದು ಬಿನ್ನವಿಸುತಿರ್ದನದೆಂತೆನೆ-

ಅಹೇರಿ ರಾಗ - ಆದಿತಾಳ

ಜಯ ಜಯ ರಾಮ ಹರೇ । ಸೀತಾಪತೇ । ಜಯ ಜಯ ರಾಮ ಹರೇ ॥ ಪ ॥ ವಿಕಸಿತಾಂಬುಜದಳಲೋಚನ । ಪಾಪನಾಶನ । ಸಕಲಾಭರಣ ವಿಭೂಷಣ ॥ ಜಯ ಜಯ ರಾಮ ಹರೇ ॥ ೧ ॥ ಕಂಜಬಾಂಧವ ಕುಲ ಶೇಖರ । ಮಂಜುಳಾಕರ । ಕುಂಜರವರದನೆ ಶ್ರೀಕರೆ ॥ ಜಯ ಜಯ ರಾಮ ಹರೇ ॥ ೨ ॥

ಕಾಪಿ ರಾಗ - ಏಕತಾಳ

ಕರುಣವಿದ್ದರೆ ಸಾಕು । ನಿನ್ನ ಪಾದದ । ಕರುಣವಿದ್ದರೆ ಸಾಕು ॥ ಪ ॥ ಪರಿಪೂರ್ಣವಾಗಿ ಪಾಲಿಸಿಕೊಳ್ಳಬೇಕೆಂಬ ॥ ಅ ॥ ಮೂರು ದಿನದ ಈ ಸಂ । ಸಾರ ಶಾಶ್ವತವಲ್ಲ । ಘೋರಪಾಪಗಳ ಸಂ । ಹಾರ ಮಾಡುವುದೊಂದು ॥ ಕರುಣ ॥ ೧ ॥ ಭೂತಪಂಚಕ ದೇಹ । ವೇತಕಿಷ್ಟರ ಮೋಹ । ಚೇತನಾತ್ಮಕ ನಿನ್ನ । ಮೂರ್ತಿ ಪಾದಾಬ್ಜದ ॥ ಕರುಣ ॥ ೨ ॥ ತಂದೆ ತಾಯಿಗಳೆಂಬು । ದೊಂದು ಸ್ವಪ್ನವಿಚಾರ । ಮುಂದೆ ನಿಮ್ಮಯ ಪಾದ ॥ ಹೊಂದಿಕೊಂಡಿರು ವಂತೆ ॥ ಕರುಣ ॥ ೩ ॥

ಭಾಮಿನಿ

ಹೆಂಡಿರೇತಕೆ ಮಕ್ಕಳೇತಕೆ । ಬಂಡಿ ತುಂಬಿದ ಧನವಿದೇತಕೆ । ಮಂಡೆ ತುಂಬಿದ ಬಳಗವಿದ್ದೇನಹುದು ಯಮನವರು ॥ ಚಂಡ ಪಾಶದಿ ಕಟ್ಟಿ ಕಳ್ಳನ।

ಕೊಂಡುಹೋಹಂದದಲಿ ಒಯ್ವರು । ಕಂಡು ಬಿಡಿಸುವರುಂಟೆ ಯಾರಿದ್ದೇನ ಮಾಡುವರು ॥ ೧ ॥ ಹಣೆಯ ಬರಹವ ಮೀರಿ ನಡೆವರೆ । ತ್ರಿಣಯನಿಂಗಳ ವಲ್ಲ ಮಿಕ್ಕಿನ । ಬಣಗುಗಳ ಪಾಡೇನು ಪೂರ್ವಾರ್ಜಿತದ ಫಲವೆಂದ ॥ ಜುಣುಗಿ ತಾನುಣಲೊಲ್ಲೆನೆಂದರೆ । ಅಣಕವೇ ತನ್ನಪ್ಪನುಂಬನೆ । ಎಣಿಸಿ ನೋಡಲು ಈಶ್ವರೇಚ್ಛೆಯ ಮೀರಲಳವಲ್ಲ ॥ ೨ ॥ ಅಂಬುಜಾಕ್ಷ ಫಣೀಂದ್ರರ ಪ್ರತಿ । ಬಿಂಬವಾಗಿರೆ ಕಂಡು ಮುಕ್ತಿನಿ । ತಂಬಿನಿಂಚು ಬಿಡದಸ್ತ್ರ ದಾಲಿಂಗನಕೆ ಮನತಂದು ॥ ಇಂದಿರಾಧವ ನೀನು ನೀ ಬಂ । ದಂದವನು ನಾ ತಿಳಿವೆನ್ನೆಸೆಲೆ। ಎಂದು ಕೈಮುಗಿವುತ್ತ ನುಡಿದನು ತನ್ನ ಮನದಿರವ ॥ ೩ ॥

### ಯರಕಲಕಾಂಬೋಧಿ ರಾಗ - ಏಕತಾಳ

ರಾಮ ನಿನ್ನ ಬಾಣ ತಾಗಿದ । ಮೇಲಿನ್ನುಂಟೆ । ಭೂಮಿಯೊಳಾಸೆ ಎನಗೆ ॥ ಕಾಮಿತ ಬೇರಿಲ್ಲ ಚಿತ್ತದಿ । ಮುಕ್ತಿಯನಿತ್ತು । ಪ್ರೇಮದಿ ರಕ್ಷಿಸೆನ್ನನು ॥

### ಭಾಮಿನಿ

ಉಡಿಯುವೇ ತರು ಘಾಳಿಯಲಿ ಗಿರಿ । ಕೆಡೆಯುವೇ ಸಿಡಿಲಿಂಗೆ ಈ ಕೆಡು । ವೊಡಲು ಬೀಳಲಿಕಂಗಲಾಚಿದೆ ದೇವ ನಿನ್ನೊಡನೆ ॥ ಓಡಿಯದೆನ್ನಪ ರಾಧವನು ಕೈ । ವಿಡಿದು ನಿನ್ನ ಪದಾರವಿಂದದ । ಲಡಗಿಸುವ ಘನ ಕೃಪೆಯ ನೆನ್ನಲಿ ಬೀರಬೇಕೆಂದ ॥

### ನೀಲಾಂಬರಿ ರಾಗ - ಏಕತಾಳ

ಇತ್ತ ಬಾ ತಮ್ಮ ಸುಗ್ರೀವ । ಕಿಷ್ಕಿಂಧ ಪುರು। ಪತ್ಯವ ಪಾಲಿಸಯ್ಯ॥ ಸತ್ಯವಂತೆಯೀ ತಾರೆಯ । ಮಾನವ ಕಾಯ್ದು । ಸ್ವಸ್ಥದಿ ರಕ್ಷಿಸಯ್ಯ ॥ ೧ ॥ ಬಾಲ ಬುದ್ಧಿಯನರಿಯ । ಈ ಅಂಗದನ । ಮೇಲೆ ಕಟಾಕ್ಷವಿರಲಿ ಮೇಲಾದ ಕಪಿವೀರರು । ನಮ್ಮೊಡನೆ ಬಹು। ಕಾಲವಿದ್ದಂಥವರು ॥ ೨ ॥ ಕಷ್ಟವ ಮಾಡಿ ಕೊಳ್ಳದೆ । ಸಜ್ಜನರೊಳು ದುಷ್ಟನೆನಿಸಿಕೊಳ್ಳದೆ ॥ ಅಷ್ಟ ಸೌಭಾಗ್ಯದಿಂದಲಿ । ಈ ರಾಜ್ಯದ। ಪಟ್ಟವಾಳಿರು ಸುಖದಿ ॥ ೩ ॥ ಕಾಂಚನಮಾಲೆ ಧರಿಸಿ ಪೂರ್ವಜ ರಂತೆ । ಸಂಚಿತದಿ ಬಾಳು ಸುಖದಿ ॥ ಪಂಚಬಾಣ ಪಿತನ। ಸೇವೆಯ ಮಾಡಿ। ಸಂತಸದೊಳಿರು ಸುಗ್ರೀವ ॥ ೪ ॥ ಭರತ ಶತ್ರುಘ್ನರಂದದಿ । ರಕ್ಷಿಸು

ರಾಮ । ತರಳನಂಗದ ಸುಗ್ರೀವರ ॥ ನಿರತ ಕಟಾಕ್ಷವಿರಲಿ । ಈ ವಂಶದ ವರಲ್ಲಿ । ಕರುಣಿಸು ಮುಕ್ತಿಯ ದೇಹಿ ॥ ೫ ॥

### ಭಾಮಿನಿ

ಮರಳಿ ರಘುನಂದನನ ಪದ ಪಂ । ಕರುಹವನು ಕಂಗಳಿಗೆ ಸೇರಿಸಿ । ಕರಪುಟಾಂಜಲಿಯಿಂದ ನುಡಿದನು ದೈನ್ಯ ಭಾವದಲಿ ॥ ತರಳನಂಗದನಂಗ ದನನೀ । ತರಣಿಸುತ ಪತಿಕರಿಸದಿದ್ದಡೆ । ಪುರಕೆ ಕೊಂಡೊಯ್ದೊಲಿದು ಸಲಹೆಲೆ ದೇವ ನೀನೆಂದ ॥

### ಸೌರಾಷ್ಟ್ರ ರಾಗ - ಝುಂಪೆತಾಳ

ಕೇಳು ಮುರರಿಪು । ಕಮಲಲೋಚನ । ತಾಳಲಾರೆನು । ಸರಳಿ ನುರಿಯನು ॥ ೧ ॥ ಒಡಲ ಸುಡುತಿದೆ । ತಾಪ ಹೆಚ್ಚಿದೆ । ಕಡಲ ಶಯ ನನೆ । ಕಾಯೊ ಕರುಣದಿ ॥ ೨ ॥ ಭಕ್ತವತ್ಸಲ । ಮುಕ್ತಿದಾಯಕ । ಶಕ್ತಿ ರೂಪನೆ । ಶೇಷ ಶಯನನೆ ॥ ೩ ॥

### ವಾರ್ಧಿಕ

ಬಾಣವನು ಸೆಳೆದು ತೆಗೆದಾಕ್ಷಣವೆ ನೋಡಿದರೆ । ಪ್ರಾಣ ಹಾರಿದು ದಿಂದ್ರಸುತಗೆ ಸೂರ್ಯಾತ್ಮಜಂ । ಕಾಣುತಣ್ಣನ ಶರೀರದ ಮೇಲೆ ಬಿದ್ದವನ ಗುಣಗಳಂ ಕೊಂಡಾಡುತ ॥ ಕೇಣವಿಲ್ಲದೆ ಕ್ಲೇಶದಿಂದಳುವ ವೇಳೆಯಲಿ । ಕ್ಷೋಣಿಪತಿ ದಯದಿ ಸಂತವಿಸೆ ಕೀಟಾಧಿಪನ । ರಾಣಿ ತಾರಾದೇವಿ ಗೋಳಿಟ್ಟು ಮರುಗಿದಳು ಕಲ್ಮರಂ ಕರಗುವಂತೆ ॥

### ನೀಲಾಂಬರಿ ರಾಗ - ರೂಪಕತಾಳ

ಏತಕೆ ಮಲಗಿದೆ ಧರೆಯೊಳು । ಕೋಟಿಕುಲಾಧಿಪನೇಳೈ । ಖ್ಯಾತಿ ಯಿದೇಕೆನ್ನೊಳು ಮೃದು । ಮಾತಾಡತಿ ದಯದಿ ॥ ಪ ॥ ಇರಿದರೊಸುರ ಧೇನುವ ನೆರೆ । ಮುರಿದರೊ ಸುರ ಕುಜವನು ಶಿಖಿ । ಗುರಿದರೆ ಕಾಮಿತ ರತ್ನವ । ಹರಹರ ಕಾಂತನನು ॥ ತರಿದೆಯ ರಾಘವ ದೇವನೆ । ಕರುಣಾಕರ ನೀನೆನ್ನುವ । ಬಿರುದೆತ್ತಡಗಿಸಿದೆಯೊ ನಾ । ಧರಣಿಯೊಳೆಂತಿಹೆನು ॥ ೧ ॥ ಆಯಿತೆ ಸಂತಸ ರಾಜ್ಯಶ್ರೀಯ ವಿನೋದವು ಮದನನ ॥ ಬೀಯಕೆ ಕೊಲಿಸಿದೆ

ಪತಿಯನು ‖ ತೋಯಜ ಸಖಿಸುತನೆ ‖ ಪ್ರೀಯದೊಳಿರ್ಯಾವ ಧರೆ ಜಂ । ದ್ರಾಯುತ ಕೀರ್ತಿಯ ಧರಿಸಿದೆ । ದಾಯಿಗರೊಳಗುತ್ತಮ ಮನ । ದಾಯುತ ತೀರಿದುದೆ ‖ ೨ ‖ ಕಂದನೆ ನಿನ್ನನು ಕರುಣದಿ। ತಂದೆಯು ಕೊಟ್ಟಿಹನ್ಯಾರಿಗೆ। ಮುಂದೆಮಗಾರ್ಯೆ ಗತಿಯೇ । ನೆಂದಿಹ ನಿನ್ನೊಡನೆ ‖ ಸಂದುದು ಋಣ ಪಿಶನದು ಬಲು । ಚೆಂದದಿ ಸಲಹುವರಾರ್ಯೆ । ಮುಂದೆಮ್ಮನು ಕೃಪೆಯಲಿ ಹಾ । ಯೆಂದೆನುತಳಲಿದಳು ‖ ೩ ‖

### ಭಾಮಿನಿ

ಪರಮ ಪುರುಷನೆ ತನ್ನ ಪತಿಯನು । ತಂದು ಪಿಸುಣರ ಮಾತಿನಲಿ ಮನ । ಕುರಿಸಿದಲ್ಲದೆ ದೇವ ದಯೆ ನಿನಗಿಲ್ಲದಾಯಿತಲಾ ‖ ತರಳನಿವನಂಗ ದನು ತಾನೊಂ । ದರಿಯ ಕೃಪೆಯಿರಿಸನಕ ಪಸುಳೆಯ । ಹರಣ ನಿನ್ನ ದೆನಲ್ಕೆ ಕರುಣದಿ ನುಡಿದ ಶ್ರೀರಾಮ ‖

### ಸಾವೇರಿ ರಾಗ - ಅಷ್ಟತಾಳ

ಅಳುವುದೇತಕೆ ನೀ ತಾರೆ । ನಿನ್ನಯ ಮನ । ದೊಳು ಧೈರ್ಯ ತಾಳು ನೀರೆ ‖ ನೆಲೆಯಿಲ್ಲ ಸಂಸಾರವೆಂಬುದು ಮೊದಲೆ ನೀ । ತಿಳಿದಿರ್ದ ಕಾರ್ಯ ಕಾಣೆ । ಕೇಳೆಲೆ ಜಾಣೆ ‖ ೧ ‖ ಬಾಲಕ ನೀ ಮರುಗದಿರು । ಲಕ್ಷ್ಮಣನಂತೆ । ಪಾಲಿಪೆನಂಜದಿರು ‖ ವಾಲಿನಂದನ ಬೇಡು ಕೊಡುವೆ ನಂಬುಗೆಯನ್ನು । ಜಾಲ ಮಾತಲ್ಲವೆನ್ನ । ನಂಬಿರು ಮುನ್ನ ‖ ೨ ‖ ತರಣಿ ನಂದನ ಸುಗ್ರೀವ । ತಾರಾದೇವಿ । ಗರುಹು ನೀನತಿ ಧೈರ್ಯವ ‖ ಧರೆ ಯೊಳು ಸುಜನರೀ ದೇವಿಯ ನಾಮವ । ಸ್ಮರಿಸಿಕೊಂಡಿರಲು ಮೋಕ್ಷ । ವೆಂಬ ಕಟಾಕ್ಷ ‖ ೩ ‖

### ವಾರ್ಧಿಕ

ಅರಸು ಮಕ್ಕಳು ಕೇಳಿ ನಿಮ್ಮ ಪಿತನೀ ರೀತಿ । ಯೊರೆದು ತಾರಾಂಗ ದರ ಸಂತೈಸಿ ಬಳಿಕ ವಾ । ನರ ಶಾಸ್ತ್ರ ವಿಧಿಯಿಂದ ವಾಲಿಗಪರಕ್ರಿಯೆಯ ರವಿಜಾತನಿಂ ವಿರಚಿಸೀ ‖ ಸುರರು ಮುನಿಗಳು ಸಿದ್ಧ ಸಾಧ್ಯ ಕಿನ್ನರರು ಕಿಂ । ಪುರುಷ ರಾಘವ ಸಹಿತ ಕಿಷ್ಕಿಂಧ ಪಟ್ಟಣದ । ದೊರೆತನಕೆ ಸುಗ್ರೀವನಂ ಮಾಡಿದರು ಶಾಸ್ತ್ರವಿಧಿ ವಿಹಿತ ಕ್ರಮಗಳಿಂದ ‖

**ಧವಳಾರ ರಾಗ - ತ್ರಿವುಡೆತಾಳ**

ನಾಕದ ದೇವತೆಗಳು ಬಂದಾಕ್ಷಣ । ಶ್ರೀಕರನಾಗೆನುತಲಿ ಸುಗ್ರೀವನ । ನೀ ಕಪಿಗಳಿಗೆಲ್ಲಾ ದೊರೆಯಹಾಗಿ ॥ ದೊರೆಯಹಾಗೆಂದೆನುತಲಿ ಹರಸುತ್ತಲಿ । ಬೇಕಾದಕ್ಷತೆಯು ತಳಿದರು ॥ ಶೋಭಾನೆ ॥ ೧ ॥ ಅಂಬರದಲಿ ಸಂಚರಿಸುವ ನಾರದ । ತುಂಬುರರ್‍ಯ್ತಂದಾ ರವಿಜಾತನ । ಜಾಂಬವಾದಿಗಳಿಗರಸಾಗು ॥ ಅರಸಾಗೆಂದೆನುತಲಿ ಹರಸುತ್ತಲಿ। ಸಂಭ್ರಮದಕ್ಷತೆಯು ತಳಿದರು॥ ಶೋಭಾನೆ ॥ ೨ ॥ ಗುಪಿತದೊಳನುಗಾಲ ವನಾಂತರದೊಳು ತಪಸಿಗಳ್ಯೆತರುತಲಿ ಸುಗ್ರೀವನ । ಕಪಿಗಳಿಗೆಲ್ಲಾ ಪತಿಯಹಾಗು ॥ ಪತಿಯಾಗೆನುತಲೆ ಹರಸುತ್ತಲಿ। ಅಪರಿಮಿತಾಕ್ಷತೆಯು ತಳಿದರು ॥ ಶೋಭಾನೆ ॥ ೩ ॥

**ವಾರ್ಧಿಕ**

ತರಳರಿರ ಕೇಳಿರಿಪ್ಪತ್ತೈದು ದಿವಸ ವಾ । ನರರಧಿಪನೊಡನಿರ್ದು ಕಿಷ್ಕಿಂಧೆಯೊಳಗೆ ಕಪಿ । ವರರುಗಳ ಬೀಳ್ಕೊಂಡು ನಾಲ್ಕು ತಿಂಗಳ ಮೇಲೆ ಬರುವ ತಹಗಳನು ಪಹಾಡಿ ॥ ತರಣಿನಂದನನುಳಿದಾಗ ಲಕ್ಷ್ಮಣನೊಡನೆ । ಮರಳಿದಂ ರಘುಜನೆಂಬಲ್ಲಿಗಾಯಿತು ಸಂಧಿ । ವರಕಣ್ವಪುರದೊಡೆಯನಾಗಿ ರುಪ ಶ್ರೀಕೃಷ್ಣರಾಯನ ಕಟಾಕ್ಷದಿಂದ ॥

# ಉಂಗುರ ಸಂಧಿ

## ಪಾತ್ರಗಳು

ರಾಮ
ಲಕ್ಷ್ಮಣ
ಸುಗ್ರೀವ
ಹನುಮಂತ
ಜಾಂಬವ
ಅಂಗದ
ಕಪಿಗಳು
ಈಶ್ವರ
ಪಾರ್ವತಿ
ಬ್ರಹ್ಮ
ತೃಣಬಿಂದು ಮುನಿ
ಸಂಪಾತಿ
ರಾವಣ
ಶೃಂಗಾರ ರಾವಣ
ಪ್ರಹಸ್ತ
ಇಂದ್ರಜಿತು
ವಿಭೀಷಣ
ಇತರ ರಾಕ್ಷಸರು

ಸೀತೆ
ತಾರೆ
ಸ್ವಯಂಪ್ರಭೆ
ಸರಮೆ
ತ್ರಿಜಟೆ

---

# ಉಂಗುರ ಸಂಧಿ

ವಾರ್ಧಿಕ

ಕುಶನೆ ಕೇಳ್ವಾಲಿಯಂ ಸಂಹರಿಸಿ ಕಿಷ್ಕಿಂಧ । ದೆಸೆಯಾಧಿಪತ್ಯಮಂ ಸುಗ್ರೀವನಿಂಗಿತ್ತು । ಕುಶಲದಿಂ ಪ್ರಸ್ರವಣ ಪರ್ವತಕೆ ನಡೆತಂದು ಮಳೆಗಾಲಮಂ ಕಳೆದರು ॥ ವಸುಧೆ ಪಾಲಕನೊಂದು ದಿನ ತನ್ನ ಮನದಿ ಚಿಂ । ತಿಸುತ ಜನಕಾತ್ಮಜೆಯ ನೆನೆನೆನೆದು ದುಃಖಿಸುತ । ಪಸರಿಸುವ ಸ್ವೈರಣೆಪ್ಪೊಳಂತರಂಗದಿ ನಿಲಿಸಿ ಸೌಮಿತ್ರಿಗಿಂತೆಂದನು ॥

ಮಧ್ಯಮಾವತಿ ರಾಗ - ಅಷ್ಟತಾಳ

ಪೋಗು ಸೌಮಿತ್ರ ನೀ ಸುಗ್ರೀವ ಬರಲಿಲ್ಲ । ಬೇಗದಿ ನಿನ್ನೊಳಾಲೋಚಿಸಿ ನೋಡೂ ॥ ನಾಗವೇಣಿಯು ದೊರಕಲಾಗಿ ತಾ ರತಿ ಸುಖ । ಭೋಗದೊಳಿಮ್ಮನು ಮರತನೋ ಸಹಜಾ ॥ ೧ ॥ ತನ್ನ ಕಾರ್ಯವು ತನಗಾಗುವ ಪರಿಯಂತ । ಲೆನ್ನನೆ ಗತಿಯೆಂದು ನಂಬಿಸಿ ಮತ್ತೇ ॥ ಕನ್ನೆ ರಾಜ್ಯವು ಸಹ ತನಗೆ ಸಿಕ್ಕಿದ ಬಳಿ । ಕಿನ್ನಿಮ್ಮ ಹಂಗೇನೆಂದು ಕುಳಿತನೊ ರವಿಜಾ ॥ ೨ ॥

ಝಂಪೆಟಾರವ ರಾಗ - ರೂಪಕತಾಳ

ಅಗ್ರಜ ಕೇಳೋ । ವಾಲಿಯನ್ನು ನೀ । ನಿಗ್ರಹಿಸಿದೆ । ನೀರಜಾಂಬಕ॥ ಸುಗ್ರೀವಂಗೆ ನಾ ಸಾಲದಾಪನೇ । ಉಗ್ರಮೂರುತಿ । ಕಳುಹಿಸೆನ್ನನು ॥

ಮಧ್ಯಮಾವತಿ ರಾಗ - ಏಕತಾಳ

ಕಾರ್ಯಸಂಗ್ರಹಗಳ ಮಾಡಬೇಕವನಿಂದ । ಶೌರ್ಯಬೇಡವೊ ತಮ್ಮ ಶಾಂತದಿ ಪೋಗಿ ॥ ಸೂರ್ಯನಂದನನೊಳು ಸೂಚನೆಯನು ಗೈದು । ಧೈರ್ಯ ಮನದಿ ಕರಕೊಂಡು ಬಾರೀಗಾ ॥

ಶಾರ್ದೂಲ ವಿಕ್ರೀಡಿತ ವೃತ್ತ

ಇಂತೆಂದಗ್ರಜ ನೇಮವಂ ಕೊಡಲದಂ ಕೈಗೊಂಡು ತದ್ವಾಕ್ಯಮಂ । ಶಾಂತಾಕಾರನ ದಿವ್ಯಪಾದಯುಗಕಂ ತಾ ವಂದಿಸುತ್ತಾಕ್ಷಣಂ ॥ ಮಂತ್ರಾಸ್ತ್ರಂ ಘನಚಾಪಗೊಂಡು ಬರಲುಂ ಕಂಡಾಗಲತ್ಯಂಜುತಂ । ಕಾಂತಾರತ್ನವೆನಿಪ್ಪ ತಾರೆ ಪೊಗಳುತ್ತಿಂತೆಂದಳಾ ವೀರಗಂ ॥

ಮಧುಮಾಧವಿ ರಾಗ - ಏಕತಾಳ

ದಶರಥಸುತ ಧರಣಿಪಕುಲದೀಪ । ಕುಸುಮಸಾಯಕ ರೂಪ ಕೀರ್ತಿ ಕಲಾಪ ॥ ಪಲ್ಲ ॥ ಧರೆಯನಾಳುವ ಮಹ ದೊರೆಗಳು ನೀವು । ಮರಮರ ಚರಿಪ ವಾನರರಯ್ಯ ನಾವು ॥ ಸರಿಯೆ ಮಾನವರಿಂಗೆ ಶಾಂತನಾಗಯ್ಯ । ತರಣಿನಂದನನೊಳು ಕೋಪವ್ಯಾಕಯ್ಯಾ ॥ ೧ ॥ ಹಿಮಕರಮುಖಿ ಕೇಳೆ ತಾರೆ ಸುನೀತೇ । ಕಮಲಲೋಚನೆ ಪುಣ್ಯ ನಾಮ ವಿಖ್ಯಾತೆ ॥ ಅಮರಾದಿಗಳು ಮೆಚ್ಚರಾಡಿ ತಪ್ಪಿದರೇ । ಕಮಲನೇತ್ರನ ಕೂಡೆ ಕಪಟವಾಡುವರೆ ॥ ೨ ॥ ಮಳೆಗಾಲವನು ದಾಟಿ ಬರುವೆನೆಂದೆನುತಾ । ಇಳೆಯ ಪಾಲಕನೊಳು ಪೇಳಿ ಈ ಮಾತಾ ॥ ಅಳಿವ ಕಾಯವಿದೆಂದು ಆಡಿ ತಪ್ಪಿದರೆ । ಉಳಿವುದೆ ಕುಲ ಕೀರ್ತಿ ನೀ ಕೇಳು ಚದುರೆ ॥ ೩ ॥ ಪರದೇಶದೊಳಗುಳ್ಳ ಕಪಿಗಳನೆಲ್ಲಾ । ಕರಸಿಕೊಂಬುದಕಿಷ್ಟು ತಡವಾಯಿತಲ್ಲಾ ॥ ಪರಿಪೂರ್ಣ ದಯವೆಮ್ಮೊಳಿರಿಸ ಬೇಕೀದೂ । ಚರಣಕರ್ಪಿಸಲಿನಜನ ಕರತಂದು ॥ ೪ ॥

ವಾರ್ಧಿಕ

ಗುಣದಿಂದೊಡಂಬಡಿಸಿ ಕೋಪವಮಂ ತಣಿಸಿ ಲ । ಕ್ಷ್ಮಣಗೆ ಕಾಣಿಸ ಲಂದು ಸುಗ್ರೀವ ತನ್ನ ಕಪಿ । ಗಣಸಹಿತ ಶೀಘ್ರದಿಂ ಕಿಷ್ಕಿಂಧವನು ಪೊರಟು ನಡೆತಂದನಾಕ್ಷಣದೊಳು ॥ ಹನುಮಜಾಂಬವ ಸುಷೇಣಾಂಗದರು ನಳ ನೀಲ। ರಣಪರಾಕ್ರಮಿಗವಯ ದ್ವಿವಿದ ಮೊದಲಾದ ಸಂ । ದಣಿ ಸಹಿತ ಬಂದು ರಾಮನ ಚರಣಕೆರಗೆ ಲಕ್ಷ್ಮಣನಣ್ಣಗಿಂತೆಂದನು ॥

ಶಂಕರಾಭರಣ ರಾಗ - ಮಟ್ಟೆ ತಾಳ

ಅಗ್ರಜ ಮಹಾನುಭಾವ । ಲಾಲಿಸೆನ್ನ ಬಿನ್ನಪವ । ಸುಗ್ರೀವನಲ್ಲಿಗೆ ನಿನ್ನ । ಪೋಗುವಂಥ ವೇಳ್ಯದಲ್ಲಿ ॥ ೧ ॥ ಅಗ್ರಗಣ್ಯರೆಲ್ಲ ಕೂಡಿ । ತಮ್ಮೊಳು

ತಾವು ಮಾತಾಡಿ । ಶೀಘ್ರದಿಂದ ಬರಬೇಕೆಂದು । ಪಯಣ ಸನ್ನದ್ಧ ನಾಗಿರ್ದ ॥ ೨ ॥ ತಪ್ಪುವಾತನಲ್ಲ ಮಾತ । ತಮ್ಮವರೆಲ್ಲರ ಕರಸಿ । ವಪ್ಪ ವಿಟ್ಟುಕೊಂಬುದಕ್ಕೆ । ಸ್ವಲ್ಪ ತಡವಾಯಿತಂತೆ ॥ ೩ ॥

ಕಂದ

ಅನುಜನ ವಾಕ್ಯವ ಕೇಳ್ದಾ । ವನಜಾಂಬಕ ಚಿತ್ತದಿ ಬಹು ಸಂತೋಷಿ ಸುತಂ ॥ ಜನಕನ ಮಗಳಂ ಪುಡುಕಲಿ । ಕನುಪೆಂತುಟೊ ನೋಡಿರೆಂದ ಸುಗ್ರೀವನೊಳಂ ॥

ಸೌರಾಷ್ಟ್ರ ರಾಗ - ಅಷ್ಟತಾಳ

ಭೂಮಿಪಾಲ ಶಿರೋಮಣಿ ರಾಮಚಂದ್ರ । ದೇವ । ಕಮಲ ಲೋಚನ ಸಾಧು ಗುಣಸಾಂದ್ರ ॥ ೧ ॥ ನಿಮಿಷದೊಳಗೆ ನಾಲ್ಕು ದೇಶ ದಲ್ಲಿದ್ದರು । ರಾಮಚಂದ್ರ । ನಿಮ್ಮ । ರಮಣಿಯ ಪುಡುಕಿ ನಿಮಗೆ ತಂದು ಕೊಡುವೆವು । ರಾಮಚಂದ್ರ ॥ ೨ ॥ ಫುಲ್ಲಲೋಚನೆ ಬ್ರಹ್ಮಲೋಕದಲ್ಲಿ ದ್ದರು । ರಾಮಚಂದ್ರ । ನಿಮ್ಮ ವಲ್ಲಭೆ ಕೈಲಾಸಗಿರಿಯೊಳಗಿದ್ದರು । ರಾಮಚಂದ್ರ ॥ ೩ ॥ ಬಲ್ಲಿದ ವೈಕುಂಠಲೋಕದಲ್ಲಿದ್ದರು । ರಾಮಚಂದ್ರ । ಇವ । ರೆಲ್ಲರ ಕಳುಹಿಸಿ ಸುದ್ದಿ ತರಿಸುವೆನು । ರಾಮಚಂದ್ರ ॥ ೪ ॥

ಸಾವೇರಿ ರಾಗ - ಏಕತಾಳ

ವಾನರರು ಕೇಳಿರಯ್ಯ ಎನ್ನ ಮಾತನು । ಈಗ । ಜಾನಕಿದೇವಿಯ ನರಸಿ ಕಾಣಬೇಕು ನೀವೆಲ್ಲರು ॥ ವಾನರರು ॥ ಪ ॥ ಉತ್ತರದೇಶಕೆ ಪೂರ್ವ । ಪಶ್ಚಿಮ ದಕ್ಷಿಣ ನಾಲ್ಕು । ದಿಕ್ಕಿನೊಳು ದಶಾಸ್ಯನಿಪ್ಪ । ವರ್ತಮಾನ ಪೇಳಿರಯ್ಯ ॥ ವಾನರರು ॥ ೧ ॥ ಅಷ್ಟದಿಕ್ಪಾಲಕರಿರ್ಪ । ಪಟ್ಟಣದೊಳಿದ್ದ ಸೋವ । ದೃಷ್ಟಿಯಿಂದ ಕಂಡು ಬಂದು । ಸೃಷ್ಟೀಶಗೆ ಪೇಳಬೇಕು ॥ ವಾನರರು ॥ ೨ ॥ ತಿಂಗಳ ದಿನದಿ ರಾಮ । ನಂಗನೆಯಿದ್ದ ನಿದಾನ । ವಿಂಗಡಿಸದಿದ್ದರೆಯು । ಭಂಗಿಸುವೆ ನಿಮ್ಮ ನಾನು ॥ ವಾನರರು ॥ ೩ ॥

ಕಂದ

ಇಂತಾ ಸಮಯದಿ ರಾಘವ । ನಂತರಂಗದಲಿ ಕರೆವುತ ಕಿವಿಮಾತಿ ನೊಳಂ ॥ ಚಿಂತೆಯೊಳುಂಗುರವನು ಹನು । ಮಂತನಿಗೀಯುತೆ ಸೀತೆಯ ಕುರುಹಂ ಪೇಳ್ದಂ ॥

ಕೇದಾರಗೌಳ ರಾಗ - ಅಷ್ಟತಾಳ

ಭಾನುನಂದನನೆಂದ ಬಹಳ ಕಟ್ಟಾಜ್ಞೆಯು । ವಾನರೇಶ್ವರರು ಕೇಳಿ ॥ ದಾನವಾಂತಕನಂಘ್ರಿಗೆರಗಿ ತಪ್ಪೊಳಗಿದ್ದ । ಸೇನೆಯ ವಿಂಗಡಿಸಿ ॥ ೧ ॥ ಜಾನಕಿಯಮ್ಮನವರನು ಕದ್ದೊಯ್ದು ದ । ಶಾನನನ್ಯಾರೆನುತಾ ॥ ನಾ ಮುನ್ನ ತಾ ಮುನ್ನವೆನುತ ಪಶ್ಚಿಮಕೆ ಸು। ಷೇಣರು ನಡೆತಂದರೂ ॥ ೨ ॥ ನಳ ನೀಲ ಗವಯ ಗವಾಕ್ಷ ಕೇಸರಿ ಶತ । ಬಲಿ ಮುಂತಾದವರೆಲ್ಲರು ॥ ಇಳೆಯ ನಂದನೆಯನ್ನು ಬಿಡದೆ ಮೂಡಣ ದಿಕ್ಕ । ನೊಳು ಹುಡುಕಾಡಿದರು ॥ ೩ ॥ ಇಳ ವರ್ಷ ಬದರಿಕಾ ಕೇತುಮಾಲಾರಣ್ಯ । ಸ್ಥಳ ನವಖಂಡಗಳ ॥ ಇಳೆಯ ಪರ್ವತ ಕಾಡು ಸಂದು ಮೂಲೆಯನೆಲ್ಲ । ಸುಳಿದಾಡುತ್ತೈತಂದರು ॥ ೪ ॥ ವರುಣ ವಾಯುವ್ಯ ಕುಬೇರ ಈಶಾನ್ಯರ । ಪುರವೊಂದನುಳಿಯದಂತೆ ॥ ಧರಣಿ ನಂದನೆಯನ್ನು ಬೆಸಗೊಂಡು ಕೇದಾರ । ಗಿರಿಯ ಮೇಲಕೆ ಬಂದರು ॥ ೫ ॥ ದಿಕ್ಕುದಿಕ್ಕಿನೊಳಗಿಪ್ಪರಸು ಬಲ್ಲಾಳರ । ಸೊಕ್ಕುಗಳನೆ ಮುರಿದು ॥ ಒಕ್ಕಲೊಂದುಳಿಯದೆ ಮನೆಮನೆಯಲಿ ಕಳ್ಳ । ರಕ್ಕಸನನು ಕೇಳುತ ॥ ೬ ॥ ಮಕ್ಕಳು ಹಿರಿಯರು ಜವ್ವನರುಗಳು ಹೆ । ಮ್ಮಕ್ಕಳ ಬೆಸಗೊಳ್ಳುತ ॥ ಅಕ್ಕರೆಯಿಂದ ಕಂಡವರಿಲ್ಲೆಂಬಾಣೆಯು । ತೆಕ್ಕೊಂಡವರ ಕೈಯಲಿ ॥ ೭ ॥ ಪೂರ್ವ ಪಶ್ಚಿಮ ಉತ್ತರಾದಿ ದೇಶವನಾಳ್ವ । ಉರ್ವಿಪಾಲಕರ ಕೈಯ ॥ ಸರ್ವಥಾ ದಶಕಂಠನಿಲ್ಲೆಂಬ ಓಲೆಯ । ಗರ್ವದಿ ಬರೆಸಿಕೊಂಡು ॥ ೮ ॥ ನಿರ್ವಹಿಸಿದರು ಪಾತಾಳಲೋಕಂಗಳ । ಲಿರ್ವರ ಬೆಸಗೊಳ್ಳುತ ॥ ಉರ್ವಿಯ ರಚಿಸಿದಾತನ ಕಂಡು ಕೈಲಾಸ । ಪರ್ವತಕ್ಕೆ ತಂದರು ॥ ೯ ॥ ಪಾರ್ವತೀರಮಣನ ದರುಶನ ಕವನಲ್ಲಿ। ಬರ್ವನೆಂಬುದನು ಕೇಳಿ ॥ ಶರ್ವನ ಹಿಡಿದು ರಾವಣನ ತೋರೆನಲವ । ರೀರ್ವರು ನಸುನಕ್ಕರು ॥ ೧೦ ॥

ವಚನ

ಆಗಲಾ ಸದಾಶಿವನು ಈ ಬಲಿಮುಖರ ಪರಾಕ್ರಮಕ್ಕೆ ಮೆಚ್ಚಿ ಪಾರ್ವತಿಯೊಡನೆ ಏನೆಂದನು ಎಂದರೆ-

ಸೌರಾಷ್ಟ್ರ ರಾಗ - ಅಷ್ಟತಾಳ

ಕಂಡೆಯಾ ಗಿರಿಜಾತೆ ಕಪಿಗಳ ಸಾಹಸ। ಕಂಡೆಯೇನೆ । ದೇವ । ಪುಂಡರೀಕಾಕ್ಷ ಶ್ರೀರಾಮನ ದಂಡನು । ಕಂಡೆಯೇನೆ ॥ ೧ ॥ ತಲೆ ಮೂಗು

ಹಣ್ಣ ಹುಬ್ಬುಗಳ ಗಂಟಿಕ್ಕಿರುವುದ । ಕಂಡೆಯೇನೆ । ತಾವು । ಬಲುತರ ಕೋಪಾಟೋಪದಿ ಹಲ್ಲ ಕಿರಿವುದ । ಕಂಡೆಯೇನೆ ॥ ೨ ॥ ದಶಕಂಠನನು ತೋರಿಸೆಂದೆಮ್ಮ ತಡೆದುದ ಕಂಡೆಯೇನೆ । ಘೋರ । ಅಸುರ ರಾವಣನೆಲ್ಲಿ ತೋರೆಂಬ ಗರ್ವವ । ಕಂಡೆಯೇನೆ ॥ ೩ ॥

## ವಚನ

ಈ ಪ್ರಕಾರ ಪಾರ್ವತಿಯೊಡನೆ ಪೇಳಿ ಕಪಿನಾಯಕರೊಡನೆ ಏನೆಂದನು ಎಂದರೆ-

## ಸಾಂಗತ್ಯ ರಾಗ - ರೂಪಕತಾಳ

ಕಪಿನಾಯಕರು ಕೇಳಿ ನಾವೆಂಬ ಮಾತಿದು । ಕಪಟವಲ್ಲಿದು ವೇದವಚನ॥ ಚಪಲನೇತ್ರೆಯನೊಯ್ದು ಘೋರ ರಾವಣನ ಕಂ । ಡಪರಿಲ್ಲ ನಮ್ಮ ಪರ್ವತದಿ ॥ ೧ ॥ ನಿಪುಣರು ನೀವು ಸುಮ್ಮನೆ ಬಳಲುವುದೇಕೆ । ಗುಪಿತದಿ ಹನುಮಂತ ಮುಂದೆ ॥ ತಪನ ಕುಲೇಶನ ರಾಣಿ ಜಾನಕಿಯು ಕಂ । ಡಪನಿದು ಪುಸಿಯಲ್ಲ ಕೇಳಿ ॥ ೨ ॥ ಬಾಳಲೋಚನನೆಂದ ನುಡಿಯನು ಕಪಿಗಳು । ಕೇಳುತೆಲ್ಲರು ಕೈಯ ಮುಗಿದು ॥ ಬೀಳುಗೊಂಡಲ್ಲಿಂದ ನಡೆತಂದು ರವಿಜಗೆ । ಪೇಳಿದರೀ ವೃತ್ತಾಂತವನು ॥ ೩ ॥

## ಭೈರವಿ ರಾಗ - ಝಂಪೆತಾಳ

ಪಾತಾಳದೊಳಗಿಲ್ಲ । ಸತ್ಯಲೋಕದೊಳಿಲ್ಲ । ಆತ ದಶಕಂಠ ಕೈ । ಲಾಸದೊಳಗಿಲ್ಲ ॥ ೧ ॥ ನವಖಂಡ ಭೂತಳವ । ನಾವರಸಿ ನೋಡಿದೆವು । ಭುವನದೊಳಗಾರು ಕಂ । ಡವರಿಲ್ಲವಂತೆ ॥ ೨ ॥ ಭೂಲೋಕದರಸುಗಳು । ಬರೆದಿತ್ತ ಬಿನ್ನಪದ । ಓಲೆಯನು ಮುಂದಿರಿಸಿ । ಕೈಮುಗಿದರಾಗ ॥ ೩ ॥ ಓಲೆಯನು ತೆಗೆದದನು । ವಾಚಿಸುತ ಸುಗ್ರೀವ । ಬಾಳ ಚಿಂತೆಯ ತಾಳ್ದು । ಭಯದೊಳಿರುತಿರ್ದ ॥ ೪ ॥

## ವಾರ್ಧಿಕ

ಲವನೆ ಕೇಳಿಂತು ಸೀತೆಯನರಸಿಕೊಂಡು ಬಂ । ದವರ ನುಡಿ ಕೇಳ್ದು ನಿಜ ಚಿಂತೆಯಿಂದಿರಲತ್ತ ಪವನನಂದನ ವಾಲಿ ತನುಜ ಜಾಂಬವರು ಮುಂತಾದ

ಕಪಿಸೇನೆ ಸಹಿತ ॥ ತವಕದಲಿ ದಕ್ಷಿಣಕೆ ಮುಖವಾಗಿ ಬಹಳ ದೇ । ಶವ ಕಳೆದು ಬೆಸಗೊಳುತ ನಡೆತಂದರಲ್ಲಲ್ಲಿ । ಭುವನದೊಳಗಿಹ ಪುಣ್ಯಕ್ಷೇತ್ರ ಪುಣ್ಯಾಲಯಂ ಗಳ ಕಂಡು ನೆರೆ ನಮಿಸುತ ॥

### ಕುಜಾವಂತು ರಾಗ - ಅಷ್ಟತಾಳ

ಬಂದರು। ನಡೆ ತಂದರು ॥ ಪ ॥ ರಾಮಚಂದ್ರನ ಕಾಂತೆಯ ಕುರುಹು। ನೊಂದೊಂದನೆ ಬೆಸಗೊಳುತ್ತ ॥ ಬಂದರು ॥ ಅ ॥ ಬಲುಬಲು ದೇಶವ ದಾಟಿ । ತೊಳಲಿ ಬಂದರು ಈ ಪಾಟಿ । ಹಲವು ಪರ್ವತಂಗಳೊಳು । ಬಲು ಕಾನನವ ಹುಡುಕುತ್ತ॥ ಬಂದರು ॥ ೧ ॥ ತೆಲುಗು ಗಣ್ಯ ಪಾಂಡ್ಯ ರಾಜ್ಯವು। ಮಲೆಯಾಳ ತುಳುವರ ಸೀಮೆ । ಗಳಲಿ ದಶಕಂಠನನು ಸೀತಾ । ಲಲನೆಯನ್ನು ಬೆಸಗೊಳುತ್ತ ॥ ಬಂದರು ॥ ೨ ॥ ಈ ತೆರದಿ ಬ್ರಹ್ಮಕ್ಷತ್ರಿ । ನೀತಿವಂತ ವೈಶ್ಯ ಶೂದ್ರ । ನೂತನ ಪಾಂಚಾಲ ನಾನಾ । ಜಾತಿಯವರ ಬೆಸಗೊಳುತ್ತ॥ ಬಂದರು ॥ ೩ ॥ ಪ್ರೀತಿಯಿಂದ ಕಂಡವರ । ಮಾತಿನಿಂದ ನುಡಿಸಿ ಸುಪ್ರ । ಖ್ಯಾತರು ನಡೆತಂದರವನಿ । ಜಾತೆಯನ್ನು ಬೆಸಗೊಳುತ್ತ ॥ ಬಂದರು ॥ ೪ ॥

### ಕಾಂಬೋಧಿ ರಾಗ - ಝಂಪೆತಾಳ

ಆ ಕಡೆಯ ತಿರುತಿರುಗುತಲ್ಲಿ ಕಂಡರು ಕಪಟ । ದಾಕೃತಿಯೊಳೆಸೆವ ಸರಸಿಯನು॥ ಆ ಕಬಂಧವ ಕುಡಿಯಲವರೆಲ್ಲರಿಳಿಯೆ ಮಾಯ । ಲೋಕವದು ಕಣ್ಗೆ ರಂಜಿಸಿತು ॥ ೧ ॥ ಆರ ಪಟ್ಟಣಗಳಿವು ನೋಡಿದರೆ ಕಣ್ಗೆ ವಿ । ಸ್ತಾರ ವಾಗಿದೆ ಚೆಲ್ವ ನಗರ ॥ ಶ್ರೀರಾಮನರಸಿ ಜಾನಕಿಯ ಕದ್ದೊಯ್ದಂಥ । ಚೋರನನು ಹುಡುಕಬೇಕಿಲ್ಲಿ ॥ ೨ ॥ ಬಾಗಿಲನು ದಾಟಿ ಒಳಪೊಕ್ಕು ನೋಡಿದರೆ ಸೊಗ । ಸಾಗಿರುವ ರಾಜ ಬೀದಿಗಳ ॥ ನಾಗ ಸುರನರಲೋಕದಿಂದ ಲತಿಶಯವಿದರ । ಹೇಗೆ ನಿರ್ಮಿಸಿದ ಮಯನಮಮ ॥ ೩ ॥ ಉಪ್ಪರಿಗೆ ಕೋಣೆ ನಡುಮನೆ ಚೌಕಿ ಚಾವಡಿಯ । ಚಪ್ಪರದ ಮಾಳಿಗೆಯ ಬೆಳಕು ॥ ಇಪ್ಪತ್ತನಾಲ್ಕು ಕಂಭದ ನಡುವೆ ಮಂಟಪಗ । ಳೊಪ್ಪಿದುದು ನೋಡ ಲಾಶ್ಚರ್ಯ ॥ ೪ ॥ ಕಟ್ಟಾಣಿ ಝಳುತ್ತುಗಳ ಕೆತ್ತಿಸಿದ ಕಂಭಗಳು । ಮುಟ್ಟಿ ದರೆ ಹೊಯ್ಯ ಬೊಂಬೆಗಳ॥ ಚಚ್ಚಿರುವ ವಜ್ರ ವೈಢೂರ್ಯ ಗೋಮೇಧಿಕದ। ಕಟ್ಟೆಗಳ ಜಗಲಿ ಗೋಡೆಗಳ ॥ ೫ ॥ ಯಾರ ಮನೆಯೊಳಗೆ ನೋಡಿದರು

ನವರತ್ನಗಳ । ತೋರಣದ ಮೇಲುಗಟ್ಟುಗಳ ॥ ಊರೂರ ಮನೆಮನೆಯು ಕೇರಿಕೇರಿಯೊಳಿಲ್ಲ । ಸಾರಿ ಜಾನಕಿಯ ಹುಡುಕಿದರು ॥ ೬ ॥ ಎಲ್ಲಿ ನೋಡಿದರು ಜಾನಕಿಯ ಕಂಡಿಹೆವೆಂಬ । ರಿಲ್ಲದಾಯಿತು ಗೃಹಾಂತರದಿ ॥ ಬಲ್ಲಿದ ಕಪೀಶ್ವರರು ಬಂದ ದಾರಿಯ ತಪ್ಪಿ । ಅಲ್ಲಲ್ಲಿ ಹುಡುಕಾಡಲವರು ॥ ೭ ॥ ಮೋಸವಾಯಿತು ಹೊಲಬು ತಪ್ಪಿದೆವು ಹೊರತು ನಮ । ಗಾ ಸೀತೆ ಗೋಚರಿಸಲಿಲ್ಲ ॥ ಈಸು ದಿನ ದಣಿದೆವೆಂದೆನುತ ನಡೆತಂದು ಬಳಿ । ಕಾ ಸ್ವಯಂಪ್ರಭೆಯ ನುಡಿಸಿದರು ॥ ೮ ॥

### ಕೇದಾರಗೌಳ ರಾಗ - ಅಷ್ಟತಾಳ

ನಳಿನಾಯತಾಂಬಕಿ ನಿಲ್ಲೊಂದು ನಿಮಿಷವೆ। ನ್ನೊಳು ಮಾತನಾಡಬಲೆ॥ ಇಳೆಗೆ ಪೋಗುವ ದಾರಿ ಯಾವುದೆಂದರಿಯದೆ । ಹೊಲಬುದಪ್ಪಿದೆವಾವಲ್ಲೆ ॥ ೧ ॥ ಬಲು ದಿನ ಕಳೆಯಿತು ಬಂದು ಇಲ್ಲಿಗೆ ನಾವೀ । ಹೊಳಲ ಸಂಚರಿಸುವೆವು ॥ ಹೊಲಬ ಬಲ್ಲವನೊಬ್ಬ ದೂತನ ಕೊಟ್ಟೆಮ್ಮ । ಕಳುಹಿಸುವುದು ಇಳೆಗೆ ॥ ೨ ॥ ಜಾಂಬವಂತನ ನುಡಿ ಕೇಳ್ದು ಸ್ವಯಂಪ್ರಭೆ । ಸಂಭ್ರಮದಲಿ ನಗುತ ॥ ಡುಭಕತನದಲಿ ಹಾಸ್ಯವ ಮಾಡಿದ । ಅಂಬುಜದಳನಯನೆ ॥ ೩ ॥ ತರುಣಿಯ ನುಡಿಗೆ ಕೋಪಿಸಿಕೊಂಡು ಹನುಮ ಭೀ । ಕರ ರೂಪನಾಗೆ ಕಂಡು ॥ ಶರಣೆಂದು ಬೆದರಿ ಕಾಣಿಕೆಯಿತ್ತು ತಾ ಬಂದು । ಧರಣಿಯ ತೋರಿದಳು ॥ ೪ ॥

### ವಾರ್ಧಿಕ

ಈ ರೀತಿಯಿಂದ ಸ್ವಯಂಪ್ರಭಾನಗರವನು । ಮೀರಿ ಬಳಿಕಲ್ಲಿಂದ ನಡೆತಂದರಂದು ಕಾ ॥ ವೇರಿಯಮ್ಮನ ಬಳಿಯ ತೀರದಲಿ ಬರುತಿರೆ ಮೃಕಂಡು ಮುನಿಗಭಿವಂದಿಸಿ ॥ ಸಾರಿದರು ತೆಂಕು ಮುಖವಾಗಿ ಬಳಿಕಲ್ಲಿರುವ । ವೀರಮುನಿ ಕಣ್ವನಾಶ್ರಮಕೆ ನಡೆ ತಂದವರು । ಯಾರು ನೀವೆಲ್ಲಿಗೈದುವಿರೆಂದು ಕೇಳೆ ವನಚರರವನಿಗಿಂತೆಂದರು ॥

### ಮಾರವಿ ರಾಗ - ಝಂಪೆತಾಳ

ದಶರಥನ ಸುತನರಸಿ ಸೀತಾಂಗನಾಮಣಿಯ । ದಶಕಂಠನೆಂಬಸುರ ತಾನೊಯ್ದನಂತೆ ॥ ಬಿಸಜಸಖಸುತನಾದ ಸುಗ್ರೀವ ನಮ್ಮೊಡನೆ । ಬೆಸಸಿ

ಕಳುಹಿದನವಳ ಹುಡುಕಿರೆಂದು ॥ ೧ ॥ ದೇಶ ದೇಶವ ತೊಳಲಿ ದಣಿದೆ ವಲ್ಲದೆ ನಮಗೆ । ಆ ಸೀತೆ ಕಣ್ಗೆ ಗೋಚರಿಸಲಿಲ್ಲಯ್ಯ ॥ ಮಾಸವೊಂದರ ವೊಳಗೆ ಪೋಗದಿದ್ದರೆ ಕಡೆಗೆ । ಘಾಸಿಮಾಡುವ ನಮ್ಮ ಭಾನುತನುಜಾತ ॥ ೨ ॥ ಎತ್ತ ಪೋಗುವುದೆಂದು ಎಮಗೆ ತಿಳಿಯದೆ ಇಂದು । ಹತ್ತಿರಕೆ ಬಂದೆವೈ ಹರುಷದಿಂದ ॥ ಚಿತ್ತದಲಿ ಕಂಡು ದಯವಿತ್ತು ನಮ್ಮೆಲ್ಲರಿಗೆ । ಉತ್ತರವ ಕೊಡಬೇಕು ಉಳಿವ ತೆರದಿ ॥ ೩ ॥ ಇವರ ನುಡಿಗಳ ಕೇಳುತೀ ದಾರಿಯಲಿ ಪೋಗೆ । ಶಿವನು ದಯಮಾಡುವನು ಶೀಘ್ರದಿಂ ನಿಮಗೆ ॥ ಅವನಿಜೆಯ ದರುಶನವು ನಿಮಗಪ್ಪುದೆಂದೆನುತ । ಲವರ ಬಹುಮಾನದಲಿ ಹರಸಿ ಕಳುಹಿದನು ॥ ೪ ॥

**ಕೇದಾರಗೌಳ ರಾಗ - ಅಷ್ಟತಾಳ**

ಮುಂದೆ ನಡೆದು ಮಲಯಾಚಲದೆಡೆಗಾಗಿ । ಬಂದರು ಕಪಿವರರು ॥ ಒಂದೇ ಬುದ್ಧಿಯೊಳೆಲ್ಲ ಕುಳಿತು ಯೋಚಿಸಿದರು । ಮುಂದೇನು ಗತಿಯೆನುತ ॥ ೧ ॥ ಇಂದಿಗೆ ದಿನ ಮೂರಾಗುಳಿಯಿತು ಭಾಸ್ಕರ । ನಂದನನಪ್ಪಣೆಗೆ ॥ ಮಂದಗಮನೆಯಳ ಕಾಣದೆ ಪೋದರೆ । ಕೊಂದಲ್ಲದೆ ಬಿಡನು ॥ ೨ ॥

**ವಚನ**

ಇಂತೆಂದು ಜಾಂಬವರು ಪ್ರಸಂಗಿಸಲಾಗಿ ಆ ಮಾತಿಗೆ ಅಂಗದನು ಏನೆಂದನು ಎಂದರೆ -

**ಸಾಂಗತ್ಯ ರಾಗ - ರೂಪಕತಾಳ**

ಹಿಂದೆ ನಮ್ಮಯ್ಯಗು ಭಾನುನಂದನನಿಗು । ಒಂದಲ್ಲ ಮನಸು ತಮ್ಮೊಳಗೆ ॥ ಅಂದಿನ ಹಗೆ ಬಿಡದೀಗ ಸೀತೆಯ ಕಂಡು । ದಿಲ್ಲೆಂದರೇನ ಮಾಡುವನೊ ॥ ೧ ॥ ಅಲ್ಲಿ ಆತನ ಕೈಯ ಕೊಲಿಸಿಕೊಂಬುದಕಿಂತ । ಇಲ್ಲಿಯೆ ಉಪವಾಸದೊಳಗೆ ॥ ಮೆಲ್ಲ ನೀ ಪ್ರಾಣವ ಬಿಡುವುದೆ ಲೇಸೆಂದು । ಎಲ್ಲರ ಮುಂದೆ ಪೇಳಿದನು ॥ ೨ ॥ ಅಂಗದನಿಂತೆಂದ ಮಾತ ಕೇಳುತ ಕಪಿ । ಪುಂಗವ ಪರಮೇಷ್ಠಿಸುತನು ॥ ಮಂಗಳ ಮಹಿಮ ಶ್ರೀ ರಾಮಚಂದ್ರನು ನಮ್ಮ । ಭಂಗಿಸುವುದಕೊಪ್ಪಗೊಡನು ॥ ೩ ॥ ಕೊಂದರೆ ಕೊಲಲಿ ಕಾಯ್ದರೆ ಕಾಯಲಾ ರಾಮ । ಚಂದ್ರನ ಪಾದದ ಬಳಿಯ ॥ ಹಿಂದೆ ಜಟಾಯು

ಪ್ರಾಣವ ಬಿಟ್ಟು ಸುರಪನ । ಮಂದಿರವನು ಸೇರ್ದುದರಿಯ ॥ ೪ ॥ ಈ ತೆರದಲಿ ತಮ್ಮೊಳಾಲೋಚನೆಯು ಗೆಯ್ದು । ಮಾತಾಡುತಿರುವ ವೇಳೆಯಲಿ ॥ ಆತ ಜಟಾಯುವಿನಣ್ಣನೆಂದೆನಿಪ ಸಂ । ಪಾತಿ ಬಂದಿವರ ಕೇಳಿದನು ॥ ೫ ॥

**ತೋಡಿ ರಾಗ - ಅಷ್ಟತಾಳ**

ಯಾರಯ್ಯ । ನೀವು । ಯಾರಯ್ಯ ॥ ಪ ॥ ಯಾರಯ್ಯ ನೀವು ಎಲ್ಲರೊಟ್ಟಾಗಿ । ಘೋರಕಾನನದಲ್ಲಿ ಸುಮ್ಮನೆ ಕುಳಿತಿರ್ಪ । ದಾರಯ್ಯ ॥ ಅ ॥ ದಶರಥಸುತ ರಾಮನೆಂಬಾತನಾರು । ಪುಸಿಯಲ್ಲ ಭಾನುನಂದನನೆಂದರಿಲ್ಲಿ ॥ ದಶಕಂಠ ಜನಕನಂದನೆ ಸುದ್ದಿಯೇನು । ವಶವಿಲ್ಲದಿಂತು ಚಿಂತಿಸುವು ದೇಕಿನ್ನು ॥ ಯಾರಯ್ಯ ॥ ೧ ॥ ತಮ್ಮನು ಎನಗೆ ಜಟಾಯುವೆಂಬಾತ । ನಿರ್ಮಲದಲಿ ಸತ್ತನೆಂದೆಂಬ ಮಾತ ॥ ನಿಮ್ಮೊಳಿಂದವರು ಯಾರಿದ ಕೇಳ್ದು ದೆಲ್ಲಿ । ಒಮ್ಮೆ ಎನ್ನೊಡನೆ ಎಸ್ಸರಿಸಬೇಕಿಲ್ಲಿ ॥ ಯಾರಯ್ಯ ॥ ೨ ॥

**ಮಧ್ಯಮಾವತಿ ರಾಗ - ಏಕತಾಳ**

ವಸುಧೆಗುತ್ತಮವಾದಯೋಧ್ಯಾ ಪಟ್ಟಣದಿ । ದಶರಥ ನೃಪನೆಂಬ ಧರಣಿಪಾಲಕಗೆ ॥ ಕುಸುಮಗಂಧಿಯರು ಮೂವರು ಹೆಂಡಿರವಗೆ । ಅಸಮ ಸಾಹಸರು ನಾಲ್ವರು ಮಕ್ಕಳವಗೆ ॥ ೧ ॥ ಪಿತನ ವಾಕ್ಯವ ಕೇಳಿ ಶ್ರೀರಾಮ ಚಂದ್ರ । ಸತಿಸಹಿತ ಪಂಚವಟಿಯೊಳಿರೆ ಮುನ್ನ ॥ ಕಪಟದಿ ದಶಕಂಠ ಕದ್ದೊಯ್ದ ಸತಿಯ । ಚಪಲಲೋಚನೆ ಕೂಗುತಿರಲು ದುಃಸ್ಥಿತಿಯ ॥ ೨ ॥ ಮಡದಿಯ ಧ್ವನಿಕೇಳಿ ಮತ್ತಾ ಜಟಾಯು । ತಡೆದು ಮಾರ್ಗದಿ ಪೋಗ ಗೊಡದೆ ಶುಭಕಾಯ ॥ ಹೊಡೆದಾಡಿದರು ಬಲು ಹೊತ್ತು ಪರ್ಯಂತ । ಕಡೆಗೆ ಮೋಸದೊಳವನ ಕೊಂದ ದಶಕಂಠ ॥ ೩ ॥ ಕಾಮಿನಿ ವರವಿತ್ತ ದೆಸೆ ಯಿಂದ ಶರಣ । ರಾಮನ ಚರಣದೆಡೆಯೊಳಾಯ್ತು ಮರಣ ॥ ಆ ಮೇಲೆ ನಮ್ಮರಸನ ಸ್ನೇಹ ಬೆಳಸಿ । ಕಾಮ ಸನ್ನಿಭ ಇಂದ್ರಸುತನ ಸಂಹರಿಸಿ ॥ ೪ ॥ ಸೇನಾಧಿಪತ್ಯವ ಸುಗ್ರೀವಗಿತ್ತು । ಜಾನಕಿಯನರಸಲು ನಮಗಾಜ್ಞೆಯಿತ್ತು ॥ ನಾನಾ ರಾಜ್ಯದೊಳೆಲ್ಲ ಹುಡುಕಿದರಿಲ್ಲ । ಏನ ಮಾಡುವುದೆಂದೆಮಗೆ ಕಾಂಬುದಿಲ್ಲ ॥ ೫ ॥

**ವಾರ್ಧಿಕ**

ಸಿರಿರಾಮ ಚಾರಿತ್ರಮಂ ಕೇಳ್ದು ಹಿಂದೆ ರವಿ । ಕಿರಣದುರಿಯುಲಿ ಬೆಂದು ಹೋದ ಗರಿ ಮೂಡಿದುವು । ಎರಡು ಪಕ್ಕದೊಳಗಿವರೆಲ್ಲರಂ ಕುಳ್ಳಿರಿಸಿ ಶರಧಿತಡಿಯೊಳಗಿಳುಹುತ ॥ ಬೆರಳ ಸನ್ನೆಯುಲಿ ತೋರಿದನು ಲಂಕಾದ್ವೀಪ । ಪುರವಿದೇಯೆಂದು ತೆರಳಿದನು ಸಂಪಾತಿ ಭೋ । ಗ‌ರೆವ ಶರಧಿಯ ಕಂಡು ಕಪಿನಾಯಕರಿಗೆ ವಾನರ ಶ್ರೇಷ್ಠನಿಂತೆಂದನು ॥

**ತುಜಾವಂತು ರಾಗ - ಏಕತಾಳ**

ಕಂಡಿರೇ । ನೀವು । ಕಂಡಿರೇ ॥ ಪ ॥ ಕಂಡಿರೇ ಸಮುದ್ರರಾಜ । ಕಂಡೆಮ್ಮನುಬ್ಬೇರಿ ನಭೋ । ಮಂಡಲಕ್ಕೆ ಹಾರಿ ಪೋಗಿ । ಇರುವದ । ಭೋ । ಗ‌ರೆವುದ ॥ ಕಂಡಿರೇ ॥ ೧ ॥ ಧರೆಯ ಪುಣ್ಯನದಿಗಳನ್ನು । ಕರೆಸಿ ಬೆರಸಿಕೊಂಡು ತಾನು । ಹರುಷದಿಂದ ತರತರದಲಿ । ಬರುವದ । ಕೊಬ್ಬಿ ಮೆರೆವುದ ॥ ಕಂಡಿರೇ ॥ ೨ ॥ ಅಂಬರಕ್ಕೆ ಹಾರಿ ಮುಗುಚಿ । ಕಾಂಬುರಿಂಗೆ ಭಯವ ತೋರಿ । ಲಂಬಿಸುವದಬ್ಬರ ಹೆಚ್ಚಿ । ನೊರೆಗಳ । ಬಹ । ತೆರೆಗಳ॥ ಕಂಡಿರೇ ॥ ೩ ॥ ಅಗಣಿತದ ಪರ್ವತಗಳ । ಸೊಗಸಿನಿಂದ ಬಾಯ ಕಳೆದು । ಮಿಗುವರಿದು ನುಂಗುವ ಮೀನು । ಹೊಳೆವುದಾ । ಬಾಯ । ಕಳೆವುದ ॥ ಕಂಡಿರೇ ॥ ೪ ॥ ಹೇಗೆ ದಾಟಬೇಕುಯೆಂದು । ನಾಗಶಯನ ಬಲ್ಲ ನಮ್ಮಿಂ । ದಾಗದಸಾಧ್ಯವಿದು ದಾರಿ । ತಿಳಿಯದು । ಪ್ರಾಣ । ಉಳಿಯದು ॥ ಕಂಡಿರೇ ॥ ೫ ॥

**ವಚನ**

ಇಂತೆಂದ ಜಾಂಬವನ ವಚನಮಂ ಕೇಳ್ದು ಹನುಮಂತನು ಏನೆಂದನು ಎಂದರೆ-

**ಭೈರವಿ ರಾಗ - ಝಂಪೆತಾಳ**

ಇದಕೆ ಚಿಂತೆಗಳೇಕೆ ನಿಮಗೆ ಸ್ವಾಮಿ । ಪದುಮನಾಭನ ಕರುಣವಿಲ್ಲವೇ ನಮಗೆ ॥ ಇದಕೆ ॥ ಪ ॥ ಹಾರುವೆನು ಶರಧಿಯೊಂದರೆ ನಿಮಿಷದೊಳಗೆ । ನಾ । ಹೋರುವೆನು ರಾವಣನ ಹತ್ತು ತಲೆಗಳ ದೆಸೆಗೆ ॥ ಬೀರುವೆನು ಶಾಕಿನೀ ಡಾಕಿನೀಗೌತಣವ। ತೋರುವೆನು ರಕುತದೋಕುಳಿಯ । ಹಿಂದೆ ಜಾರುವೆನು ಕೈಮುಗಿದು ಕಂಡು ಜಾನಕಿಯ ॥ ಇದಕೆ ॥ ೧ ॥ ಜಾಂಬವರ ನುಡಿ ಕೇಳ್ದು

ಬೆದರದುಬ್ಬೇರಿದನು । ಜಂಭಾರಿಸುತನ ಸುತ ನುಡಿದರಾಪಾಡೇನು ॥ ಕುಂಭಿನಿಯ ಕಿತ್ತು ಕಡೆಗಿರಿಸಹೇಳಿದರು । ರವಿ । ಬಿಂಬವನು ತುಡುಕ ಹೇಳಿದರು । ಸಮರ । ಡೊಂಬಿಯುಲಿ ಕಾಲಭೈರವನ ನುಂಗುವೆವು ॥ ಇದಕೆ ॥ ೨ ॥ ಶಿವನ ಕೈಲಾಸದಿಂದೋಡಿಸಲ್ ಪೇಳ್ಕಮಲ । ಭವನ ಪಟ್ಟವ ಕಿತ್ತು ಬದಲೊಬ್ಬಗಿರಿಸುವೆವು ॥ ಜವನವರ ಹೆಡಗೈಯ ಬಿಗಿದು ಕಟ್ಟೆಳೆತಹೆವು । ದಿವಿಜ ಲೋಕವನ್ನೆಳೆದು ತಹೆವು । ಇನ್ನು । ಲವಣಾಂಬುಧಿಯನಿಲ್ಲಿ ಈಗ ದಾಟುವೆವು ॥ ಇದಕೆ ॥ ೩ ॥

## ವಚನ

ಇಂತೆಂದು ಒಬ್ಬರೊಬ್ಬರು ಪ್ರಸಂಗಿಸಲಾಗಿ ಜಾಂಬವರು ತಮ್ಮೊಳಗೆ ಆಲೋಚನೆಯು ಮಾಡಿ ಹನುಮಂತನಂ ಕರೆದು ಏನೆಂದರು ಎಂದರೆ -

## ಮಧ್ಯಮಾವತಿ ರಾಗ - ಅಷ್ಟತಾಳ

ನೀನೆ ಕಲಿ ಹನುಮ । ನಮ್ಮವರೊಳು । ನೀನೆ ಕಲಿ ಹನುಮ ॥ ಪ ॥ ನೀನೆ ಕಲಿಯು ನಮ್ಮ । ವಾನರರೊಳಗೆಲ್ಲ । ಆನಂದದಿಂದ ಸಾ । ಗರವ ಲಂಘಿಸುವುದಕ್ಕೆ ॥ ನೀನೆ ॥ ೧ ॥ ಬಣಗು ರಕ್ಕಸ ರಾ । ವಣನ ಪಟ್ಟಣವೆಲ್ಲ । ಅಣುರೂಪಿನಲಿ ಮನೆ । ಮನೆಯು ಹುಡುಕಲಿಕ್ಕೆ॥ನೀನೆ ॥ ೨ ॥ ಕೆಟ್ಟ ರಕ್ಕಸರಡ್ಡ । ಗಟ್ಟಿ ನಿಲ್ಲುವರನ್ನು । ಕುಟ್ಟಿಲಂಕಾಪುರ । ಸುಟ್ಟು ಬರುವುದಕ್ಕೆ ॥ ನೀನೆ ॥ ೩ ॥ ಕೊಂಕದೆ ಕೊನರದೆ । ಲಂಕೆಯೊಳ್ ಸಿಲುಕದೆ । ಪಂಕಜ ಮುಖಿ । ಸೀತೆ । ಯಂ ಕಂಡು ಬರಲಿಕ್ಕೆ ॥ ನೀನೆ ॥ ೪ ॥

## ವಾರ್ಧಿಕ

ಎಂದ ಜಾಂಬವರ ನುಡಿ ಕೇಳ್ದು ಬೊಬ್ಬಿರಿವುತಜ । ನಂದನಗೆ ಕೈ ಮುಗಿವುತಾ ಕ್ಷಣವೆ ತೆರಳಿದ ಮ । ಹೇಂದ್ರ ಪರ್ವತವೇರಿ ನಾಲ್ದೆಸೆಯ ನೋಡಿದನು ಸಿಂಧು ಘೋರ್ಗುಡಿಸುತಿಹುದ ॥ ಇಂದುಶೇಖರ ಕಮಲಬಂಧು ಶಚಿಪತಿ ಲಕ್ಷ್ಮಿ । ಸ್ಕಂದ ಶಾರದೆ ಗಣಪ ಗೌರಿಮುಖ ಸುರರ ರಘು । ನಂದನನ ಧ್ಯಾನಿಸುತ ಪುಟನೆಗೆದು ಹಾರಿದಂ ಮೂರ್ಲೋಕ ತಲ್ಲಣಿಸಲು ॥ ೧ ॥ ಒಡೆದು ಗಗನಾಂಗಣಕೆ ಲಂಘಿಸಿದ ಭರಕಾಗ । ಹದಿನಾಲ್ಕು ಲೋಕವೆಲ್ಲಾಡಿದುದು ನೆಲವದುರಿ । ಉದಧಿ ಕಂಪಿಸಿತಷ್ಟಗಜ ಕೂರ್ಮ ಫಣಿರಾಜ

ಮೊದಲಾದರೆದೆಗೆಟ್ಟರು ॥ ಬೆದರಿದರು ಸುರರು ಮಾಯಕದಿಂದ ನಿರ್ಮಿಸಿದ। ಸುದತಿ ಬಂದಡ್ಡಗಟ್ಟಿದರವಳ ಸದೆಬಡಿವ್ರು । ತುದರದೊಳು ಪೊಕ್ಕು ಛಾಯೆಯ ಸೀಳಿ ಮುಂದಿರುವ ಮೈನಾಕನಂ ಮನ್ನಿಸಿ ॥ ೨ ॥

ಸೌರಾಷ್ಟ್ರ ರಾಗ - ತ್ರಿವುಡೆ ತಾಳ

ಹಾರಿದನು ಲಂಕೆಯನು ಬಿಟ್ಟೀ । ಛ್ಯಾರು ಯೋಜನ ಮುಂದೆ ನಡೆಯುತ। ಸಾರಿದನು ತೃಣಬಿಂದು ಮುನಿಪನ । ಶಾಲೆಯೆಡೆಗೆ ॥ ೧ ॥ ಊರ ಹೊಲಬನು ತಿಳಿಯದಿಲ್ಲಿ ವಿ । ಚಾರಿಸಲು ಬೇಕೆನುತ ಮುನಿಯ ಪ । ದಾರ ವಿಂದಕೆ ಕೈಯ ಮುಗಿದನು । ವೀರಹನುಮ ॥ ೨ ॥ ಮಾತನಾಡಿಸಿಕೊಂಬೆ ನೆನುತಲಿ । ಮತ್ತೆ ನುತಿಸಿದ ಬಹಳ ದೈನ್ಯದಿ । ವಾತಸಂಭವನೆರಗಿದನು ಮುನಿ। ನಾಥಗಂದು ॥ ೩ ॥

ಭೈರವಿ ರಾಗ - ಝಂಪೆತಾಳ

ಯಾವ ದೇಶಂಗಳಿವು । ಯಾವ ರಾಜ್ಯಂಗಳಿವು । ನೀವಿಲ್ಲಿ ನೆಲೆಯಾಗಿ । ನಿಂದೆಷ್ಟು ದಿವಸ ॥ ೧ ॥ ರಾವಣೇಶ್ವರನೆಂಬ । ರಕ್ಕಸನ ಪುರವೆಲ್ಲಿ । ಯಾವ ದಿಕ್ಕಿನೊಳುಂಟು । ಲಂಕಾಧಿನಗರ ॥ ೨ ॥ ಕಾರ್ಯವುಂಟೆಮಗಲ್ಲಿ । ಕಳ್ಳ ರಕ್ಕಸನಲ್ಲಿ । ತೋರಿಕೊಟ್ಟರೆ ನೀವು । ಬಹುಪುಣ್ಯಬಹುದು ॥ ೩ ॥

ವಚನ

ಇಂತೆಂದು ಮುನಿಯ ಪಾದಕ್ಕೆರಗಿ ಬಹುದೈನ್ಯದಿಂ ಹೇಳಿಕೊಂಬಂಥಾ ಹನುಮಂತನ ಭಕ್ತಿಯಂ ಕಂಡು, ಈತನುಮಹಾ ಸ್ವಾಮಿಯಕಾರ್ಯ ಸಂಗ್ರಹಿ, ಪರೋಪಕಾರಿ, ಅತಿಧೈರ್ಯಶಾಲಿ, ಶರಣರಲಿ ಶ್ರೇಷ್ಠನೆಂದು ತಿಳಿದು, ಈತನಂ ಪರೀಕ್ಷಿಸಬೇಕೆಂದು ಕಣ್ದೆರೆದು ಕಟಾಕ್ಷದಿಂದ ನೋಡಿ ಹನುಮಂತನ ಕೂಡೆ ಆ ಮುನಿಶ್ರೇಷ್ಠನು ಏನೆಂದನು ಎಂದರೆ -

ಸಾಂಗತ್ಯ ರಾಗ - ರೂಪಕತಾಳ

ಕುರುಡನ ಕೈಗೆ ಕನ್ನಡಿಯೇಕೆ ಬಧಿರಗೆ । ವರಸಂಗೀತಗಳ ಮಾತೇಕೆ ॥ ಎರಡು ಕಾಲಿಲ್ಲದ ಹೆಳವಗೆ ಯಾತ್ರೆಯ । ತಿರುಗಾಡುವ ಸುದ್ದಿಯೇಕೆ ॥ ೧ ॥

ಮರಮರ ಚರಿಪ ವಾನರ ನಿನಗೀ ಲಂಕಾ । ಪುರದರಸಿನ ಸುದ್ದಿಯೇಕೆ ॥ ತಿರಿದುಂಬಾತನ ಮನ ಪಲ್ಲಕ್ಕಿಯೇರುವ । ತೆರನಂತಾಯಿತು ನಿನ್ನ ಮನಸು ॥ ೨ ॥ ಏಳು ಸುತ್ತಿನ ಕೋಟೆ ಕಣಿವೆ ಕಂದಕಗಳು । ಬಾಳ ರಕ್ಕಸರ ಕಾಲಾಟ॥ ಮೇಲಾಗಿ ಬ್ರಹ್ಮ ರಾಕ್ಷಸ ಭೂತಗಣಗಳ । ಜಾಲವು ನುಸಿ ಹೋಗಗೊಡರು ॥ ೩ ॥ ಮುನಿರಾಯ ಕೇಳಯ್ಯ ಹಿಂದು ಮುಂದಾದರು । ತನುವಿದು ತನಗೆ ಶಾಶ್ವತವೆ ॥ ವನಜ ಸಂಭವ ಪಣೆಯೊಳು ಬರೆದಿಟ್ಟಂಥಾ । ದನು ಮೀರ ಲುಂಟೆ ಜೀವರಿಗೆ ॥ ೪ ॥ ಸ್ವಾಮಿಕಾರ್ಯದ ಮೇಲೆ ಸತ್ತರೆ ನೆನಸಿದ । ಕಾಮಿತಫಲ ಕೈಸೇರುವುದು ॥ ಆ ಮಾತು ನಿಮಗೇಕೆ ದಶಕಂಠನಿರುವಂಥ । ಸೀಮೆ ತೋರಿದರೊಂದೆ ಸಾಕು ॥ ೫ ॥

### ದೇಶಿ ರಾಗ - ಅಷ್ಟತಾಳ

ಕಪಿವರಾ ವೀರ ಕೇಳೆನ್ನ ಮಾತ । ಗುಪಿತದಿಂ ಬಹುಕಾಲವಾಯಿತು । ತಪವ ಮಾಡುವೆವಿಲ್ಲಿ ನಾವ್ ॥ ೧ ॥ ತಲೆಯಿಂದಾ ಜಡೆಯಿಳಿದು ಪಾತಾಳಕೆ। ಬಳಸಿಕೊಂಡತಿ ಬೇರುವರಿದಿವೆ। ಎಳೆಯುಲಿಕೆ ಬಲಸಾಲದು ॥ ೨ ॥ ವೃದ್ಧರೂ ನಾವು ಏಳಲಾರೆವು ನಮ್ಮ । ಉದ್ದ ನೆಗೆದರೆ ರಾವಣೇಶ್ವರ । ನಿದ್ದೆ ಠಾವನು ತೋರ್ಪೆವು ॥ ೩ ॥ ಎಂಬ ಮಾತಿಗೆ ಎರಡು ತೋಳ್ ಪಿಡಿದೆತ್ತಿ । ಅಂಬರಕೆ ನೆಗಹಲ್ಕೆ ಕಮಲಜ । ಶಂಭು ತಾ ಬೆರಗಾಗಲು ॥ ೪ ॥ ತೋರಿದಾ ಮುನಿ ಲಂಕಾ ಪಟ್ಟಣವನ್ನು । ಹಾರಿದನು ಹನುಮಂತ ಲಂಕೆಯ । ನೇರಿದನು ಬಲುದುರ್ಗವ ॥ ೫ ॥ ನಿಲ್ಲೆಲೋ ಕಪಿಯೆನುತ ಬಾಗಿಲ ಬಳಿ । ಯಲ್ಲಿ ತಡೆದಿಹ ಖುಲ್ಲ ರಕ್ಕಸ । ರೆಲ್ಲರನು ಸದೆಬಡೆದನು ॥ ೬ ॥ ಪೊಕ್ಕನಾ ಲಂಕಾ ಪಟ್ಟಣದೊಳಗೆಲ್ಲ । ರಕ್ಕಸರು ಗೊರಕಿಡುತ ನಿದ್ರೆಯ । ಕಕ್ಕಸದ ಭಟರೀಕ್ಷಿಸಿ ॥ ೭ ॥ ಅಲ್ಲಲ್ಲೀ ರಾತ್ರಿ ತಿರುಗಾಡುವ ವೇಳ್ಯ । ದಲ್ಲಿ ಲಂಕಿಣಿಯೆಂಬ ದಾನವಿ । ಬಲ್ಲಿದಾತನ ತಡೆದಳು ॥ ೮ ॥

### ಶಂಕರಾಭರಣ ರಾಗ - ಏಕತಾಳ

ಮಧ್ಯರಾತ್ರಿ ಕಾಲದಲ್ಲಿ । ಮಾತನಾಡದೆ ಸುಮ್ಮನೆ । ಎದ್ದು ತಿರು ಗಾಡುವಾತ । ನೀನಾರೋ ಕಪಿ ॥ ೧ ॥ ನಿದ್ದೆಯಿಲ್ಲ ಕಾಣೆಯೆನಗೆ । ನೀನು ಭೂತಂಗಳ ಹಾಗೆ। ಉದ್ದುರುಟುತನವೇಕೆ । ಕಳ್ಳ ರಾಕ್ಷಸಿ ॥ ೨ ॥ ಭದ್ರವೆನ್ನ

ಕಾವಲಲ್ಲಿ । ಲಂಕಿಣಿಯೆಂಬಾಕೆ ನಾನು । ಕ್ಷುದ್ರ ಕಳ್ಳ ಎನ್ನ ಕೈಗೆ । ಸಿಕ್ಕಿದೆಯಲ್ಲ ॥ ೩ ॥ ಕಳ್ಳನಲ್ಲ ಕಾಣೆ ನಾನು । ಖುಲ್ಲೆ ರಾಕ್ಷಸಿ ಕೇಳು ನೀನು । ಒಳ್ಳೆ ವಾಯುಪುತ್ರ ಹನುಮಂ । ತೆನ್ನ ಪೆಸರು ॥ ೪ ॥ ಹನುಮಂತನಾದರೇನು । ಕಣ್ಣು ಮೂರುಂಟೇನೊ ನಿನಗೆ । ಬಿನುಗೆ ನಾ ಬಿಟ್ಟೇನೆ ನಿನ್ನ । ತಿನ್ನದನಕ ॥ ೫ ॥ ಎನ್ನ ಪಂಥ ನೋಡು ನಿನ್ನ । ಮಣ್ಣುಗೂಡಿಸುವೆ ಮುನ್ನ । ಹೆಣ್ಣುಮೂಳಿ ದಾರಿ ಬಿಟ್ಟು । ಅತ್ತ ಸಾರೆಲೆ ॥ ೬ ॥ ವಾಯುಪುತ್ರ ನೀ ನೋಡೆನ್ನ । ಬಾಯೊಳಿದ್ದ ಪಲ್ಗಳನ್ನು । ಸಾಯುದಂತೆ ನುಂಗಿಬಿಡುವೆ ಮಾತು ಬೇರುಂಟೆ ॥ ೭ ॥ ನಾಯಿಗಳ ಹಾಗೊಂದೊಂದು । ಬಗುಳಿ ನೀನು ಪೆಟ್ಟು ತಿಂದು । ಸಾಯಬೇಡ ಹೋಗತ್ತತ್ತ । ಕಳ್ಳ ರಕ್ಕಸಿ ॥ ೮ ॥ ಇಷ್ಟು ಪಂಥವಾದ ಮೇಲೆ । ಬಿಟ್ಟು ನಿನ್ನ ಪೋದರಾನು ಕಷ್ಟವೆಂದು ಕೈಯೊಳೊಂದು । ಪೆಟ್ಟನಿಟ್ಟಳು ॥ ೯ ॥ ಭ್ರಷ್ಟ ಮೂಳಿಯೆಂದು ಹನುಮ । ಮುಷ್ಟಿಯಿಂದ ತಿವಿಯಲವಳು । ರಟ್ಟೆ ಮುರಿದು ಬಿದ್ದಳಾ ಕಾ । ರ್ಬೆಟ್ಟ ದಂಡದಿ ॥ ೧೦ ॥

ವಾರ್ಧಿಕ

ಹಲವು ಪರಿಯಲಿ ಕಾದಿ ದಣಿದು ಲಂಕಾಲಕ್ಷ್ಮಿ । ತೊಲಗಿದಳು ರಾವಣಗೆ ಬಂತು ದುರ್ದಶೆಯೆನುತ । ಬಳಿಕ ಹನುಮಂತನಣು ರೂಪಿನಿಂ ಬಂದಲ್ಲಿ ಸುಳಿದಾಡಿ ಹುಡುಕುತಿರಲು ॥ ಬಲವಂತನಿವನಾರು ಬಲು ನಿದ್ರೆಯೊಳಗೊಬ್ಬ । ಮಲಗಿರ್ಪ ಕುಂಭಕರ್ಣನ ಶ್ವಾಸದೊಳು ಸಿಕ್ಕಿ । ಸುಳಿಸುಳಿದು ವಜ್ರಕಂಭಕೆ ಬಡೆದು ಅಲ್ಲಿಂದ ಪೊರನಂಟು ನಡೆದನೆಂದು ॥

ಸೌರಾಷ್ಟ್ರ ರಾಗ - ತ್ರಿವುಡೆ ತಾಳ

ತ್ರಿಣಯಸಖ ಮಧುಸೂದನಾಚ್ಯುತ । ವನಜಲೋಚನಯೆಂಬ ಜಪಗಳ । ನೆಸಪ ಶರಣರ ಶ್ರೇಷ್ಠನ ವಿಭೀ । ಷಣನ ಕಂಡ ॥ ೧ ॥ ಇಲ್ಲಿ ನೋಡಿದರೀತ ರಕ್ಕಸ । ನಲ್ಲ ಗುಣವಿದೆಯೆನುತ ಮುಂದರಿದಲ್ಲಿ ಕಂಡನು ರಾವಣೇಶ್ವರ । ನಂತಃಪುರವ ॥ ೨ ॥ ವಲ್ಲಭೆಯನೊಡಗೂಡಿ ರಾವಣ । ಚೆಲ್ವ ಮಂಚದ ಮೇಲೆ ಮಲಗಿರೆ । ಬಲ್ಲಿದನು ತಾ ಕಂಡು ಮನದಲಿ । ಬಳಲುತೆಂದ ॥ ೩ ॥

## ಕಲ್ಯಾಣ ರಾಗ - ಝಂಪೆತಾಳ

ಬಲು ದೋಷಕೊಳಗಾದ । ಪಾಪಿ ದಶಾನನ ॥ ಮಲಗಿರ್ದ ಸತಿಯಿವಳು । ವೈದೇಹಿಯಹುದು ॥ ೧ ॥ ಕಲೆಯಾಯ್ತು ರಾಘವಗೆ । ಕಾಂತೆಯಿವಳಿಂದ ॥ ಗೆಲವಿಲ್ಲ ಮುಂದೆಮಗೆ । ದಣಿವುದಿದು ವ್ಯರ್ಥ ॥ ೨ ॥ ವರ ಪತಿವ್ರತೆಯೆಂಬ । ಬಿರುದ ನೆರೆ ತೊರೆದು ॥ ಮರುಳಾದಳೀತನಿಗೆ । ಮಂದ ಗಜಗಮನೆ ॥ ೩ ॥ ದಾನವನ ಸಂಹರಿಸಿ । ದಾಟಿದರೆ ಮುಂದೆ ॥ ಏನೆಂದು ಪೇಳುವನೊ । ಯೆನ್ನೊಡೆಯ ರಾಮ ॥ ೪ ॥

## ದ್ವಿಪದಿ

ತರತರಿಸಿ ಮನದೊಳಗೆ ತನ್ನೊಡೆಯ ರಾಮ । ಕುರುಹುಗಳ ಪೇಳ್ದುದನು ಕಂಡ ನಿಸ್ಸೀಮ ॥ ೧ ॥ ಪದುಮ ರೇಖೆಗಳಿಲ್ಲ ಪಾದದಲಿ ಮುಂದೆ । ವಿಧವತ್ವ ತೋರುತಿದೆ ಹೆಡತಲೆಯ ಹಿಂದೆ ॥ ೨ ॥ ಮಚ್ಚಲಾಂಛನ ನೋಡೆ ಬಲ ತೊಡೆಯೊಳಿಲ್ಲ । ಅಚ್ಯುತನ ಸತಿಯಿವಳು ಸರ್ವಥಾ ಅಲ್ಲ ॥ ೩ ॥ ಇವಳು ಜಾನಕಿಯಲ್ಲವೆಂದು ನಿಶ್ಚೈಸಿ । ತವಕದಲಿ ಹೊರವಂಟ ಭೂಸುತೆಯ ನರಸಿ ॥ ೪ ॥ ನವರತ್ನ ಬೀದಿಗಳ ಕನಕ ನಿರ್ಮಿತದ । ಭವನಗಳನೊಳಪೊಕ್ಕು ನೋಡಿ ಸನ್ಮತದ ॥ ೫ ॥ ಮನೆ ಮನೆಯ ತಾ ತಿರುಗಿ ಮತ್ತಲ್ಲಿ ಬಂದು । ದನುಜನುಪ್ಪರಿಗೆಯನು ತಾನೇರಿನಿಂದು ॥ ೬ ॥ ಸುಳಿಸುಳಿದು ನೆರೆ ದಣಿದು ಪಟ್ಟಣವನೆಲ್ಲ । ನಳಿನಲೋಚನೆ ಸೀತೆಯನು ಕಂಡುದಿಲ್ಲ ॥ ೭ ॥ ಅರಸಿ ಕೊಳಲಿದರೊಳಗೆ ಶ್ರೀರಾಮನೆಂದು । ಪುರವ ನೆರೆ ಕಿತ್ತಿರಿಸುವೆನು ಕಣ್ಣ ಮುಂದು ॥ ೮ ॥ ಹೀಗೆಂದು ಮನದೊಳಗೆ ಹನುಮ ನಿರ್ಧರಿಸಿ । ಆಗ ತ್ರಿಕೂಟಾಚಲಕೆ ಬಾಲ ಬೆಳೆಸಿ ॥ ೯ ॥ ಆ ಸಮಯದಲಿ ಗಗನ ವಾಕ್ಯವನು ಕೇಳ್ದು । ಬೀಸುತಿಹ ಮಾರುತನ ವಾಸನೆಯ ತಾಳ್ದು ॥ ೧೦ ॥ ವನವಿದೊಂದಿದೆಯೆಂದು ಪೇಳಿದಾ ನುಡಿಯ । ಅನುವರಿತು ನೋಡುವೆನೆನುತ್ತಲಾ ಕಡೆಯ ॥ ೧೧ ॥ ಹಾರಿದಬ್ಬರಕೆ ನೆಲ ನಡುಗಿತುರವಣೆಗೆ । ಜಾರಿದವು ಮಣಿ ಖಚಿತ ಕನಕದುಪ್ಪರಿಗೆ ॥ ೧೨ ॥ ಮೆಲ್ಲನುದ್ಯಾನವನಕೆ ಮಗುಳೆ ನಡೆತಂದ । ಫುಲ್ಲನೇತ್ರೆಯಶೋಕವನದೊಳಿರೆ ಕಂಡ ॥ ೧೩ ॥ ಶಿಂಶುಪಾಮರ ನಡಿಯ ಕುಳಿತು ರಾಘವನ । ಚಿಂತಿಸುವ ಜಾನಕಿಯ ಕಂಡನಾ ಹನುಮ ॥ ೧೪ ॥

### ಸಾಂಗತ್ಯ ರಾಗ - ರೂಪಕತಾಳ

ಜಯ ಜಯ ತ್ರೈಲೋಕ್ಯಮಾತೆ ವಿಖ್ಯಾತೆ । ಜಯ ಜಯ ಸೀತೆ ಭೂಜಾತೆ ॥ ಜಯ ಜಯ ಶಕ್ತಿಸ್ವರೂಪೆ ಕೀರ್ತಿಕಲಾಪೆ । ಜಯ ಜಯ ಪುಣ್ಯಶರಣ್ಯೆ ॥ ೧ ॥ ಇವಳೀಗ ರಾಮನ ಕಾಂತೆ ಸದ್ಗುಣವಂತೆ । ಇವಳು ಸಜ್ಜನಪಾಲೆ ಶೀಲೆ ॥ ಇವಳು ಬ್ರಹ್ಮಾದಿ ಸುರೌಘ ವಂದಿತೆ ಮಾತೆ । ಇವಳು ರಾಮನ ಪ್ರೀತೆ ಸೀತೆ ॥ ೨ ॥ ಧರಣಿಜೆಯಲಿ ದೋಷ ಕಲ್ಪಿಸಿದೆನು ನಾ । ದುರುಳ ರಾವಣನ ಕಂಡಲ್ಲಿ ॥ ಕರವೆರಡರಲಿ ಬಾಯ್ ಹೊಯ್ದು ತಪ್ಪಾಯ್ತೆಂದು । ಶಿರವ ತೂಗುತ ರಾಮಾ ಎಂದ ॥ ೩ ॥

### ವಚನ

ಇಂತು ಅಶೋಕಾವನದಲ್ಲಿ ಏಕೋಭಾವದಿಂ ಚಿಂತಿಸುತ್ತಾ ರಾಮ ಧ್ಯಾನದಲ್ಲಿರುವಂಥಾ ಸೀತಾಂಗನೆಯನ್ನು ಕಂಡು ಹನುಮಂತನು ಅನೇಕ ಸ್ತೋತ್ರವನ್ನು ಮಾಡಿ ಆ ವೃಕ್ಷವನ್ನೇರಿ ಸುಮ್ಮನೆ ಕುಳಿತಿರಲು, ಅತ್ತಲಾ ರಾವಣನು ನಿದ್ರೆಯಂ ತಿಳಿದೆದ್ದು ಮಧ್ಯ ರಾತ್ರಿ ವೇಳೆಯಲ್ಲಿ ಕಾಮಾತುರನಾಗಿ ಸರ್ವಾಭರಣ ಭೂಷಿತನಾಗಿ ಬೊಂಬಾಳ ದೀವಿಗೆಯಿಂದ ಆ ವನಾಂತರಕ್ಕೆ ಬಂದು ತನ್ನನುಕೂಲಕ್ಕೆ ತಕ್ಕಂತೆ ವ್ಯವಹರಿಸುವಂಥ ರಾಕ್ಷಸ ಸ್ತ್ರೀಯರು ಕರೆದು ನಾನಾ ಪ್ರಯತ್ನದಿಂದ ಸೀತೆಯನ್ನು ಒಡಂಬಡಿಸಿರೆಂದು ಕಳುಹಲಾಗಿ ಅವರು ಬಂದು ಜಾನಕಿ । ದೇವಿಯೊಡನೆ ಏನೆಂದರು ಎಂದರೆ-

### ತೋಡಿ ರಾಗ - ಏಕತಾಳ

ದಾನವೇಂದ್ರನ ಕೂಡಲಿ । ನ್ನೇನು ಸಂದೇಹ ॥ ಜಾನಕಿ ಸುಮ್ಮನೆ ಅನು । ಮಾನವೇತಕಮ್ಮ ಹೇಳು ॥ ದಾನ ॥ ಪ ॥ ರಾಮನೆಂಬ ಧ್ಯಾನ ಬಿಟ್ಟು । ಹೇಮರತುನಾಭರಣವಿಟ್ಟು । ರಾವಣನೊಳು ಪ್ರೇಮವಿಟ್ಟು । ಈ ಮನುಜನ ಭೇದಬಿಟ್ಟು ॥ ದಾನ ॥ ೧ ॥ ಪಟ್ಟೆಯ ಸೀರೆಯನುಟ್ಟು । ಪಚ್ಚೆಯ ಕುಪ್ಪಸತೊಟ್ಟು । ಕಟ್ಟಿ ತುಂಬಿಗುರುಳ ಮೇ । ಲಿಟ್ಟು ನಾನಾ ಪುಷ್ಪಗಳ ॥ ದಾನ ॥ ೨ ॥ ಕನ್ನಡಿಯನೋಡಿಕೊಳ್ಳೆ । ಕಣ್ಣಿಗೆ ಕಪ್ಪಿಟ್ಟುಕೊಳ್ಳೆ । ಪನ್ನೀರಿಕೊಗಂಧದ ಕ । ಮ್ಮೆಣ್ಣೆಲೇಪನದಿಂದ ॥ ದಾನ ॥ ೩ ॥

ವಚನ

ಈ ರೀತಿಯಿಂದ ಸತಿಯರು ನಾನಾ ಪ್ರಯತ್ನದಿಂದ ಒಡಂಬಡಿಸಲಾಗಿ ಆ ಸೀತಾಂಗನೆಯು ಕಣ್ದೆರೆಯದೆ ಸುಮ್ಮನಿರೆ ಅವರು ನಾಚಿಕೊಂಡು ತಿರುಗಿ ಬಂದು ರಾವಣನಿಗೆ ಈ ವೃತ್ತಾಂತವ ಪೇಳಲು ಆಕೆಯ ಸಮೀಪದಲ್ಲಿ ಕಾದಿರುವಂಥ ಸರಮೆ ತ್ರಿಜಟೆಯರನ್ನು ಕರೆದು ಆಕೆಯ ಅಂತರ್ಭಾವವೇನೆಂದು ಕೇಳಲಾಗಿ ಆಗಲಾ ತ್ರಿಜಟೆಯು ಏನೆಂದಳು ಅಂದರೆ -

ಸೌರಾಷ್ಟ್ರ ರಾಗ - ತ್ರಿವುಡೆತಾಳ

ಧರಣಿಸುತೆಗಾ ರಾಮಚಂದ್ರನ । ಸ್ಮರಣೆಯೇ ಹೊರತಾಗಿ ಮನದಲಿ। ಬರಿದೆ ಮತ್ತೊಂದಿಲ್ಲ ಯೋಚನೆ । ಇರುಳು ಹಗಲು ॥ ೧ ॥ ಪರುವತವ ನೊಣ ನುಂಗಿತಾದರು । ಇರುವೆ ಶರಧಿಯ ಕುಡಿದು ಹೋದರು । ಸರುವಥಾ ಜಾನಕಿಯನೊಲಿಸಲು । ಶಕ್ಯವಲ್ಲ ॥ ೨ ॥ ಚಂದನವು ಅತಿ ಉಷ್ಣವಾದರು । ಚಂದಿರನು ಬಿಸಿಲಾಗಿ ಕಾಯ್ದರು । ಎಂದಿಗಾದರು ಜನಕಸುತೆ ಮನ । ಹೊಂದಳಯ್ಯ ॥ ೩ ॥ ಕಾಗೆಗಳು ಬಿಳುಪಾಗಿ ಹೋದರು । ನಾಗರನ ಹಲ್ಲಮೃತವಾದರು । ಆ ಗರುವೆ ಮಾಯಕದ ನುಡಿಗೊಳ । ಗಾಗಳಯ್ಯ ॥ ೪ ॥ ಕಲ್ಲೊಳಂಬುಜವರಳಿತಾದರು । ಮಲ್ಲಿಗೆಯು ದುರ್ಗಂಧವಾದರು । ಎಳ್ಳನಿತು ಛಲ ಬೇಡ ನಿನಗಹ । ಳಲ್ಲ ಸೀತೆ ॥ ೫ ॥ ಬೆಕ್ಕಿಗಿಳಿಗತಿ ಕೋಡು ಬಂದರು । ಸಕ್ಕರೆಯು ಕಹಿಯಾಗಿ ಪೋದರು । ಮಿಕ್ಕ ಮಾತುಗಳೇಕೆ ಜಾನಕಿ । ಸಿಕ್ಕಳಯ್ಯ ॥ ೬ ॥

ವಚನ

ಇಂತೆಂದು ತ್ರಿಜಟೆಯಾಡಿದ ಮಾತಂ ಕೇಳಿ ತಾನೇ ಆಕೆಯ ಸಮೀಪದಲ್ಲಿ ನಿಂತು ಮಾತನಾಡಿಸಿ ನೋಡುವೆನೆಂಬ ಆಸೆಯಿಂದ ಸರ್ವಾಭರಣಗಳ ಪೆಟ್ಟಿಗೆಯಂ ಮುಂದಿರಿಸಿ ಏನೆಂದನು ಎಂದರೆ-

ಘಂಟಾರವ ರಾಗ - ಆದಿತಾಳ

ಮಾರನಸ್ತ್ರ ತಾಗಿ ಬಿಗು । ವೇರಿತಲ್ಲ ಬಾಲೆ ॥ ನಾರಿ ಎನ್ನ ಮೇಲೆ ದಯ । ತೋರೆ ನೀ ದಮ್ಮಯ್ಯ ॥ ೧ ॥ ಇಪ್ಪತ್ತು ತೋಳಿಂದ ತೆಗೆ । ದಪ್ಪಿಕೊಂಬುದಕ್ಕೆ ॥ ಅಲ್ಪ ಮನಸಲ್ಲ ಕೇಳು । ಕರ್ಪೂರಗಂಧಿನಿ ॥ ೨ ॥ ಚಪ್ಪರ

ಮಂಚದ ಮೇಲೆ । ಚಂದದಿ ಪರ್ಯ್ಯಾರೆ ॥ ದರ್ಪಕನಾಟದಿ ನಿನ್ನ । ದಣಿಸುವೆ ನಾ ಮುನ್ನ ॥ ೩ ॥ ದೇವತೆಗಳು ಗಂಧರ್ವರು । ದೇವಸ್ತ್ರೀಯರೆಲ್ಲ ॥ ದೇವೇಂದ್ರ ಮುಂತಾಗಿ ಎನ್ನ । ಸೇವೆ ಮಾಳ್ಪರಲ್ಲೆ ॥ ೪ ॥ ಸೃಷ್ಟಿಯೊಳೇಳ್ ರೊಳ್ ನಾನು । ಶ್ರೇಷ್ಠ ಕಾಣೆ ಜಾಣೆ ॥ ಪಟ್ಟದ ರಾಣಿತ್ವವನ್ನು । ಕೊಟ್ಟು ಬಾಳ್ವೆನಿನ್ನು ॥ ೫ ॥

### ಸಾವೇರಿ ರಾಗ - ಆದಿತಾಳ

ಮಾತನಾಡಬಾರದೇನೆ । ಸುಜಾಣೆ । ಮಾತನಾಡಬಾರದೇನೆ ॥ ಪ ॥ ಮಾತನಾಡಬಾರದೇನೆ । ಸೀತಾದೇವಿಯೆನ್ನೊಡನೆ ॥ ಪ್ರೀತಿಯಿಂದ ಸೋತು ಬಂದ । ನೀತನೆಂಬ ಕರುಣದಿಂದ ॥ ಮಾತ ॥ ಅ ॥ ಕಾಮಿನಿ ನಿನ್ನನು ಕಂಡು । ಕಾಮನು ದಂಡೆತ್ತಿ ಬಂದು । ಸಾವಧಾನದಿ ಬಿಲ್ಗೊಂಡು । ಪ್ರೇಮದಿ ತೆಬ್ಬು ಸದ್ದು ಮಾಡಿದ ॥ ಎನ್ನೆದೆಗಿಡುವ । ಸಾಮರ್ಥ್ಯದಿ ಗುರಿಯ ನೋಡಿದ । ತೆಬ್ಬ ಝೇಂಕರಿಸಿ । ಆ ಮಹಾ ಪೂಶರವ ಪೂಡಿದ ॥ ಬಿಡಲೆನಗೆ ತಾಗಿ । ನಾ ಮೂರ್ಛಿತನಾಗಿ ಬಿದ್ದೆನಲ್ಲೆ । ವಿರಹ ವೆಗ್ಗಳಿಸಿ । ಕಾಮುಕನಾಗಿ ನಾ ಬಂದೆನಿಲ್ಲೆ । ಇದಕೌಷಧಿಯು । ಕೋಮಲ ಶರೀರೆ ನೀನೆ ಬಲ್ಲೆ ॥ ನಿನ್ನನು ಬಿಡಲೊಲ್ಲೆ । ಭೂಮಿಯೊಳಿಹ ಬೇಕಾಗಿಹ ವಸ್ತುವ । ಪ್ರೇಮದಿ ತರಿಸಿ ಕೊಡಿಸುವೆ । ಹೇಮಾಂಬರವನುಡಿಸುವೆ । ಸೋಮಾಭರಣವ ತೊಡಿಸುವೆ । ಈ ಮನವಿದ್ದಂ । ತಾ ಮನಸಾದರೆ । ಪ್ರೇಮದೊಳನುದಿನ । ಕ್ಷೇಮದೊಳಿರುವೆ ॥ ಮಾತ ॥ ೧ ॥ ಕಣ್ಗೆ ನಿದ್ರೆ ಬಾರದು ಬಾ । ಯ್ಯನ್ನವು ಸೇರದು ಕಾಂತೆ । ನಿನ್ನಯ ಹಂಬಲಿನಿಂದ । ಲೆನ್ನಯ ಜೀವವುಳಿಯದೊಮ್ಮೆಗೆ ॥ ಮಾತನಾಡಿ ಕೊಂಬ । ಕನ್ಯೆ ನೀ ಬೇಗೆದ್ದು ಬಾ ಸುಮ್ಮನೆ । ಸಕಲೈಶ್ವರ್ಯ । ವೆನ್ನಲ್ಲಿ ಕೈಸೇರಿತು ಘಮ್ಮನೆ ॥ ತನಗೆ ಕುಂಭ । ಕರ್ಣನೆಂಬ ಶೌರ್ಯವಂತನನುಜ । ಇಂದ್ರನ ಜಯಿಸಿ । ಬನ್ನ ಬಡಿಸಿ ದಂಭವನೆನ್ನ ತನುಜ । ರಾಮನೆಂಬಾತ । ಗಣ್ಯನಲ್ಲ ನೋಡಲೊಬ್ಬ ಮನುಜ। ಸುರ ನರ ಫಣಿ ದನುಜ ॥ ಕನ್ಯೆಯರೆಲ್ಲರು ಕಾದಿಹರನುದಿನ । ನಿನ್ನಯ ಸೇವೆ ಯೋಳಿರುವರು । ಮನ್ನಿಸಿ ಕರೆದರೆ ಬರುವರು । ಕನ್ನಡಿ ಕಲಶವ ತರುವರು॥ ಹೆಣ್ಣಿಗೆ ಹೊನ್ನಿಗು ಮಣ್ಣಿಗು ಬಯಸುವ । ರೆನ್ನಲ್ಲಿಹ ಸಂ । ಪನ್ನರ

ನೋಡೆ ॥ ಮಾತ ॥ ೨ ॥ ಹಗಲಿರುಳು ಕೈಯೊಳ್ ನಿನ್ನ । ಬಿಗಿಯಪ್ಪಿ ಕೊಂಬೆ ನಾ ಮುನ್ನ । ಬಗೆ ಬಗೆ ಕಾಮನ ಕಲೆಯ । ಸೊಗಸಾಗಿ ತೋರುತ್ತ ಮುದ್ದಾಡುವೆ ॥ ಕರ್ಪೂರವೀಳ್ಯ । ಜಗಿದು ಸವಿತಾಂಬೂಲವ ನೀಡುವೆ । ಪೆಟ್ಟಿನ ಮೋಹದ । ಬಗೆಯಿಂದಲಿ ಮುತ್ತನು ಬೇಡುವೆ ॥ ಕುಚಕೆ ನಾ ಚ । ಳ್ಳಂಗುರನಿಟ್ಟು ಒರೆಸಿ ಲಲ್ಲೆಗರೆವೆ । ಮಲ್ಲಿಗೆಯರ । ಳುಗಳ ತಲೆಗೆ ಮುಡಿಸಿ ಮೋಹವೆರೆವೆ । ಎಂದೇದು ಬಿಡದೆ । ಮಿಗಿಲಾದೈಶ್ವರ್ಯದಿ ನೀ ಸತತ ಮೆರೆವೆ ॥ ಅರಿತವಳಿಂಗೇನೊರೆವೆ । ದುಗುಡದೊಳನುದಿನ ರಾಮನೆಂಬ ಹುಲು । ಹಗುರ ಮನುಜನನು ನೆನೆವುದು ॥ ಅಗಣಿತ ಭಾಗ್ಯವ ತೊರೆದು । ಮಿಗಿಲೇ ಯೋಚಿಸು ನಿನಗಿದು ॥ ನಗೆಮೊಗ ನೆಗಹುತ । ಲೊಗುಮಿಗೆ ಹರುಷದಿ । ನಗರಕೆ ಬಾರೆಲೆ । ಸುಗುಣಾನ್ವಿತೆಯೆ ॥ ಮಾತ ॥ ೩ ॥

### ವಾರ್ಧಿಕ

ಕುಶನೆ ಕೇಳ್ ರಾವಣನ ಮಾತು ಜಾನಕಿಗೆ ಕ । ರ್ಕಶವಾಗಿ ಕಿವಿಗೆ ನಾಟಿದುವು ಕಣ್ಣಲಿ ಕಿಡಿಯ । ಮಸಗಿ ಕೈಯಲಿ ತೃಣವ ಮುರಿದಿಕ್ಕಿ ಬಣಗು ರಕ್ಕಸಗವನಿಸುತ ನುಡಿದಳು ॥ ಪಿಸುಣರೊಳು ಬಣಗು ರಣಹೇಡಿ ಚಂಡಾಲದು । ವ್ಯಸನಿ ದುರಹಂಕಾರಿ ದುರ್ಜನ ದುರಾಚಾರಿ ॥ ಅಸುರರೊಳಗಧಮ ನೀಚ ಗುಲಾಮ ಛೀ ನಾಯಿ ಅತ್ತಿತ್ತ ನಡೆಯೆಂದಳು ॥

### ಸಾವೇರಿ ರಾಗ - ಏಕತಾಳ

ಸರಮೆ ನೀ ಸಾಕ್ಷಿಯಾಗಿರು । ಈ ಮಾತಿಗೆಲ್ಲ । ಸರಮೆ ನೀ ಸಾಕ್ಷಿಯಾಗಿರು ॥ ಪ ॥ ದುರುಳ ತಾನುತ್ತಮನಂತೆ । ಸುರರಿಗೆಲ್ಲ ಶ್ರೇಷ್ಠನಂತೆ । ಧುರೆಯೊಳಧಿಕ ಶೂರನಂತೆ । ನಿರತ ತಾನೈಶ್ವರ್ಯನಂತೆ ॥ ಸರಮೆ ॥ ೧ ॥ ಬಲ್ಲಿದನಾದರೆ ಶಿವನ । ಬಿಲ್ಲನೇಕೆತ್ತದೆ ಪೋದ । ಕಲ್ಲೆದೆಯಾದರೆ ತೊಟ್ಟ । ಲಲ್ಲಿ ಕಟ್ಟಿಸಿಕೊಂಬನೆ ॥ ಸರಮೆ ॥ ೨ ॥ ಅಂದೇ ರಾಮಚಂದ್ರನ ಕಣ್ಣ । ಮುಂದೆ ತಾರದೇತಕೆನ್ನ । ಹಂದೆಯಾತೆ ಕದ್ದುಕೊಂಡು । ಬಂದುದೇತಕಮ್ಮ ಹೇಳು ॥ ಸರಮೆ ॥ ೩ ॥ ಘೋರ ಪಾಪಿ ದೈತ್ಯಪರರ । ನಾರಿಯೊಳೆಂತೆಂದೆ ಮೇಲೆ । ನೂರು ಜನ್ಮದಲ್ಲಿ ನರಕ । ಸೇರದಿರನು ಸುಳ್ಳಲ್ಲಮ್ಮ ॥ ಸರಮೆ ॥ ೪ ॥ ಕಾಣಬಹುದಿನ್ನೀ ಖಳನ । ಗೋಣುಗಳನು ತರಿದು ಯಮನ ।

ತಾಣ ಕಿಟ್ಟು ಮೇಲೆ ಎನ್ನ । ರಾಣಿಯು ಮಾಳ್ಪ ಶ್ರೀರಾಮ ॥ ಸರಮ ॥ ೫ ॥ ಕಿಟ್ಟ ಮೂಳನಿವನ ತಲೆಯ । ಕುಟ್ಟಿ ಕಾಲೊಳೊದ್ದು ಕಡೆಯೊ । ಕಿಟ್ಟ ಮೇಲೆ ಎನ್ನ ರಾಮ । ಪಟ್ಟದ ರಾಣಿಯ ಮಾಳ್ಪ ॥ ಸರಮ ॥ ೬ ॥

ವಾರ್ಧಿಕ

ಕರುಳು ಕತ್ತರಿಸೆ ಸೀತಾವಚನದಸ್ತ್ರದಲಿ । ದುರುಳ ರಾವಣ ಕೋಪದಿಂ ಖಡ್ಗಮಂ ಕೊಂಡು । ತರಳೆಯನು ಕಡಿದು ಬಿಸುಡುವೆನೆಂದು ಬರುತಿರಲು ವರ ಪತಿವ್ರತೆಯಲ್ಲಿಗೆ ॥ ಅರಿತಳಿಂಗಿತವ ಮಂಡೋದರಿಯು ಬಂದವನ । ಕರವಿಡಿದೊಡಂಬಡಿಸಿ ಪತಿಯ ತನ್ನರಮನೆಗೆ । ಕರೆದೊಯ್ಯಲಿತ್ತ ಜಾನಕಿ ಕ್ಲೇಶದಿಂದಳುತ ಸರಮೆಯೊಡನಿಂತೆಂದಳು ॥

ಸಾಂಗತ್ಯ ರಾಗ - ರೂಪಕತಾಳ

ಕಂಡೆಯ ಸರಮ ದಾನವ ಬಂದು ದಿನ ದಿನ । ದಂಡಿಸುತಿರುವಂಥ ಬಗೆಯ ॥ ಭಂಡ ರಕ್ಕಸನುಪಟಳದಿ ಬೇಪುದಕಿಂತ । ಕೆಂಡದಿ ಬೀಳ್ವುದೆ ಲೇಸು ॥ ೧ ॥ ಇಂದು ಬರುವ ನಾಳೆ ಬರುವನು ಶ್ರೀರಾಮ । ನೆಂದಾಸೆ ಮಾಡಿದ್ದೆ ನಾನು ॥ ಇಂದಿಗೆ ದಿನವಿಷ್ಟು ಸಂದರು ರಘುಕುಲ । ಚಂದ್ರನ ದರುಶನವಿಲ್ಲ ॥ ೨ ॥ ಪೂರ್ವ ಜನ್ಮದೊಳೇಸು ಪಾಪ ಮಾಡಿದೆ ನಾನು । ದುರ್ವ್ಯಥೆಯಲಿ ಸಿಕ್ಕಿ ದಣಿದೆ ॥ ಸರ್ವಥಾ ಇನ್ನಾಸೆ ತೀರಿತು ಎನಗೀಗ । ಉರ್ವಿಯೊಳ್ ಬಾಳಿರ್ಪನೆಂತು ॥ ೩ ॥ ಎಲ್ಲಿಯಾ ರಾಮನಿನ್ನೆಲ್ಲಿ ಲಕ್ಷ್ಮಣ ದೇವ । ನೆಲ್ಲಿರ್ಪುದೀಲಂಕಾ ನಗರ ॥ ಇಲ್ಲಿಗೆ ಬಂದೆನ್ನನೊಯ್ವನೆಂಬುದು ಸ್ವಪ್ನ । ದಲ್ಲಿಯು ಬೇಡ ಸಾರಿದನು ॥ ೪ ॥ ಎಂತಿರ್ಪರವರು ಎಂದೆಂಬ ವಾರ್ತೆಗಳನ್ನು । ಕಾಂತೆ ಪೇಳುವರಿಲ್ಲದಾಯ್ತು ॥ ಇಂಥಾ ನಿರ್ಬಂಧ ಯಾತನೆ ಯಾವ ಸತಿಗು ಜ । ನ್ಮಾಂತರಕು ಬೇಡ ಕೇಳಮ್ಮ ॥ ೫ ॥ ನಿನ್ನ ಮಾತಿನ ಮೇಲೆ ನೀರೆ ನಾ ಕಾದಿದ್ದೆ । ನನ್ನವರಡಿಯ ಮೈಸಿರಿಯ ॥ ಅನ್ಯಾಯವಿದು ಮುಂದೆ ಇನ್ನು ಬಾಳಿರುವುದು । ಮನ್ನಿಸಿಕೊಡು ಘೋರ ವಿಷವ ॥ ೬ ॥ ಆರು ತಿಂಗಳು ದಿನದಾರಭ್ಯ ನೀವೆನ್ನ । ಸೇರಿ ದಣಿದಿರೆನಗಾಗಿ ॥ ಯಾರು ಹೇಳಿದರಿಮ್ಮ ಕೇಳೆ ಮಾತುಗಳನ್ನು । ಸೇರಿತು ಮರಣ ಬಂದಡಸಿ ॥ ೭ ॥ ಪ್ರಾಣದಾಸೆಯ ಬಿಟ್ಟೆಕೆಂಬುದನರಿತು ಆ । ಕ್ಷೋಣಿಜೆ ನಂದನೆ ಕಯ್ಯ ಪಿಡಿದು । ಎಣಾಕ್ಷಿ ತ್ರಿಜಟೆ ಪೇಳಿದರಂತ ರಂಗದಿ । ಕಾಣಿಸಿದಂದಿನ ಕನಸ ॥ ೮ ॥

ವರಾಳಿ ರಾಗ - ಅಷ್ಟತಾಳ

ಕಂಡೆ ನೀ ರೀತಿ ನಿದ್ರೆ । ಯೊಳ್ ಕೇಳ್ ಕಮಲಾಕ್ಷಿ ॥ ಕಂಡೆ ॥ ಪ ॥ ಪುಂಡರೀಕನೇತ್ರನು ಮಾ । ರ್ತಾಂಡಜಾತ ಸುಗ್ರೀವನ । ಹಿಂಡು ಕಪಿಗಳ ಕೂಡಿ । ಕೊಂಡು ಬಂದನೆಂಬುದನ್ನು ॥ ಕಂಡೆ ॥ ೧ ॥ ಹತ್ತು ತಲೆಯಾತ ರಕ್ತ । ವಸ್ತ್ರವನುಟ್ಟುಕೊಳುತ್ತ । ಕತ್ತೆಯನೇರಿ ದಕ್ಷಿಣ । ಯಾತ್ರೆಗಾಗಿ ಪೋಪುದನ್ನು ॥ ಕಂಡೆ ॥ ೨ ॥ ಅಂಗನೆ ಮಂಡೋದರಿ ಕ । ರ್ಣಂಗಳೋಲೆ ಮೂಗುತಿಯ । ಮಂಗಳವ ಸೂತ್ರವ ಹರಿದು । ಕಂಗಳೊಳು ನೀರಿಳಿದುದ ॥ ಕಂಡೆ ॥ ೩ ॥ ಅಷ್ಟ ಭಾಗ್ಯವೆಲ್ಲ ಪೋಗಿ । ದುಷ್ಟರು ಸಂಹಾರವಾಗಿ । ನೆಟ್ಟನೇ ವಿಭೀಷಣನು । ಪಟ್ಟವನಾಳುವ ಸ್ವಪ್ನ ॥ ಕಂಡೆ ॥ ೪ ॥ ಪುಂಡರೀಕವದನೆ ನಿಮ್ಮ । ಗಂಡನಾದ ರಾಮಚಂದ್ರ । ಕೊಂಡು ಪೋಗಿ ನಿನ್ನನು ಭೂ । ಮಂಡಲವಾಳುವ ಸ್ವಪ್ನ ॥ ಕಂಡೆ ॥ ೫ ॥

ವಚನ

ಈ ಪ್ರಕಾರದಿಂ ತ್ರಿಜಟೆ ತನ್ನ ಸ್ವಪ್ನ ವೃತ್ತಾಂತಮಂ ಪೇಳಿ ಸಂತ ವಿಟ್ಟು ನಿದ್ರಾಮುದ್ರೇಕ್ಷಣರಾಗಿ ಮೈಮರೆದು ಮಲಗಿರುವ ಸಮಯದೊಳ್-

ವಾರ್ಧಿಕ

ಮನಸಿನಲಿ ಕಡುನೊಂದು ಚಿಂತಿಸುವ ಜಾನಕಿಗೆ । ಕನಸಿನೊಳಿವಂ ಪೇಳ್ದೊಡಂಬಡಿಸೆ ತ್ರಿಜಟೆ ಮರ । ಗೊನೆಯೊಳಣು ರೂಪನಿಂದಿರುತಲದ ನೆಲ್ಲಮಂ ಕಾಣುತಿರ್ದಂ ಹನುಮನು ॥ ಇನಕುಲದ ಸೌಭಾಗ್ಯ ಚಿಂತಾಮಣಿಗೆ ತಕ್ಕ । ವನಿತೆಯಿಹುದೆಂದು ಕೊಂಡಾಡಿ ಜನಕಾತ್ಮಜೆಯ । ಮನದೊಳಗೆ ತಾನೆ ತನ್ನೊಳು ಮಾತನಾಡಿದನು ಜಾನಕಿಯು ಕೇಳುವಂತೆ ॥

ಕೇದಾರಗೌಳ ರಾಗ - ಅಷ್ಟತಾಳ

ನಳಿನಲೋಚನೆ ಕೇಳು ರಾಮಚಂದ್ರನು ಎನ್ನ । ಕಳುಹಲಿಲ್ಲಿಗೆ ಬಂದೆನು ॥ ಗೆಲವಿನಿಂದಿಹ ತಮ್ಮ ಲಕ್ಷ್ಮಣ ಸಹ ನಿಮ್ಮ । ಬಳಿ ಪೋಗಿ ಬಾರೆನುತ ॥ ೧ ॥ ಕುವಲಯಾಂಬಕ ರಾಮ ಸುಗ್ರೀವ ಸಹಿತ ಪ್ರ । ಸ್ರವಣ ಪರ್ವತದೊಳಿಹ ॥ ಎವೆ ಮಾತ್ರದಲಿ ನಿಮ್ಮ ಸ್ಮರಣೆಯಲ್ಲದೆ ಬೇರೆ । ವಿವರ ಕಾಣೆಸದೆನಗೆ ॥ ೨ ॥

ಕಂದ

ಮರಗೊಂಬಿಸೊಳೀತೆಂದಾ । ಸಿರಿ ವಾಕ್ಯವ ಕೇಳ್ದು ಸೀತೆ ಮೊಗ ನೆಗಹುತ್ತುಂ ॥ ದುರುಳರ ಮಾಯಕವೆಂದೆನುತಿರೆ । ಮರವಿಳಿದಾಗ ಹನುಮ ಕೈಮುಗಿದೆಂದಂ ॥

ಸೌರಾಷ್ಟ್ರ ರಾಗ - ಆದಿತಾಳ

ಮಂಗಳ ಮಹಿಮ ರಾಮನ ಪಾದದೆಡೆಯಿಂದ । ಬಂದೆನಮ್ಮ । ಕೋಮ । ಲಾಂಗ ಲಕ್ಷ್ಮಣದೇವ ಕಳುಹಿದ ಬಗೆಯಿಂದ । ಬಂದೆನಮ್ಮ ॥ ೧ ॥ ವಾತ ಸಂಭವ ಎನ್ನ ಮಾತೆಯಂಜನ ದೇವಿ । ಬಂದೆನಮ್ಮ ॥ ಭಾನು । ಜಾತನೆನ್ನೊಡೆಯ ಸಂಪ್ರೀತಿಯಿಂ ಕಳುಹಲು । ಬಂದೆನಮ್ಮ ॥ ೨ ॥ ಬಲು ಬಲು ದೇಶವ ಕಳೆದೆಲ್ಲ ಹುಡುಕುತ್ತ । ಬಂದೆನಮ್ಮ ॥ ಇನ್ನೂ । ಹಲವು ಮಾತೇಕೆ ಸಾಗರವ ಲಂಘಿಸುತ್ತ । ಬಂದೆನಮ್ಮ ॥ ೩ ॥

ಕಂದ

ಎಂದಾ ಹನುಮನ ಮಾತಿಗೆ । ಚಂದ್ರಾನನೆ ಕಪಟವೆಂದು ಸುಮ್ಮನೆ ಇರಲುಂ ॥ ಹಿಂದಾಗಿದ್ದುದನರುಹಿದ । ಡಿಂದರಿವಳೊ ಎಂದು ಬಳಿಕಲವನಿಂತೆಂದಂ ॥

ಶಂಕರಾಭರಣ ರಾಗ - ಏಕತಾಳ

ಚಿತ್ತವಿಸು ದೇವಿ ನಿಮ್ಮ ॥ ವರ್ತಮಾನವೆಲ್ಲ ಪೇಳ್ವೆ । ಸತ್ಯಾ ಸತ್ಯವೆಂಬುದನ್ನು । ನೀವೆ ಬಲ್ಲಿರಿ ॥ ಧಾತ್ರಿಯೊಳಯೋಧ್ಯಾಪುರದಿ । ಪೃಥ್ವಿಪಾಲ ದಶರಥಂಗೆ । ಸುಸ್ತ್ರೀಯರು ಮೂರು ಮಂದಿ । ಪತ್ನಿಯರಂತೆ ॥ ೧ ॥ ಮತ್ತೆ ಕೌಸಲ್ಯೆ ಕೈಕೆ ಸು । ಮಿತ್ರೆಯೆಂಬ ಮೂವರಿಂಗೆ । ಉತ್ತಮರು ನಾಲ್ಕು ಮಂದಿ । ಪುತ್ರರಹುದೆ ॥ ಸ್ವಸ್ಥದಿಂದ ನಿಮ್ಮನು ಬಿ । ಲ್ಲೆತ್ತಿ ಜ್ಯೇಷ್ಠನಾದ ರಾಮ । ನರ್ತಿಯೊಳಗೆ ಮಿಥಿಲೆಯಿಂದ ತಂದುದಹುದೆ ॥ ೨ ॥ ಜನಕನ ಮಾತಿಗೋಸ್ಕರ । ದಿನಕರ ವಂಶಾಬ್ಧಿ ಚಂದ್ರ । ಘನತರವಾಗಿಪ್ಪ ಘೋರ । ವನಕೆ ಬರುವಾಗ ॥ ಮನಕರಗಿ ನೀವು ಲಕ್ಷ್ಮ । ಣ ಸಹಿತ ಮೂವರು । ನೆನೆಸದಂತಾ ಪಂಚವಟಿ । ವನ ಸಮೀಪದಿ ॥ ೩ ॥ ತರಿದು ಮೂಗು ರಕ್ಕಸಿಯ । ಖರದೂಷಣಾದಿಗಳ ತಲೆಯ । ತರಿಯೆ ಪೊಮ್ಮಿಗವ

ಕಂಡು । ಆಶ್ಚರ್ಯದಿಂದ ॥ ತರಬೇಕೆಂದು ನೀವು ಬೇಡೆ । ತೆರಳೆ ರಾಮ ದಶಗಳಾಖ್ಯ । ಭರದಿ ನಿಮ್ಮನೆತ್ತಿಕೊಂಡು । ಬರುವ ಮಾರ್ಗದಿ ॥ ೪ ॥ ಕರಗಿ ಸೊರಗಿ ಭಯದಿ ನೀವು । ಮರುಗುವಂಥ ಧ್ವನಿಯ ಕೇಳಿ । ತ್ವರಿತದಿಂ ಬಂದಾ ಜಟಾಯು । ಭರಿತ ಶೌರ್ಯದಿ ॥ ದುರುಳಗಡ್ಡ ಕಟ್ಟಲಾಯು । ಸ್ಥಿರವನಿತ್ತ ಮೇಲಾಗಿಹ । ಪರಿಯನೊರೆವೆ ಲಾಲಿಸಮ್ಮ । ಕರುಣವ ನಿಟ್ಟು ॥ ೫ ॥

### ಕೇದಾರಗೌಳ ರಾಗ - ಅಷ್ಟತಾಳ

ಕುಂಜರಗಮನೆ ಕೇಳಾ ಮೇಲೆ ಶ್ರೀರಾಮ । ಕಂಜದಳಾಯತಾಕ್ಷ ॥ ಮಂಜುಳಕಾಯ ಲಕ್ಷ್ಮಣ ಸಹ ಖಗಕುಲ । ಸಂಜೀವನನು ಕಂಡರು ॥ ೧ ॥ ಅಂಜದೆ ನಿಮ್ಮ ರಾವಣ ಕೊಂಡು ಬಂದುದ । ರಂಜಿತದಿಂದ ಕೇಳಿ ॥ ನಂಜಾಯಿತಮೃತವೆಂದೆನುತಲಾ ಮರುದಿನ ಮುಂಜಾನೆ ನಡೆತಂದರು ॥ ೨ ॥ ಚಂದ್ರಗೆ ರಾಹು ಸೋಕಿದ ಹಾಗೆ ಶ್ರೀರಾಮ । ಚಂದ್ರಲಕ್ಷ್ಮಣರೀರ್ವರು ॥ ಒಂದೊಂದು ಕಡೆಯ ನಿಮ್ಮರಸುತ್ತ ಭರದಿ ಕ । ಬಂಧನ ಕಂಡು ಮತ್ತೆ ॥ ೩ ॥ ಬಂದಾಗ ಶಬರಿಗೆ ವರವಿತ್ತು ಬಹುಮುನಿ । ವೃಂದವ ಸಂತಯಿಸುತ॥ ಇಂದ್ರನ ಮಗನಾದ ವಾಲಿಯ ಭಯದಿಂದ । ನೊಂದಿರೆ ಸುಗ್ರೀವನು ॥ ೪ ॥ ಶರವೇದ ಮೂರ್ತಿಗಳೀರ್ವರು ವರ ಪಂಪಾ । ಸರಸಿಯ ತಡಿಯೊಳಿರೆ ॥ ತರಣಿ ನಂದನ ಕಂಡು ಕರೆಸಲವರು ಋಷ್ಯ । ಗಿರಿಯ ಮೇಲಕೆ ಬಂದರು ॥ ೫ ॥ ತಾಳೆಯ ಮರವೇಳ ಮುರಿದು ದುಂದುಭಿಯಟ್ಟೆ । ಕಾಲಿನಿಂದೊದ್ದ ಮೇಲೆ ॥ ವಾಲಿಯ ಕೊಂದು ಸುಗ್ರೀವಂಗೆ ಪಟ್ಟವ । ಪಾಲಿಸಿ ತವೊಳಗೆ ॥ ೬ ॥ ಕಾಲವೇಳೆಯುಲಿ ನಿಮ್ಮರಸಬೇಕೆನುತ ಭೂ । ಪಾಲನಪ್ಪಣೆಯ ಕೊಟ್ಟ ॥ ಏಳು ಮತ್ತೆಪ್ಪತ್ತು ಕೋಟಿ ನಾಯಕರು ಈ । ರೇಳು ಲೋಕವ ತೊಳಲಿ ॥ ೭ ॥ ಲೋಲಲೋಚನೆ ಸ್ವಯಂಪ್ರಭೆಯ ಪಟ್ಟಣದಿಂದ । ಮೇಲೆ ಬಂದಲ್ಲಿ ಮತ್ತೆ ॥ ಪೇಳೆ ಸಂಪಾತಿ ತೋರಿಸಿದ ಕಾರಣದಿಂದ । ಬಾಲೆ ಇಲ್ಲಿಗೆ ಬಂದೆನು ॥ ೮ ॥ ಮೇಲಾದ ಕಪಿಗಳು ಶರಧಿಯ ತಡಿಯಲ್ಲಿ । ಬಾಳ ಚಿಂತಿಸುತಿಪ್ಪರು ॥ ಜಾಲ ಮಾತಲ್ಲ ಜಾನಕಿ ಕೇಳು- ಎನುತಲೆ । ಕಾಲಡಿಯಲಿ ಬಿದ್ದನು ॥ ೯ ॥

### ವಾರ್ಧಿಕ

ಕೇಳುತಾಕ್ಷಣ ಕಣ್ಣೊಳಶ್ರುಗಳು ಜಾರಿದುವು । ಪೋಳವಂತಸ್ತಾಪ ಶೋಕ ಜಲಮಯ ಶರಧಿ । ಗಾಳಿಗೊಡ್ಡಿದ ದೀಪದಂತೆ ತಲ್ಲಣಿಸಿ ರೋಮಾಳಿ ನೆಟ್ಟಗೆ ನಿಗುರಿತು ॥ ಬೀಳುಗೊಂಡುದು ಮನದ ಸಂಶಯಮೊಳರ್ಧ ಜಲ । ಗಾಲ ತೊಡೆಯಲಿ ಮತ್ಸ್ಯವುಂಟಾತೆಯೆನೆ ನಾಲ್ಕು । ಪಾಲೊಳೊಂದಾಳಿಯ ಚುಚಿಲು ಬಳಿಕ ಕುರುಹುಗಳ ನೀಲ ಕುಂತಳೆಗೆಂದನು ॥

### ಘೂರ್ಜರ ರಾಗ - ಅಷ್ಟತಾಳ

ಚಿತ್ರಕೂಟದಲ್ಲಿ ನೀವು ಜಲಕ್ರೀಡೆಯಾಡುವಾಗ । ಲೆತ್ತಿ ಮುಂಗೈಯಲಿ ನಿಮ್ಮ ಬಿಸಾಡಲು । ಅತ್ತದ್ದು ಸರಿಯೇನಮ್ಮ ॥ ೧ ॥ ಮತ್ತೊಂದು ಗುರುತು ಕೇಳತ್ರಿಮುನಿವರ್ಯನಾ । ಪತ್ನಿಯಾದನಸೂಯಾದೇವಿ ಭೂಷಣವ ತಂ । ದಿತ್ತದ್ದು ಸರಿಯೆ ಹಿಂದೆ ॥ ೨ ॥ ಇನ್ನೊಂದು ಕುರುಹ ಕೇಳು ದಂಡಕ ವನಸುವಾ । ರಣ್ಯದೊಳಗಸ್ತ್ಯಮುನಿ ಚಾಪವ ಕೊಟ್ಟು । ಮನ್ನಿಸಿದುದು ಸರಿಯೆ ॥ ೩ ॥ ಅಂಗನೆ ಕೇಳೀ ಮಾತಲ್ಲ ಸುಳ್ಳಾದರೆ । ಮಂಗಳಮಹಿಮ ರಾಮರ ಕಿರಿ ಬೆರಳಿಗೆ । ಟ್ಟುಂಗುರವಹುದೆ ನೋಡು ॥ ೪ ॥

### ಶಾರ್ದೂಲ ವಿಕ್ರೀಡಿತಂ

ಶ್ರೀ ರಾಮಾಕರಕಂಜದಂಗುಲಿಯೊಳಿಟ್ಟಾ ಮುದ್ರೆಯಂ ನೋಡುತಂ । ನಾರೀ ಜಾನಕಿತೋಷಿಸುತ್ತಲದನುಂ ಕಂಗಳ್ಗೆ ತಾನೊತ್ತುತಂ ॥ ಪೇರಳಾಕೃತಿ ಶೋಕ ಬಿಂದು ಜಲಗಳ್ ಸರ್ವಾಂಗಮಂ ಲೇಪಿಸಲ್ । ಕಾರುಣ್ಯಾಂಬುಧಿ ರಾಮ ರಾಮಯೆನುತಾಶಾಭಾವದಿಂ ಕಂಡಳುಂ ॥

### ಸೌರಾಷ್ಟ್ರ ರಾಗ - ಆದಿತಾಳ

ಹರಿಣಾಂಕನಿಭಾನನ ಪೂರ್ಣ । ಪರಿಶೋಭಿತ ಹರಿರಿಪುಗಮನ ॥ ಹರಿ ವಂಶ ಜಾತ ವಿಖ್ಯಾತ । ಹರಿ ಮಂಜುಳಕಾಯ ಮಮಪ್ರಿಯ ॥ ೧ ॥ ಪರಮೇಶ್ವರ ಪಂಕಜಲೋಚನ । ಪರಮಪಾವನ ಪರಮಾನಂದ ॥ ಸುರ ಸೇವ್ಯ ಭೂಸುರ ಜನಪಾಲ ಬಾ । ಸುರಶೋಭ ದನುಜ ಕುಲಹರಣ ॥ ೨ ॥

ರಘುಪುಂಗವ ರಾಜರಾಜೇಶ್ವರ । ಜಗದಾತ್ಮಕ ಜಗದಭಿರಾಮ ॥ ಸುಗುಣಾನ್ವಿತ ಸುರ ಮುನಿ ಸೇವಿತ । ಅಗಜಾಪತಿ ಪ್ರಿಯ ಸೌಂದರ್ಯ ॥ ೩ ॥

### ಶಾರ್ದೂಲವಿಕ್ರೀಡಿತಂ

ಎಂದಾ ರಾಮನ ಮುದ್ರೆಯುಂಗುರವ ತನ್ನಂಗಯ್ಯೊಳಿಟ್ಟರ್ಚಿಸಿ । ಸೌಂದರ್ಯಾತ್ಮನ ದಿವ್ಯಮೂರ್ತಿಯಿದರೊಳ್ ಕಂಡಂತೆ ಕೊಂಡಾಡುತಂ ॥ ಕಂದರ್ಪಾನನ ಪಂಕಜಕ್ಕೆ ರವಿ ತಾ ಬಂದಂತೆ ಸಂತೋಷದಿಂ । ಮುಂದಾ ರಾಮನ ಕ್ಷೇಮವಾರ್ತೆಗಳನುಂ ಕೇಳುತ್ತ ನಿಂತಿರ್ದಳುಂ ॥

### ಮಧ್ಯಮಾವತಿ ರಾಗ - ಅಷ್ಟತಾಳ

ಕ್ಷೇಮವೇನೈ ಹನುಮ । ನಮ್ಮವರಿಗೆ । ಕ್ಷೇಮವೇನೈ ಹನುಮ ॥ಪ॥ ರಾಮಲಕ್ಷ್ಮಣರು ರಾಜ್ಯದಲಿ ಸುಸ್ಥಿರವಾಗಿ ॥ ಕ್ಷೇಮವೇನೈ ॥ ಅ ॥ ಮದನನಂಗವ ಪೋಲ್ವ ರಾಮ । ಬಲು । ಚದುರ ಲಕ್ಷ್ಮಣನು ನಿಸ್ಸೀಮ ॥ ಮೊದಲಿಸಂಗದ ಕಾಂತಿ ಕಳವಳಿಸದೆ ಮತ್ತೆ । ಎದೆಗುಂದಲಿಲ್ಲವಲ್ಲ । ತಪ್ಪೊಳು ಮೋಹ । ವದು ಕುಂದಲಿಲ್ಲವಲ್ಲ । ನೀ ಬರುವ ದಿ । ನದೊಳಗೆಂತಿದ್ದರೆಲ್ಲ ॥ ಕ್ಷೇಮವೇನೈ ॥ ೧ ॥ ದಶಕಂಠ ಕಳವಿನೊಳ್ ತಂದ । ಇ । ನ್ನು ಸಿರಲೇನಧಿಕ ನಿರ್ಬಂಧ ॥ ಪಶುಪತಿಯೊಬ್ಬನೆ ಬಲ್ಲನಲ್ಲದೆ ಬೇರಿ । ನ್ನು ಸಿರುವೆನಾರ್ಗೆ ನಾನು । ಇನ್ನೊಮ್ಮೆ ಜೀ । ವಿಸುವಂದ ಪೇಳು ನೀನು । ನೋಡಿದೆಯಾ ರಾ। ಕ್ಷಸ ಮಾಳ್ಪ ಬಗೆಗಳನು ॥ ಕ್ಷೇಮವೇನೈ ॥ ೨ ॥ ಭೂತಳದೊಳಗೆ ಎನ್ನಂಥ । ಕಡು । ಪಾತಕರುಂಟೆ ಹನುಮಂತ ॥ ಮಾತಾಪಿತರು ಬಂಧು ಬಳಗವೆಲ್ಲವ ಬಿಟ್ಟು । ಈಶರನಾದೆನಲ್ಲಾ । ರಾಕ್ಷಸರ ವಿ । ಘಾತವ ಕಂಡೆಯಲ್ಲ। ಎನ್ನಯ ಪ್ರಾಣ । ನಾಥನನಗಲ್ದೆನಲ್ಲ ॥ ಕ್ಷೇಮವೇನೈ ॥ ೩ ॥ ಇನ್ನು ಜೀವಿಸಲಾರೆ ನಾನು । ಇದ । ನೆನ್ನ ಕಾಂತಗೆ ಪೇಳು ನೀನು ॥ ನಿನ್ನಾಣೆ ನಿಮಿಷ ಬಿಟ್ಟಿರಲಾರದಂತವ । ನೆನ್ನ ಹಂಬಲ ತೊರೆದ । ಸ್ನೇಹದಿ ನಾವು । ಮನ್ನಿಸಿದ್ದುದ ಮರೆದ । ಈ ಪಾತಿಗೆ । ನಿನ್ನೊಳೇನೆಂದೊರೆದ ॥ ಕ್ಷೇಮವೇನೈ ॥ ೪ ॥

### ವಚನ

ಇಂತೆಂದು ಜಾನಕಿಯು ನುಡಿಯಲಾಗಿ ಹನುಮಂತನು ಏನೆಂದನು ಎಂದರೆ-

### ಸಾರಂಗ ರಾಗ - ಅಷ್ಟ ತಾಳ

ಮನಸನೇನೆಂಬೆನಮ್ಮಾ । ಯಾವಾಗಲು । ನೆನಸುವ ಗುಣದಿ ನಿಮ್ಮ ॥ ಕನಸು ಮನಸಿನಲ್ಲಿ ಹಗಲಿರುಳೆನ್ನದೆ । ಮನಕ್ಲೇಶದಲಿ ರಾಮ ಕನಲೀರ್ಪ ದಲ್ಲದೆ ॥ ೧ ॥ ಹಣ್ಣು ಫಲಪನೊಲ್ಲನು । ಆರೊಡನೆಯು । ಚೆನ್ನಾಗಿ ಮಾತಾಡನು ॥ ಕಣ್ಣಿಗೆ ನಿದ್ರೆ ಬಾರದೆ ಕಂಡಕಡೆಯಲ್ಲಿ । ಬಣ್ಣ ಗೆಟ್ಟಿಡವಿ ಯೊಳ್ ಬಳಲಿರ್ಪುದಲ್ಲದೆ ॥ ೨ ॥ ಅನುಜ ಲಕ್ಷ್ಮಣನು ತಾನು । ಅಂತ ರಂಗದಿ । ಕನಲಿ ಕಂಗೆಡುವುದನು ॥ ಮನಕೆ ಮನವೆ ಸಾಕ್ಷಿಯಲ್ಲದೆ ಬೇರೇನು। ವನಿತೆ ನಾ ಪೇಳಲೇನುಂಟು ಕಾರ್ಯಗಳನು ॥ ೩ ॥ ತರಣಿ ನಂದನನು ತಾನು । ಏಕಾಂತದಿ । ಕರದು ಈ ಗುರುತವನು ॥ ಒಲಿದು ರಾಘವ ಕೈಯೊಳಿಟ್ಟ ಮುದ್ರಿಕೆಯನು । ಬರುವ ದಿನದ ಸುದ್ದಿಯಿದುಪೆ ಮತ್ತೇನಿಲ್ಲ ॥ ೪ ॥ ತಿಂಗಳ ದಿವಸದಲಿ । ಸುದ್ದಿಯ ತಹು । ದೆಂಬ ತಹಂಗಳಲಿ ॥ ಉಂಗುರ ವಿತ್ತೇನ್ನ ಕಳುಹಿದ ಮೇಲೆ ಕೇ । ಳಂಗನೆ ನಾವಿತ್ತ ಬಂದ ಪರಿಗಳನು ॥ ೫ ॥

### ಭೈರವಿ ರಾಗ - ಝಂಪೆತಾಳ

ನಾಳೆ ಸಂಜೆಗೆ ಹೋಗಿ । ಹೇಳದಿದ್ದರೆ ಕಡೆಗೆ । ನಾಲಿಗೆಯ ಕೊಯ್ಯು ವದೆ । ನಮ್ಮೊಡೆಯನಾಜ್ಞೆ ॥ ೧ ॥ ಗುರುತವನು ಕೇಳಿದರೆ । ಏನೆಂಬ ರಾಘವನಿ । ಗರಿತುಯೆನ್ನೊಳು ಪೇಳಿ । ರಂತರಂಗವನು ॥ ೨ ॥

### ಆನಂದಭೈರವಿ ರಾಗ - ಏಕತಾಳ

ಏಸು ದಿನ ಬೇಕೆನ್ನ ಪ್ರಾ । ಣೇಶನನ್ನು ಕಾಂಬುದಕ್ಕೆ । ಬೇಸರಿಕೆ ಯೆಂಬುದೇನ । ಹೇಳಲಿ । ಹೇಗೆ । ತಾಳಲಿ ॥ ೧ ॥ ಬೇಟೆಗಾರನಿಟ್ಟ ಬಲೆಯ । ಕೋಟಲೆಗೆ ಸಿಕ್ಕಿದ ಹುಲ್ಲೆ । ಯಾಟದಂತೆ ಕಣ್ಣ ಕಣ್ಣ । ಬಿಡು ವೆನು । ಏನ । ನುಡಿವೆನು ॥ ೨ ॥ ಕಾಗೆ ಹಿಂಡಿನಲ್ಲಿ ಸಿಕ್ಕಿ । ಕೋಗಿಲೆ ಬಾಯಿ ಬಿಟ್ಟಂತೆ । ಈಗ ಪಾಪಿ ಬಾಧೆಯಿಂದ । ನಿಲ್ಲೆನು । ತನುವ । ನೊಲ್ಲೆನು ॥ ೩ ॥ ಬೆಕ್ಕಿಗಂಜಿ ಪಂಜರದೊಳು । ಸಿಕ್ಕಿದರಗಿಣಿಯಂತೆ ॥ ರಕ್ಕಸನಟ್ಟುಳಿಗಾಗಿ । ಬೆಂದೆನೂ । ಕಡು । ನೊಂದೆನೂ ॥ ೪ ॥ ಗರುಡನ ಬಾಯೊಳು ಸಿಕ್ಕಿ । ದುರಗನು ಸಂತಾಪವುಕ್ಕಿ । ಮೆರೆಯುವ ಹಾಗಾಯಿ ತೆನ್ನ । ಬಾಳುವೆ । ಯೇನ । ಹೇಳುವೆ ॥ ೫ ॥

### ಕಂದ ಪದ್ಯ

ಹನುಮನ ಕೈಯೊಳು ಚೂಡಾ । ಮಣಿಯನು ತಾನೀವುತ್ತತಿ ಭರ ವಸದಿಂದಂ ॥ ಮನಸಿನೊಳಿದ್ದುದನೆಲ್ಲವ । ನೆನಸುತ ಪೇಳಲು ಸೀತೆಗೆ ಮಾರುತಿ ನುಡಿದಂ ॥

### ಸೌರಾಷ್ಟ್ರ ರಾಗ - ತ್ರಿವುಡೆ ತಾಳ

ದೇವಿ ಚಿಂತಿಸಬೇಡ ರಾಘವ । ದೇವನನು ಕರಕೊಂಡು ಬಂದೀ । ರಾವಣನ ಸಂಹರಿಸದಿರೆ ತವ । ಸೇವಿಯಲ್ಲ ॥ ೧ ॥ ಎಂಟು ದಿವಸದಿ ನೋಡಿರೀ ದಶ । ಕಂಠನಿಗೆ ಮದ್ದರೆಯದಿರೆ ವೈ । ಕುಂಠವಲ್ಲಭ ರಾಮ ಚಂದ್ರನ । ಬಂಟನಲ್ಲ ॥ ೨ ॥ ಚಿಂತೆಯಾತಕೆ ನಿಮಗು ರಾಮಗು । ಅಂತ ರಂಗೊಂದೆನಿಸದಿದ್ದರೆ । ಪಂಥವೇನಿದು ಮುಂದೆ ನಾ ಹನು । ಮಂತನಲ್ಲ ॥ ೩ ॥

### ಕಂದ

ಪಂಥದಿ ಬಹು ಧೈರ್ಯಂಗಳ । ನಂತರಿಸದೆ ಪೇಳಿ ದೇವಿಯಪ್ಪಣೆ ಕೇಳ್ದಂ ॥ ಚಿಂತೆಯ ತಾಳುತ್ತತಿ ಹನು । ಮಂತನ ಬಿಡಲಾರದೊರದ ಳಂಬುಜನಯನೆ ॥

### ಎರಕಲಕಾಂಬೋಧಿ ರಾಗ - ಅಷ್ಟತಾಳ

ದಿಟವೇನೊ ಹನುಮ ನೀ ಕಡೆಗೆಂದ ಮಾತು । ಸಟೆಯುಲ್ಲವಲ್ಲ ರಾಘವನಿಲ್ಲಿ ಬರುವುದು ॥ ದಿಟವೇನೊ ॥ ಪಲ್ಲ ॥ ಹಂಬಲಿಸುತ ಹಗ ಲಿರುಳು ನಾ ಬಲು ಚಿಂತೆ । ಯೆಂಬ ಕತ್ತಲೆಯೊಳಗಿರೆ ನಿನ್ನ ನುಡಿ ರವಿ । ಬಿಂಬ ಕಂಡಂತಾಯಿತು ॥ ದುಃಖಗಳ ಕ । ದಂಬವೆಲ್ಲವು ಹೋಯಿತು । ಸಾವಿರವೆಂದು । ನಂಬಿಕೊಂಡಿರುವೆ ಹೀಗೆಂದು ಲೇಸಾಯಿತು ॥ ದಿಟವೇನೊ ॥ ೧ ॥ ನೆರೆ ಬೆಳಗಾದರೆ ಮಲಗಿರ್ದ ಖಳರು ನಿ । ನ್ನರಿತು ಕೊಂಡೊಯ್ದು ಸಾವಿರ ನಿರ್ಬಂಧವ ಮಾಡಿ । ಸೆರೆ ಮನೆಯೊಳಗಿಟ್ಟಾರು ॥ ಅಲ್ಲದಡೆ ನಿ । ಷ್ಠುರದಿ ನಿಗಳವಿಕ್ಕಾರು । ಮತ್ತೆನ್ನನೀ । ಸರಮೆ ತ್ರಿಜಟೆಯು ಧಿಕ್ಕರಿಸುತಲಟ್ಟ್ಯಾರು ॥ ದಿಟವೇನೊ ॥ ೨ ॥

### ಕಂದ

ತಪ್ಪದೆ ಬಹು ಧೈರ್ಯರ್ಗಳ । ನೊಪ್ಪದಿ ಪೇಳುತಿರೆ ದೇವಿಯುಪ್ಪಣೆ ಕೊಡಲುಂ ॥ ಧೊಪ್ಪನೆ ಪೊರಡುತ ರಾವಣ । ಗಿಪ್ಪ ಮಹೋದ್ಯಾನವನವ ಕಂಡನು ಹನುಮಂ ॥

### ದ್ವಿಪದಿ

ಅಹಹ ಈ ವನ ನೋಡದವ ಮನುಜನಲ್ಲ । ಬಹು ರಮ್ಯತರವಾದ ವನದ ಸಿರಿಯೆಲ್ಲ ॥ ೧ ॥ ತೋಟ ವನ ಕೆರೆ ಬಾವಿ ತೆಂಗು ದಾಳಿಂಬ । ಮೀಟೆನಿಪ ಮಾವು ಪನಸಗಳ ಸೌರಂಭ ॥ ೨ ॥ ಜಂಬು ನೇರಳೆ ಕದಳಿ ಕದಲಿ ದ್ರಾಕ್ಷಿಗಳ । ನಿಂಬೆ ಖರ್ಜೂರ ಕಿತ್ತಲೆ ಫಲಾದಿಗಳ ॥ ೩ ॥ ಜಾಜಿ ಮಲ್ಲಿಗೆ ಚಂಪಕಾದಿ ಪುಷ್ಪಗಳ । ರಾಜಿಸುವ ಪೂಗ ಪುನ್ನಾಗ ವೀಧಿಗಳ ॥ ೪ ॥ ಪಾರಿಜಾತಾಂಭೋಜ ಪೊಸತು ನೈದಿಲೆಯು । ಭೂರಿ ಸೌರಮ್ಯ ಗಿಣಿ ಹಂಸ ಕೋಗಿಲೆಯು ॥ ೫ ॥ ಇಂದ್ರ ಪಟ್ಟಣದೊಳೆಸೆದಿರುವ ನಂದನವ । ಇಂದಿಗಿದು ಸಿರಿಮಿಗಿಲು ಮೋಹಿಸಿತು ಮನವ ॥ ೬ ॥

### ಕಾಂಬೋಧಿ ರಾಗ - ಅಷ್ಟತಾಳ

ಸಿಕ್ಕಿದುದೆನಗೊಂದು ತೋಟ ಕಳ್ಳ । ರಕ್ಕಸರಿಹುದೊಂದು ಕಾಟ॥ ಮುಕ್ಕುವೆನಿದರೊಳಗಿದ್ದ ಪಣ್ಗಳನೆಂದು। ಮಿಕ್ಕುವಿಾರುತ ಭೋರಿಡುವ ಕಿರಿ। ಕಿಕ್ಕಿರೀಕಿರಿಗುಟ್ಟುತ ॥ ೧ ॥ ಮರದಿಂದ ಮರಕೆ ಲಂಘಿಸಿದ । ಮಾಲ । ಗಿರುವ। ರಕ್ಕಸರ ಭಂಗಿಸಿದ ॥ ಪರಿಪರಿ ವಿಧದ ಪಣ್ಗಳ್ಗ ಕೊಯ್ದು ತಿಂದು ಆ । ಬರಿಯು ಗೊಂಚಲ ಮರದ ಕೊಂಬೆಯು । ಮುರಿಮುರಿದು ಬೀಸಾಡಿದ ॥ ೨ ॥ ಬಾಳೆಯು ಗಿಡವೆಲ್ಲ ಹರಿದ । ರಸ । ದಾಳಿ ಕಬ್ಬುಗಳ ಚಪ್ಪರಿದ ॥ ಹೇಳಿ ನಿಮ್ಮಪ್ಪ ರಾವಣನ ಕೂಡೆನುತಲಿ । ಧೂಳಿಪಟವನು ಗೈದು ನಿಮಿಷದಿ । ಹಾಳುಮಾಡಿದ ವನವನು ॥ ೩ ॥ ಹೂವಿನ ಸಸಿಯೆಲ್ಲ ಕಿತ್ತ । ಕೊಳನ । ತಾವರೆಗಳ ಕಲಕುತ್ತ ॥ ಕಾವಲು ಮಲಗಿದ ಜಂಬುಮಾಲಿಯ ಕೊಂದು । ಜೀವಮಾತ್ರದಿ ಕೆಲರ ಕಳುಹಿದ । ರಾವಣೇಶ್ವರನಲ್ಲಿಗೆ ॥ ೪ ॥ ಅಕ್ಷ ಕುಮಾರನ ಬಡಿದ । ಕಳ್ಳ । ರಾಕ್ಷಸರ್ಗಳ ಮಂಡೆಯೊಡೆದ ॥ ಆ ಕ್ಷಣದೊಳಗಿಂದ್ರಜಿತು ಬಹು ಬೆಳಕಿಂದ । ಲಕ್ಷ ಗಜತುರಗಗಳ ಸಹ ಬಂ । ದೀಕ್ಷಿಸಿದ ಹನುಮಂತನ ॥ ೫ ॥

### ವಾರ್ಧಿಕ

ಕೊಲ್ಲು ಕಡಿ ತಿವಿ ಕಟ್ಟು ಇರಿ ಬಾಣ ಬಿಡು ಕಟಿಂಸು । ಹಲ್ಲು ಮುರಿ ಹಾಕು ಹೊಯ್ ಹೊಯ್ ಕರುಳಸುಗಿ ಸೆಳೆದು । ಬಿಲ್ಲಿನಲಿ ಸೆಳೆ ಖಡ್ಗ ಕುಂತ ತೋಮರ ಪರಶು ಗದೆ ಕಣೆಯು ಕಂಪನಗಳು ॥ ಚಲ್ಲ ಬಡಿ ಕೆಡಹು ನೂಕೆನುತಲಾರ್ಭಟಿಸುತ್ತ । ಲಲ್ಲಿ ಬಿಟ್ಟಸ್ತ್ರಗಳು ಮುರಿದುದಲ್ಲದೆ ಹನುಮ । ಹುಲ್ಲುಕಡ್ಡಿಗೆ ಬಗೆಯದಿರಲಿಂದ್ರಜಿತು ಬಳಿಕ ಎಲ್ಲರೊಡನಿಂತೆಂದನು ॥

### ಆಹೇರಿ ರಾಗ - ಅಷ್ಟತಾಳ

ಸಾಕು ಬಿಡಿ ಬಿಡಿ ಸಾಯದೀ ಕಪಿ ಸುಮ್ಮ । ನೇಕೆ ದಣಿದುಕೊಂಬಿರಿ ॥ ಪಲ್ಲ ॥ ಅಂಬುಕೊಳ್ಳದು ಬಾಣ ತಾಗದು ಬರಿಬಾಯ । ಡಂಬಕಕಿದು ಬೆದರದು ಕಾಣಿರೊ ॥ ಕುಂಭಕರ್ಣನ ವಜ್ರರಥದ ಮೇಲದನಿಟ್ಟು । ಕುಂಭಿನೀ ಪತಿಯಲ್ಲಿಗೊಯ್ಯಿರೆಂದನು ॥ ೧ ॥ ಅತ್ತಲು ಕಪಿ ಮೈಯಸೊಲೆದ ಕಾರಣ ದಿಂದ । ಹತ್ತು ಸಾವಿರ ರಾಕ್ಷಸರು ಸತ್ತರು ॥ ಒತ್ತಿ ಕುಂಭಸ್ಥಳ ಮುರಿದಾನೆ ಮಡಿದಂತೆ । ವಿಸ್ತಾರಗಳನಿಂದ್ರಜಿತು ನೋಡುತ ॥ ೨ ॥ ಪೆಟ್ಟಿಗಂಜುವುದಲ್ಲ ಸಾಧ್ಯವೆತ್ತುವುದಕ್ಕೆ । ಬೆಟ್ಟದ ಹಾಗೆ ಬೆಳೆದುಕೊಂಡಿದೆ ॥ ಕಟ್ಟಿಗೆಗಳನು ತಂದೊಡ್ಡಿ ಬೆಂಕಿಯನಿಟ್ಟು । ಸುಟ್ಟು ಬೂದಿಯ ಮಾಡಿರೀಗೆಂದನು ॥ ೩ ॥ ನಗರವ ದಹಿಸುವಡಿದುವೆ ಮದ್ದೆಂದು ನಾ । ಲಿಗೆ ಬೆಟ್ಟಬೆದರುವಂದದಿ ಕಾಣಿಸಿ । ಅಗಣಿತ ರಾಕ್ಷಸರುಗಳೆಲ್ಲ ಖೋ ಯೆಂದು । ನಗುವಂತೆ ರಥದ ಮಧ್ಯದಿ ಬಿದ್ದನು ॥ ೪ ॥

### ಭಾಮಿನಿ

ಕೆಲರು ಹಿಡಿದರು ಮಿಣಗಳಲಿ ಬಲು । ಖಳರುಗಿವ ಸರಪಣಿಗಳಲಿ ಕೆಲ । ಕೆಲರು ವಜ್ರದ ಭಂಡಿಗಳ ಕಾಲಿನಲಿ ಕೀಲಿನಲಿ ॥ ಕೆಲರು ಅಚ್ಚಿನ ಕೊಂಬಿನಲಿ ಕೆಲ । ಕೆಲರು ಅಶ್ವಗಳಿಂಬಿನಲಿ ಗಜ । ವೆಳೆದವಾ ಸೊಂಡಿಲಲಿ ಖಳ ಹೆಮ್ಮಾರು ಕೈಗಳಲಿ ॥

### ಶಂಕರಾಭರಣ ರಾಗ - ಅಷ್ಟತಾಳ

ಎಳೆದರು ರಥದಿ ವಾನರನ । ಬಲು । ಬಲವಂತ ವೃಕ್ಷ ಸಂಚರನ । ಛಲದಂಕನಿಭ ಶುಭಕರನ । ಮದ । ಖಳ ಕುಲ ತಿಮಿರ ಭಾಸ್ಕರನ ॥

ದಾರಿಯೊಳು ಪೋಗುವಂಥ ಮಾರಿಯು ಕರತಂದು । ಊ । ರೊಳಗೆ ಬಿಟ್ಟಂತೆ ವೆಗ್ಗಳ ಪರಾಕ್ರಮದಿಂದ ॥ ಎಳೆದರು ॥ ೧ ॥ ಇತ್ತಡಿಯಲಿ ಮದ್ದಾನೆಗಳ । ಬಲು । ಶಕ್ತಿಯಿಂದೆಳೆವ ತ್ರಾಣಿಗಳ । ಸುತ್ತಲು ಬಿಗಿದ ನೇಣುಗಳ । ಘೋರೇನುತ್ತ ಘೋರ್ಗರವ ವಾದ್ಯಗಳ । ಕೇ । ಳುತ್ತಲಂಬರದೊಳು ನಿಂದು ನೋಡುವ ಸುರ । ಮೊತ್ತವು ಕಂಡಂಜುವಂತೆ ಸಂಭ್ರಮದಿಂದ ॥ ಎಳೆದರು ॥ ೨ ॥ ಮೇರು ಪರ್ವತದ ಹಾಗಿರುವ । ಕಪಿ । ವೀರನ ಮೈಯ ಭೀಕರವ । ಭಾರಿ ಭಾರಿಗೆ ಧ್ವನಿಗರೆವ । ಹತ್ತು । ನೂರು ಸಾವಿರ ಭೇರಿ ಮೊರೆವ । ಮುಂದೆ । ಕಾರಣವರಿತಂತ ನಾರಿಪುರುಷರು ಆ । ಊರಿಂದೊಕ್ಕಲು ಸಹ ಸೇರೆ ಮತ್ತೊಂದೂರ ॥ ಎಳೆದರು ॥ ೩ ॥ ಈ ವಿಭವದೊಳೆಳೆತಂದು । ಬಂದು । ರಾವಣನಿದಿರಲಿ ನಿಂದು । ದೇವೇಂದ್ರಜಿತು ತಂದೆಗಂದು । ನಿಮ್ಮ । ಸೇವೆಯಿದೀಗ ಸಂತೆಂದು । ಕಪಿ । ಭಾವವ ನೋಡೆನೆ ಆವಿಯು ಕಪಿಯೆಂದು । ತಾ ವಿನೋದದಿ ಪ್ರಹಸ್ತನು ಮಾತಾಡಿಸಿದನು ॥ ಎಳೆದರು ॥ ೪ ॥

### ಪಂತುವರಾಳಿ ರಾಗ - ಏಕತಾಳ

ಯಾವ ದೇಶದಿಂದ ಬಂದೆ । ವೀರ ಕಪಿರಾಯ ॥ ಯಾವಲ್ಲಿಗೆ ಪಯಣವು ವಿ । ಚಾರವಿದೇನಯ್ಯ ॥ ೧ ॥ ಹೆತ್ತತಾಯಿ ತಂದೆ ಯಾರು । ಯಿತ್ತ ಬಂದುದೇಕೆ ॥ ಕಿತ್ತು ವನವ ಕೆಡಿಸಿದಂಥ ಕಾರಣವೇನಯ್ಯ ॥ ೨ ॥ ಹತ್ತು ಸಾವಿರ ರಾಕ್ಷಸರು । ಅಕ್ಷಕುಮಾರನನು ॥ ಮತ್ತಗಜ ಸಹಿತ ಕೊಂದು । ದುತ್ತರವೇನಯ್ಯ ॥ ೩ ॥ ಅರಮನೆ ಅರಸ್ಥಾನವೆಂಬ । ಮರಿ ಯಾದೆಯನರಿಯದೆ ॥ ಪರಿಪರಿಯು ಗರ್ವದಿ ಕಾಳಿ । ತಿರುವುದ್ಯಾತಕಯ್ಯ ॥ ೪ ॥ ದೊರೆಗಳಪ್ಪಣೆಯಿಂದ ನಾ । ವಿವರ ಕೇಳ್ದೆನೆಲವೊ ॥ ಮರುಳು ತನವ ಬಿಟ್ಟು ಯೆನ್ನೊ । ಳರುಹು ಕಾರ್ಯವೆಲ್ಲ ॥ ೫ ॥

### ಮಧ್ಯಮಾವತಿ ರಾಗ - ಆದಿತಾಳ

ದಶಕಂಠನೆಂಬಾತನ್ಯಾರೋ । ತೋರಬೇಕಯ್ಯ । ದಶಕಂಠನೆಂಬಾತ ನ್ಯಾರೊ ॥ ಪಲ್ಲ ॥ ಜಗದೊಳು ಜನಕನ ಮಗಳು ಸೀತೆಯ ದಶ । ಮೊಗದಾತ ಕದ್ದುಕೊಂಡು ಬಂದನಂತೆ ॥ ಜಗದೇಕವೀರ ರಾಘವ ನೋಡಿ ಬಾರೆಂದು। ಮಿಗೆ ಹರುಷದಿ ಕಳುಹೆ ಬಂದೆ ನಾನು ॥ ದಶಕಂಠ ॥ ೧ ॥ ಬೇವಿನ ಚಿಗುರನ್ನು ಬೆದರಿಸಿ ಕೊಲ್ಲುವ । ದಾವ ರಾಜ್ಯದ ರಾಜನೀತಿಯಿದು ॥ ನಾವು

ಮಾಡಿರುವ ತಪ್ಪೇನು ಕಟ್ಟುವುದಕ್ಕೆ। ನೋವು ಪಗ್ಗಳ ಮಾತು ಬಾರದಯ್ಯ॥ ದಶಕಂಠ ॥ ೨ ॥ ಬೇಡವೆಂದರೆ ಯೆನ್ನ ಮಾತನು ಕೇಳದೆ । ಕೇಡು ಮಾಡಿದು ದೆನ್ನ ಬಾಲವೈಸೆ ॥ ರೂಢಿಪಾಲಕನುದ್ಯಾವನವನ್ನು ನಿರ್ಮೂಲ । ಮಾಡಿ ರಾಕ್ಷಸರ ಕೊಂದ ಪಾಪಿಯಿದು ॥ ದಶಕಂಠ ॥ ೩ ॥

ವಾರ್ಧಿಕ

ಮಾತಿನಲಿ ಜಾಣ ಕಪಿ ನೋಡಿದರೆ ಬಲವಂತ । ನೀತನಿಶ್ಚಯ ಬಾಲವಲ್ಲ ಗಡಯಿದರ ಕೈ । ಲಾತಿಶಯ ವಸ್ತ್ರದಲಿ ಸುತ್ತಿ ಸುಡಬೇಕೆಂದು ದಶಕಂಠ ಕೋಪದಿಂದ ॥ ದೂತರಿಗೆ ನೇಮವಂ ಕೊಡಲೂರ ಮನೆಮನೆಯ। ಪೀತಾಂಬರಾದಿಗಳ ಸಹ ತಂದು ಸುತ್ತಿದರು । ಕಾತುರದೊಳೆಣ್ಣೆಯೊಳಗದ್ದಿ ಕಿಚ್ಚಿಸಗಿದಡೆ ಜ್ಯೋತಿರ್ಮಯೋಕ್ತವ್ಯಾತು ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ಬಾಲತುದಿಯಲಿ ಪೊಳೆತು ರಂಜಿಸಿ । ಮೇಲುವಾಯ್ದುದು ನಾಲ್ಕು ದೆಸೆಯಲಿ । ಕಾಲಭೈರವ ಮುಖದ ವಹ್ನಿ । ಜ್ವಾಲೆಯಂತೆ ॥ ೧ ॥ ಕೋವಿದರ ಮನೆ ಗೋಪುರಂಗಳ । ಚಾವಡಿಯ ಸೌಧಗಳ ಚೌಕಿಯ । ರಾವಣನ ಕೊನೆಮೊಸೆ ಸಹಿತಲೆ । ಹೋಮಿಸಿದನು ॥ ೨ ॥ ಹಾರಿದನು ಬಳಿ ಕುಪ್ಪರಿಗೆಗಳ । ಕೇರಿಕೇರಿಯ ಜನರ ಮನೆಗಳ । ತೋರಿದನು ಕೋಪಾಗ್ನಿ ಗೌತಣ । ವೀರ ಹನುಮ ॥ ೩ ॥ ಕರಗಿದವು ನವರತ್ನ ಖಚಿತದ । ನೆರವಿ ಕನಕದ ಬೊಂಬೆ ಸಹಿತಲಿ । ಪರಿಪರಿಯ ನೂತನದ ಪೀತಾಂ । ಬರಗಳೆಲ್ಲ ॥ ೪ ॥ ಓಡಿದರು ಕೆಲರಗ್ನಿಭಯದಲಿ। ಬೇಡಿದರು ಕೈಮುಗಿದು ಹನುಮನ । ಮಾಡಿದರು ಮಂದಿರವ ಕೆಲರಾ । ಕಾಡಿನೊಳಗೆ ॥ ೫ ॥ ಆ ಸುಲಂಕಾ ನಗರ ದೊಳಗೆ ವಿ । ಭೀಷಣನ ಮನೆ ಹೊರತು ಅಗ್ನಿಯ । ರಾಶಿಯಾದುದು ಪುರದ ರಚನೆಯ । ಮೊಸಲಳಿದು ॥ ೬ ॥

ವಾರ್ಧಿಕ

ಕೆಡಿಸಿ ನಂದನವ ಲಂಕಾಪುರವ ಬಾಲದಿಂ । ಸುಡಿಸಿ ಚೂಡಾಮಣಿಯ ಸಹಿತ ಹಾರಿದ ತಿರುಗಿ । ಕಡಲೊಳಗೆ ಅದ್ದಿ ಬಾಲದ ಕಿಚ್ಚ ನೊಂದಿಸುತ ತಡಿಗಡರಿಕೊಂಡು ಬಳಿಕ ॥ ನಡೆತಂದು ನುಡಿದ ಲಂಕೆಯ ಪಾರುಪತ್ಯಮಂ

ಬಿಡದೆಲ್ಲರೊಡನೆ ಬಂದುಳಿದೆವೆಂದಿಗೆನುತ್ತ । ಒಡೆಯ ರಾಮನ ಚರಣವಂ ಕಂಡು ಹನುಮಂತ ಪೊಡಮಟ್ಟು ಬಿನ್ನವಿಸಿದ ॥

ಮಧ್ಯಮಾವತಿ ರಾಗ - ಏಕತಾಳ

ರಾಘವ ಸ್ವಾಮಿ ಲಾಲಿಸಿ ಕೇಳು । ಈಗ ನಾವೆಲ್ಲ ಪೋಗಿ ದಣಿದಂಥ ಬಗೆಯ ॥ ರಾಘವ ॥ ಪಲ್ಲ ॥ ದೇಶದೇಶವನೆಲ್ಲ ತೊಳಲಿ ಬಳಲಿಕೊಂಡು । ಆ ಸ್ವಯಂಪ್ರಭೆಯ ಪಟ್ಟಣದಿ ಸಿಕ್ಕಿ ॥ ಬೇಸತ್ತು ಕಣ್ವಮುನೀಶನಾಶ್ರಮ ದಾಟಿ । ಆ ಶರಧಿಯ ತಡಿ ಯೋಚಿಸುತಿರಲು ॥ ರಾಘವ ॥ ೧ ॥ ಶರಣ ಸಂಪಾತಿ ಲಂಕಾಪುರವೀಥಿಯ । ಬೆರಳ ಸನ್ನೆಯಲಿ ತೋರಿಸಿದ ತಾನು । ಶರಧಿಯ ಹಾರಿ ಲಂಕಾಪಟ್ಟಣವ ಸೇರಿ । ಇರುಳು ಲಂಕಿನಿಯ ಸಂಹರಿಸಿದ ಬಗೆಯ ॥ ರಾಘವ ॥ ೨ ॥ ಕುಂಭಕರ್ಣನ ಶ್ವಾಸದೊಳು ಸಿಕ್ಕಿಕೊಂಡೊಪ್ಪ । ಕಂಭಕ್ಕೆ ಬಡಿದು ಪೇಚಾಡಿ ಮತ್ತೆ ॥ ಹಂಬಲಿಸುತ ಶೋಕಾವನದಿ ಚಿಂತಿಸುತಿಪ್ಪ । ಕುಂಭಿನಿತನುಜೆಯ ಕಂಡು ಬಂದೆನು ಸ್ವಾಮಿ ॥ ರಾಘವ ॥ ೩ ॥ ಅರಿತು ನಿಮ್ಮಪ್ಪಣೆಯ ಗುರುತವೆಲ್ಲವ ಪೇಳಿ । ಕರಕಮಲದಲಿ ಉಂಗುರವ ಕೊಟ್ಟೆ ॥ ಬರುವೆನೆಂಟು ದಿನಕ್ಕೆ ಕರಕೊಂಡು ನಿಮ್ಮನೆಂ। ದುರುತರದಲಿ ಭಾಷೆ ಕೊಟ್ಟು ಬಂದೆನು ನಾನು ॥ ರಾಘವ ॥ ೪ ॥ ಬಳಿಕುದ್ಯಾವನದಿ ಫಲಾಹಾರ ಮಾಣ್ಬಾಗ । ಖಳರೆನ್ನ ಹೆಡಗಯ್ಯ ಬಿಗಿದರಯ್ಯ । ಹಲವು ಶಸ್ತ್ರಾಸ್ತ್ರ ಬಿಟ್ಟು ಕವಲಿ ಬಾಲವ ಸುಟ್ಟು । ಉಳಿದು ನಾ ಪ್ರಾಣ ಮಾತ್ರದಿ ಬಂದೆನೀ ಪಾಟಿ ॥ ॥ ರಾಘವ ॥ ೫ ॥

ಭಾಮಿನಿ

ಅಣೆಯರಿತು ಬಿನ್ನವಿಸಿ ಶೌರ್ಯಾ। ಗ್ರಣಿಯ ಪಾದಕೆ ನಮಿಸಿ ಚೂಡಾ। ಮಣಿಯ ಕೈಯಲಿ ಕೊಡೆ ಸುರೇಂದ್ರಾದಿಗಳು ನಲಿದಾಡೆ ॥ ತ್ರಿಣಯ ಸಖಿ ಬೆರಗಾಗಿ ಕಪಿ ಸಂ। ದಣಿಯ ಮಧ್ಯದೊಳೆಸವುತಿರೆ ದಿನ। ಮಣಿಯ ಸುತ ಮೊದಲಾಗಿ ಸ್ತುತಿಸಿದರಂದು ರಾಘವನ ॥

ಆಹೇರಿ ರಾಗ - ಆದಿತಾಳ

ಜಯ ಜಯ ರಘುಕುಲನಂದನ । ಭಯನಿವಾರಣ ಸುರವಂದನ ॥ ಜಯ ॥ ಪ ॥ ಅಂಬುಜಲೋಚನ ಅಘ ಕುಲನಾಶನ । ಕಂಬುಕಂಧರ

ಕಮನೀಯಕರ ॥ ತುಂಬುರ ನಾರದ ಗೀತವಿನೋದ ತ್ರ್ಯಂಬಕ ಸಖ ಹರಿ ನಮೋನಮೋ ॥ ಜಯ ॥ ೧ ॥ ಭಾಸುರ ಭೂಷಣ ಬಹುಮುನಿ ಪೋಷಣ । ದೂಷಣಖರನಾಶನ ಶರಣು ॥ ಈಶ ಪರಮ ಗರುಡಾಸನ ಸರ್ವಲೋ । ಕೇಶ ಜಾನಕಿ ಪತಿ ನಮೋ ನಮೋ ॥ ಜಯ ॥ ೨ ॥ ಭಕ್ತ ವತ್ಸಲ ಭವರೋಗಸಂಹರಣ । ಮುಕ್ತಿದಾಯಕ ಮಂಗಲರೂಪ ॥ ಉತ್ತಮ ಪುರುಷ ಸಾಕೇತ ಪಟ್ಟಣವಾಸ । ಪೃಥ್ವಿಪಾಲಕ ರಾಮ ನಮೋ ನಮೋ ॥ ಜಯ ॥ ೩ ॥

### ವಾರ್ಧಿಕ

ಅರಸು ಮಕ್ಕಳು ಕೇಳಿರಾಗ ಚೂಡಾಮಣಿಯು । ಮರುತಸುತ ರಾಮಚಂದ್ರನ ಕೈಯ ಕೊಟ್ಟಲ್ಲಿ । ಭರಿತವಾಯಿತು ಸಂಧಿಯೊಂದು ವಾಲ್ಮೀಕಿಮುನಿ ಪೇಳ್ದನೀ ಪುಣ್ಯಕಥೆಯ ॥ ಅರಿತು ಹೇಳುವ ಕೇಳ್ವ ಶ್ರೀ ಪುಣ್ಯವಂತರಿಗೆ । ದುರಿತಗಳ ಪರಿಹರಿಸಿಸಂತೋಷದಲಿ ಕಣ್ವ । ಪುರದೊಡೆಯ ಶ್ರೀಕೃಷ್ಣ ಸಕಲ ಭಾಗ್ಯವನಿತ್ತು ಪೊರೆವನನುಗಾಲ ಬಿಡದೆ ॥

# ಸೇತು ಬಂಧನ

## ಪಾತ್ರಗಳು

ರಾಮ
ಲಕ್ಷ್ಮಣ
ಹನುಮಂತ
ಸುಗ್ರೀವ
ಜಾಂಬವ
ಅಂಗದ
ನಳ
ನೀಲ
ಗವಾಕ್ಷ
ವರುಣ
ಈಶ್ವರ
ಬ್ರಹ್ಮ
ನಾರದ
ರಾವಣ
ಇಂದ್ರಜಿತು
ಶುಕ
ಸಾರಣ
ನೀಲನಾಯಕ

ಮೇನಕೆ
ಕೈಕಸೆ
ವರುಣ ಸ್ತ್ರೀಯರು

---

# ಸೇತು ಬಂಧನ

### ವಸಂತತಿಲಕಾವೃತ್ತ

ಶ್ರೀರಾಮಚಂದ್ರ ರಘುನಂದನ ರಾಜವರ್ಯ । ರಾಜೇಂದ್ರರಾಜ ಸುರನಾಯಕ ರಾಘವೇಶ ॥ ರಾಜಾಧಿರಾಜ ರಘುನಂದನ ರಾಮಭದ್ರ । ದಾಸೋಽಸ್ಮ್ಯಹಂ ಚ ಭವತಃ ಶರಣಾಗತೋಽಸ್ಮಿ ॥

### ಶಾರ್ದೂಲವಿಕ್ರೀಡಿತಂ

ಘನವಾಲ್ಮೀಕಿ ಮುನೀಂದ್ರ ಪಾದಯುಗಕಂದೆರಗುತ್ತಲಾ ಬಾಲರೂ। ಮನಸಂತೋಷದಿ ಸೇತುಬಂಧನವನುಂ ಪ್ರಾರಂಭಸಂಪೂರ್ಣಮಂ ॥ ವನ ಸಂಚಾರಿಗಳೆಂತು ದಾಂಟಿದರದಂ ಶ್ರೀರಾಮಚಾರಿತ್ರಮಂ । ಇನಿತಾನಂದದಿ ಕೇಳ್ವೆವೆಂಬ ಸುತರಂ ಕೊಂಡಾಡುತಿಂತೆಂದನುಂ ॥

### ಸಾಂಗತ್ಯ ರಾಗ - ರೂಪಕತಾಳ

ತನಯರು ಕೇಳಿ ರಾಘವನು ಕೈಯಲಿ ಚೂಡಾ । ಮಣಿಯನ್ನು ಕೊಂಡು ದುಃಖಿಸುತ ॥ ವನಿತೆಯ ಮೇಲಿನ ಮಮಕಾರದಿಂದಲಾ । ದಿನಕರ ತನುಜಗಿಂತೆಂದ ॥

### ಭೈರವಿ ರಾಗ - ಝಂಪೆತಾಳ

ಅತಿಶಯದ ಸಾಗರದ । ಮಥನದಲಿ ಜನಿಸಿ ಸುರ । ಪತಿಯಿಂದ ಬಂತು ಮಣಿ । ಜನಕಭೂಪರಗೆ ॥ ೧ ॥ ಮಗಳ ವೈವಾಹದಲಿ । ವಶವಾಯಿ ತೆಮ್ಮೊಡನೆ । ತೆಗೆದು ಸಲೆ ಮೋಹದಲಿ । ಕೊಟ್ಟನಾ ಸತಿಗೆ ॥ ೨ ॥ ಏನು ಪಾಡಡೊಳಿದನು । ಉಳುಹಿಕೊಂಡಳೊ ಕಾಣೆ । ಮಾನಿನೀಮಣಿಯು ಸಲೆ । ಜಾಣೆಯುಹುದಹುದು ॥ ೩ ॥ ಎಂದಿಗಾದರು ಸತಿಗೆ । ಭೋಗಿಸುವ ಫಲವಿರ್ದ । ಡಂದು ಪರಿಯಂತ ತೆಗೆ । ದಿರಿಸೋ ನೀ ತಮ್ಮ ॥ ೪ ॥ ಮರುತಸುತ ನಮಗಾಗಿ । ಮಾಡಿದತಿ ಸಾಹಸಕೆ । ಮರೆಯದುಪಕಾರವಿದ ।

ಕೀನಿತ್ತರಹುದು ॥ ೫ ॥ ಧರ್ಮ ಶಾಶ್ವತವಾಗಿ। ಧಾರೆಯೆರೆದವು ಬರುವ। ಬ್ರಹ್ಮ ಪಟ್ಟದ ಭಾಗ್ಯ । ಹನುಮಂತಗಿಂದು ॥ ೬ ॥

**ವಾರ್ಧಿಕ**

ಮರುತನಂದನಗಾಯಿತಜನ ಸಂಪದವೆಂದು। ಸುರಪಾಲ ಮುಂತಾದ ಸುರರೆಲ್ಲ ಜಯವೆನುತ । ಸುರಿದರಂಬರದಿಂದ ಪೂಮಳೆಯ ದೇವದುಂದುಭಿ ವೊಳಗಿತಾಕಾಶದಿ ॥ ಕರಿ ತುರಗ ರಥ ಪಾದಚಾರಿಗಳು ತಾವೆ ವಾ । ನರ ರೊಬ್ಬರೊಬ್ಬರೊಳಗಾಯ್ತು ಚತುರಂಗಬಲ । ಮರುದಿವಸ ಮಾರ್ಗಶಿರ ಶುದ್ಧಾಷ್ಟಮಿಯೊಳೆಲ್ಲ ಹೊರಪಟ್ಟಣಮಂ ಗೆಯ್ದರು ॥

**ಕೇದಾರಗೌಳ ರಾಗ - ಅಷ್ಟ ತಾಳ**

ವರಶ್ರವಣಾದ್ರಿಯಿಂದೆದ್ದು ಬಂದಾ ಹರ । ಗಿರಿಯೊಳು ನೆಲಸಿದರು ॥ ಮರುದಿನ ಮೇಚಕ ಪರ್ವತದಿಂದೆದ್ದು । ಬರುತಿರ್ದುದಾ ಕಟಕ ॥ ೧ ॥ ಅಲ್ಲಿಂದ ಮಲಯಾಚಲಕ್ಕಾಗಿ ದಿನ ನಾಲ್ಕ । ರಲ್ಲಿ ಸಾಗರತಡಿಗೆ ॥ ಎಲ್ಲರು ಬಂದುದ ಕಾಣುತೋಡಿದರು ಮ । ತ್ತಲ್ಲಿಹ ದಾನವರು ॥ ೨ ॥

**ವಾರ್ಧಿಕ**

ಧಾಳಿವರಿದಯ್ತೆಂದು ಗಂಧಮಾದನ ಗಿರಿಯ । ಮೂಲದೆಡೆಯಲಿ ರಾಮ ಸೈನ್ಯಮಂ ಕೆದರೆ ಕಪಿ । ಪಾಳೆಯವ ಕಂಡಂಜಿ ಕಾವಲಿಹ ರಾಕ್ಷಸರು ಬೀಳುತೇಳುತ ನಡೆದರು ॥ ಓಲಗದೊಳಿರುವ ದಶಕಂಠನಂಘ್ರಿಗೆ ಮಣಿದು । ನಾಲಗೆಯ ತಡವರಿಸುತಂಜುತಳುಕುತ ಬೆದರಿ । ದಾಲಿಗಳ ನೀರೊರೆಸಿ ಗದ್ಗದ ಸ್ವರದಿಂದ ಪೇಳಿದರು ದನುಜೇಂದ್ರಗೆ ॥

**ಕಾಂಭೋಜಿ ರಾಗ - ಅಷ್ಟ ತಾಳ**

ದಂಡು ಬಂತಯ್ಯ ರಾಘವನ । ನಾವು । ಕಂಡೆವು ದಳವಾಯಿ ಸುಗ್ರೀವನ ॥ ತಂಡತಂಡದೊಳೆಪ್ಪತ್ತೇಳುಕೋಟಿ ಮಂದಿ । ತುಂಡು ಮರಗಳ ಗುಂಡು ಗಿರಿಗಳ । ಹಿಂಡುಹಿಂಡಿನ ಕಪಿಗಳು ॥ ೧ ॥ ಕರಿರಥ ತುರಗವು ತಾವೇ । ಪಾದ । ಚರಿಗಳಿನ್ನದರೊಳೈದಾವೆ ॥ ಕರಡಿ ಸಿಂಗಲಿಕ ವಾನರ ಮುಸು ಕೆಂಚನೆಲ್ । ಮರಿಗಳಿದ್ದುವೆ ಕೆಲವು ಕರಿದಾ । ಗಿರುವ ಮುದಿ

ಮುದಿ ಕಪಿಗಳು ॥ ೨ ॥ ದಿನಕರ ವಂಶ ಲಲಾಮ । ರಾಮ । ನನುಜ ಲಕ್ಷ್ಮಣನು ನಿಸ್ಸೀಮ ॥ ಧನು ಶರವನು ಕೊಂಡು ಧನುವ ನೋಡುತಲಿಂದು । ಘನಪರಾಕ್ರಮಿ ವೀರ ಸುಗ್ರೀ । ವನ ಮಹಾಬಲ ಕೂಡಿದು ॥ ೩ ॥ ಕೇಳಿದ ದಶಕಂಠ ನುಡಿಯ । ರಾಮ । ಪಾಳ್ಯ ಸಮುದ್ರದ ತಡಿಯ ॥ ಓಲಗದಲಿ ಕುಂತೆಲ್ಲರ ಕರೆಸಿದ । ಕಾಳಗಕೆ ಸನ್ನಾಹವಾಗಿರ । ಹೇಳಿದನು ರಾಕ್ಷಸರಿಗೆ ॥ ೪ ॥

## ಭೈರವಿ ರಾಗ - ತ್ರಿವುಡೆತಾಳ

ನೀಲ ನಾಯಕನೆಂಬ ವಾರ್ತೆಯ । ನಾಲಿಸುತ ನೆರೆ ಕೇಳಿದ । ಕಾಲ ಭೈರವನಂತೆ ರೋಷದ । ಮೇಲೆ ಧೈರ್ಯವ ತಾಳಿದ । ಕಾಳ ರಕ್ಕಸ ದಿಕ್ಕಟದ ಭೇ । ತಾಳರನು ಬರಹೇಳಿದ । ಸಾಲು ಸಾಲೀರೇಳುಲೋಕಕೆ । ಓರೆ ತಾಳಿಯ ಬರೆಸಿದಾಗಳೆ ॥ ಬಂದರಾಗ । ಖಳರ । ಯ್ತಂದರಾಗ ॥ ೧ ॥ ಕೋಟಿ ದಾನವರುಗಳ ಶರಧಿಯ । ದಾಟದಂದದಿ ನಿಲಿಸಿದ । ಕೋಟೆಗಳ ಹೊರವಲಯ ಸುತ್ತಲು । ನೀಟಿನಲಿ ಕಣೆಯಗೆಸಿದ । ಪಾಟಿನಲಿ ರಣ ಭೂಮಿಯಗಲಕೆ । ಲೂಟಿಯಂಕವ ಸುಳಿಸಿದ । ಕಾಟಕರ ಕೈಯಸ್ತ್ರಶಸ್ತ್ರದ । ಕೋಟಲೆಗೆ ಚಲವೆರಸಿದಾಗಲೆ ॥ ಬಂದರಾಗ । ಖಳರ । ಯ್ತಂದರಾಗ ॥ ೨ ॥

## ಕಂದ

ಅಂದಿನದೋಲಗದೆಡೆಗ । ಯ್ತಂದಗ್ರಜನಡಿಗೆರಗಿ ವಿಭೀಷಣ ದೇವಂ ಬಂದಾ ರಾಮನ ವಾರ್ತೆಯ । ನಂದರುಹಲು ಕೇಳ್ದು ರಾಜ ನೀತಿಯ ಪೇಳ್ದಂ ॥

## ಬೇಗಡೆ ರಾಗ - ಅಷ್ಟತಾಳ

ಕೇಳಿದೆಯಾ । ಅಣ್ಣ । ಕೇಳಿದೆಯಾ ॥ ಪ ॥ ರಾಮ । ಪಾಳ್ಯಗೂಡಿ ನಮ್ಮೊಡನೆ । ಕಾಳಗಕ್ಕೆ ಬಂದ ಪರಿಯ ॥ ಕೇಳಿದೆಯಾ ॥ ಅ ॥ ಬಾಲವುಳ್ಳ ಕಪಿಗಳೆಪ್ಪ । ತ್ತೇಳು ಕೋಟಿಯಂತೆ ಕೆಲವು । ನೀಲ ಕೆಂಪು ಬಿಳಿದು ಮತ್ತೆ । ಬಾಲಕರಂತೆ ॥ ಮೇಲೆ ಸುಗ್ರೀವನೆಂಬಾತ । ಪಾಲಿಸುವನರಸನಂತೆ । ನೀಲನೆಂಬವನಿವರಿಗೆಲ್ಲ । ಪಾಳ್ಯದ ನಾಯಕನಂತೆ ॥ ಕೇಳಿದೆಯಾ ॥

**ಯರಕಲಕಾಂಭೋಜಿ ರಾಗ - ಅಷ್ಟತಾಳ**

ಇನ್ನಾದರು ಬಿಡು ಬಿಡು ನಿನ್ನ ಛಲವ । ಮೊನ್ನೆ ಹೇಳಿದ ಮಾತು ನಿಜವಾಯಿತಲ್ಲ ॥ ಇನ್ನಾದರು ॥ ಪ ॥ ಮೊದಲು ಪಟ್ಟಣವನಗ್ನಿಗೆ ಕೊಟ್ಟ ಕಪಿಯಂಥಾ । ದದುಭುತ ವೀರ ವಾನರ ಸೈನ್ಯಮಂ ಕೂಡಿ । ಕೆದರಿತು ಪಾಳ್ಯವಂತೆ ॥ ಈಚೆಗೆ ದಾಟು । ವುದಕೆ ಈ ವೇಳ್ಯವಂತೆ । ಎಚ್ಚರಿತು ಕೊಂ । ಬುದಕೆ ಸಮಯವು ಬಂದಿದೆ ಮುನ್ನಿನಂತೆ ॥ ಇನ್ನಾದರು ॥ ಅಣ್ಣ ಕೇಳೀ ರಾಮಚಂದ್ರನು ಭೂಮಿಯು । ತಿಣ್ಣವಿಳುಹಲಾಗಿ ಅವತರಿಸಿದ ನೊಂದು । ಹೆಣ್ಣ ನೆವನ ಒಡಿದು ॥ ನಮ್ಮೆಲ್ಲರ । ಮಣ್ಣಗಿಕ್ಕುವ ಬಡೆದು। ಈ ಕಾರ್ಯದೊ । ಳುಣ್ಣದುರಿವುದುಚಿತಗಳಲ್ಲ ತಿಳಿದು ॥ ಇನ್ನಾದರು ॥ ೨ ॥ ಜಾನಕಿಯೇ ಸೀತೆ ಸಾಕ್ಷಾತ್ ಲಕ್ಷುಮಿದೇವಿ । ನಾರಾಯಣನು ರಾಮಚಂದ್ರನು ಶೇಷಾವ । ತಾರಿ ಲಕ್ಷ್ಮಣನು ಬಂದು ॥ ದೇವತೆಯರ । ದೂರಿಗೋಸ್ಕರದೊಳಿಂದು । ನಮ್ಮನು ಯಮ । ನೂರಿಗಟ್ಟದೆ ಬಿಡ ರರಿತುಕೊ ಮುಂದು ॥ ಇನ್ನಾದರು ॥ ೩ ॥

**ತೋಡಿರಾಗ - ಅಷ್ಟತಾಳ**

ಏನೆಂದೆ । ತಮ್ಮ । ಏನೆಂದೆ ॥ ಪ ॥ ಏನೆಂದೆ ತಮ್ಮ ಏತಕೆ ಮರು ಳಾದೆ। ದಾನವರುಗಳ ಶಕ್ತ್ಯಯ ನೀನರಿಯದೆ ॥ ಏನೆಂದೆ ॥ ಅ ॥ ದನುಜರ ಸೈನ್ಯಲಂಕಾದುರ್ಗವೆಮಗೆ । ಅನುಜಗೆ ಸರಿ ಯಾರು ಕುಂಭಕರ್ಣನಿಗೆ ॥ ಧನಪತಿಜ್ಯೇಷ್ಠ ತಾನೈಶ್ವರ್ಯದೊಳಗೆ । ಘನಪರಾಕ್ರಮಿ ಶಕ್ರಜಿತು ಕಂದ ನೆನಗೆ ॥ ಏನೆಂದೆ ॥ ೧ ॥ ಈರೇಳು ಜಗದೊಡೆತನ ನಮಗುಂಟು । ಮಾರ ವೈರಿಯ ಭಕ್ತಿ ಮನದಿ ಬೇರುಂಟು ॥ ಸೇರಿಪ್ಪ ದಿಕ್ಪಾಲರೊಳು ನಮ್ಮ ನೆಂಟು । ಬೇರೇನು ಯೋಚಿಸಲಿದರೊಳೇನುಂಟು ॥ ಏನೆಂದೆ ॥ ೨ ॥ ಸೀತೆಯ ನಾ ಬಿಟ್ಟುಕೊಟ್ಟರೆ ಹಿಂದೆ । ಪೇತುಗನೆಂದೆಂಬ ಹೆಸರಿಡು ಮುಂದೆ॥ ಮಾತಿಲಿ ಬೆದರಿಸಿ ಬಿಡಿಸಲು ನಮ್ಮ । ತಾತನಿಂದಾಗದು ಛೀ ಹೋಗುತಮ್ಮ ॥ ಏನೆಂದೆ ॥ ೩ ॥ ಆತನಿಗುಪಕಾರವೆಂಬಡೆ ನಿನ್ನ । ತಾತನೊ ತಮ್ಮನೊ ಮಗನೊ ಮೈದುನನೊ ॥ ಕೋತಿಗಳರಸನ ಕೊಂಡಾಡುವುದಕೆ । . ಸೀತೆಯ ನೆಂಟನೊ ಬಳಿಯ ದಾಯಾದಿಯೊ ॥ ಏನೆಂದೆ ॥ ೪ ॥

ಕಾಪಿ ರಾಗ - ಅಷ್ಟತಾಳ

ನೀನೇಕೆ ಮರುಳಪ್ಪುದಣ್ಣ । ಇನ್ನು । ಜಾನಕಿಯನು ಬಿಟ್ಟುಕೊಡುವುದೆ ಬಣ್ಣ ॥ ನೀನೇಕೆ ॥ ಪ ॥ ಕೊಬ್ಬಿದುಮ್ಮಿದವೆಲ್ಲ ಬಿಡುಗು । ಕಪಿ । ಮಾರ್ಜಲ ಬಂದಮ್ಮ ಮಂಡೆಯ ಬಡಿಗು ॥ ಪರ್ಬಿ ಪಟ್ಟಣವೆಲ್ಲ ಸುಡುಗು । ಜಗ । ದಪ್ಪೆ । ಜಾನಕಿಯಿಂದ ಸೌಭಾಗ್ಯ ಕೆಡುಗು ॥ ನೀನೇಕೆ ॥ ೧ ॥ ಸೀತಾದೇವಿಯ ಕರಕೊಣುಕು । ಒಳ್ಳೆ । ಜಾತಿ ಮಾಣಿಕ್ಯ ಮುತ್ತುಗಳ ತೆಕ್ಕೊಣುಕು ॥ ಈ ತಪ್ಪ ಪಾಲಿಸೆಂದೆನುಕು । ರಘು । ನಾಥ ಸ್ವಾಮಿಯ ಪಾದಗಳ ಕಟ್ಟಿಕೊಣುಕು॥ ನೀನೇಕೆ ॥ ೨ ॥ ರಾಮಚಂದ್ರಗೆ ಪೊಡಮಡುವೊ। ನಮ್ಮ । ಸೀಮೆಯೊಡೆಯನಿಗೆ ಕಪ್ಪವ ಕೊಡುವೊ ॥ ಕಾಮುಕತನವೆಲ್ಲ ಬಿಡುವೊ। ರಾಮ। ಸ್ವಾಮಿಯ ಮನದೊಲವಿದ್ದಂತೆ ನಡೆವೊ॥ ನೀನೇಕೆ ॥ ೩ ॥

ಭೈರವಿ ರಾಗ - ಝಂಪೆತಾಳ

ತಮ್ಮನ ಸ್ವರೂಪಕ್ಕೆ । ತಕ್ಕ ಮಾತಾಡಿದನು । ಅಮ್ಮ ಕೈಕಸೆಗಾಗಿ । ಒಮ್ಮೆ ಸೈರಿಸಿದೆ ॥ ೧ ॥ ಅಮಮ ಸಗರಾನ್ವಯನ । ಮಮಕಾರವುಳ್ಳತನ । ನಮಗೆ ಬುದ್ಧಿಯ ಪೇಳ । ಲಿವನೆಷ್ಟರವನು ॥ ೨ ॥ ಜೋಡಾಗಿ ಜನಿಸಿರ್ದೆ । ಜಾಣ್ಮೆಗಳ ಬಗೆ ಬೇರೆ । ಹೇಡಿತನದುದಯ ಕೈ । ಗೂಡಿತನುಜನಿಗೆ ॥ ೩ ॥ ಆ ಕಪಿಗಳುಗ್ರಭಯ । ಸೋಕಿತೀ‌ಪಿಸುಣನಿಗೆ । ಈ ಕುಟಿಲತನ ಬೇಡ । ಸಾಕು ನಡೆ ಗಾಢ ॥ ೪ ॥ ಗಂಡುಸಲ್ಲವರ ಭಯ । ಗೊಂಡೆಯಾದರೆ ನಿನ್ನ । ಹೆಂಡತಿಯ ಕೊಟ್ಟು ಬೀ । ಳ್ಕೊಂಡು ಬಾ ಮನೆಗೆ ॥ ೫ ॥ ನಿಷ್ಠೂರಗಳ ಮಾತ । ಇನ್ನೊಂದನಾಡಿದರೆ । ಪೆಟ್ಟಾಗದಿರದಿನ್ನು । ಪಡೆದಿರಲು ಬೆನ್ನು ॥ ೬ ॥ ಇಂದ್ರಜಿತು ನಿನ್ನ ಕಿರಿ । ತಂದೆಯಹಾಡಿದ ಮಾತು । ಬಂದುದೇ ಮನಕೆ ಪೇಳೆಂದು ಬೆಸಗೊಂಡ ॥ ೭ ॥

ಸಾಂಗತ್ಯ ರಾಗ - ರೂಪಕತಾಳ

ತಂದೆ ಕೇಳ್ಕೆ ಪರಸತಿಯರ ವಂಚಿಸಿ । ತಂದುದನ್ಯಾಯ ರಾಜಸಕೆ ॥ ಮುಂದಿನ್ನು ಬೆದರುತ್ತ ಬಿಟ್ಟೆವಾದರೆ ನಮ್ಮ । ನಿಂದಿಸುವರು ಲೋಕದೊಳಗೆ ॥ ೧ ॥ ಸಿಂಧುವನುತ್ತರಿಸುವರೆ ಕೂಡದು ಬಲ । ಬಂದರು ಬರಲಿ ರಾಘವನ ॥ ತಂದೆಯ ತಂದೆಗಸಾಧ್ಯ ಜಾನಕಿಯನ್ನು । ಹಿಂದಕಿನ್ನೊಯ್ಯುವ ದೆಂತಿರಲಿ ॥ ೨ ॥ ಹಿರಿದಾದ ವನವ ಸಂಚರಿಸುವ ಕಪಿಗಳ । ಕರತಂದು

ರಾಮರಾಕ್ಷಸರ ॥ ಧುರದೊಳೆಚ್ಚಾಡಿ ಸೋಲಿಸುವಂಥ ಮಾತ್ರ । ಇರಲಿಸೇ
ಚಿಕ್ಕಯ್ಯನವರೆ ॥ ೩ ॥ ಎಂದ ಪೌರುಷದ ಮಾತನು ಕೇಳಿ ಭುಗುಭುಗಿ ।
ಲೆಂದು ಘರ್ಜಿಸಿ ವಿಭೀಷಣನು॥ ಒಂದೊಂದು ಕಪಿ ನಡೆತಂದರೋಡಿಸಿದಂಥ।
ಕಂದ ನೀನಲ್ಲದಿನ್ನಾರು ॥ ೪ ॥ ಜನನ ನಗರದೊಳಾದಪಮಾನವ । ಮನಸಿ
ಗಿಕ್ಕದೆ ಪೋದೆ ನೀನು ॥ ಘನ ಕುಂಭಕುಚ ಮೂಗ ಕೊಯ್ಸಿಕೊಂಡಂಥ
ಹೊ । ಶೂರ್ಪಣಖಿಯೇನಾದಳೆಂದರಿಯೊ ॥ ೫ ॥ ಅಲ್ಪ ದಾನವರೆ ದೂಷಣ
ಖರ ತ್ರಿಶಿರರು। ಸ್ವಲ್ಪನೆ ಮಾವ ಮಾರೀಚ ॥ ಅಪ್ರಯೋಜಕನಾಗಿ ಕೆಡಬೇಡ
ಸೀತೆಯ । ಮೊಪ್ಪಿಸಿ ಬರುವ ರಾಮನಿಗೆ ॥ ೬ ॥ ನಿನಗೆ ನಾಚಿಕೆಯಾದರೆ
ಹಗಾದರರುಹಯ್ಯ । ವನದೊಳಿದ್ದವಳ ಕೊಂಡೊಯ್ದು ॥ ಇನಕುಲಾಧಿಪನಿ
ಗಿತ್ತೀಗ ನಮ್ಮೊಳು ಮಾನ । ಮುನಿಸಿಲ್ಲದಂತೆ ಮಾಡುವೆನು ॥ ೭ ॥ ಒಪ್ಪಾದ
ಕಪಿಗಳು ಮೃಗವೆಂದು ನಂಬಿ ನೀ । ಕಟ್ಟೆ ನಾ ಸಾರಿ ಹೇಳುವೆನು ॥ ಕಟ್ಟಾಳು
ತನವಿದು ಸಮಯ ಜಾನಕಿಯನ್ನು । ಕೊಟ್ಟು ಬಾ ರಾಮಚಂದ್ರನಿಗೆ ॥ ೮ ॥
ಪರನಾರಿಗಳುಪಿದ ಪಾಪಿಗಳನು ಭೂಮಿ । ಹೊರಳೆಂಬುದಿದು ವೇದವಚನ ॥
ನರಕದೊಳಿಳುಹುವರಲ್ಲಿ ನಮ್ಮವನು ನೀ । ನರಿತು ಜಾನಕಿಯನ್ನು
ಕಳುಹೊ ॥ ೯ ॥

### ಭಾಮಿನಿ

ಸಾಕು ಸಾಕೀ ಸಭೆಯೊಳಗೆ ಕುಳಿ । ತೀ ಕುಟಿಲತನವೆಂಬ ಕಪಿಗ್ರಹ । ಸೋಕಿತೀ ಚಂಡಾಲ ಹೇಡಿಯು ನೂಕಿರೆಂದೆನಲು ॥ ನೂಕಲೇತಕೆ ಚರರು ನಾವೇ । ನೂಕಿಕೊಂಬೆವೆನುತ್ತ ಕಂಗಳ । ಲೌಕಿದುದಕದ ಶರಣ ಬಂದನು ಮಹಾತಯಿದ್ದೆಡೆಗೆ ॥

### ಸಾಂಗತ್ಯ ರಾಗ - ರೂಪಕತಾಳ

ಅಮ್ಮ ಕೇಳಣ್ಣನ ದೆಸೆಯಿಂದಲೀ ವಂಶ । ನಿರ್ಮೂಲವಹ ಕಾಲ
ಬಂತು ॥ ಸುಮ್ಮನೆ ಮಧುಬಿಂದು ಕಲಹಬೇಡೆಂದರೆ । ಧರ್ಮಕ್ಕೆ ಮನ
ಪೊಡಂಬಡದು ॥ ೧ ॥ ಸಾಕ್ಷಾತ್ ಹರಿ ರಾಮಚಂದ್ರ ಜಾನಕಿ ಮಹಾ ।
ಲಕ್ಷ್ಮಿ ದೇವಿಯೆಂದರಿತು ॥ ರಾಕ್ಷಸಾರಿಯ ಕೂಡೆ ಕಲಹ ಬೇಡೆಂದಡು ।
ಪೇಕ್ಷಿಸಿ ಕಳೆದ ವಾಕ್ಯಗಳ ॥ ೨ ॥ ನಗರವ ಸುಟ್ಟಂಥ ಪೊಗವುಳ್ಳ ಕಪಿಗಳು ।

ಅಗಣಿತವಾಗಿ ಬಂದಿಹವು ॥ ಜಗದ ದೈವದ ಕೂಡೆ ಪಂಥ ಬೇಡೆಂದರೆ । ಜಗಳಕೊಡ್ಡಿ ಹನು ಮರ್ಬಲವ ॥ ೩ ॥ ಇದಿರಾಗಿ ರಾಮಬಾಣದಲಿ ಸಾವು ದರಿಂದ । ಮೊದಲಾಗಿ ಪೋಪೆ ರಾಘವನ.॥ ಪದಕಮಲವ ಸೇರಿ ಪಡೆದು ಕಾರುಣ್ಯವ । ಬದುಕುವೆ ಪಾಲಿಸಪ್ಪಣೆಯ ॥ ೪ ॥ ಇಂತೆಂಬ ಮಗನ ವಾಕ್ಯವ ಕೇಳಿ ಕೈಕಸೆ । ಸಂತಾಪದೊಡಲೊಳುಪ್ಪರಿದು ॥ ಅಂತರಂಗದಿ ಬಂದು ದಶಕಂಠ ನಿದಿರಿನಲಿ ನಿಂತುಕೊಂಡಬಲೆ ಪೇಳಿದಳು ॥ ೫ ॥

### ಶಂಕರಾಭರಣ ರಾಗ - ತ್ರಿವುಡೆತಾಳ

ಕಂದ ನಿನಗೀ ಕುಟಿಲತನಗಳು । ಬಂದುದೇಕೇ ಸೀತೆಯು ॥ ತಂದು ಕುಲಕಪಕೀರ್ತಿ ನಮ್ಮನು । ಹೊಂದಿದುದಕೆ ॥ ೧ ॥ ಬಿಟ್ಟುಕೊಡು ಜಾನಕಿಯ ನೆಂದರೆ । ಸಿಟ್ಟು ಮಾಡೀ ತಮ್ಮನ ॥ ಕಷ್ಟದಲಿ ಕಳುಹುವರೆ ನಾಳಿ । ದ್ದಷ್ಟು ದಿವಸ ॥ ೨ ॥ ಪರರ ಸತಿಯನು ಬಯಸುವಾತನೆ । ಭಾಗ್ಯಹೀನನು ದೈವದ ॥ ಕರುಣ ತಪ್ಪದು ಷಣಾದಹಿತರ । ಹೊರಳುಭೂಮಿ ॥ ೩ ॥ ಬಾಹದಕೆ ಮೊದಲಾಗಿ ಸೀತೆಯ । ಕಳುಹಿಕೊಟ್ಟು ರಾಮನ ॥ ಸ್ನೇಹದಲಿ ಸುಖಿ ಬಾಳು ತಮ್ಮನ । ಕೂಡಿಕೊಂಡು ॥ ೪ ॥

### ವಾರ್ಧಿಕ

ಕ್ಷಿತಿಜೆಯನು ಬಿಡವೇಳ್ದ ತನ್ನ ಜನನಿಯ ನುಡಿಗೆ । ಖತಿಗೊಳಲ್ಕಿತ್ತ ಪೂರ್ವದ ಮಂತ್ರಿಗಳು ಸಹಿತ । ರಥವೇರಿ ಮುಂದಪ್ಪ ಕಾರಣಂಗಳ ತಿಳಿದು ವರವಿಭೀಷಣದೇವನು ॥ ಪಥವಿಡಿದು ಭಾನುವರ್ಗದೊಳು ಬರಲ ಗ್ರಜನ । ಜತೆಯ ಬಿಡಲಾರದಣ್ಣನ ದೂರದಿಂ ಕರೆವೃತಶಿವಿವೇಕದ ಷಾತ, ಕಡೆಗೊಂದನೆಂಬೆ ಕೋಪಿತನಾದಡಾಗಲೆಂದು ॥

### ಸೌರಾಷ್ಟ್ರ ರಾಗ - ಅಷ್ಟತಾಳ

ಕಂಡುದ ನುಡಿದರೆ ಕೋಪವೆಗ್ಗಳಿಸುವು । ದಣ್ಣದೇವ । ತನ್ನ । ಮಂಡೆ ಗಟ್ಟೆನುತಲಿ ಮರಕೆ ಜಪ್ಪುವುದುಂಟೆ । ಅಣ್ಣದೇವ ॥ ೧ ॥ ರೋಗಿಗೆ ಮದ್ದು ಬಾಯಿಗೆ ಸೊಗಸಪ್ಪುದೆ । ಅಣ್ಣದೇವ।ನಿನ। ಗೀಗೆನ್ನ ನುಡಿ ವಿಷವಾಗಿ ಸಂಭವಿಸಿತೇ । ಅಣ್ಣದೇವ ॥ ೨ ॥ ದಾಶರಥಿಯ ಕೂಡೆ ಕಲಹ

ಬೇಡೆಂದರೆ । ಅಣ್ಣದೇವ । ಏ । ನಾಶಕಾಲಕೆ ಬುದ್ಧಿ ವಿಪರೀತವಾಯಿತೆ । ಅಣ್ಣದೇವ ॥ ೩ ॥ ಲೇಸು ಬಾರದು ನಿನಗಿದರಿಂದ ತಿಳಿದುಕೊ । ಅಣ್ಣ ದೇವ । ಈಗ । ನಾ ಸಾರಿದೆನು ಗಂಟ ಕಟ್ಟಿಕೊ ಸೆರಗಿನೊ । ಅಣ್ಣ ದೇವ ॥ ೪ ॥ ಅರಾವತಾರವು ಮೊದಲಾಗಿ ಬಳಿಕೀಗ । ಅಣ್ಣದೇವ । ಅದಿ । ನಾರಾಯಣನೆ ರಾಮನಾದನು ನಮಗಾಗಿ । ಅಣ್ಣದೇವ ॥ ೫ ॥ ಎಚ್ಚರಿ ತಿರುವರೆ ಸಮಯ ಬಂದೊದಗಿದೆ । ಅಣ್ಣದೇವ । ಇಂಥ । ಹುಚ್ಚುಬುದ್ಧಿ ಮಾ ಡಬೇಡ ಸುಮ್ಮನೆ ಕೆಡಬೇಡ । ಅಣ್ಣದೇವ ॥ ೬ ॥ ಅಪ್ಪಡೆ ನಿನಗೆ ನಾಚಿಗೆ ಎನ್ನೊಳು ಸಿರಯ್ಯಾ । ಅಣ್ಣದೇವ । ನಾ ಕೊ । ಡೊಟ್ಟಿಸಿ ಬರುವೆ ರಾಮನಿಗೆ ಜಾನಕಿಯನ್ನು । ಅಣ್ಣದೇವ ॥ ೭ ॥

ವಾರ್ಧಿಕ

ಕೂಗಿ ಗಗನದಲಿ ನಿಂತಗ್ರಜಗೆ ನೀತಿಯಂ । ಬೇಗದಲಿ ಪೇಳ್ದುದಂ ಕೇಳಿ ಖಳನಾಜ್ಞೆಯೊಳ್ । ತಾಗಿದರು ಖಡ್ಗ ತೋಮರ ಕುಂತ ಮೊದಲಾದ ನಾನಾವಿಧಾಸ್ತ್ರಗಳಲಿ ॥ ಭಾಗವತಜನ ಪರಶು ಬಲು ಭಟರ ನುಗ್ಗರಿದು । ಸಾಗರವನುತ್ತರಿಸಿ ಕಟಿಸೈನ್ಯಮಂ ಕಂಡು । ರಾಘವ ಪರಾಕು ಜಯ ಚಿತ್ತಾವಧಾನಮೆಂಬಾಗ ರಥಮಂ ಕಂಡರು ॥

ಕಾಂಭೋಜಿ ರಾಗ - ಝಂಪೆತಾಳ

ಅರಿವನು ಗಗನದಲಿ ಕೈಮುಗಿದು ನುತಿಗೆಯ್ದ । ಶ್ರೀರಾಮ ಸಲಹೆಂಬ ಶರಣ ॥ ಮಾರುತಜ ನೀ ಹೋಗಿ ನೋಡಿ ಬಾರೆಂದೆನುತ । ವೀರ ಸುಗ್ರೀವ ಕಳುಹಿದನು ॥ ೧ ॥ ಬಂದು ಮಾತಾಡಿಸಿದನಾ ವಿಭೀಷಣನ ದಶ । ಕಂಧರನ ಕಲಹಕಾರಣವ ॥ ಹೊಂದಿಕೆಯ ತಿಳಿದು ರಘುಪತಿಗೆ ಸೂಚಿಸೆ ಕರೆಸಿ। ಲಂದು ಪೊಡಮಡುತ ನಡೆತಂದ ॥ ೨ ॥

ಭೈರವಿ ರಾಗ - ತ್ರಿವುಡೆತಾಳ

ರಾಮ ರಾಮ । ದಶರಥ । ರಾಮ ರಾಮ ॥ ಪ ॥ ಕಾಮಪಿತ ಕಮಲಾಕ್ಷ ಸಂಗರ । ಭೀಮ ಬಲು ನಿಸ್ಸೀಮ ಸೀತಾ । ರಾಮ ರಾಮ ॥ ಅ ॥ ವೀರವಿತರಣ ವಿಜಯ ಸದ್ಗುಣ । ಸಾರವರ ಕೇಯೂರ ಕಂಕಣ । ಹಾರ

ಪರಧಿಗಭೀರ ಖಳ ಸಂ । ಹಾರ ಮತಿವಿಸ್ತಾರ ನತಮಂ । ದಾರ ಶಾಸ್ತ್ರ ವಿಚಾರ ಧರ್ಮೋ । ದ್ಧಾರ ನಿಗಮವಿದೂರ ನಿತ್ಯ ವಿ । ಚಾರ ಶುಭದಯ ಸಾರ ಪಾರಾ । ವಾರ ಕರುಣಾಪಾರ ಶ್ರೀ ರಘು । ರಾಮ ರಾಮ ॥ ೧ ॥ ತಂದೆ ಮಾಡಿದ ಮಾತಿಗೋಸುಗ । ಬಂದು ಪಂಚವಟೀ ಪ್ರದೇಶ ದೊ । ಳಂದು ಖರದೂಷಣರ ರಣದಲಿ । ಕೊಂದು ಮಾಯಾಹರಿಣವನು ಎಸೆ । ದಂದು ಸೀತೆಯನೊಯ್ದು ರಾವಣ । ನೆಂದು ಬಿನ್ನವಿಸಿದ ಜಟಾಯುವ । ನಂದು ಕಾಯ್ದ ಮಹಾತ್ಮ ನಾ ನಡೆ । ತಂದೆ ಸಲಹು ಪರಾಕು ಜಯ ಜಯ । ರಾಮ ರಾಮ ॥ ೨ ॥

ಭಾಮಿನಿ

ಫಣಿಶಯನ ಪರಮಾತ್ಮ ಮಾಧವ । ತ್ರಿಣಯ ಸಖ ತ್ರೈಜಗದ ರಕ್ಷಕ । ಪ್ರಣವರೂಪ ಪರೇಶ ನಾರಾಯಣ ನಮೋ ಎಂದು ॥ ಮಣಿವು ತಸ್ತುತಿ ಮಂತ್ರಿಗಳ ಸಹ । ವನಜಲೋಚನ ಕಾಣುತಲೆ ಲ । ಕ್ಷ್ಮಣನ ನೋಡಲು ಕರವ ಮುಗಿದಾ ಹನುಮನಿಂತೆಂದ ॥

ಕೊರವಿ ರಾಗ - ಅಷ್ಟತಾಳ

ದೇವ ಚಿತ್ತವಿಸಯ್ಯ ಬಂದ ರಾಕ್ಷಸನೀತ । ರಾವಣನ ಸಹಜಾತ । ಸಜ್ಜನರೊಳು । ಕೋವಿದನತಿ ಪ್ರಖ್ಯಾತ ॥ ೧ ॥ ಸೀತೆಯ ಬಿಡು ಎಂಬ ಮಾತ ಪೇಳಿದನೆಂದು । ಈತನ ಜರೆದನಂತೆ । ಪಟ್ಟಣದಿಂದ । ಲಾತ ನೂಕಿಸಿದನಂತೆ ॥ ೨ ॥ ಕಾರಣಗಳನು ತಿಳಿದು ಮುಂದೆ ಬಪ್ಪಂಥ । ಮಾರಿಗೆ ಬೆದರಿ ತಾನು । ತನ್ನಯ ಮನ । ಸೇರದಿಲ್ಲಿಗೆ ಬಂದನು ॥ ೩ ॥ ಸಾರಿ ಪದಾಂಬುಜ ಸೇರಿ ಬದುಕ ಬಂದ । ವೀರ ವಿಭೀಷಣನು । ಇವ ಪೂರ್ವದ । ನಾಲ್ವರು ಮಂತ್ರಿಗಳಂತೆ ॥ ೪ ॥

ಮಧ್ಯಮಾವತಿ ರಾಗ - ಏಕತಾಳ

ನೆಚ್ಚಬಾರದೀತನಂತರಂಗವ ಕೇಳಿ । ಆಶ್ಚರ್ಯವಾಯಿತು ನಮಗೆಲ್ಲ ॥ ಹುಚ್ಚುವಮಾತು ಅಣ್ಣತಮ್ಮಂದಿರೆಂಬಂಥ । ವಾತ್ಸಲ್ಯಗಳ ಬಿಟ್ಟು ವೈರತ್ವ ವೆಂಬುದ ॥ ೧ ॥ ದೇವೇಂದ್ರ ಮೊದಲಾದ ದೇವತೆಯರು ನಿತ್ಯ । ಸೇವೆಯ ಮಾಡಿಕೊಂಡಿಹರಂತೆ॥ಜೀವವೊಂದೊಡಲೆರಡೆನ್ನುವಂತ ಗ್ರುಜ।ರಾವಣೇಶ್ವರನ

ಭಾಗ್ಯವ ಬಿಟ್ಟು ಬಂದುದ ॥ ೨ ॥ ತಂದೆಯೊಬ್ಬ ತಾಯೊಬ್ಬಳಿಗೆ ಪುಟ್ಟಿದ ಮೇಲೆ । ಬಂದುದೆ ವೈರತ್ವ ಸೋದರರಿಗೆ ॥ ಹೊಂದಿಕೆ ಮಾತಲ್ಲ ಹೊಸಪರಿಯಾಗಿದೆ । ಯೆಂದಿನಸುತ ವಾಯುನಂದನಗುಸಿರೆ ॥ ೩ ॥ ಹಿಂದು ದ್ಯಾವನದಿಂದ ಹಿಡಿದೆನ್ನ ಕಟ್ಟಿಯೆಳೆ । ತಂದುಕೊಂಡಾ ಸಭೆಯಲ್ಲಿ ಕೊಲ್ವಾಗ ॥ ಬಂದು ಸುಜ್ಞಾನವ ಮಾತಾಡಿದನೀತ । ನೆಂದರೆ ಹನುಮನ ನುಡಿಗೊಡಂಬಡೆ ರಾಮ ॥ ೪ ॥

ಭೈರವಿ ರಾಗ - ಝಂಪೆತಾಳ

ಕಪಿರಾಯ ಕೇಳು ಕೈ । ಮುಗಿದು ಮರೆ ಹೊಕ್ಕವರು । ಕಪಟದವ ರಾದರೆಯು । ಕಾಯ್ವುದೇ ಬಿರುದು ॥ ೧ ॥ ಜನನಿಯೊಂದಾದರೆಯು । ಮನಸಿ ನಂತರ ಬೇರೆ । ಕನಕವೊಂದಾದರೆಯು । ಕಾಂಚನವು ಬೇರೆ ॥ ೨ ॥ ಏಕ ಮೃತ್ಪಿಂಡದೊಳ । ನೇಕ ಪಾತ್ರಗಳಹವು । ಲೋಕೇಶ ಬರೆದ ಲಿಪಿಯದು। ತಪ್ಪಲಹುದೆ ॥ ೩ ॥ ಪ್ರಾರಬ್ಧ ಶೇಷ ಮತಿ । ಪಡೆದ ಹಾಗೊದಗುವುದು । ಕೇಳಿದರೆ ನಿನ್ನಣ್ಣ । ವಾಲಿಯೇ ಸಾಕ್ಷಿ ॥ ೪ ॥

ವಾರ್ಧಿಕ

ಶಿರವ ಪಿಡಿದೆತ್ತಿ ಪತಿಕರಿಸಿ ಲಂಕಾಪುರದ । ಅರಸ ರಾವಣನಿಂದ ಮೇಲೀತನೆಂದು ಸ । ರ್ವರ ಮುಂದೆ ಪಟ್ಟಾಭಿಷೇಕಮಂ ಮಾಡಿದರುವರ ವಿಭೀಷಣ ದೇವಗೆ ॥ ಸುರರು ದುಂದುಭಿ ಮೊಳಗಲಾಗ ಜಯ ಜಯವೆಂದು । ಸುರಿದರಂಬರದಿಂದ ಪೂಮಳೆಯ ರಾಮ ಸಾ । ಗರದ ತಡಿಯಲಿ ನಿಂತು ಸಕಲ ಕಪಿನಾಯಕರ ಕರೆದಾಗಲಿಂತೆಂದನು ॥

ಸೌರಾಷ್ಟ್ರ ರಾಗ - ಅಷ್ಟತಾಳ

ಕಂಡಿರೆ ಶರಧಿಯ ಗಂಭೀರತನವನು । ಕಂಡಿರೇನೈ ॥ ನಭೋ ॥ ಮಂಡಲ ಪರಿಯಂತ ತುಳುಕುವ ತೆರೆಗಳ । ಕಂಡಿರೇನೈ ॥ ೧ ॥ ಭೋರೆಂಬ ನಾದ ಮುಂತಾದ ನೀರ್ಸುಳಿಗಳ । ಕಂಡಿರೇನೈ ॥ ಮದ ॥ ವಾರಣದಂತೆ ಮುಂದ್ವ ರಿದು ಭೋರ್ಗರೆವುದ । ಕಂಡಿರೇನೈ ॥ ೨ ॥ ಕಳಕಳಿಸುವ ಬಲು ಸುಳಿಗಳ ನೊರೆಗಳ । ಕಂಡಿರೇನೈ ॥ ಭಯ ॥ ಗಳ ಬೀರುವಂಥ ಜೀವನದ ಚಡಾಳವ ।

ಕಂಡಿರೇನ್ಯೆ ॥ ೩ ॥ ಪಂಕ್ತಿ ಪಂಕ್ತಿಗಳಿಂದ ಪಾರ್ವ ಮೀನುಗಳನ್ನು । ಕಂಡಿರೇನ್ಯೆ ॥ ಬಲ ॥ ವಂತವಾಗಿರುವಂಥ ಮಕರದ ನಿಕರವ । ಕಂಡಿರೇನ್ಯೆ ॥ ೪ ॥ ಸಾಗರ ಬಲಿದು ಹೆಚ್ಚಾಗಿ ಲಂಘಿಸುವುದ । ಕಂಡಿರೇನ್ಯೆ ॥ ಇದ ॥ ಹೇಗೆ ದಾಟುವುದೆಂದು ನನಗೊಂದು ತಿಳಿಯದು । ಕಂಡಿರೇನ್ಯೆ ॥ ೫ ॥ ಎಂತು ದಾಟುವುದೆಂದು ತಿಳುಹಿರಿ ನೀವಿಂದು । ಕಂಡಿರೇನ್ಯೆ ॥ ಗೌರೀ ॥ ಕಾಂತನೊಬ್ಬನೆ ಬಲ್ಲನಂತ ರಂಗವನೆಲ್ಲ । ಕಂಡಿರೇನ್ಯೆ ॥ ೬ ॥

### ಸಾಂಗತ್ಯ ರಾಗ - ರೂಪಕತಾಳ

ದಿನಕರ ವಂಶಜನಿಂತೆಂದ ಮಾತಿಗೆ । ದಿನಕರತನುಜ ಬೊಬ್ಬಿರಿದು ॥ ವನಧಿಯ ಕಡಿದು ದಾರಿಯ ಮಾಳ್ಪೆ ಲಂಕೆಗೆಂ । ದೆನುತ ಸುಗ್ರೀವ ಘರ್ಜಿಸಿದ ॥ ೧ ॥ ಸೀಳುವುದೇತಕಂಬುಧಿಯನ್ನು ಲಂಕೆಗೆ । ಪಾಳ್ಯವು ನಡೆವುದಿನ್ನೇಕೆ ॥ ಬಾಲವ ಕಳುಹಿ ರಾವಣನ ತರುವೆನೆಂದು । ನೀಲ ಕೈಮುಗಿದ ರಾಮನಿಗೆ ॥ ೨ ॥ ಎಳೆದು ತರುವುದೇನು ದೊಡ್ಡಿತೆ ದನುಜನ । ಬಲವೆಲ್ಲ ಲಂಕೆಯು ಸಹಿತ ॥ ಇಳುಹುವೆ ಕಣ್ಣ ಮುಂದೆನುತ ಗವಾಕ್ಷನಂ । ದಿಳಿಯೆ ಸುಗ್ರೀವ ಬೋಧಿಸಿದ ॥ ೩ ॥ ಪುರವೊಂದು ತರುವುದು ಹೆಚ್ಚೆ ಬ್ರಹ್ಮಾಂಡ ಖ । ರ್ಪರವನ್ನು ತರುವೆನೀ ಕ್ಷಣದಿ ॥ ಹರಿಹರ ಬ್ರಹ್ಮಾದಿಗಳ ತಂದು ಕಣ್ಣ ಮುಂ । ದಿರಿಸುವೆ ನೆಂದನಂಗದನು ॥ ೪ ॥ ಜಾಂಬವಾದಿಗಳು ಮಿಕ್ಕವರೆಲ್ಲರೊಂದೊಂದು ಸಂಭ್ರಮಗಳ ಮಾತಾಡುತಿರೆ ॥ ಕುಂಭಕರ್ಣನ ತಮ್ಮ ನೀ ಹೇಳೆಂದೆನಲು ಪಾ । ದಾಂಬುಜಕೆರಗುತಿಂತೆಂದ ॥ ೫ ॥

### ಸುರುಟಿ ರಾಗ - ಆದಿತಾಳ

ಸರ್ವೋತ್ತಮ ನೀನು । ಪ್ರಪಂಚವ । ನರಿಯದ ಬಗೆಯೇನು ॥ ಪ ॥ ಮಾಡುವ ತಪಗಳನು । ಸಮುದ್ರನ । ಬೇಡುವ ದಾರಿಯನು ॥ ನೋಡುವ ಗುಣಗಳನು । ನಮ್ಮನಸಡ್ಡೆ । ಮಾಡುವ ಬಗೆಗಳನು ॥ ೧ ॥ ಉಗುರಿಲಿ ಸೀಳ್ವುದಕೆ ಕೊಡಲಿಯ । ತೆಗೆದುಕೊಳ್ಳುವುದೇಕೆ ॥ ಮಿಗುವರಿದರೆ ವರುಣ । ಮೇಲಾ । ತಗೆ ಮಾಡುವ ತೆರನ ॥ ೨ ॥

### ಕಾಂಭೋಜಿ ರಾಗ - ಏಕತಾಳ

ಶರಣನೆಂದ ಮಾತ ಕೇಳಿ । ಸರಿಯೆಂದರೆಲ್ಲ । ಶರಧಿರಾಜನೊಡನೆ ಬಟ್ಟೆ । ಕೇಳ್ವುದೆಂಬ ಸೊಲ್ಲ ॥ ಪ ॥ ಬಂದು ಶೋಧಿಸಿ ಸುಸ್ಥಳವ । ಮಿಂದು

ಮಡಿಯಸುಟ್ಟು । ನಿಂದು ಫಣೆಗೆ ಒಲಿದು ಗೋಪಿ । ಚಂದನವನಿಟ್ಟು । ಒಂದೊಂದು ತುಳಸಿಯ ಸರವ । ನಂದು ಕೊರಳೊಳಿಟ್ಟು । ಸಿಂಧುರಾಜ ಕರುಣಿಸು ಶರ । ಈಂದು ಪೊಡಮಟ್ಟು ॥ ೧ ॥ ಅಪ್ಪಮದಂಗಳ ಬಾಯ । ಕುಟ್ಟಿ ಮನವ ಸೆಳೆದು । ಕಟ್ಟುವದಾರವರ ಸೆರೆಯ । ಬಿಟ್ಟು ಮುಂದೆ ಕಳೆದು ॥ ಇಷ್ಟವಾದ ಮೂವರೆಡೆಯ । ಕಟ್ಟಿ ಹೊಳೆಹೊಳೆದು । ಶ್ರೇಷ್ಠನಾದ ಸೂರ್ಯನೆಡೆಗೆ । ಮುಟ್ಟುವಂತೆ ನಲಿದು ॥ ೨ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಕುಶನೆ ಲಾಲಿಪುದಿತ್ತಲಾ ರಾ । ಕ್ಷಸ ಶಿರೋಮಣಿ ಕಳುಹೆ ಬೇಗೆ । ಕುಶಲದಲಿ ನಡೆತಂದು ಪಾಳ್ಯದೊ । ಳೆಸೆವುತಿರ್ದ ॥ ೧ ॥ ಪಸನಪಲ್ಲವ ತಿಳಿದು ಬಳಿಕಾ । ಗಸಕೆ ಜಗಿಯುಲು ಗಿಳಿಯ ಓಡಿದಾ । ಗೆಸೆವ ರೆಕ್ಕೆಯ ಮುರಿದು ಸೆರೆಯೊಳು । ಪಸರಿಸಿದರು ॥ ೨ ॥ ಅತ್ತ ರಾಘವ ನಾಲ್ಕು ದಿನ ತಾ । ಚಿತ್ತದಲಿ ಧ್ಯಾನಿಸೆ ಸಮುದ್ರನು । ಮತ್ತನಾಗಿರೆ ರೋಷಮಯ ತಲೆ । ಯೆತ್ತಿತಾಗ ॥ ೩ ॥

### ವಾರ್ಧಿಕ

ಸೆಳೆದು ಲಕ್ಷ್ಮಣನ ಕೈಯಿಂದ ಧನುಶರವದಕೆ । ಪ್ರಳಯ ಕಾಲದ ವಿಷ್ಣುಲಿಂಗ ಕ್ರೋಧಾಗ್ನಿಯಿಂ । ಬಲಿದು ವಾಹಿಸಿ ವರುಣನಿರವ ಕಳೆಯೆನಲು ತಲ್ಲಣಿಸಿತೀರೇಳು ಲೋಕ ॥ ಜಲನಿಧಿಯು ಬತ್ತಿತಲ್ಲಿರುವ ಜಂತುಗಳೊಡನೆ । ಕಳವಳಿಸಿದವು ರತ್ನ ಕರಗಿದುರಿ ಝಳಾಡಿಸಿತು । ಸುಳಿದು ವರುಣನ ತಗಲ ಲಂಬುಜಾಕ್ಷಿಯರರಿತು ಬಲು ಬೇಗ ನಡೆತಂದರು ॥

### ದೇಶಿರಾಗ - ಅಷ್ಟತಾಳ

ಚಂದವೇ ರಾಮಚಂದ್ರನೆ ಅಯ್ಯಯ್ಯೊ । ಇಂದು ಕೆಂಡದಿಂದ ಗಂಡ । ಬೆಂದ ಬೇಗ ನಿವಾರಿಸೋ ॥ ೧ ॥ ಪಾಲಿಸೋ ಕರ್ಣದೋಲೆ ಮೂಗುತಿ ಯನ್ನು । ಕಾಳಗಿಚ್ಚು ಚಡಾಲ ಹೆಚ್ಚು ಪಾ । ತಾಳಲೋಕವು ಸುಡುತಿದೆ ॥ ೨ ॥ ತಂದೆಯಲ್ಲವೆ ನಮಗೆ ನಮ್ಮನಿಯನ । ಮಂದಮತಿಯನಿಂದು ಪತಿಯ । ದೊಂದು ತಪ್ಪನು ಪಾಲಿಸೊ ॥ ೩ ॥ ಗಂಗೆ ಗೌತಮಿ ಗಂಡಕಿ ಕಾವೇರಿ ।

ತುಂಗಭದ್ರೆ ಮುಂಗಳಾದ್ರೆ । ಕಂಗಳಿಂದಭಿವಂದಿಸೆ ॥ ೪ ॥ ಮಂಗಳಾಕರ ಮಾಧವ ಮಹಿಮ ಭು । ಜಂಗ ಶಾಯಿ ರಂಗದೇವೋ । ತ್ತುಂಗ ಕರುಣಾ ಪಾಂಗನೆ ॥ ೫ ॥ ರಾಮ ರಾಜೀವನೇತ್ರ ಸದಾನಂದ । ಸೋಮ ಸದ್ಗುಣ ಧಾಮ ನಿರುಪಮ । ಕಾಮಿತಾ ಫಲದಾಯಕ ॥ ೬ ॥

**ಭಾಮಿನಿ**

ಮಡದಿಯರು ಬಾಯ್ ಬಿಡುತ ಹರಿಪದ । ದಡಿಗೆ ನಮಿಸಿ ಸಮುದ್ರ ರಾಜನ । ತೊಡಕು ಪರಿಹರಿಸೆಂದು ಕಪಿನಾಯಕರು ಮುಂತಾಗಿ ॥ ಒಡನೊಡನೆ ಕೈಮುಗಿದು ಬಿನ್ನಹ । ಗೊಡಲು ಮಾರ್ಗಣದುರಿಯ ನಂದಿಸಿ । ಕಡಲಧಿಪ ಗಭಯವನು ಕರುಣಿಸಿಕೊಡುತಲಿಂತೆಂದ ॥

**ನವರೋಜು ರಾಗ - ಆದಿತಾಳ**

ಪದುಮದಳಾಂಬಕಿಯರಿರಾ । ಪತಿಭಕ್ತಿಯುಳ್ಳರಿರಾ ॥ ಸದರವ ಮಾಡಲು ಪಾಪ । ಅದಕೇ ಬಿಟ್ಟೆವು ಕೋಪ ॥ ೧ ॥ ತಾನೇ ಬಾರನು ಎಂದು । ತಪಗಳ ಮಾಡಿದೆವಿಂದು ॥ ಏನಾದರು ವರುಣ । ತೋರದಾದನು ಕರುಣ ॥ ೨ ॥ ಕಾರಿಯವುಂಟೆಮಗವನ । ಕರೆತನ್ನಿ ರತ್ನಾಕರನ । ಮೋರೆಯ ನೋಡುವೆನೆನಲು । ನಾರಿಯರಾ ಕ್ಷಣ ಬರಲು ॥ ೩ ॥ ವರುಣನ ಬೇಗದಿ ಕರೆದು । ಚರಣವ ಕಾಣಿಸಿ ಒರಿದು ॥ ಇರಿಸಿದ ಕಾಣಿಕೆಗಳನು । ಪರಿಪರಿ ರತುನಗಳನ್ನು ॥ ೪ ॥

**ಸುರುಟಿ ರಾಗ - ಆದಿತಾಳ**

ದಾರಿಯ ಕೊಡು ನಮಗೆ । ಲಂಕಾಪುರ । ದೂರಿಗೆ ನಡೆವುದಕೆ ॥ ಪ ॥ ದಾನವ ರಾವಣನು । ಆತನು ನಮ್ಮ । ಮಾನಗೊಂಡ ಬಗೆಗೆ ॥ ಏನಾದರು ಕಡೆಗೆ । ಪೋಗುವೆವೀ । ಸೇನೆ ಸಹಿತ ತಡಿಗೆ ॥ ೧ ॥ ಉಗಿದ ಬಾಣ ಬಿಡಲು । ಯಾರಾದರು । ಪಗೆಗಳಿದ್ದರೆ ತೋರು ॥ ಮುಗುಳು ನಗೆಯ ನಗುತ । ಸುಗ್ರೀವನ । ಮೊಗವೀಕ್ಷಿಸಿಕೊಳುತ ॥ ೨ ॥

**ಭಾಮಿನಿ**

ಪ್ರತಿಯ ತೋರಿ ನಿಶಾಟಕುಲಸಂ । ತತಿಯ ಕೊಲಿಸಿಯೆರತುನಗಳ ರಘು । ಪತಿಗೆ ಕಾಣಿಕೆಯಿತ್ತು ಜಯ ಜಯವೆಂದು ಕೊಂಡಾಡಿ ॥ ಸ್ತುತಿಯ

ಮಾಡುತ ನಳನ ಕಯ್ಯಲಿ । ಪಥವ ಕೊಡುವೆನೆನುತ್ತ ಶನ್ನಯ । ಸತಿಯರನು ಕರಕೊಂಡು ಸಾಗರ ನಡೆದ ನಿಜಗತಿಗೆ ॥

ಭೈರವಿ ರಾಗ - ಝಂಪೆತಾಳ

ಶರಧಿಯನು ಬಂಧಿಸಲು । ಬೇಕೆಂದು ಶ್ರೀರಾಮ । ಶರಣ ನಂದನ ನಿಂದ । ಕರೆಸಿದನು ನಳನ ॥ ೧ ॥ ನಳ ನಿನ್ನ ಕೈಯಿಂದ । ಒಳಗೊಂಬುದೀ ಜಲಧಿ । ಛಲದಿಂದ ತೋರು ಭುಜ । ಬಲಪರಾಕ್ರಮವ ॥ ೨ ॥ ಎನೆ ಹಸಾ ದವೆನುತ್ತ । ಹನುಮ ಹಾರಿದ ಗಿರಿಯ । ಕೊನೆ ಬೆರಳಿನಿಂದಾಗಿದ । ಘನ ವೇಗದಿಂದ ॥ ೩ ॥ ಅಂಬುಧಿಯ ನೆತ್ತಿಯೊಳ । ಗದಸಿಳುಹಿ ರಾಮನ ಪ । ದಾಂಬುಜಕೆ ಕೈಮುಗಿವು । ತದನು ಬಂಧಿಸಿದ ॥ ೪ ॥

ಸಾಂಗತ್ಯ ರಾಗ - ರೂಪಕತಾಳ

ಸುರರು ಪೂಮಳೆಗಳ ಕರೆದರು ರಾಮನ । ಚರಣಡೆಡೆಗೆ ನಮೋ ಎನುತ ॥ ಭರದಿಂದ ಶತಬಲಿ ಮತ್ತೊಂದು ಗಿರಿಯನು । ಶರಧಿಯೊಳಿಟ್ಟು ಬೊಬ್ಬಿರಿದ ॥ ೧ ॥ ನುಂಗಿತು ತಿಮಿಯೆಂಬ ಮೀನು ಪರ್ವತವ ತಿ । ಮಿಂಗಲ ವದನು ನುಂಗಿದುದು ॥ ಸಂಗಡ ತಿಮಿಯ ತಿಮಿಂಗಿಲ ಗಿರಿ ಸಹ । ನುಂಗಿತು ಮತ್ತೊಂದು ಮಕರ ॥ ೨ ॥ ವೃಷಭ ಕೇಸರಿ ಗಜಗವಯ ಗವಾಕ್ಷ ಪ । ನಸರು ಒಂದೊಂದು ಪರ್ವತವ ॥ ವಸುಧೆಯಿಂದೆತ್ತಿ ಸಮುದ್ರದೊಳಿಡಲು ಥ । ಕ್ಷಿಸಿ ಬಾಯ ಕಳೆವ ಮೀನುಗಳ ॥ ೩ ॥ ನೆಗಳು ಆನೆಗಳು ಕೋಣಗಳು ಎಮ್ಮೆಗಳು ನಾ । ಯಿಗಳು ಮೀನುಗಳ ತಂಡಗಳು ॥ ಬಗೆ ಜೀವ ಜಂತು ಗಳೀ ಧ್ವನಿಯ ಕೇಳಿ । ಅಗಣಿತವಾಗಿ ಕೂಡಿದುವು ॥ ೪ ॥ ದಡ ಪರಿಯಂತ ಬಾಯ್ಮಳೆದು ಚಪ್ಪರಿಸುತ್ತ । ಬಿಡುಗಣ್ಣ ಜಲದ ಪ್ರಾಣಿಗಳು ॥ ಕಡುಹಿ ನಬ್ಬರಕಂಜಿ ಸುಗ್ರೀವ ಅಜಸುತ । ನೊಡನೆ ಪೇಳಿದನೊಂದು ಮಾತ ॥ ೫ ॥

ದ್ವಿಪದಿ

ಕಂಡಿರೇ ಜಾಂಬವರು ಕಡುವಿಚಿತ್ರಗಳ । ತಂಡತಂಡದ ಗಿರಿಯ ತಿಂಬ ಮೀನುಗಳ ॥ ೧ ॥ ನೂತನವಿದೇನೆಂದು ನೀವು ಕಂಡುದನು । ಮಾತನಾಡಲು

ಬೇಕು ಮಮತೆಯೊಳಗಿದನು ॥ ೨ ॥ ಸಾಧಿಸುವುದೆಂತಿದನು ಸೇತುಬಂಧನವ । ಹಾದಿಯನು ತೋರಿರ್‍ಕೈ ಹಿರಿಯರಭಿಮತವ ॥ ೩ ॥ ಎಂದ ಮಾತನು ಕೇಳು ತೆಲ್ಲರೊಡನಾಡಿ । ಬಂದರಾ ನಳನೆಡೆಗೆ ಭಾಸ್ಕರಜ ಕೂಡಿ ॥ ೪ ॥

ಕೇದಾರಗೌಳ ರಾಗ - ಅಷ್ಟತಾಳ

ತಂದು ತಂದಡಕುವ ಪರ್ವತಗಳನೆಲ್ಲ । ತಿಂದ ಮೀನುಗಳ ನೋಡಿ ॥ ಬಂದನು ನಳ ರಾಮನೆಡೆಗೆ ಹೇರಂಬನ । ನಿಂದು ಪ್ರಾರ್ಥಿಸಿದರೆಲ್ಲ ॥ ೧ ॥ ಸಕಲ ವಿಘ್ನಗಳೆಲ್ಲ ಪರಿಹರಿಸಯ್ಯ ಮೂ । ಷಕ ರೂಢ ನೀನೆ ಎಂದು ॥ ಭಕುತಿಯಿಂದೆರಗಿ ಬೇಡುವೆವು ನೀರೊಳಗೆ ಕಂ । ಟಕ ಬಾರದಂತೆ ಕಾಯೊ ॥ ೨ ॥

ಸಾಂಗತ್ಯರಾಗ - ರೂಪಕತಾಳ

ಕಟ್ಟುವ ಭಣಿತೆಯಿದಲ್ಲ ಸಮುದ್ರವ । ಗಟ್ಟ್ಯಾಗಿ ಇರಬೇಕು ಸೇತು ॥ ಕಟ್ಟನ ಮೊದಲಿಂದ ಬುಡವ ಶೋಧಿಸಿಕೊಂಡು । ಬೆಟ್ಟವನಿಡಲಿ ಕಲ್ಲಿನಲಿ ॥ ೧ ॥ ಶತಯೋಜನಗಲಕೆ ವಿಸ್ತೀರ್ಣ ಪಾಷಾಣ । ಗತಿಯಿಂದ ಸೂತ್ರ ಸಂಕಲೆಯ ॥ ಜತೆಯಾದ ಭದ್ರಗಟ್ಟಣೆ ಸಾರಣೆ ಧಾತು । ಮಿತಿಯಿಂದ ನಡೆಯಲಿ ಸೇತು ॥ ೨ ॥ ತರುವವರವರು ತಂದರೆಯದಾ ಗಿರಿಗೆ ಕೈ । ಸರಿವವರವರು ಕಲ್ಲಿವರು ॥ ಸರಪಣಿ ಸಂಕೋಲೆ ಇವರಿವರೆಂಬಂತಾ । ಭಣತೆಯ ವಿಂಗಡಿಸಿದರು ॥ ೩ ॥ ದಶಯೋಜನಗಲಕ್ಕೆ ವಿಸ್ತೀರ್ಣ ಪಾಷಾಣ। ವಿಸರವನೆಡೆಗೆಡೆಗಿಟ್ಟು ॥ ಕುಶಲದಿಂದುನ್ನತ ಪರ್ವತಗಳನೆತ್ತಿ । ರಿಸಲೆಂದು ನಳಗೆ ನೇಮಿಸಿದ ॥ ೪ ॥ ಬೆಟ್ಟವ ತರುವವರಿವರು ತಂದರೆ ಕೆಳ । ಗಿಟ್ಟಾ ನಳನ ಕರದೊಳಗೆ ॥ ಕೊಟ್ಟು ಬಂಧಿಸುವವರಿವರೆಂದು ಸುಗ್ರೀವ । ಕಟ್ಟಳೆ ಗಳನು ಮಾಡಿಸಿದ ॥ ೫ ॥ ಖಳರಿಂದೆಡರು ಬಾರದಂದದೊಳಾಚೆಯ । ಬಳಿಯಲಿಟ್ಟರು ವಿಭೀಷಣನ ॥ ಜಲಧಿಯ ಮಥನಕ್ಕೆ ನೂರ್ಮಡಿಯಲಿ ಬೊಬ್ಬೆ । ಗಳಲಿ ಕಟ್ಟಿದರು ಕಟ್ಟೆಗಳ ॥ ೬ ॥ ಬಂಗಾಳ ಗೌಳ ಗುಜ್ಜರ ವಂಗ ಕೊಂಗ ಕಾ । ಳಿಂಗ ಕಾಂಭೋಜ ದೇಶಗಳ ॥ ಸಿಂಗಳ ದ್ವೀಪ ದ್ವೀಪಂಗ ಳೊಳಿಹ ಪರ್ವ । ತಂಗಳ ತಂದಡಕಿದರು ॥ ೭ ॥ ಒಂದರ ಮೇಲೊಂದು ತಂದು ತಂದಿಡುವಾಗ । ಲಂದಿನ ನೀರ ಘರ್ಜನೆಯು ॥ ಇಂದ್ರಲೋಕಕೆ ಮುಟ್ಟಲಾಗ ಸರ್ವನಿಯು ಘೇ । ಯೆಂದರಾಕಾಶದಿ ಸುರರು ॥ ೮ ॥

ಕೊಟ್ಟ ಪರ್ವತಗಳ ಕೊಡುವ ಪರ್ವತಗಳ । ಕಟ್ಟಿಗೆ ಹವಣಿಸಿ ಕಟ್ಟಿ ॥
ತಟ್ಟನೆ ಗಿರಿ ಬೇಗ ತರಲಿಲ್ಲವೆಂಬ ನಿ । ನ್ನೆಟ್ಟರ ಶೂರನೊ ನಳನು ॥ ೮ ॥

**ವಾರ್ಧಿಕ**

ಎನ್ನ ಮೇಲತಿ ಪ್ರೀತಿಯಿಂದ ಲಕ್ಷ್ಮಣನಂತೆ । ಮನ್ನಿಸುವ ಶ್ರೀರಾಮ ನೆಂದೆನುತಲೆನಗೆ ಚೈ । ತನ್ಯವುಳ್ಳಷ್ಟು ಸಹಸವ ಪಡುವೆನೆಂದು ಕಪಿ ಚಿಣ್ಣ ನಂಗದ ನಡೆದನು ॥ ತನ್ನೊಳಗೆ ತಾನೆ ಯೋಚಿಸಿಕೊಂಡು ನಡೆದು ಮು । ಕ್ಕಣ್ಣನಿಹ ಗಿರಿಯನೀಕ್ಷಿಸಿ ಬಳಿಕಲಾಗಲಾನ್ । ಸಣ್ಣವನು ನಮಗಿದೇ ಸಾಕೆಂದು ಪಿಡಿದ ಬಗೆ ಶಿವ ಗಿರಿಜೆಗಿಂತೆಂದನು ॥

**ಕೇದಾರಗೌಳ ರಾಗ - ಅಷ್ಟತಾಳ**

ನೋಡಿದೆಯಾ ಗೌರಿ ರಾಮನಾಟಕನನೀ । ರೂಢಿಯೊಳತಿಶಯವು ॥ ಕಾಡ ಮಂಗಗಳೆಲ್ಲ ಮನುಜರಂದದಲಿ ಪೇ । ಚಾಡುವೇದದ ರೀತಿಯ ॥ ೧ ॥ ನಾಡ ಪರ್ವತವೆಲ್ಲ ಕಿತ್ತುಕೊಂಡೊಯ್ದು ಬೀ । ಸಾಡಿ ಸಮುದ್ರದಲಿ॥ ಕೇಡು ಬಂತಿದಕೆ ನೋಡುವ ಬಾರೆಂದೆನುತಲಿ । ಜೋಡಾಗಿ ನಡೆತಂದರು ॥ ೨ ॥ ತರಳ ನೀನಾರ ಹೇಳಿಕೆಯಿಂದ ನಾವಿದ್ದ । ಗಿರಿಯ ಶಕ್ತಿಯಲಿ ಕೀಳ್ವೆ ॥ ಮರುಳೆ ನಮ್ಮೊಡನಿರ್ದ ಗಣಗಳ ಪರಿಯ ನೀ । ನರಿಯೆ ಬಿಟ್ಟತ್ತ ಸಾರೋ ॥ ೩ ॥ ಯಾರು ಹೇಳಿದರೆಂದು ನಮ್ಮನು ಕೇಳ್ವ ವಿ । ಚಾರವೆಲ್ಲಿಂದ ಬಂತು ॥ ಶ್ರೀರಾಮನವರು ಕಟ್ಟಿಸುವ ಸೇತುವೆಗಾಗಿ । ಹೋರುವೆನಿದರೊಡನೆ ॥ ೪ ॥ ಕಪಿಬಾಲ ಕೇಳು ಕೈಲಾಸದ ಮಹಿಮೆಯ । ಗುಪಿತವನರಿಯೆ ನೀನು ॥ ತ್ರಿಪುರಾರಿ ನಾನು ಪಾರ್ವತಿಯೆಂದಡಿವಳೀಗ । ಕಪಟ ಮಾತಲ್ಲವಯ್ಯ ॥ ೫ ॥ ಹರನಾದಡೇನು ಶಂಕರನಾದಡೆನಗೆ ಗೋ । ಚರವಿಲ್ಲ ಮತ್ತೋರ್ವರ ॥ ತರಣಿನಂದನನಾಜ್ಞೆ ಕಂಡ ಪರ್ವತಗಳ । ಹೊರುವುದೆ ಛಲ ನಮಗೆ ॥ ೬ ॥

**ದ್ವಿಪದಿ**

ಹೇ ಕಪೀಶ್ವರ ಕೇಳು ಎನಗು ರಾಮನಿಗು । ಏಕ ಸ್ವಭಾವಗಳು ತಿಳುವಿಲ್ಲ ನಿನಗೆ ॥ ೧ ॥ ಹರಿಹರರು ನಮ್ಮೊಡನೆ ಭೇದವಿಕ್ಕಿದರೆ । ಧರೆಯ ಜನರಿಗೆ ನರಕ ದೊರೆವುದಿನ್ನರರೆ ॥ ೨ ॥ ರಾಮ ನಾರಾಯಣನು ನರನಾಗಿ

ಬಂದು । ಆ ಮಹಾ ರಾಕ್ಷಸರ ಕೊಲುವ ಬಗೆಗೆಂದು ॥ ೩ ॥ ಶಿವ ನಾನು ಎನಗೆ ಸತಿಯಿವಳು ಗಿರಿಜಾತೆ । ಪ್ಲವಗಾಧಿಪತಿ ಕೇಳು ಬದಲೇನು ಮತ್ತೆ ॥ ೪ ॥

ಭೈರವಿ ರಾಗ - ಝಂಪೆತಾಳ

ಇಂದು ಶೇಖರನೆತ್ತ । ಇನಕುಲಾಧಿಪನೆತ್ತ । ಹೊಂದಿಕೆಯ ಮಾತಲ್ಲ । ಹೊಗಳಿ ಫಲವಿಲ್ಲ ॥ ೧ ॥ ಎರಕವಾದರೆ ನೀನು । ಎನಗೆ ಮತ್ಸರವೇನು । ತರಿಸೊಂದು ಗುರುತವನು । ತಿರುಗಿ ಪೋಗುವೆನು ॥ ೨ ॥ ಹೊರತಾಗಿ ಮಾತಿಲ್ಲ । ಹೋಗುವವ ನಾನಲ್ಲ । ಬರಿಯ ಮಾತುಗಳಿಂದ । ಬಳಲಲೇಕೆಂದ ॥ ೩ ॥

ವಚನ

ಇಂತೆಂದು ಅಂಗದನಾಡಿದ ಮಾತಿಗೆ ಸಂತೋಷಚಿತ್ತನಾಗಿ ಶ್ರೀ ಪರಮೇಶ್ವರನು ತಾನೇ ರಾಮಮೂರ್ತಿಯಹಾಗಿರಲದಂ ತಾರಾತ್ಮಜ ಕಂಡು ಬೆರಗಾದನು ॥

ವಾರ್ಧಿಕ

ರಾಮಾವತಾರವನು ನೆರೆಕಂಡು ಬೆರಗಾಗಿ । ಆ ಮಹಾ ಪರ್ವತವ ನಲ್ಲಿಯೇ ಬಿಟ್ಟದರ । ಸಾವಿರಾಪ್ಪದಲ್ಲಿರುವ ಉಪಪರ್ವತಂಗಳನು ಧರಿಸು ತಂಗದ ನಡೆದನು ॥ ಭೂಮಿಯಂ ಪೊತ್ತು ತಂದನೊಯೆಂಬ ತೆರನಂತೆ । ರಾಮ ಲಕ್ಷ್ಮಣರು ಪ್ರಸಂಗಿಸಲು ಬಳಿಕ ಸು । ಪ್ರೇಮದಿಂ ನಳನ ಕೈಯಿಂದ ನಡೆದುದು ಸೇತು ದಶಯೋಜನಾಂತರದೊಳು ॥

ಸಾಂಗತ್ಯ ರಾಗ - ರೂಪಕತಾಳ

ಬಾಲನಂಗದನ ಸಾಹಸವನ್ನು ನೆರೆಕಂಡು । ನೀಲನುತ್ತರಕಾಗಿ ಬಂದು ॥ ಕೇಳಲು ಮಂದರಗಿರಿಯನ್ನು ಸುರರಂಜಿ । ಕೇಳಿದರೀ ಕಪೀಶ್ವರನ ॥ ೧ ॥ ತರುಚರಾಧಿಪ ಕೇಳಿನ್ನರಿಯೆಯ ಮಂದರ । ಗಿರಿಯ ಸೌಭಾಗ್ಯ ಲಕ್ಷಣವ ॥ ಸುರರಿಗೆ ಬೇಕಾದ ನಿರುಪಮ ವಸ್ತುವಿ । ಲ್ಲಿರುವುದೆಂದೆಂಬ ವಾರ್ತೆಗಳ ॥ ೨ ॥ ಭೂಮಿಯೊಳತಿರೇಕವಾದ ದುಶ್ಚರ್ಯವ । ರಾಮ ಸೇವಕರು ಮಾಡುವರೆ ॥ ಆ ಮಾತ ಕೇಳದೆ ಕೇಳುತಿರಲು ನಾರ । ದಾಮುನಿ ಬಂದು ಬೋಧಿಸಿದ ॥ ೩ ॥ ಮತ್ತಾಗ ಮುನಿಯ ಮಾತಿನ ಮೇಲೆ ಬಿಟ್ಟು ಆ । ಸುತ್ತಣ ಶೃಂಗವ ಕೆಡಿಸಿ ॥

ಪೊತ್ತುಕೊಂಡಯ್ತೊಂದು ಕೊಡಲು ಸಾಗಿತು ಸೇತು । ಪತ್ತು ಯೋಜನದಳತೆ ಯಲಿ ॥ ೪ ॥

ಬಿಲಹರಿ ರಾಗ - ಏಕತಾಳ

ಇವರ ವಿಕ್ರಮವೊಂದು ಕಡೆಗಿಡು ಕಮಲಸಂ । ಭವಜಾತ ಮನದಲ್ಲಿ ನೆನೆದಂಥ ಪವಣ ॥ ತವಕದಿಂದಿಂದು ವಿಂಧ್ಯವ ದಾಟಿ ನಡೆದು ಜಾಂ । ಬವರು ಸಂಧಿಸಿಕೊಂಡರಾ ಓಮಗಿರಿಯ ॥ ೧ ॥ ನೆಗಬಿ ಜೋಲುವ ಹುಬ್ಬು ಗೂಡಲನಗಲಿಸಿ । ವಿಾಗೆ ತುದಿ ನೋಡಲು ನೋಡಿದರಿ ಅಬ್ಬಬ್ಬ ॥ ಹೆಗ ಲೊಳು ಚೈತನ್ಯವಿಲ್ಲ ವೃದ್ಧರು ನಾವು । ನಗುವರು ನಗಲಿ ನಮಗೆ ಸಾಕು ॥ ೨ ॥

ವಾರ್ಧಿಕ

ಎರಡು ಸಾವಿರ ಯೋಜನಗಳಗಲ ಮತ್ತೆ ವ । ತ್ತೆರಡು ಸಾವಿರ ಯೋಜನೋನ್ನತದ ಪರ್ವತವ । ನೆರಡು ಕೈಯಿಂದಲುಗೆ ಬೇರುಡಿಯೆ ಸಪ್ತ ಸಾಗರ ಸಹಿತ ನೆಲವದುರಿತು ॥ ಇರಲಿದೇನಾಶ್ಚರ್ಯವೆಂದು ಮೋನಕೆ ದೇವಿ । ಬೆರಗಾಗಿ ಮನಗುಂದಿ ಭರದಿಂದ ನಡೆತಂದು । ಓರಿಯುವರು ನೆನೆದ ಕಟ್ಟಾಳು ತವ ಲೇಸೆಂದು ಕಡುಮನದೊಳಿಂತೆಂದಳು ॥

ಬಿಲಹರಿ ರಾಗ - ಏಕತಾಳ

ಏಕಿದ ಕೇಳುವೆ ವಿಕಟೇಶ್ವರನೆ ಓ । ನಾಕಿ ಶಂಕರಗೆ ಬೇಕಾದವನಿವನು ॥ ಲೋಕದೊಳಗೆ ಬಲು ಹಿರಿಯರಾದವರಿಂಥ । ಕಾಕುಕೃತ್ಯಗಳನಾಚರಿಸುವುದುಂಟೆ ॥ ೧ ॥ ಶಿವನಿಗೆ ಮದುವೆಯಾದವಳೆನ್ನ ಮಗಳು ಮ । ತ್ತಿವನೆನ್ನ ಕಮಾನು ನಾನು ಮೋನಕೆಯು ॥ ದಿವಿಜರು ಸಹಿತಲಂಜುವರೆಮ್ಮ ಬಳಗಕ್ಕೆ । ಕ್ಷಿತಿಗಾಧಿಪತಿ ನೀನೆ ನೋಡು ಸನ್ಮತದಿಂದ ॥ ೨ ॥ ಮಾರವೈರಿಯು ಚಿತ್ತ ದೂರವಾಗುವುದೆಂದು । ಬೇರುಡಿಯದ ಹಾಗೆ ಮೆಲ್ಲಗಿರಿಸಿ ॥ ನಾರಿ ಹೋಗೆ ಕೃಷ್ಣ ಹೋಗೆನ್ನುತಲಿರ್ದ । ಭೂರಿ ಪರ್ವತಗಳ ಬಿಡಿಸಿದನಜಸುತ ॥ ೩ ॥ ಶಿರದೊಂಳಿಟ್ಟದ್ರಿ ಭುಜವೆರಡರೊಳ್ ನಾಲ್ಕು ನಾಲ್ಕು । ಕರದೊಳೊಂದೊಂದು ಕಂಕುಳೊಳಗೊಂದೊಂದು ॥ ಚರಣದೊಳುರುಳಿಸಿ ಬಹುದ ಕಾಣುತಲಾಗ । ಬೆರಳ ಮೂಗಿನೊಳಿಟ್ಟು ಶಿರವ ತೂಗಿದ ರಾಮ ॥ ೪ ॥ ಮೊದಲಿಗರವರು

ಮಾಡಿದ ಕಷ್ಟಕತಿ ಮೆಚ್ಚಿ । ಇದಿರು ಬಂದಾ ಕ್ಷಣ ಭಯಭಕ್ತಿಯಿಂದ ॥ ಮುದದಿ ಬೊಬ್ಬಿಡುತ ಕಟ್ಟೆಗೆ ಸೇರಿಸಲು ಸೇತು । ವೊದಗಿತು ಹಲವು ಯೋಜನ ದಶಪರಿಯಂತ ॥ ೫ ॥

### ಸುರುಟಿ ರಾಗ - ಆದಿತಾಳ

ಈಪರ ಬಗೆಯೆಲ್ಲ ಕಂಡನು ಪ್ರಾ । ಣೇಶನ ಸುತ ಹನುಮಂತ ॥ ಈ ಸಮಯದಲಿ ಸುಮ್ಮನೆ ಇದ್ದರೊಡೆಯಗೆ । ಬೇಸರಾಗುವುದು ಚಿತ್ತದಲಿ ॥ ೧ ॥ ಖತಖೇದನ ದಾಟಿ ಬಂದು ಹತ್ತಿರ ನಿಂದು । ಕಂಡನು ಮೇರು ಪರ್ವತವ ॥ ಪುಂಡರೀಕಾಕ್ಷನ ಸೇವೆಗೀ ಗಿರಿಯನ್ನು । ಕೊಂಡೊಯ್ದು ಕೊಡೆ ಹೆಚ್ಚಾಗುವುದು ॥ ೨ ॥ ಲಕ್ಷ ಯೋಜನದುದ್ದ ಮೇಲೆ ನೋಡಿದ ರೊಂದು । ಲಕ್ಷಯೋಜನದ ವಿಸ್ತೀರ್ಣ ॥ ಲಕ್ಷ್ಮಣಾಗ್ರಜಗೆನ್ನ ಮೇಲಿಹ ಮಮಕಾರ । ರಕ್ಷಿಸಿಕೊಂಬೆನಿದರೊಳಗೆ ॥ ೩ ॥ ಅಬ್ಬರಿಸುತ ಕೈಯ ಚಪ್ಪರಿಸುತ ಮೈಯ । ಉಬ್ಬಿ ಶಕ್ತಿಯೊಳಲುಗಿದರೆ ॥ ತಬ್ಬಿಬ್ಬಾಯಿತು ಸಪ್ತಲೋಕವಾಸನದಿಂದ । ಎಬ್ಬಿಸಿತಬುಜ ಸಂಭವನ ॥ ೪ ॥

### ವಾರ್ಧಿಕ

ಪ್ರಳಯ ಕಂಪನದಿಂದ ಸಡಿಲಿತೆನೆ ಸೇತು ಕಳ । ವಳ ಬೇಡ ಹನುಮಂತ ನಮ್ಮ ಸೇವೆಗೆ ವಾಳ್ಪ । ಕೆಲಸವಿದು ಬೆದರಲೇಕರೆನಿಮಿಷ ಮಾತ್ರದಲಿ ತಿಳಿಯಬಹುದೇದ ರಾಮ ॥ ನಳಿನ ಸಂಭವನಿತ್ತಲಿರದು ರಾಮನ ಕೆಲಸ । ದೊಳವು ಲೇಸೆಸುತ ಹತ್ತಿರ ಬಂದು ನೋಡಿದನು । ಭಳಿರೆ ಹನುಮಂತ ಮೆಚ್ಚಿದೆ ನಿನಗೆ ನೀ ಮೂರ್ಖರೊಳಗೆ ಸಲೆ ಜಾಣನಹುದೊ ॥

### ಭಾಮಿನಿ

ಹರ ಹರಾ ಬ್ರಹ್ಮಾಂಡ ಕೋಟಿಯು । ತರಹರಿಸಿತಂಬುಧಿಗಳೆಲ್ಲವು ಭರದಿ ಕಟ್ಟಿದ ಸೇತು ಸಡಲಿತು ರಾಘವೇಶ್ವರನ ॥ ಚರಣ ದಾಸ್ಯಕೆ ಕೊರತೆ ಬರುವುದ । ಪರಿಯದವನೇ ಸಾಕು ಬಿಡು ಈ । ಗಿರಿಯನೆಂದಜಸೂನುವಿಗೆ ಕೇಸರಿಜನಿಂತೆಂದ ॥

### ಕೇದಾರಗೌಳ ರಾಗ - ಆದಿತಾಳ

ಜಾಣ ನೀನಹುದೊ ಕಪಿ । ನಿನ್ನಂಥ ಪ್ರ । ವೀಣರಿಲ್ಲೀ ಜಗದಿ ॥ ಕಾಣಲಂಜುವರು ಗೀ । ರ್ವಾಣರೀ ಗಿರಿಯನ್ನು । ಪ್ರಾಣದಿಂದ ನೀ ಕೀಳುವೆನೆಂಬ ವಿ । ಧಾನವೊಳ್ಳಿತದಕೇನು ಮತ್ಸರವೆ ॥ ಜಾಣ ॥ ೧ ॥ ಲೋಕಲೋಕಗಳಿಗೆಲ್ಲ । ಆಧಾರವಾದ । ಶ್ರೀಕರ ಭೂಧರವ ॥ ನೀ ಕೀಳಲಾಗಿ ಮತ್ತಿ । ನ್ನೇಕೆ ಸೇತುಗಳಲ್ಲಿ । ಸಾಕರಿಸಿತು ಬ್ರಹ್ಮಾಂಡ ಪ್ರತಿಷ್ಠೆಯು । ಜಾಕರಿಸಂತೆಮಾಗೀ ಕೆಲಸದಲಿ॥ ಜಾಣ ॥ ೨ ॥ ಚಂದ್ರ ಸೂರ್ಯಾದಿ ಗ್ರಹರಾ ಕಾಲದ ಚಕ್ರ । ಹೊಂದಿರ್ಪುದೀ ಪ್ರಪಂಚ ॥ ಮಂದಿರವಿದನು ನೀ । ನಿಂದು ಕಿತ್ತಿಡಲು ಮ । ಹೇಂದ್ರ ಮುಖ್ಯ ಸುರವೃಂದ ಜಾನಕಿ ರಾಮ । ಚಂದ್ರ ಸೇತು ಸಹ ಮುಂದೆಲ್ಲಿಹುದ್ಯ ॥ ಜಾಣ ॥ ೩ ॥

### ಭೈರವಿ ರಾಗ - ಝಂಪೆತಾಳ

ಸರಸಿಜೋದ್ಭವ ಕೇಳು । ಸಾಕು ಕೋಪಿಸಬೇಡ । ಅರಿತುಕೊಂಡೆನು ನಾನು । ಅಂತರಂಗವನು ॥ ೧ ॥ ಬಾಲವನು ನೆಲೆಗೊಳಿಸಿ । ಬಳಿಕೊಯ್ಮೆನೀ ಗಿರಿಯ । ನೂಳಿಗವ ಮಾಗಿಸಿ ತಹೆ । ಹಾಳಾಗದಂತೆ ॥ ೨ ॥ ಎಂಬ ಮಾತಿವ ಮೇಲೊ । ಡಂಬಡಿಸಿದನು ಕಮಲ । ಸಂಭವನು ಕೈವಿಡಿದು । ನಂಬಿಸಿದ ನಾಗ ॥ ೩ ॥ ನಾಳೆ ನಮ್ಮರಸು ತನ । ಪಾಲಿಸುವ ನೀನಾದ । ಮೇಲೆ ನಾ ನಿನ್ನದನು ಪೇಳಲಿನ್ನೇನು ॥ ೪ ॥ ತನ್ನ ಮನ ಬದುಕುಗಳ । ತಾವೆ ಕೆಡಿಸುವರುಂಟೆ । ಇನ್ನು ನೀನೇ ನೋಡು । ನಿನ್ನೊಳಗೆ ತಿಳಿದು ॥ ೫ ॥

### ವಾರ್ಧಿಕ

ಮಾತಿನೊಳೊಡಂಬಡಿಸಿ ಕಮಲಸಂಭವನವನ । ಪ್ರೀತಿಯಲಿ ಸಂತಯ್ಸಿ ಇತ್ತ ಮಹಮೇರು ಸಂ । ಗಾತದೊಳಗಿರುವಂಥ ದ್ರುಪದ ಕಾಂಚನ ಬಡಿಸಿ ಪೊತ್ತು ನೂರೆಣಿಕೆಯಿಂದ ॥ ವಾತಸಂಭವನ ಸೇವಾಮಹಿಮೆಗೆಂದು ರಘು । ನಾಥ ಲಕ್ಷ್ಮಣರು ಪ್ರಸಂಗಿಸಲು ನಳನ ಕೈ । ಯಾತುವಿಗೆ ವಸರಿಸಿತು ಹನುಮ ತಂದವದರೊಳಗೆ ಸಂಪೂರ್ಣ ಮಾಯ್ತು ಸೇತು ॥ ೧ ॥ ಮಾತಿನೊಳೊಡಂಬಡಿಸೆ ಹನುಮಂತ ಕಮಲ ಸಂ । ಜಾತನಂ ಬೀಳ್ಕೊಂಡು ಮೇರುಗಿರಿ ಪ್ರಾಂತ್ಯದೊಳ್ । ಖ್ಯಾತ ಮಾದುವ ಶೃಂಗಗಳನದಂ ಬಡಿಸಿ ಹೊತ್ತನು

ಸೂರರೆಣಿಕೆಯಿಂದ ॥ ಭೂತಳವ ಕಿತ್ತು ತಂದನೊ ಎಂಬ ತೆರದಿ ರಘು । ನಾಥ ಲಕ್ಷ್ಮಣರು ಕಂಡತಿ ಚೋದ್ಯಮಂ ಪಡಲು । ವಾತ ಸಂಭವ ತಂದು ಕೊಟ್ಟ ಪರ್ವತದಿಂದ ಸೇತು ಸಂಪೂರ್ಣವಾಯ್ತು ॥ ೨ ॥

### ಸಾಂಗತ್ಯ ರಾಗ - ರೂಪಕತಾಳ

ತುಂಬಿತು ಸೇತು ಹೋ ಹೋ ಸಾಕು ತರಬೇಡ । ವೆಂಬ ಬೊಬ್ಬೆಗಳ ಸನ್ನೆಯಲಿ ॥ ಮುಂಬರಿದಲ್ಲಲ್ಲಿ ಬಿಸುಟು ಭಾನುಜನ ಪ । ದಾಂಬುಜ ಕಭಿನಮಿಸಿದರು ॥ ೧ ॥ ಕಲ್ಲೆಡೆಯಲಿ ಮಣ್ಣು ಜರಿದು ಬೀಳದ ಹಾಗೆ । ಅಲ್ಲಲ್ಲಿ ಭದ್ರ ಕಾಣಿಸುತ ॥ ಚೆಲ್ಲುತ್ತ ಅಲೆಬಡೆವಲ್ಲಿ ಪಾಷಾಣದ । ಕಲ್ಲ ಸಂಕಲೆಯ ಸಿಕ್ಕಿದರು ॥ ೨ ॥ ಪಂಕಜಾಂಬಕನಿತ್ತ ಪಾದದ ಬಳಿಯಿಂದ । ಲಂಕೆಯ ದಡ ಪರಿಯಂತ ॥ ಸಂಕೋಲೆ ಸರಪಣಿ ಪಾಷಾಣ ಮಣ್ಣಿಂದ । ಲಂಕರಿಸಿತು ಸೇತು ನಡೆದು ॥ ೩ ॥ ಮಣ್ಣಿ ಸಾರಣೆ ಮೇಲುಗಟ್ಟು ತೋರಣದಿಂದ । ಚಿನ್ನದ ಕಳಶ ಕನ್ನಡಿಯ ॥ ಚೆನ್ನಾಗಿ ರಚಿಸಿದ ಮಯ ವಿಶ್ವಕರ್ಮರ । ಬಿನ್ನಾಣ ಮೆಂತು ಪೆಚ್ಚಿದುದು ॥ ೪ ॥ ಮೊಳಗಿತು ವಾದ್ಯಸಂದಣಿ ಭೇರಿ ಸುರಪುರ । ದೊಳಗೆ ಕಟ್ಟಿದರು ತೋರಣವ ॥ ನಳಿನಲೋಚನ ರಾಮ ಜಯ ಜಯ ವೆಂದು ಪೂ । ಮಳೆಗಳ ಸುರಿದರಂಬರದಿ ॥ ೫ ॥

### ಭಾಮಿನಿ ಷಟ್ಪದಿ

ಕುಶನೆ ಕೇಳೈ ಪುಷ್ಯ ಶುದ್ಧದ । ದಶಮಿಯಲಿ ಪ್ರಾರಂಭವಾಯಿತು । ಪಸರಿಸಿತು ಸಂಪೂರ್ಣವಾಗಿ ತ್ರಯೋದಶಿಯೊಳಂದು ॥ ವಸುಧೆ ಬೆಳಗಿದ ಳೆಂಟು ದೆಸೆಯಲಿ । ಕುಸುಮ ಮಳೆಗಳ ಸುರಿದರಮರರು । ಪೆಸರಿಡಿಸಿಶೀ ಸಂಧಿ ಕಣ್ವಪುರೇಶನೊಲವಿನಲಿ ॥

# ಅಂಗದ ಸಂಧಾನ

## ಪಾತ್ರಗಳು

ರಾಮ
ಲಕ್ಷ್ಮಣ
ವಿಭೀಷಣ
ಸುಗ್ರೀವ
ಹನುಮ
ಅಂಗದ
ಜಾಂಬವ
ನೀಲ
ಕಪಿಗಳು
ರಾವಣ
ಪ್ರಹಸ್ತ
ಇಂದ್ರಜಿತು
ಶುಕ
ಸಾರಣ
ವಿದ್ಯುಜ್ಜಿಹ್ವ
ರಾಕ್ಷಸ ಭಟರು
ಸೀತೆ
ತ್ರಿಜಟೆ

---

# ಅಂಗದ ಸಂಧಾನ

**ಶಾರ್ದೂಲವಿಕ್ರೀಡಿತಂ**

ಶ್ರೀರಾಮಂ ದಿವಿಜೌಘಸನ್ನುತಪದಂ ಸೀತಾಮನೋಹ್ಲಾದಕಂ ।
ಕಾರುಣ್ಯಾಂಬುಧಿ ಭಕ್ತವತ್ಸಲಹರಿಂ ಸೌಮಿತ್ರಿ ಸಂಸೇವಿತವ್ ॥
ಮಾರೀಚಾದಿ ಸಮಸ್ತ ದೈತ್ಯ ಮಥನಂ ತ್ರೈಲೋಕ್ಯ ಸಂರಕ್ಷಕಂ ।
ವೀರಂ ಪಾವನಪುಣ್ಯನಾಮಚರಿತಂ ವಂದೇ ಸದಾ ರಾಘವವ್ ॥

**ಸೌರಾಷ್ಟ್ರ ರಾಗ - ತ್ರಿವುಡೆತಾಳ**

ಕುಶನೆ ಕೇಳ್ಳೆ ಪುಷ್ಯ ಶುದ್ಧದ । ದಶಮಿಯುಲಿ ಪ್ರಾರಂಭವಾಯಿತು । ಉಸಿರಲದು ಸಂಪೂರ್ಣ ವರ ತ್ರಯೋ । ದಶಿಯೊಳಾಯ್ತು ॥ ೧ ॥ ಆ ಕಪೀಂದ್ರರ ಸಹಸವೆಂತುಟೊ । ನಾಕು ದಿವಸದಿ ಸೇತು ನಡೆದುದು । ನಾಕ ದಲಿ ಬಹು ಭೇರಿ ಮೊಳಗಿತ । ನೇಕ ರವದಿ ॥ ೨ ॥ ಕೇಳು ಲವ ಮರು ದಿವಸದಲಿ ಕಪಿ । ಜಾಲ ಸಹಿತೈತಂದು ಶರಧಿಯು । ಮೂಲದೆಡೆಯಲಿ ನಿಂದ ರವಿಜ ವಿ । ಶಾಲದಿಂದ ॥ ೩ ॥ ದ್ವಿವಿದ ಶತಬಲಿ ಮೈಂದನಳ ಗಜ । ಗವಯ ಪನಸ ಗವಾಕ್ಷ ಕೇಸರಿ । ದಿವಿಜ ಪತಿಸುತತನುಜ ಸಾರಸ । ಭವ ತನುಜರು ॥ ೪ ॥ ಮರುತ ನಂದನ ಸುಮುಖ ದುರ್ಮುಖ । ವರ ಸುಷೇಣಾದ್ಯರಸು ವಿನಯದಿ । ಕರೆಕೊಳುತ ನಡೆತಂದು ರಾಮನೊ । ಳೊರೆದನಿಂತು ॥ ೫ ॥

**ಯದುಕಲಕಾಂಭೋಜಿ - ಅಷ್ಟತಾಳ**

ಆಯಿತು ಸೇತು ಕಟ್ಟಿ ರಾಜೇಂದ್ರ । ವಾಯುನಂದನ ತಂದ ಪರ್ವತ ವಿಡೆ ಪೂರ್ಣ ॥ ಪಾಯಿತು ॥ ಪ ॥ ಜಾಂಬವ ನೀಲ ಅಂಗದರ ಸಾಹಸವನೇ । ನೆಂಬೆ ಹತ್ತತ್ತು ಯೋಜನ ನಡೆದುದು ಸೇತು । ವೇಂಬ ಮಾತಿಗೆ ಶ್ರೀರಾಮ॥ ವಾನರರ ಕ । ದಂಬ ವೀಕ್ಷಿಸಿ ನಿಸ್ಸೀಮ । ಲಕ್ಷ್ಮಣನ ಮು । ಖಾಂಬುಜ ವನು ನೋಡಿ ನಗುತ ಸುಪ್ರೇಮ ॥ ಆಯಿತು ॥ ೧ ॥ ಸುರರ ಪಟ್ಟಣದಿಂದ ತರಿಸಿ ಬೇಕಾದಂಥ । ವರ ಸೋಪಸ್ಕರ ಫಲಾಹಾರವ ಕೊಟ್ಟುವ । ಚರದ ವಹಾತುಗಳ ಹೇಳಿ ॥ ಅನೇಕ ವಿ । ಸ್ತರದ ಸಂತಸವ ತಾಳಿ । ಮುಂದೇ ನೆಂದು । ತರಣಿ ನಂದನ ವಿಭೀಷಣರೊಳು ಕೇಳಿ ॥ ಆಯಿತು ॥ ೨ ॥ ಏಳಿ ಚಿತ್ತದೊಳಿದ್ದ ಹದನ ಮಾಡುವುದೆಂದು । ಹೇಳಿಕೊಳ್ಳಲು ಭಾನುಸುತ

ಮುಂತಾದವರು ಭೂ । ಪಾಲನಾ ಕ್ಷಣವೊಳಂದು ॥ ಸುಗ್ರೀವನ । ವಾಳಿಯ ಸಹಿತ ಬಂದು । ಕಟ್ಟಿರುವಂಥ । ಮೂಲದ ಬಳಿಯ ನೋಡುತ ರಾಮ ನಿಂದು ॥ ಆಯಿತು ॥ ೩ ॥

ಭೈರವಿ ರಾಗ - ಝಂಪೆತಾಳ

ಭಾನುನಂದನನೆ ಬಲು । ದಣಿದಿರುವರಿವರೆಲ್ಲ । ಕಾಣಲಸದಳವೆಮಗೆ। ಕಟ್ಟಿರುವ ಬಗೆಗೆ ॥ ೧ ॥ ಅಂಗದನ ಸಾಹಸಕೆ । ಮೆಚ್ಚದವರಾರುಂಟು । ಕಂಗೊಳಿಸಿ ಜಾಂಬವರು । ಕಷ್ಟಕೊದಗಿದರು ॥ ೨ ॥ ಹನುಮಂತ ಗುಣ ದಿಂದ । ಹಂಗನಿಕ್ಕಿಸಿಕೊಂಡ । ಪನಸನತಿ ಪೌರುಷವ । ನೆನೆಸಲಳವಲ್ಲ ॥ ೩ ॥ ಗಜಗವಯ ಶತಬಲಿಯ । ಗಂಭೀರ ತನಗಳಿಗೆ । ತ್ರಿಜಗದಲಿ ಜೋಡಿಲ್ಲ । ತ್ರಿನಯನೇ ಬಲ್ಲ ॥ ೪ ॥ ಸುಮುಖ ದುರ್ಮುಖರುಗಳ । ಸಾಹಸಗಳನು ಪೊಗಳ । ಲಮರಾಧಿಪಗೆ ಸಾಧ್ಯ । ವಲ್ಲವಿದು ವೇದ್ಯ ॥ ೫ ॥ ವೃಷಭ ಕೇಸರಿ ನೀಲ । ಹೃದಯದೊಳಗತಿ ಶೀಲ । ಪೆಸರ ಪಡೆದವರಿಂದ । ವಿಕ್ರಮ ಗಳಿಂದ ॥ ೬ ॥ ಏಸು ನಾ ಪೊಗಳಿದರು । ಎಲ್ಲವರ ರೀತಿಯೆ ವಿ । ಭೀಷಣನ ಗುಣಕಿನ್ನು । ಪುತ್ಥಳಿಯ ಹೊನ್ನು ॥ ೭ ॥ ನಳನ ಕಷ್ಟಗಳೆಲ್ಲ । ಹೇಳಿ ನಾ ತುದಿಯಿಲ್ಲ । ತಿಳಿಯಬಹುದಿವರ್ಗೆಲ್ಲ । ನಾ ಕೊಡುವ ಸೊಲ್ಲ ॥ ೮ ॥ ಇಂತೆನುತಲೆಲ್ಲರನು ಈ । ತೆರದಿ ಪೊಗಳಿದ ಬಳಿಕ । ಕಂತುಪಿತ ಕರೆದಿನಜ । ಗಿಂತೆಂದನಾಗ ॥ ೯ ॥

ಕೋರೆ ರಾಗ - ಅಷ್ಟತಾಳ

ಪೋಗಬೇಕಯ್ಯ । ಸೇತುವ ದಾಟಿ । ಸಾಗಬೇಕಯ್ಯ ॥ ಈಗ ನಾ ಮುಂದೆ ತಾ ಮುಂದು ಹೆಣಗದೆ । ಸಾಗರದಲಿ ಬೀಳಲಾಗದಂದದಲಿ ॥ ॥ ಪೋಗ ॥ ೧ ॥ ಹಿಂದೆ ಇದ್ದವರು । ಸೇತುವ ದಾಟಿ । ಮುಂದೆ ಹೋದ ವರು ॥ ಒಂದೇ ಕಡೆಯಲಿ ಠಾಣ್ಯವನಿಕ್ಕಿಯಿರಲಿ ಹೀ । ಗೆಂದು ಕಟ್ಟಳೆ ಯಾದ ಒಂದು ಕಟ್ಟನಲಿ ॥ ಪೋಗ ॥ ೨ ॥ ಅಲ್ಲಿ ಕಂಡುದನು । ಮುಟ್ಟದಿ ರೊಂದು । ಹುಲ್ಲು ಕಡ್ಡಿಯನು ॥ ಎಳ್ಳನಷ್ಟಾದರು ಸರ್ವರು ಕೂಡಿಕೊಂ। ಡಲ್ಲದೊಬ್ಬೊಬ್ಬರು ತಿರುಗಾಡಬೇಡಿ ॥ ಪೋಗ ॥ ೩ ॥ ನಡೆಯಲೀ ದಂಡು । ಲಂಕಾದ್ವೀಪ । ದೆಡೆಗೆ ಮುಂಕೊಂಡು ॥ ಎಡೆಯೊಳೊಬ್ಬೊಬ್ಬರು ನಾಯಕ ವಾಡಿಯ । ಪೊಡೆದಾಡಿಸದೆ ಹಿಂದೆ ವಿಂಗಡಿಸುತ ಮುಂದೆ ॥ ಪೋಗ ॥ ೪ ॥

### ಭಾಮಿನಿ

ರವಿಕುಲೋದ್ಭವನುಚಿತ ವಚನವ । ರವಿಕುಮಾರಕ ಕೇಳ್ದು ಸೇನಾ । ನಿವಹಕಧಿಪತಿಗಳನು ನೇಮದ ಕಟ್ಟಿನಲಿ ಸಿಲಿಸಿ ॥ ರವಿಕಿರಣವಡಗಲು ಮಹಾಂಬುಧಿ । ರವ ಮರೆಸೆ ಕಪಿಸೇನೆ ನಡೆದುದು । ಭುವನಕತಿಶಯಕೀರ್ತಿ ರಘುರಾಜೇಂದ್ರ ಚಂದ್ರಮನ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ನಡೆವ ದಳಪದಹತಿಯು ರಭಸಕೆ । ನಡುಗುತಿರ್ದು ಸೇತು ನೀರಿನ। ಹಡಗಿನಂತೊಲೆದಾಡುತಿರ್ದುದು। ಬುಡವು ತುದಿಗೆ ॥ ೧ ॥ ಕುಂಭಕರ್ಣಾಧಿಗಳ ಪ್ರಾಣವ । ಕೊಂಬುದಕೆ ಮುಂದಾಗಿ ಚರಣಮು । ಹಾಂಬುಧಿಯ ಸೇತುವಿ ನೊಳಿಟ್ಟನು ॥ ಅಂಬುಜಾಕ್ಷ ॥ ೨ ॥

### ಕಾಂಭೋಜಿ ರಾಗ - ಏಕತಾಳ

ರಾಮ ಬಂದನು । ರಾಕ್ಷಸಕುಲ । ಭೀಮ ಬಂದನು ॥ ರಾಮ ॥ ಪ ॥ ಕಾಮರೂಪಿಗಳಾದ ಕಪಿ । ಸ್ತೋಮವನ್ನು ಕೂಡಿಕೊಂಡು ॥ ರಾಮ ॥ ಅ ॥ ಘಳಿಗೆ ಘಳಿಗೆ ಹೊಳೆವಾಕಾಶ । ದೊಳಗೆ ಭೇರಿ ಮೊಳ ಗುತ್ತ । ಸುಳಿಗಳಿಂದ ತೆರೆಗಳೆದ್ದು । ಕಳಕಳಿಸಿ ತೊಳಗುತ್ತ ॥ ನಳಿನನಾಭನಡಿಗೆ ಪುಷ್ಪ । ಮಳೆಗಳು ಬಂದಿಳಿವುತ್ತ । ಭಳಿರೆ ಪಾದ ಜತನವೆಂದು । ಕೆಲದಿ ಭಟರು ಹೊಗಳುತ್ತ ॥ ರಾಮ ॥ ೧ ॥ ದಾಶರಥಿಯ ಕಣ್ಣಿದಿರಿನೊ । ಳಾ ಸಮುದ್ರದಿ ಬೀಳುತ್ತ । ಭಾಷೆ ಪಂಥದಿಂದ ನೀರೊ । ಳೀಸಿ ಮುಳುಗು ತೇಳುತ್ತ ॥ ಏಸರಾಳುದ್ದುದಕವುಂಟೆಂ । ಬಾ ಸುದ್ದಿಗಳ ಕೇಳುತ್ತ । ಬೀಸಿ ಬಾಲದಿಂದ ನೀರಾಕಾಶದೆಡೆಗೆ ಚಿಮ್ಮುತ್ತ ॥ ರಾಮ ॥ ೨ ॥

### ವಾರ್ಧಿಕ

ಅಣುಗ ಕೇಳಿಂತಾರು ದಿವಸ ನಡೆದುದು ದಂಡು । ಗೊಣಗುಟ್ಟು ದತ್ತಿತ್ತ ಸುಗ್ರೀವನಾಜ್ಞೆಯಲಿ । ಗಣನೆಗೆಪ್ಪತ್ತೇಳು ಕೋಟಿ ಕಪಿನಾಯಕರು ರಾಮಲಕ್ಷ್ಮಣರು ಸಹಿತ ॥ ಬಣಗು ರಕ್ಕಸರಿತ್ತ ಕಾವಲಿದ್ದವರತ್ತ । ಜುಣುಗಿ ದರು ಪಟ್ಟಣಕೆ ಬಂತು ದುರ್ದೆಸೆಯೆನುತ । ದಿನ ಮೂರರಣೆಕೆಯಲಿ ದುರ್ಗದ ಸಮೀಪದೊಳ್ ಬೀಡೆತ್ತಿತಾ ರಾಮನ ॥

ಪಂತುವರಾಳಿ ರಾಗ - ಅಷ್ಟತಾಳ

ಗುಲ್ಲು ಹೆಚ್ಚಿತು ಲಂಕಾಪುರದಲ್ಲಿ । ಕಪಿ । ಪಾಳ್ಯ ಮುಂತಾಗಿ ಪಟ್ಟಣವ ಮುತ್ತಿದರೆಂಬ ॥ ಗುಲ್ಲು ॥ ಪ ॥ ಪಟ್ಟಣ ಜನ ಬಾಯ ಬಿಡುತಲಿ। ಅಯ್ಯೊ । ಕೆಟ್ಟೆವು ಪಾಪಿ ರಾವಣನಿಂದೆನುತಲಿ ॥ ಕಟ್ಟುತ ಸರಕ ತೆಗೆವುತಲಿ। ಊರ । ಬಿಟ್ಟಾರಣ್ಯವ ಸೇರಿ ಬದುಕುವೆವೆನುತಲಿ ॥ ಗುಲ್ಲು ॥ ೧ ॥ ಪೆಟ್ಟಿಗೆಗಳನು ಕಟ್ಟಿಡು ಮಾಣಿ । ಸಾಕು । ಕೆಟ್ಟಿತು ದೇವತಾರ್ಚನೆಯು ತುಂಬಿಡು ಗೋಣಿ ॥ ಪಟ್ಟೆಯ ತೆಗೆದು ಇಟ್ಟಳು ರಾಣಿ । ಎಂಬ । ಭಟ್ಟರುಗಳು ಊರು ಬಿಟ್ಟು ಪೋಗುವ ವಾಣಿ ॥ ಗುಲ್ಲು ॥ ೨ ॥ ಗೋಧನಗಳನೆಲ್ಲ ಬಿಟ್ಟರು । ಕಡಲೆ । ಗೋಧಿ ಬೆಲ್ಲಗಳ ಕಂಡವರಿಗೆ ಕೊಟ್ಟರು ॥ ಹಾದಿ ಹಾದಿಯೊಳು ಬೊಬ್ಬಿಟ್ಟರು । ಖೂಳ । ರಾದ ದಾನವರ ದುರ್ಗದಲಿ ಸಾಲಿಟ್ಟರು॥ ಗುಲ್ಲು ॥ ೩ ॥ ಗಡಿಗೆ ಮಂಡೆಗಳೆಲ್ಲ ಹೊತ್ತರು । ಕೆಲ । ರಡಿಗೆ ಊಟಗಳೆಂಬ ಗೊಡವೆಗೆನಿತ್ತರು ॥ ಗಡಿಯ ಬಾಗಿಲನೆಲ್ಲ ಕಿತ್ತರು । ಹಿಂದೆ । ಸುಡುಗಾಡಿಗೆ ಹೋದ ಬಗೆಯನೆಚ್ಚರಿತರು ॥ ಗುಲ್ಲು ॥ ೪ ॥ ಕೇರಿಕೇರಿಯೊಳಿಹ ಮನೆಗಳ। ಅಲ್ಲಿ । ನಾರಿ ಪುರುಷರು ಖೋಯೆಂಬ ಗರ್ಜನೆಗಳ ॥ ಊರ ಬಿಟ್ಟೋಡುವ ಭರಗಳ । ಕಪಿ । ವೀರರು ನೋಡುತ್ತ ನಗುವ ಸಂಭ್ರಮಗಳ ॥ ಗುಲ್ಲು ॥ ೫ ॥

ವಾರ್ಧಿಕ

ತನಯರಿರ ಕೇಳಿ ಲಂಕಾಪುರದ ಗಜಬಜವ । ಮುನಿವರರು ತಿಳಿದು ರಾಮನ ಪರಸಿ ಪೋದಡಾ । ದಿನದಿ ರವಿಬಿಂಬ ಪಶ್ಚಿಮಕಡರಲಾ ರಾತ್ರಿ ಜನ ವಾರ್ತೆಯಂ ಕೇಳುತ ॥ ಮನನೊಂದು ಮಂತ್ರಿ ಪ್ರಹಸ್ತ ರಾಮಣನೆಡೆಗೆ । ಘನ ಬೇಗ ಬಂದು ನಿದ್ರಾಲಯವನೊಳ ಪೊಗುತ । ಲಿನಕುಲೇಂದ್ರನ ಸೈನ್ಯ ಸಾಗರದ ವೃತ್ತಾಂತವನು ಪೇಳ್ದನನುನಯದಲಿ ॥

ಧನ್ಯಾಸಿ ರಾಗ - ಅಷ್ಟತಾಳ

ಕೇಳಯ್ಯ । ಮಾತ । ಕೇಳಯ್ಯ ॥ ಪ ॥ ಪೇಳುವೆನೊಂದೊಂದು ಪೊಸಸುದ್ದಿ ಕಿವಿಗೊಟ್ಟು ॥ ಕೇಳಯ್ಯ ॥ ಅ ॥ ಬಾಲೆಯ ನೀವು ತಂದಾಕೆಯ ಪತಿಯೆಪ್ಪ । ತ್ರೇಳು ಕೋಟಿ ಕಟಿಗಳ ಕೂಡಿ । ಅಬ್ಧಿ । ಗಾಲಸ್ಯಗೊಳವೆ ಸೇತುವ ಕೂಡಿ । ನೀರ । ಮೇಲೆ ಬಪ್ಪಂತೆ ದಾರಿಯ ಮಾಡಿ । ದಾಟಿದರು

ಗಾಢ । ಬಂದರಿವೆ ನೋಡಾ । ಇ । ನ್ನಾಲೋಚಿಸಿದರೆ ಮಾಡುವುದೇನು । ಉಪು । ಕಾಲಬಂದೊದಗಿತು ಮತ್ತೇನು ॥ ಕೇಳಯ್ಯ ॥ ೧ ॥ ಹಿಂದುದ್ಯಾನವನು ಕೆಡಿಸಿದ ಕಪಿಯಂಥ । ನೊಂದೊಂದು ಲಕ್ಷ ಸಾವಿರವಂತೆ । ಕೆಲವು ಮಂದಿ। ಯಾಗಿರ್ಪ ಭೀಕರವಂತೆ । ಕಯ್ಯೊ । ಳೊಂದೊಂದು ವೃಕ್ಷ ಪರ್ವತವಂತೆ । ಮೆರೆದಿಪರಂತೆ । ಕಾಯ ಸ್ಥಿರವಂತೆ । ಅವರ್ ಹಿಂದಕೆ ಪಡೆದಿಹ ವರವಂತೆ। ನಮ್ಮ । ಕೊಂದೆವೆನ್ನುವ ಭರವಸವಂತೆ ॥ ಕೇಳಯ್ಯ ॥ ೨ ॥ ಬೇವ ನೋಡುವುದಕ್ಕೆ ಕಳುಹಿದ ಶುಕನಿಗೆ । ದೇವರನುಜರು ನೋಡಿದರಂತೆ । ಪಿಡಿದು । ಕಾವಲ ಮನೆಗೆ ದೂಡಿದರಂತೆ । ಓಡಿ । ಬಾಹನೆಂದಂತೆ ಮಾಡಿದ ರಂತೆ । ಇದು ದಿಟವಂತೆ । ಸಟೆಯಲ್ಲವಂತೆ । ಬಲು । ಕೋವಿದ ವೀರ ಮರ್ಕಟರಂತೆ । ರಾಜ । ಸೇವೆಯೊಳಗೆ ಬಲು ಭಟರಂತೆ ॥ ಕೇಳಯ್ಯ ॥ ॥ ೩ ॥

ಕಂದ

ಇಂತಾ ವೈರಿಗಳಂದವ । ಮುಂತ್ರೀಶ್ವರ ಪೇಳೆ ಕೇಳ್ದು ದಶಕಂಧರನುಂ॥
ಅಂತರ್ಭಾವವನರಿಯದೆ । ಇಂತೆಂದನು ಸಾರಣಂಗೆ ರಾಕ್ಷಸರರಸಂ ॥

ಕಲ್ಯಾಣಿ ರಾಗ - ಏಕತಾಳ

ತಿಳಿದು ಬಾ ರಾಮನ ಪಾಳ್ಯದಂಗವನೆಲ್ಲ । ಬಲವಂತರೊನಿಧಾ । ನರೂ ಎಂಬ ಬಗೆಯ ನೀ ॥ ತಿಳಿದು ॥ ಪ ॥ ಮಂಗಗಳೆಷ್ಟುಂಟು । ಸಿಂಗಲೀಕ ಗಳೆಷ್ಟು । ಸಂಗಡ ಮುಸುಗಳೆ । ಷ್ಟುಂಟೆಂಬ ಬಗೆಯ ನೀ ॥ ತಿಳಿದು ॥ ೧ ॥ ಉಂಬುದೇನಾ ರಾಮ । ಕೊಂಬುದೇನಾ ತಮ್ಮ । ತಿಂಬುದೇನಾ॥ ಸೇನೆ । ಯೆಂಬಂಥ ಬಗೆಯ ನೀ ॥ ತಿಳಿದು ॥ ೨ ॥ ಅನ್ನಾಹಾರಗಳೇನು । ಎಣ್ಣೆ ನೀರುಗಳೆಲ್ಲಿ । ಹಣ್ಣು ಹಂಪಲುಗಳ ತಿನ್ನುವ ಬಗೆಯ ನೀ । ತಿಳಿದು ॥ ೩ ॥ ಮಡದಿಗೋಸುಗ ಬಂದು । ಕಡಿದಾಡಿ ನಿಲುವರೊ । ಸಡಗರವನು ತೋರಿ । ತಿರುಗಿ ಪೋಪರೊ ಎಂದು ॥ ತಿಳಿದು ॥ ೪ ॥ ನಮ್ಮವನಿಗು ರಾಮ । ಗೊಮ್ಮನಸೊ ಇಕ್ಕಟ್ಟೊ । ತಮ್ಮೊಳೆಂತಿಪ್ಪರೆಂದು । ಗಮ್ಮನೆ ಇರುಳೆ ನೀ ॥ ತಿಳಿದು ॥ ೫ ॥

ಕಂದ

ಬಾದಾ ಸಾರಣ ಪಾಳ್ಯದೊ । ಳಂದಿರುಳಲಿ ತಿರುಗಲವನ ಕೈಸೆರೆ ಪಿಡಿದುಂ ॥ ಹಿಂದಿರ್ದಾತನ ಸಹಿತಲೆ । ತಂದಿದಿರಲ್ಲಿರಿಸಿ ಪೇಳ್ದ ಭಾಸ್ಕರ ತನುಜಂ ॥

ಕಾಪಿ ರಾಗ - ಅಷ್ಟ ತಾಳ

ಇವನೀಗ ಮೊದಲು ಬಂದಾತ । ಕಪ । ಟಪ ಮಾಡಿ ಕೈಸೆರೆ ಸಿಕ್ಕಿ ಕೊಂಡಾತ ॥ ಇವ ॥ ಪ ॥ ಇಂದು ಬಂದವನಿವನೀಗ । ಪಾಳ್ಯ । ದಿಂದ ಕಳ್ಳರ ಹಾಗೆ ತಿರುಗಿ ಪೋಪಾಗ ॥ ಕಂದನಂಗದ ಕಂಡು ಬೇಗ । ಎಳೆ । ತಂದ ರಾವಣನ ದೂತರು ಇವರೀಗ ॥ ಇವ ॥ ೧ ॥ ಮುಂದಕ್ಕೆ ಕರೆಸಿದನವರ । ದಸು। ದಿಂದುಪಚರಿಸಿ ಕುಳ್ಳಿರಿಸಿ ಕೊಂಡವರ ॥ ಬಂದುದೇಕೆಂದು ಬಂದವರ। ಕೇಳೆ । ಲಂದು ವಿಸ್ತಾರದಿ ಪೇಳಿದರ್ ವಿವರ ॥ ಇವ ॥ ೨ ॥ ನೆಲೆಮಾದ ಮಾತನಾಡಿದರೆ । ಪ್ರಾಣ । ಉಳಿಯದು ನೀವ್ ನಮ್ಮ ಮುಸಿದು ನೋಡಿ ದರೆ ॥ ಕಲಹ ಸಾಧನವ ಮಾಡಿದರೆ । ಯಮ । ಗಳವಲ್ಲ ರಾಕ್ಷಸರೊಳಗೆ ಕೂಡಿದರೆ ॥ ಇವ ॥ ೩ ॥

ಕಾಂಭೋಜಿ ರಾಗ - ಝಂಪೆತಾಳ

ರಘುವೀರ ಕೇಳು ರಾವಣನ ಸೌಭಾಗ್ಯಗಳ।ಪೊಗಳಲಳವಲ್ಲ ಫಣಿಪತಿಗೆ। ಅಗಣಿತನು ಕುಂಭಕರ್ಣನು ತಮ್ಮ ಶಕ್ರಜಿತು । ಮಗ ಧನಪನೀತಗಗ್ರಜನು ॥ ೧ ॥ ಈರೇಳು ಜಗದೊಡೆಯತನ ಕರೆದಡೋಯೆಂದು । ಮೋರೆದೋರು ವಳು ಮಹಾಲಕ್ಷ್ಮಿ ॥ ವೈರಿಗಳಿಗಸದಳವಾಗಿರುವ ಲಂಕಾದುರ್ಗ । ಸೇರಿಹುದು ಸಕಲ ಸೌರಂಭ ॥ ೨ ॥ ಜಾನಕಿಯ ಕಳವಿನಲಿ ತಂದನುಜನನು ಬಿಟ್ಟು । ಹೀನ ಗುಣವಿದು ಎರಡು ಹೊರತು ॥ ಏನು ಬಗೆಯುಲಿ ಕಂಡರೆಮ್ಮವರ ಜಯಿಸುವ ಸ । ಮಾನದವರಿಲ್ಲವಿದರೊಳಗೆ ॥ ೩ ॥ ಭೇತಾಳ ಬ್ರಹ್ಮರಾಕ್ಷಸರೆಸೆವಸಬಳ ಮೊನೆ। ಈತಗಳ ತಗಲಿದಡೆ ನೊಂದು ॥ ಮೈತುರಿಸಿ ಪಲ್ಲಿರಿದು ಅಣಕುತುರಿ ಕಟ್ಟಿ ಕಪಿ । ಪೋತಂಗಳೋಡದಿರ್ದಪ್ಪುದೆ ॥ ೪ ॥ ಕಂಡುದನು ಪೇಳಿದರೆ ಕೋಪವೇತಕೆ ಪೇಳು । ಪುಂಡರೀಕದಳಾಕ್ಷ ರಾಮ ॥ ದಂಡಿಸಲಿನ್ನೇಕೆ ಸಂಧಾನವೇ ನೆರೆಗೊಳಿಸಿ । ಹೆಂಡತಿಯನೊಯ್ಯುವದತಿಲೇಸು ॥ ೫ ॥

### ಪಂತುವರಾಳಿ ರಾಗ - ರೂಪಕತಾಳ

ನೀತಿಯಲ್ಲ ನೀವು ಬಂದುದು । ರಾಮಚಂದ್ರ । ನೀತಿಯಲ್ಲ ನೀವು ಬಂದುದು ॥ ಪ ॥ ನೀತಿಯಲ್ಲ ನೀವು ನ । ಪಖ್ಯಾತನೊಡನೆ ಸಮರದಲ್ಲಿ । ಭೂತನಾಥಗರಿದು ಸೋಲ್ವ । ರೀತಿಯಿಲ್ಲವೆಂಬುದೇ ನೀ । ಕೋತಿಕುಲಗಳೇನ ಮಾಳ್ಪವು ॥ ಶರದ ಮೊನೆಯೊ । ಳೋತು ಬಡಿದರೆಂತು ತಾಳ್ಪವು ॥ ಹಲ್ಲ ಕಿರಿದು । ಮೈಯ ತುರಿಸಿಕೊಂಡು ನೋಳ್ಪವು ॥ ನೀತಿಯಲ್ಲ ॥ ೧ ॥ ದೇವ ದೈತ್ಯಕೊಮ್ಮಗಿವನ । ಸೇವೆ ಮಾಡಿ ಕಳೆವರ್ದಿನವ । ಸಾವುದಿಲ್ಲವೆಂಬ ವರವು । ದೇವ ಕುಂಭಕರ್ಣಗುಂಟು । ದೇವರೊಡೆಯು ಜಿತು ಕುವಮಾರಕ ॥ ಲಕ್ಷ್ಮಿ ಕರೆದ । ಡೋಯೆನಿಪ್ಪ ಭಾಗ್ಯದಾಯಕ ॥ ಸಕಲ ಶಾಸ್ತ್ರ । ಕೋವಿದಾತ ನೀತಿಪೂರಕ॥ ನೀತಿಯಲ್ಲ ॥ ೨ ॥ ಬಿಸುಗೆಯಾದ ತಂಗಿ ಶೂ। ರ್ಪಣಖಿಯೆಂದ ಮಾತ ಕೇಳಿ । ಜನಕಸುತೆಯ ತಂದು ವಿಭೀ । ಷಣನ ಬಿಟ್ಟುದೊಂದು ಮಾತ್ರ । ಘನತೆಯುಳ್ಳಿವೆರಡು ಗುಣಗಳು ॥ ಅದರೊಳವನಿ । ಗನುಭವಿಸದೆ ಬಿಡದು ವಿಧಿಗಳು ॥ ಮಿಕ್ಕ ಭಾಗ್ಯ । ವೆಣಿಸಿ ತುದಿಯ ಕಾಣೆವಿವನೊಳು ॥ ನೀತಿಯಲ್ಲ ॥ ೩ ॥

### ಕಂದ

ಒಡೆಯನ ಗುಣವಮಂ ಪೊಗಳುವ । ಸಡಗರವಂ ಕಪಿಗಳೆಲ್ಲ ಕಾಣುತ ಜರೆದುಂ ॥ ಹೊಡೆ ಬಡೆಯೆಂಬ ಪ್ಲವಂಗರ । ನೊಡಬಡಿಸುತ ರಾಮ ಪೇಳ್ದ ಸುಗ್ರೀವನೊಳುಂ ॥

### ಭೈರವಿ ರಾಗ - ಝಂಪೆತಾಳ

ಕಪಿರಾಜ ಕೇಳಿದಕೆ । ಕೋಪವೇತಕೆ ನಮಗೆ । ಅಪರಾಧವಿನಿತಿಲ್ಲ । ಪರಿಯ ಗ್ರಹಿಸಲ್ಲ ॥ ೧ ॥ ಬಂಟರಾದವರುಗಳು । ಬಲ್ಲಾತನೊಡೆಯನೆಂ । ದೆಂಟುಮಡಿ ಗುಣವ ನಿಜ । ವೆಂಬುದೇ ಸಹಜ ॥ ೨ ॥ ಕಂಡಮಾತಾಡಿದರು। ಕಪಟದವರಿವರಲ್ಲ । ಕೊಂಡಾಡದಿರರೆಮ್ಮ । ಕಳುಹುವುದೆ ಧರ್ಮ ॥ ೩ ॥ ನಮ್ಮ ಶೌರ್ಯಗಳಿವರು । ತಮ್ಮವರೊಳಾಡುವರು । ಸನ್ಮತದಿ ಕಳುಹು ವುದು । ಧರ್ಮವಿದು ನಮಗೆ ॥ ೪ ॥ ಕಡಲಾಧಿಪತಿ ಕೊಟ್ಟ । ಕಾಣಿಕೆಯ ವಸ್ತುಗಳ । ನುಡುಗೊರೆಗಳನು ಕೊಟ್ಟು । ಕಳುಹಿದರು ಬಿಟ್ಟು ॥ ೫ ॥ ತಳ್ಳಿ

ಹೋಗದಿರೆಂದು ತಾಕೀದಿಗಳಲಂದು ಪಾಳ್ಯದಿಂದಟ್ಟಿದರು । ಪಟ್ಟಣಕ್ಕವರು ॥ ೬ ॥ ಬಾದು ರಾವಣನ ಕೂ । ಡೊಡೆರಡು ಮಾತಾಡೆ । ಮುಂದಿರಕೆ ತೆರಳಲವರೆಂದು ಬೆಳಗಾಯ್ತು ॥ ೭ ॥

**ಪಂತುವರಾಳಿ ರಾಗ - ಅಷ್ಟತಾಳ**

ಸಾಂಬ ಸದಾಶಿವ । ಸಾಂಬ ಸದಾಶಿವ । ಸಾಂಬ ಸದಾಶಿವ । ಶಂಭು ಶಂಕರನೆ ॥ ಸಾಂಬ ॥ ಪ ॥ ದಿನಕರನುದಿಸದ । ಮುನ್ನ ರಾವಣನೆದ್ದು । ಘನವೇಗದಿಂದ ಮ । ಜ್ಜನವ ಮಾಡಿದನು ॥ ಸಾಂಬ ॥ ೧ ॥ ಲಿಂಗ ಪೂಜೆಯ ಮಾಡಿ । ಪೃಜೆಗಳ ಮಕ್ಕಳ । ಸಂಗಡದಲಿ ಸಿಂಹಾ । ಸನವೇರಿದನು ॥ ಸಾಂಬ ॥ ೨ ॥ ಕರೆಸಲಾ ಮುಯು ವಿಶ್ವ । ಕರ್ಮರಿಬ್ಬರು ದುರ್ಗ । ಘಂತವಂದೆಸಗಿದ । ರರೆನಿಮಿಷದಲಿ ॥ ಸಾಂಬ ॥ ೩ ॥ ಏಳು ಸುತ್ತಿನ ಕೋಟೆ । ಯುಗಳಿಪ್ಪತ್ತೇಳು । ತಾಳೆಯ ಮರದುದ್ದ । ಸೀಳು ಕಲ್ಲಿನಲಿ ॥ ಸಾಂಬ ॥ ೪ ॥ ಏಳು ಸುತ್ತಿನೊಳಾನೆ । ಕುದುರೆ ಭಂಡಿಗಳ ಘೇ । ತಾಳ ರಾಕ್ಷಸರನ್ನು । ಸಾಲು ನಿಲಿಸಿದರು ॥ ಸಾಂಬ ॥ ೫ ॥ ಅಗಳು ಹತ್ತಿರಕೆ ವೈ । ರಿಗಳು ಬಂದರೆ ಜಾರಿ । ನೆಗೆದು ಬೀಳುವ ಹಾಗೆ । ತೆಗೆದರು ಜರಿಯ ॥ ಸಾಂಬ ॥ ೬ ॥ ಅಡವಿ ಕೋಡುಗಗಳ । ಮದ್ದು ಗುಂಡುಗಳಿಂದ । ಕಡೆವ ರಾಕ್ಷಸರ ಪಿಂ । ಗಡವ ಮಾಡಿದರು ॥ ಸಾಂಬ ॥ ೭ ॥ ಸಣ್ಣ ಸಾಸಿವೆ ಸೀಗೆ । ಮೆಣಸಿನ ಪುಡಿಕಾಸಿ । ದೆಣ್ಣೆಕೊಪ್ಪರಿಗೆಗ । ಳೊಲೆಯ ನಿಕ್ಕಿದರು ॥ ಸಾಂಬ ॥ ೮ ॥ ಹೊಗುವ ಹೆದ್ದಾರಿಯ । ಕೊತ್ತಳಂಗಳ ಮೇಲೆ । ಅಗಣಿತದಾಘಿರಂ । ಗಿಗಳಿಕ್ಕಿದರು ॥ ಸಾಂಬ ॥ ೯ ॥ ಈಟಿಸಬಳ ಕೊಟ್ಟು । ತೊಂಭತ್ತನಾಲಕು । ಕೋಟಿ ದಾನವರನ್ನು । ನೀಟು ನಿಲಿಸಿದರು ॥ ಸಾಂಬ ॥ ೧೦ ॥

**ವಾರ್ಧಿಕ**

ಭರತ ಮೊದಲಾದ ನವಖಂಡಗಳ ಭೂಭುಜರ । ಕರೆಸಿದನು ಗರುಡ ಗಂಧರ್ವ ಭುಜಗಾಧಿಪರ । ಕರಿ ತುರಗ ರಥ ಪತ್ತಿ ರಾಕ್ಷಸರ ನೆರಹಿ ಸಂಗರಕೆ ಸನ್ನಾಹವಾಗಿ ॥ ಹೊರಸುತ್ತಿನಗಳ ನೀಟಿನ ಮೇಲೆ ನಿಂದು ವಾ । ನರ ಸೈನ್ಯಮಂ ಕಾಣಬೇಕೆಂದು ಶುಕ ಸಾರ । ಣರ ಕರೆಸಿ ವಿವರವುಂ ಬೆಸಗೊಳಲು ಶುಕನು ಕೈಬೆರಳಿಂದ ತೋರಿಸಿದನು ॥

**ಕೇದಾರಗೌಳ ರಾಗ - ಅಷ್ಟತಾಳ**

ನೋಡಿದೆಯಾ ದೈತ್ಯರಾಯ ನಿನ್ನನುಜನ । ಕೂಡಿ ಏಕಾಂತದಿಂದ ॥ ಆಡುವ ವಶಾತಿಗೆ ಕಿವಿಗೊಟ್ಟು ನಮ್ಮನ್ನು । ನೋಡುವಾತನೆ ರಾಘವ ॥ ೧ ॥ ಜೋಡಾಗಿ ಎರಡು ಬಿಲ್ಲೊಂದು ಕೈಯಲಿ ಪಿಡಿ । ದಾಡುವಾತನೆ ಲಕ್ಷ್ಮಣ ॥ ಮೂಡಣ ದೆಸೆಯಲ್ಲಿ ನಿಲ್ಲದಿರೆಂದು ಕೈ । ಮಾಡುವಾತನೆ ಸುಗ್ರೀವ ॥ ೨ ॥ ಕುಂಭಿನಿಯುವಿಸದ ಮುನ್ನ ಪುಟ್ಟಿದನೀತ । ನೆಂಬರು ಜಗದೊಳೆಲ್ಲ ॥ ಅಂಬಿಕೆ ಶಿವನಿಗೆ ಮದುವೆಯಾದಾಗ ಪ । ತ್ತೊಂಭತ್ತು ವರುಷವಂತೆ ॥ ೩ ॥ ಜಂಭಾರಿ ಮೊದಲಾದ ದಿವಿಜರಿವಗೆ ನಮೋ । ಎಂಬುದು ಸಹಜವಂತೆ ॥ ಅಂಬುಜಾ ಸನನ ಬೊಟ್ಟಲ ಕಂದನವ ನೋಡು ॥ ಜಾಂಬವನಧಿಕ ಶೌರ್ಯ ॥ ೪ ॥ ವನದಲ್ಲಿ ಜಂಬುಮಾಲಿಯ ಕೊಂದು ನಮ್ಮ ವ । ಟ್ಟಣವ ಹೋಮಿಸಿದಾತನ ॥ ಹನುಮಂತನದಕೊ ಲಕ್ಷ್ಮಣನ ಹತ್ತಿರ ನಿಂದು । ಕೊನರುವಾತನ ನೀ ನೋಡ್ಕೆ ॥ ೫ ॥ ಘಲದಾಕನದೆ ನೋಡು ವಾತಸಂಭವನ ಬೆ । ನ್ನಲಿ ತಾನು ಕುಳಿತುಕೊಂಡು ॥ ಬಲು ಭಟನಾಗಿ ಸಿಡಿಲ್ಮರಿಯಂತಿರ್ಪ । ಕಲಹ ವಿಕ್ರಮನಂಗದ ॥ ೬ ॥ ವೃಷಭನವ ಹಿಂದೆ ಕೈಲಾಸದಲಿ ನೀ ನಿಂ । ದಿಸುತಟ್ಟಿ ಜರೆದೆ ಬುಂತೆ ॥ ಅಸುರ ಕೇಳಾ ವಂಥದಿಂದ ವರ್ಕಟನಾಗಿ । ಎಸೆದಿರ್ಪನದಕೊ ನೋಡು ॥ ೭ ॥ ಜೇಯು ಚಿತ್ರ್ಯಸು ಪಲ್ಗಿರಿದು ಮುಂದುಬ್ಬೆದ್ದು । ಬಾಯೊಳಾರ್ಭಟಿಸುವಾತ ॥ ರಾಮನಪ್ಪಣೆಯಿಂದ ದಳಕೆಲ್ಲ ನೀಲನೇ । ನಾಯಕವಾಡಿಯಂತೆ ॥ ೮ ॥ ಶತಬಲಿ ಸುಮುಖ ದುರ್ಮುಖ ಗಜಗವಯರಂ । ಬತುಳ ವಿಕ್ರಮರದಕೊ ॥ ಮಿಶಿಯಾಗದೆಣಿಸಿ ರಾಮನ ವಾಳ್ಯ ದೊಳಗೆ ಬಂ । ದತಿ ಬಲಾನ್ವಿತರ ನೋಡ್ಕೆ ॥ ೯ ॥ ಉಸಿರುವೆನವರಿಂದ ಬಲದ ಭಾಗದಲಿ ರಂ । ಜಿಸುವಾತನವನೆ ನಳ ॥ ಹೆಸರಿಡಲರಿಯೆ ಮಿಕ್ಕಾದ ವಾನರವೀರ । ರೆಸೆದಿರ್ಪರದಕೊ ನೋಡು ॥ ೧೦ ॥

**ಕಂದ**

ಈ ಪರಿಯಿಂದಲಿ ವರ್ಣಿಸೆ । ಭೂಪಾಲನ ವಾಳ್ಯದೊಳಿಹ ಕಪಿನಾಯಕರಂ ॥ ಕೋಪಿಸಿ ದಶಕಂಧರನುಂ । ತಾ ಪೌರುಷದಿಂದ ಪೇಳ್ದ ಶುಕ ಸಾರಣರ್ಗಂ ॥

### ಕೇದಾರಗೌಳ ರಾಗ - ಅಷ್ಟತಾಳ

ಮರುಳಾದೆಯೇನೊ ನೀ ಬದನೆಕಾಯನು ದೊಡ್ಡ । ಪರಬ್ರಹ್ಮವೆಂಬ ಹಾಗೆ ॥ ಮರದಿಂದ ಮರಕೆ ಲಂಘಿಸುವಂಥ ಕಪಿಗಳ್ಗೆ । ಸರಿಯಿಲ್ಲವೆಂಬ ರೇನೊ ॥ ೧ ॥ ಸೂರಿಯನಿಗೆ ಮೋಡ ಕವಿದರೆ ಬೆದರಿ ಸಂಚಾರವ ಬಿಡುವುದುಂಟೆ ॥ ಪಾರಾಗಿ ಕೆಡುವುದಲ್ಲದೆ ನಮ್ಮೊಳಿದಿರೊಡ್ಡಿ । ಬಾರರಿದೆಲ್ಲ ಸುಳ್ಳು ॥ ೨ ॥ ಬೇರ ಬಲ್ಲವರಿಗೆ ಮರದೆಲೆಯನು ತಂದು । ತೋರಲೇತಕೆ ಮರುಳೆ ॥ ಮೂರುಲೋಕದ ಗಂಡನೆಂದೆಂಬ ಬಿರುದುಳ್ಳ । ವೀರನಾರಯ್ಯ ಹೇಳು ॥ ೩ ॥ ಅಂತಕ ಮೊದಲಾದ ದಿವಿಜರು ಸಹಿತಲಿ । ಚಿಂತೆಯೊಳಿರುತಿಪರು ॥ ಭ್ರಾಂತಿ ಬುದ್ಧಿಯಲಿ ಬಂದಿದಿರಾಗಿ ರಾಮನು । ಕಾಂತೆಯನೊಯ್ವುದುಂಟೆ ॥ ೪ ॥ ಸರಳಿನ ಮೊನೆಯಿಂದು ತಾಗಿದಡಾ ಪೈಯ । ತುರಿಸಿ ಟಿಟ್ಟಿರಿಗುಟ್ಟುತ್ತ ॥ ಭರದಿಂದೋಡುವ ಕಪಿಪರಿವಾರಗಳಿಗೆ ಸಂ । ಗರದೊಳಿಚ್ಚಾಟವಂತೆ ॥ ೫ ॥ ಏಸು ಮರ್ಕಟರಿದ್ದರೇನಾಯ್ತು ನಮ್ಮ ವಿ । ಭೀಷಣ ಹೊರತು ಮಿಕ್ಕ ॥ ಸಾಸಿರ ಸಂಖ್ಯೆಯ ವಾನರಬಲವೆಲ್ಲ । ಕಾಸಿಂದ ಕಡೆ ನಮಗೆ ॥ ೬ ॥ ದೂಷಣ ತ್ರಿಶಿರ ಮುಂತಾದ ರಕ್ಕಸರನ್ನು । ನಾಶಗೊಳಿಸಿರುವ ॥ ಮೈಸಿರಿ ಹೆಮ್ಮೆಲ್ಲ ಮುರಿಯದಿರ್ದಡೆ ರಾವ । ಣೇಶ ನಾನಲ್ಲ ಮುಂದೆ ॥ ೭ ॥ ಇನಿತು ಮಾತಾಡುತ್ತಲಿರಲು ತಮ್ಮನ ಕೈಯ । ಧನುವ ತೆಕ್ಕೊಂಡು ರಾಮ ॥ ಕಣೆಯೊಂದನೆಸೆದು ರಾವಣನ ಶ್ವೇತಚ್ಛತ್ರ । ವನು ತುಂಡು ಗೈಯಲಾಗ ॥ ೮ ॥ ಇನಸುತ ಹಾರುತೀರ್ವೈದು ಕಿರೀಟವ । ಘನ ಬೇಗದಿಂದ ತಂದು ॥ ವನಜನಾಭನ ಕಣ್ಣ ಮುಂದಿಡಲದ ಕಂಡು । ಮನದಿ ಕೋಪಿಸಿದ ರಾಮ ॥ ೯ ॥

### ವಾರ್ಧಿಕ

ಲವನೆ ಕೇಳೇಕ ಶರದಿಂದ ರಾವಣನ ಛ । ತ್ರವ ತರಿಯಲಾ ಭಂಗದಿಂದೆ ತಿರುಗಿದನು ಮನೆ । ಗವಮಾನಲಕ್ಷ್ಮಿ ಮೈದೋರಿದಳು ಪ್ರಥಮ ಚುಂಬನ ದಂತಭಗ್ನದಂತೆ ॥ ಹುವಣಿಸಿದರಿತ್ತ ರಾಮನ ಪಾಳ್ಯದವರೆಲ್ಲ । ಜವದಿ ಲಗ್ಗೆಗೆ ನುಗ್ಗಲಪ್ಪಣೆಯ ಕೊಡಿರೆನಲು । ದಿವಸಾಧಿಪತಿಕುಲೋದ್ಭವನವರ ಸಂತಯಿಸಿ ರವಿಜಾತಗಿಂತೆಂದನು ॥

### ಕಾಪಿರಾಗ - ಅಷ್ಟತಾಳ

ಸಾರಿ ಕೋದರೆ ಪಾಪವಿಲ್ಲ । ನಮ್ಮ । ಧಾರಿಣಿಪತಿಗಳ ನಡತೆಯಿದಲ್ಲ ॥

ಸಾರಿ ‖ ಪ ‖ ಇನ್ನಾದರೆಮ್ಮನು ಕಂಡು । ಸತಿ । ಯನ್ನು ತಂದಿತ್ತು ತಮ್ಮನ ಕೂಡಿಕೊಂಡು ‖ ಚೆನ್ನಾಗಿದ್ದರೆ ಬಂದ ದಂಡು । ಪೋಪು । ದನ್ಯಾಯವಲ್ಲ ಕೀರ್ತಿಯನು ಮುಂಕೊಂಡು ‖ ಸಾರಿ ‖ ೧ ‖ ಭ್ರಾಂತಿ ಬುದ್ಧಿಗಳೆಲ್ಲ ಬಿಡಲಿ । ತನ್ನ । ಪಂಥ ಪೌರುಷವನಾಚೆಯೊಳು ಕಟ್ಟಿಡಲಿ ‖ ಸಂತಾನ ಸಹಿತ ಬಾಳಿರಲಿ । ಸಾಯು । ವಂಥಾದಿದ್ದರೆ ನಮ್ಮೊಳಿದಿರೊಡ್ಡಿ ಬರಲಿ ‖ ಸಾರಿ ‖ ೨ ‖ ಸಂಧಾನಕೋರ್ವನ ಕಳುಹಿ । ನಾವೀ । ಗೆಂದ ಮಾತುಗಳ ರಾಕ್ಷಸನಿಗೆ ತಿಳುಹಿ ‖ ಬಂದರೊಳ್ಳಿತು ಮಾತನುಳುಹಿ । ಕಾರ್ಯ । ಹೊಂದದಿದ್ದರೆ ಬರಲಿತ್ತ ತಾನಿಳುಹಿ ‖ ಸಾರಿ ‖ ೩ ‖

**ಸೌರಾಷ್ಟ್ರ ರಾಗ - ತ್ರಿವುಡೆ ತಾಳ**

ದಾನವಾಂತಕನೆಂದ ಮಾತಿಗೆ । ಭಾನುಸುತ ತನ್ನಿಂದ ಜ್ಯೇಷ್ಠನ । ಸೂನುವನು ಬೀಳ್ಕೊಟ್ಟನರಿ ಸಂ । ಧಾನಗೊಳಲು ‖ ೧ ‖ ಭಾನುಮಾರ್ಗವ ನಡರಿ ದುರ್ಗವ । ಜಾಣನಂಗದ ಬರಲು ಕೇರಿಯ । ಮಾನಿನಿಯರಂಜಿದರು ಮೊದಲದು । ತಾನೆ ಎಂದು ‖ ೨ ‖ ಸೀರೆಗಳ ನಡಗಿಸಿದರೆಣ್ಣೆಯ । ದೂರದಲಿ ಬಚ್ಚಿಟ್ಟು ಬಂದರು । ನೀರ ಚಿಮ್ಮಿದರೊಲೆಗೆ ಓಂದಣ । ಮಾರಿಗಂಜಿ ‖ ೩ ‖ ಬಿದಬಿದರಿ ವಾನರನ ಬಾಲದ । ತುದಿಯನೀಕ್ಷಿಸಿ ಕಿವಿಯೊಳೇ ಕಾಂ । ತದಲಿ ಮಾತಾಡುವರು ಕೆಲರಿದು । ಬದಲೆನುತಲಿ ‖ ೪ ‖ ಸಣ್ಣವರು ನೋಡಿದರೆ ಬಾಳೆಯ । ಹಣ್ಣುಗಳ ಕರೆಕರೆದು ಕೊಡುವರು । ಪುಣ್ಯವುಳ್ಳದೆನುತ್ತ ಕೆಲ ಬರು । ಮನ್ನಿಸುವರು ‖ ೫ ‖ ಇಕ್ಕೆಲದೊಳಂಗಡಿಯ ಕದಗಳ । ನಿಕ್ಕುವವ ರನು ಹಿಡಿದು ಭರಣಿಯ । ಸಕ್ಕರೆಯ ಮೆಲುತರಮನೆಯನೊಳ । ಪೊಕ್ಕನಾಗ ‖ ೬ ‖ ತಡೆದ ಬಾಗಿಲ ಭಟರ ಮಂಡೆಯ । ಬಡಿದನಾ ಕಂಕುಳಿನ ಮರದಲಿ । ಕಡೆಗೆ ಕುಳಿತನು ಬಂದಿದಿರು ಚಾ । ವಡಿಯ ಮುಂದೆ ‖ ೭ ‖

**ಭಾಮಿನಿ**

ಬಾಲವನು ಸುರುಟಿಕ್ಕಿ ಕುಳಿತನು । ಕಾಲಭೈರವನಂತೆ ಜನರೊ । ಡ್ಡೋಲಗದೊಳಿದ್ದವರು ಕೆಲರೊಳಸರಿದರಲ್ಲಲ್ಲಿ ‖ ಕಾಳಗದ ತೆರನಲ್ಲ ತಮ್ಮಾವ। ರೋಳಿಗದ ಕಪಿಯೆನುತ ಬಳಿಕ ವಿ । ಶಾಲಮತಿ ನಡೆತಂದು ಮಾತಾಡಿಸಿದ ನಂಗದನ ‖ ೧ ‖ ಮದದ ಪೋಡಿಯ ಮಂದಹಾಸದ । ವದನ ಮುದದ

ಸ್ವಾಮಿ ಕಾರ್ಯಾ । ಸ್ಮದದ ಸಂಪತ್ತಿನ ಸಗಾಢದಲಸುರನಿದಿರಿನಲಿ ॥ ಪ್ರದಿದ ಗರ್ವದ ಗೌರವದಿ ಕುಳ್ಳಿದನು ಕುಂಡಲಿಯಂತೆ ಲಾಂಗೂ । ಲದ ಪರಾಸನದಲಿ ನಿರೀಕ್ಷಿಸುತರಿಭಟಾವಳಿಯ ॥ ೨ ॥

ಮಧ್ಯಮಾವತಿ - ಏಕತಾಳ

ಏನು ಸಡಗರ ಖಳಸಭಾಸ್ಥಾನ । ತಾ ನೆರೆದಿಹುದು ರಾಕ್ಷಸರ ವಿತಾನ ॥ ಏನು ॥ ಪ ॥ ಮುಖಗಳೆರಡು ಮೂರು ನಾಲ್ಕೈದರಪರ್ಯಾರು । ಮುಖ ನಿರೀಕ್ಷಿಸಲಾಗಿ ದಶಪರಿಯಂತ ॥ ಮುಖವಿಹುದಿದರೊಳು ಭೂಪತ್ರಿಯನು ರಾತ್ರಿ । ಮುಖದೊಳು ಕದ್ದು ತಂದಧಮನಾರಯ್ಯ ॥ ಏನು ॥ ೧ ॥ ಹೇಳ ಲಾಗದೆ ಬಲ್ಲವರು ಭೂಮಿಪಾಲಕ । ಹೇಳಿ ಕಳುಹಿದಂಥ ರಾಜಕಾರ್ಯವನು ॥ ಹೇಳಿ ಹೋಗಲು ಬಂದೆ ಪ್ರತಿಭಟ ನಾನಲ್ಲ । ಹೇಳಿ ಸೀತೆಯ ತಂದ ಕಳ್ಳ ನಾರಯ್ಯ ॥ ಏನು ॥ ೨ ॥

ಭಾಮಿನಿ

ನಗರದಹನದ ಕಪಿಯು ಮೋಡಿಯ । ಮಿಗಿಸುತಿದೆ ಮಾತಿನಲಿ ವದನದ । ಹೊಗರು ಹೊಸಪರಿಂಹಾಗಿ ತೋರುತ್ತಿದೆ ವಿವೇಕಿಸಲು ॥ ವಿಗಡ ನಿವನಹುದೆಂದು ಮನದಲಿ । ಬಗೆಯರಿದು ಬಳಿಕಾ ಪ್ರಹಸ್ತನು । ಮುಗುಳು ನಗೆಯಲಿ ನುಡಿದನಾ ಕಪಿರಾಜ ಪುತ್ರಂಗೆ ॥

ಪಹಡಿ ರಾಗ - ಅಷ್ಟತಾಳ

ಆರೋ ಬಂದಾ ಕಪಿ ತಾನು । ನಿನ್ನ । ದಾರಟ್ಟಿದರು ಕಾರ್ಯ ವೇನು । ನೋಡೆ । ಮೂರು ಕಣ್ಣವನಂತೆ ನೀನು । ನಮ್ಮ । ದ್ವಾರ ಪಾಲಕರಸಂಜಿಸುತಲಿ ಬಲು ಪೊನೆ । ಗಾರನಂದದೊಳತಿ ಗರ್ವದಿ ಕುಳಿತಿಹೆ ॥ ಆರೋ ॥ ೧ ॥ ಲೇಸು ನಾ ಪೇಳ್ವೆ ಬಂದೊಳವ । ಕೇ । ಳಾ ಶೂರ್ಪಣಖೆಯ ಕೃತ್ರಿಮವ । ಕಂಡು । ನಾಸಾ ಛೇದಿಸಿ ಕೊಳುಗುಳವ । ಗೈದು । ದೂಷ ಣಾದ್ಯರ ಶಿರವಿಳುಹಿಸಿ ಮೆರೆವಂಥ । ದಾಶರಥಿಯ ಕಡೆ ದೂತನಾಗಿರುವೆನ್ನೈ॥ ಆರೋ ॥ ೨ ॥ ಮೈಯೊಳಿಪ್ಪರ ಮದವೇಕೆ । ಎರಡು । ಕೈಯ ಪರ್ವತ ವೃಕ್ಷ ಸಾಕೆ । ನ । ಮ್ಮೈಯ್ಯನವರು ಕಾಂಬುಬೋಕೆ । ಈಗ । ಬಾಯ

ಹೊಯ್ದುವರು ಪೋಗಾ ಕಡೆಯಲಿ ನಿನ್ನ । ಕೈಯಾಯುಧವ ಬಿಟ್ಟು ಕೆಳ ಗಿಟ್ಟು ಮಾತಾಡು ॥ ಆರೋ ॥ ೩ ॥ ಬೆದರುವುದೇಕೆ ನೀವೆಲ್ಲ । ನಿಮ್ಮೊ । ಳ್ಕದನಕೆ ಬಂದವನಲ್ಲ । ಶ್ರೀ । ಪದುಮಲೋಚನನೆಂದ ಸೊಲ್ಲ । ದಶ । ವದನಗೆ ಹೇಳಿ ಕಳುಹಿದುದ ಪೇಳಿಯೆ । ಬದಲುತ್ತರವನೊಯ್ವ ಚದುರನು ನಾ ಕಾಣ್ಕೆ ॥ ಆರೋ ॥ ೪ ॥ ಮರದಿಂದ ಮರಕೆ ಹಾರುವಿರಿ । ಸಂಧಿ । ಮುರಿಯಾವೆಗಳನೇನನರಿವಿರಿ । ವಿಗೆ । ಪುರುಬುಗಳೆತ್ತಿ ಹಣ್ಕುವಿರಿ । ನೋಯೆ । ಕಿರಿಕಿರಿ ಕಿರ್ರನೆ ಟಿಟ್ಟಿರಿಗುಟ್ಟುತ್ತ । ಭರದಿಂದಲೋಡುವ ಭಟರು ನೀವಲ್ಲವೈ ॥ ಆರೋ ॥ ೫ ॥ ದುರುಳ ಬುದ್ಧಿಗಳನ್ನು ಕಲಿಸಿ । ಚಾಡಿ । ತರಳೆಯುಸರಸಗೆ ತಿಳಿಸಿ । ನೀತಿ । ತೊರೆದ ಧರ್ಮವ ನಿತ್ಯ ಗಳಿಸಿ । ಪರ । ತರುಣಿಯರನು ಬಲಾತ್ಕಾರದಿ ಹಿಡಿತಂದು । ಸೆರೆಯೊಳಿಕ್ಕಿಸುವಂಥ ಮಂತ್ರಿ ನೀನಲ್ಲವೈ ॥ ಆರೋ ॥ ೬ ॥ ಅಂಗವಿಲ್ಲದ ಮಾತನಾಡಿ । ದಶ । ಸಂಗಳ ಕಳೆಕೊಂಬೆ ಹೇಡಿ । ನಿ । ನ್ನಂಗವಣೆಯು ಬಲು ಷೋಡಿ । ಈಗ । ಭಂಗಿಸಿ ನಾವು ಕೊಂದರೆ ಕೇಳುವವರ್ಯಾರು । ಮಂಗಚೇಷ್ಟೆಯ ಬಿಟ್ಟು ಜತನದಿ ಮಾತಾಡು ॥ ಆರೋ ॥ ೭ ॥ ಇರುಳೊಳು ಕಾಡೆಲ್ಲ ನಡೆದು । ಮೂಗು । ಪರಿಯಂತ ಮದ್ಯವ ಕುಡಿದು । ಅಲ್ಲಿ । ಪರರ ಹೆಂಗಳನಟ್ಟಿ ಹಿಡಿದು । ಮತಿ । ಮರೆದು ಬಳಿಕ ತಲೆತಿರುಗಿ ಬೀಳುತ್ತಲಿ । ನೊರೆ ನೊರೆ ಕಾರುವ ಖಳರು ನೀವಲ್ಲವೈ ॥ ಆರೋ ॥ ೮ ॥

### ಕೇದಾರಗೌಳ ರಾಗ - ಅಷ್ಟತಾಳ

ಮಾಳಿನೊಳಗೆ ಜಾಣನಹುದು ನಿನ್ನನು ಪೆತ್ತ । ಮಾತೆ ಯಾರಯ್ಯ ಹೇಳು ॥ ತಾತನೆಲ್ಲಿಹನಾವ ದೇಶ ರಕ್ಷಿಸಿದಂಥ । ದಾತನಾರದ ತಿಳುಹು ॥ ೧ ॥ ತಾತ ನಿಮ್ಮವನ ತೊಟ್ಟಿಲ ಬಳಿಯಲಿ ಕಟ್ಟಿ । ದಾತನು ತಾಯಿ ತಾರೆ ॥ ಭೂತಳಪತಿ ರಾಮದೂತನಂಗದನೆಂಬ । ಪ್ರೀತಿಯ ಪೆಸರೆನಗೆ ॥ ೨ ॥ ಲೇಸು ಮಾಡಿದನು ಸುಗ್ರೀವ ಹಿಂದಣ ಮನ । ಕ್ಲೇಶವ ಬಿಡದೆ ನಿನ್ನ ॥ ಕೈಸೆರೆಗಿಕ್ಕಿದನೀಗ ಮನದೊಳಿದ್ದ । ವಾಸಿಯ ನಡೆಸಬೇಡ ॥ ೩ ॥ ದೋಷ ಕರ್ಮವ ತಂದೆ ಮಾಡಿದರಿಂದ ಸ । ರ್ವೇಶನಪ್ಪಣೆಯೊಡ್ಡಿತು ॥ ಅಸುರ ಗುಣಗಳು ಬಂತು ನಿಮ್ಮವನಿಗು । ನೀ ಸ್ವೈರಿಸೆರೆದು ದಿನ ॥ ೪ ॥ ಅನ್ಯಾಯ ರವಿಜ ಮಾಡಿದರೇನು ನಮಗೆ ನೀ । ಸಣ್ಣವನಾದ ಮೇಲೆ ॥

ನಿನ್ನ ರಾಜ್ಯವ ನಿನಗಿತ್ತುಪಚಾರದಿ । ಮನ್ನಿಸಿ ಕಳುಹುವೆಪ್ಪ ॥ ೫ ॥ ಕನ್ಯೆಯ
ಕದ್ದು ತಂದಂಥ ರಾವಣನೆಂಬ । ಕುನ್ನಿ ಯಾರೆಂದೆನುತ ॥ ಕಣ್ಣಿಗೆ ಕಾಣಿಸಿ
ಕೊಡಲದರಿಂ ಹೆಚ್ಚು । ಮನ್ನಣೆ ನಮಗಿಲ್ಲಪ್ಪೆ ॥ ೬ ॥ ಬಾಲ ನೀನರಿಯೆ
ಬಾಯಿಗೆ ಬಂದ ವಚನವ । ಹೇಳಿ ಹಿಂದೊಂದು ಮಂಗ ॥ ಬಾಲವ ಸುಡಿಸಿ
ಲಜ್ಜೆಯಲಿ ಪೋದವನಂಥ । ಕಾಲ ಬಪ್ಪುದು ತಪ್ಪದು ॥ ೭ ॥ ಕೇಳಲಿಲ್ಲವೆ
ಬಂದ ಕಪಿಯು ಪೋತಗಳೆಲ್ಲ । ಬಾಲಸುಡುಕ ನೀನೆಂದು ॥ ಆಲಿ ಬೊಬ್ಬಿರಿ
ದಟ್ಟಿ ಬದಲು ಬಂದವ ನಮ್ಮ । ಬಾಲವ ಕೆಣಕಿ ನೋಡೈ ॥ ೮ ॥ ಎಷ್ಟು
ನೀ ಚಪಲತ್ವ ಕಲಿತೆಯಾದರು ನಿನ್ನ । ಹುಟ್ಟು ಮರ್ಕಟನೆಂಬರು ॥ ಸೃಷ್ಟೀಶ
ನಿನ್ನೊಳೀದಂತರಂಗದ ಮಾತ । ಕೊಟ್ಟು ನೀ ನಡೆ ಸುಮ್ಮನೆ ॥ ೯ ॥ ಇಷ್ಟು
ನೀ ಪಾರುಪತ್ಯವ ಮಾಡಿದರು ದೊರೆ । ಯಿಟ್ಟ ಚಾರಕನಲ್ಲವೆ ॥ ತುಟ್ಟ
ತುದಿಯ ಮಾತಿದೀಗ ರಾವಣನೆಂಬ । ಭ್ರಷ್ಟನಾರಯ್ಯ ಹೇಳು ॥ ೧೦ ॥

**ಶಂಕರಾಭರಣ ರಾಗ - ಅಷ್ಟತಾಳ**

ಕಂಡೆಯ । ಕಡು ವೀರ ರಾವಣನ ನೀ । ಕಂಡೆಯ ॥ ಪ ॥ ಕಂಡೆಯ
ಕಪಿ ಕಡು ಜಾಣ । ಮಾ । ರ್ತಂಡ ಪ್ರಕಾಶ ಪ್ರವೀಣ । ಸುಪ್ರ । ಚಂಡ
ನಿರತ ಪಂಚ ಬಾಣ ॥ ಅಖಿ । ಳಾಂಡ ಕೋಟಿ ಬ್ರ । ಹ್ಮಾಂಡ ನಾಯಕ
ಶತ್ರು । ಖಂಡನ ರಿಪುಗಜ । ಗಂಡಭೇರುಂಡನ ॥ ಕಂಡೆಯ ॥ ೧ ॥
ಸಂಗರ ವಿಜಯ ವಿಹಾರ । ಶಿವ । ಲಿಂಗಪೂಜೆಯಲಿ ವಿಸ್ತಾರ । ಚತು । ರಂಗ
ವೇದದ ಸದ್ವಿಚಾರ ॥ ಕರು । ಣಂಗಳಿಂದಖಿಳ ಲೋ । ಕಂಗಳನಾಳ್ವ ಉ ।
ತ್ತುಂಗ ಬಲಾಢ್ಯ ಶ್ರೀ । ಮಂಗಳ ಕಾಂತಿಯ ॥ ಕಂಡೆಯ ॥ ೨ ॥ ಶಿವ
ನಿಂದಾಯುಷ್ಯವ ಪಡೆದ । ಮತ್ತೆ । ದಿವಿಜರೆಲ್ಲರನಟ್ಟಿ ಹಿಡಿದ । ಸೊಕ್ಕಿ ।
ದವರ ತಗ್ಗಿಸಿ ಬಾಯ ಹೊಡೆದ ॥ ಜನ । ನಿವಹಚ್ಚರಿಗೊಳ । ಲವನಿಜೆಯನು
ಬಂಧ । ನವ ಮಾಡುತೊಡ್ಡೋಲ । ಗವನಿತ್ತು ಕುಳಿತನ ॥ ಕಂಡೆಯ ॥ ೩ ॥

**ಭಾಮಿನಿ**

ಈತನೇ ದಶಕಂಧನಾ ರಘು । ನಾಥನಿಲ್ಲದ ವೇಳೆಯಲಿ ಭೂ । ಜಾತೆ
ಯನು ಕದ್ದೊಯ್ಯ ಸಮಯದಿ ತಡೆದ ಖಗಪತಿಯ ॥ ಘಾತಕವ ನೆರೆ
ಮಾಡಿ ಕೊಂದಾ । ಪಾತಕನ ನೋಡಿದರೆ ದೋಷದ । ರೀತಿಗಿದು ಮೊನೆಯೆ
ನುತ ತನ್ನೊಳು ಮಾತನಾಡಿದನು ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಕೋಪ ನಿಮಗೇಕಿನಿತು ಸರಿಸ । ಲ್ಲಾಪವೇ ನಾವೀ ನಿಶಾಚರ । ರೂಪಿ ನವರುಂಟಾಗಿ ಕೇಳಿದೆ । ವೀ ಪರಿಯೊಳು ॥ ೧ ॥ ಆ ಪರಂತಪ ಬಲಿಯ ಭವನದ । ಕೈಪರೆಯು ನಾರಿಯುತ ವಚನಾ । ಳಾಪ ಹಾಸ್ಯದ ಭಿಕ್ಷದವನೀ ಪಾಪಿಯಹುದೆ ॥ ೨ ॥ ಘನಪರಾಕ್ರಮಿ ಕಾರ್ತವೀರ್ಯಾ । ರ್ಜುನನೊಡನೆ ಸಲೆ ಮತ್ಸರಿಸಿ ಸೆರೆ। ಮನೆಯೊಳಗೆ ಕುರಿಯಂತೆ ಸಿಲುಕಿದ। ದನುಜನಿವನೆ ॥ ೩ ॥ ವನಿತೆ ವೇದಾವತಿಯ ಶಾಪಕೆ । ತನುವ ತೆತ್ತವನೀತನಲ್ಲಲೆ । ಮನದ ಭಯ ನಿಮಗೇಕೆ ತಿಳುಹಿಸಿ । ರೆನಗೆ ಪರಿಯು ॥ ೪ ॥ ತೋಳ ದರ್ಪದಲುಬ್ಬಿ ವಾಲಿಯ । ಬಾಲಕನ ಬಚ್ಚಣೆಯು ತೊಟ್ಟಿಲ । ಕಾಲ ದೆಸೆಯಲಿ ಕಟ್ಟುವಡೆ ದಿಹ । ಖೂಳನಲ್ಲೈ ॥ ೫ ॥ ಶೂಲಿಯಲಿ ಗರ್ವಿಸಿ ಮಹೀಧರ । ಮೂಲದಲಿ ಕೈಸಿಕ್ಕಿನಾಯೋ । ಲೂಳಿದವ ತಾನೀತನಲ್ಲವೆ । ಹೇಳಿರಯ್ಯ ॥ ೬ ॥ ಜನಕ ಜೆಯು ವೈವಾಹದಲಿ ಶಿವ । ಧನುವಿನಲಿ ನರಿ ಸಿಕ್ಕು ಸಿಕ್ಕಿದ । ಶುನಕ ತಾನಿವ ನಲ್ಲವೇ ಸುಡಿ । ಘನತೆಗಳನು ॥ ೭ ॥

### ಭಾಮಿನಿ

ಆಗಲಾಗದೆ ಪರಾಣಲಿವನೊಡ । ನಾ ಗಭೀರಪರಾಕ್ರಮರು ಹೇ । ಳ್ದಾಗ ಮವನಿವಗೆಂಬೆ ಮಿಕ್ಕಿದ ಮಾತದೇಕೆಮಗೆ ॥ ರೋಗಿಗೌಷಧಸೊಗಸೆ ಹಿತಕರ । ವಾಗಿರಲು ನಮ್ಮುಕುತಿಗಳು ಕಿವಿ । ದಾಗಿಸುವೆವಾವೊಮ್ಮೆ ಕೇಳಲಿ ಕೇಳದಿರಲೆಂದ ॥

### ಸವಾಯ್ ರಾಗ - ಏಕತಾಳ

ಏನಪ್ಪ ರಾವಣೇಂದ್ರ । ನೀನಾ ಜಾನಕಿಯನ್ನು । ಕಾಣದಂತೆ ಕದ್ದು ತರಬಹುದೇನಯ್ಯಾ ॥ ತಾನಾಗಿ ರಾಮಚಂದ್ರ । ಸೇನೆಯ ಕೂಡಿಕೊಂಡು ನೀನಿದ್ದ ಬಳಿಗೆ ಬಂದ ಕಾಣಯ್ಯಾ ॥ ೧ ॥ ನಿನ್ನ ಬಳಿಗೆ ರಾಮ । ನೆನ್ನ ಕಳುಹಿ ಕೊಟ್ಟ । ನಿನ್ನಾದ್ರು ಸೀತೆಯ ಬಿಡ ಹೇಳಯ್ಯಾ ॥ ತನ್ನಿಂದ ತಪ್ಪಿತೆಂದು । ಹೊನ್ನ ಕಾಣಿಕೆ ಕೊಟ್ಟು । ಚೆನ್ನಾಗಿ ಬೆನ್ನ ಮರೆಹೊಕ್ಕು ಬಾಳಯ್ಯಾ ॥ ೨ ॥ ಏತಕ್ಕೆ ಛಲ ರಘು । ನಾಥ ಮಾನವನಲ್ಲ । ವಾತ ನಾರಾಯಣ ಸ್ವಾಮಿ ಕಾಣಯ್ಯಾ ॥ ಸೀತೆಯು ಲಕ್ಷ್ಮಿ ಮಹ । ಶೇಷ ಲಕ್ಷ್ಮಣ ಸಹ ।

ಭೂತಳದೊಳಗವತರಿಸಿದಮ್ಮಾ ॥ ೩ ॥ ಮಂಡೋದರಿಯು ಬಹಳ। ಮಕ್ಕಳ ಹೆತ್ತಳೆಂದು । ಕಂಡವರ ಬಾಯ್ತುತ್ತು ಮಾಡಬೇಡಮ್ಮಾ ॥ ಕೊಂಡೆಯುವ ಮಾತ ಕೇಳಿ । ಕೊಲಿಸದಿರು ಜಾತಿಯು । ದಿಂಡತನದಿ ಸಾಯಲೇಕೆ ನೋಡಮ್ಮಾ ॥ ೪ ॥ ರುಂಡಮಾಲೆಯನುಟ್ಟು । ಕೊಂಡಂಥ ಶಿವ ಕೊಟ್ಟು ದುಂಡು ಸೌಖ್ಯದೊಳಿರಬಾರದೇನಮ್ಮಾ ॥ ಚಾಂಡಾಲತನದಿ ಸಿಕ್ಕಿ । ತುಂಡ ತುಂಡದೊಳಿಪ್ಪ । ಹೆಂಡಿರ ಓಲೆಯು ಕಳಚಬೇಡಮ್ಮಾ ॥ ೫ ॥ ಈರೇಳು ಲೋಕದಲ್ಲಿ । ಪಾರು ಪತ್ಯವನ್ನು ಮಾಡಿ । ಪಾರಾಗಿ ಕೆಟ್ಟು ಹೋಗಬೇಡ ಕಾಣಮ್ಮಾ ॥ ಭೂರಿ ಸಂಪತ್ತು ತುಂಬಿ । ಸೇರಿಕೊಂಡಿಪ್ಪ ಲಂಕೆ । ಊರೆಲ್ಲ ಹಾಳುಮಾಡಬೇಡ ಕಾಣಮ್ಮಾ ॥ ೬ ॥ ಶೂರುಪನಖಿ ಹುಚ್ಚು । ಮೂಳಿಯ ಮಾತುಕೇಳಿ । ವೀರ ಖರದೂಷಣರೇನಾದವಮ್ಮಾ ॥ ಸಾರವ ನೋಡಿಕೊಂಡು । ಸಕಲವ ತಿಳಿದು ದೊಡ್ಡ । ಮಾರಿಯ ಬಾಯ ಹೊಕ್ಕು ಸಾಯದಿಮ್ಮಾ ॥ ೭ ॥

### ಭೈರವಿ ರಾಗ - ಏಕತಾಳ

ಇನಿತೆಂದಾ ನುಡಿ ಕೇಳಿ । ಆಗ । ದನುಜನು ರೋಷವ ತಾಳಿ ॥ ವನ ಚರನನು ಹೊಯ್ಯೆಂದಾ । ಅಂಗ । ದನ ಮುತ್ತಿತು ಖಳ ವೃಂದ ॥ ೧ ॥ ಗಜ ರಥ ತುರಗಗಳಿಂದಾ । ಖಳ । ವ್ರಜಭಟರುಗಳೈತಂದಾ ॥ ಭುಜಬಲಗಳ ತೋರೆಂದಾ । ಸುರ । ವಜನ ಕುಮಾರಕ ಕೊಂದ ॥ ೨ ॥ ಈಟಿಯುವರ ಸದೆ ಬಡಿದ । ಬಿ । ಲ್ಲಾಟದವರ ಬೆನ್ನೊಡೆದ ॥ ಮೋಟ ಗಜದ ಕಾಲ್ಪಿಡಿದ । ಕೊಂದು । ಕೋಟೆಯ ಹೊರಗೆ ಬಿಸಾಡಿದ ॥ ೩ ॥ ಬೀಳುವ ಗಜ ತುರಗ ವನು । ರಾಮ । ಕೇಳಿದ ಬಲು ಬೊಬ್ಬೆಯನು ॥ ಕಾಳಗವಾಯ್ತೆಂಗದಗೆ । ಶಿಶು । ತಾಳುವುದೆಂತೀ ಬಗೆಗೆ ॥ ೪ ॥ ಮರುತಾತ್ಮಜ ನೀ ಬೇಗ । ಹೋಗಿ ಕರೆತಾರಂಗದನೀಗ ॥ ತೆರಳೆಂದೆನೆ ಶರಣೆಂದ । ಬಲು । ತರ ರೌದ್ರದಿ ನಡೆ ತಂದ ॥ ೫ ॥

### ಕಂದ

ಕೈಮರ ಗಿರಿಯಿಂದವರಂ । ಹೊಯ್ದೊರಗಿರಿಸುವಂಗದನನು ಕಂಡಾ ಕ್ಷಣದಿಂ ॥ ಕೈತಡೆವುತ ಮರುಳೆನ್ನುತ । ದೈವ್ಯತ ಹನುಮಂತ ಪೇಳ್ದ ತಾತಾಯುತರ್ಗಂ ॥

### ಜಹಜು ರಾಗ - ಏಕತಾಳ

ಏನವತಾರ ವಾಲಿನಂದನ । ಇಂಥ । ಆನೆ ಕುದುರೆಯಿದ್ದ ಸೇನೆ ಕೊಲುವುದಿದು ॥ ಏನವತಾರ ॥ ಪ ॥ ನೀತಿ ಪೇಳ್ವರೆ ನೀನು ಬಂದರೆ । ಇಂತು । ಘಾತಕ ರಕ್ಕಸರ ಕೊಂದರೆ । ರಘು । ನಾಥನು ಸಹ ಭಾನು । ಜಾತಕೋಟಿಪಸುವರು ॥ ಏನವತಾರ ॥ ೧ ॥ ಪೋಗುವ ಶ್ರೀರಾಮನಲ್ಲಿಗೆ । ನಾಳೆ । ಪೇಗೂ ಬರುವುದುಂಟು ಇಲ್ಲಿಗೆ । ಮುಂದೆ । ರಾಘವನಿದಿರು ತೋ । ರಾಗ ನಿನ್ನಯ ಶೌರ್ಯ ॥ ಏನವತಾರ ॥ ೨ ॥

### ಕಂದ

ಎಂದಾ ಮಾರುತನಂದನ । ಕೊಂದಾಟವ ನಿಲಿಸೆ ದನುಜನಿದಿರೊಳು ನಿಂದು ॥ ಮುಂದಿನ್ನಾಗುವ ಕಾರ್ಯದ । ಹೊಂದಿಕೆಯನು ಪೇಳ್ದನಾಗ ರಾವಣನೊಡನಂ ॥

### ಆನಂದಭೈರವಿ ರಾಗ - ಏಕತಾಳ

ಏನಮ್ಮಾ ನಿನ್ನಂತರಂಗ । ಮಾನವಲ್ಲದೀ ಪ್ರಸಂಗ । ವೇನಯ್ಯಾ । ಮುಂದಿ । ನ್ನೇನಮ್ಮಾ ॥ ೧ ॥ ಸೃಷ್ಟಿಜಾತೆಯ ನೀ ತಂದು । ಕೊಟ್ಟು ರಾಮಚಂದ್ರನ ಕೂಡಿ । ಬಾಳಿಂತು । ಕೆಡಲು । ಬೇಡಂತು ॥ ೨ ॥ ಜಗದ ದೈವದ ಕೂಡೆ ಇಂತು । ಹಗೆಯು ಬೆಳೆಸಿಕೊಂಡರೆಂತು । ಇರುವುದು । ಕೀರ್ತಿ ಬರುವುದು ॥ ೩ ॥ ತಮ್ಮನ ನೀ ಕೂಡಿಕೊಂಡು । ಸುಮ್ಮಾನದಿಂದಲೆ ಸುಖದೊ । ಳಿರುವೆಯಾ । ರಣಕೆ । ಬರುವೆಯಾ ॥ ೪ ॥ ಕಡೆಗೆ ನೀನೆಂಬ ಮಾತೇನು । ಒಡೆಯನ ಪಾದದೊಳೇನ । ಹೇಳ್ವೆನು । ಪೇಳು । ಕೇಳ್ವೆನು ॥ ೫ ॥

### ವರಾಳಿ ರಾಗ - ಏಕತಾಳ

ಆಯಿತೇ ನಿನ್ನ ಮಾತು ಹೇಳಿ । ಮರ್ಕಟ ನಿವಾಳೀ । ಆಯಿತೇ ನಿನ್ನ ಮಾತು ಹೇಳಿ ॥ ಪ ॥ ಭೂತಳ ಕೆಳಕ್ಕೆ ಸರಿದರೂ । ಪಾತಾಳ ಮೇಲಕ್ಕೆ ನೆಗೆದರೂ ॥ ಸೀತೆಯ ನಾ ಬಿಟ್ಟು ಕೊಡುವ । ಮಾತುಂಟೇನೊ ಛೀ ಛೀ ಮರುಳೆ॥ ಆಯಿತೇ॥ ೧ ॥ ಆ ನೀರ ನಿಧಿ ಬತ್ತಿ ಹೋದರೇನು। ಭಾನು ತಣ್ಣಗಾದರಿನ್ನೇನು ॥ ಪ್ರಾಣವಳಿದು ಹೋಗದನಕ । ಕಾಣಿಸಿ ಶರಣೆಂಬುದುಂಟೆ॥

ಅಯಿತೇ ॥ ೨ ॥ ಇರುಳಾಧಿಪತಿಯು ಮೂಡಿದರೇನು । ಗರಳೆದ್ದು ಮಾತ ನಾಡಿದರೇನು ॥ ಶರೀರವಿದು ಬಾದು ರಾಮಗೆ ಶರಣೆಂದು ಹೇಳುವು ದುಂಟೆ ॥ ಅಯಿತೇ ॥ ೩ ॥

ವಾರ್ಧಿಕ

ರಘುವರನ ಸೇವಕರ ಹಿತಕರದ ವಚನವನು । ಬಗೆಗೊಳದೆ ಜರೆದು ಕಳುಹಿಸಿದನವರಿಬ್ಬರನು । ಪಗಲೊಡೆಯುವಂಶ ವಾರಿಧಿಚಂದ್ರನಿದಿರು ಕೈ ಮುಗಿದೆಂದರಾ ಪರಿಯನು ॥ ವಿಗಡ ರಾವಣ ಕಳುಹಿದುತ್ತರಂ ತಿಳುಹಲಾ । ಸಗರವಂಶಜ ನುಡಿದನಿನ್ನೇನು ನಿಮ್ಮ ಹವ । ಣೆಗೆ ತಕ್ಕ ಕಾರ್ಯಮಂ ವರ್ತಿಸುವುದೆನಲು ಲಗ್ಗೆಗೆ ಪಡೆದರಪ್ಪಣೆಯನು ॥

ಮುಖಾರಿ ರಾಗ - ಏಕತಾಳ

ಮುತ್ತಿದರಾ ದುರ್ಗವ । ವನಚರರೆಲ್ಲ । ಹತ್ತಿದರಾ ದುರ್ಗವ ॥ ಮುತ್ತಿದರಾ ॥ ಪ ॥ ಕೊತ್ತಳಗಳ ಮುರಿ । ವುತ್ತೊಡನೊಡನೆ ಭ । ಟೋತ್ತಮರುರುಡುಗುತ । ಸುತ್ತಲು ಕವಿದು ॥ ಮುತ್ತಿದ ॥ ೧ ॥ ಕತ್ತಿ ಕುಂತ ಗಳೊ । ಳೊತ್ತಿ ತಿವಿಯೆ ಬಿಸಿ । ನೆತ್ತರ ಕಾರುತ । ಲತ್ತ ಮರ್ಕಟರು ॥ ಮುತ್ತಿದ ॥ ೨ ॥ ಕೋಟೆಯ ಒಳಗಣ । ಈಟಿಯ ಗಾಯವ । ಸಾಟಿಯ ಮಾಡದ । ಸೂಟಿಯ ಭಟರು ॥ ಮುತ್ತಿದ ॥ ೩ ॥ ಚೂರಿಯೊಳಿರಿದರು । ಭಾರಿಯ ಪೆಟ್ಟಿನ । ತೋರಿಕೆಗೆಣಿಸದೆ । ವಾರಣದಿಂದ ॥ ಮುತ್ತಿದ ॥ ೪ ॥ ಬಾಣದ ತಗಲಿಗೆ । ಶೋಣಿತ ಸುರಿಯಲು । ಕಾಣಿಸಿಕೊಳ್ಳದೆ । ತ್ರಾಣ ಗಳೆಂದು ॥ ಮುತ್ತಿದ ॥ ೫ ॥

ಭಾಮಿನಿ

ಮುರಿದ ಕೈಕಾಲುಗಳ ಕಪಿಗಳ । ಹರಿದ ಹೊಟ್ಟೆಯ ಕರುಳುಗಳ ಜೋಲ್ವರಿದ ಮೂಗಿನ ಸಿಗಿದ ತುಟಿಗಳ ಸುರಿವ ರಕುತಗಳ ॥ ಮೊರೆವ ಭೇರಿ ಡಮಾಮಿ ವಾದ್ಯದ । ಭರಕೆ ನೆಲ ಬಾಯ್ಬಿಟ್ಟುದೋ ಎನೆ । ಮುರಿವ ಲಗ್ಗೆಯ ಕಪಿಕದಂಬಕ ಬಂದುದೊಳಸರಿದು ॥

### ಶಂಕರಾಭರಣ ರಾಗ - ಅಷ್ಟ ತಾಳ

ಹೋಯಿತು ಲಂಕೆ ರಾವಣಗೆ । ವಶ । ವಾಯಿತು ರಾಮಚಂದ್ರನಿಗೆ । ದಾಯಮೋರಿದುದಮರರಿಗೆ । ಎಂಬಂ । ತಾಯಿತೊಂದೇಕ್ಷಣದೊಳಗೆ ॥ ಪೆಟ್ಟಿ । ಗಾಯಲಾರದೆ ದಂಡು । ಬೀಯವಾದುದ ಕಂಡು । ಖೋಯೆಂದು ಭರದಿ ಪ । ಲಾಯನ ಗೈದರು ॥ ಹೋಯಿತು ॥ ೧ ॥ ಸುಂಡಿಲ ಮುರಿದ ರಾನೆಗಳ । ಕಲ್ಲು । ಗುಂಡಿನಿಂದಿಟ್ಟರಶ್ವಗಳ । ತಂಡ ತಂಡದ ಖಳರುಗಳ । ಕಡಿ । ಮಂಡೆಯನೊಡೆದ ಹುಬ್ಬುಗಳ ॥ ಪೂರ್ಣ । ಕಂಡು ರಾವಣ ನಾಚಿ । ಕೊಂಡು ಹೋಯಿತು ನಮ್ಮ । ದಂಡು ಎಂದೆನುತಲೆ । ಮಂಡೋದರಿಗೆ ಪೇಳ್ದ ॥ ಹೋಯಿತು ॥ ೨ ॥ ತೊಂಭತ್ತು ಕೋಟಿ ದಾನವರು । ಇವರ । ಡೊಂಬಿಗೆ ನಿಲಲಾರದವರು । ಬೆಂಬಿಡದಲ್ಲಿ ಸತ್ತವರು । ಎಲ್ಲ । ಕಂಬಿಟ್ಟರಲ್ಲಿ ನಿಂತವರು ॥ ಎಳೆ । ಕೊಂಬಡೀ ಸಮಯ ವಿ । ದೆಂಬುದರೊಳಗೆಲ್ಲ । ಜಾಂಬವಾದಿಗಳ ಕ । ದಂಬ ಮುತ್ತಿದರಾಗ ॥ ಹೋಯಿತು ॥ ೩ ॥ ಅರಮನೆ ಯೊಳು ಪೊಕ್ಕು ಕಂಡ । ಕಪಿ । ಪರಿವಾರವನು ದಶತುಂಡ । ಭರದಿ ಖಡ್ಗ ವನು ಕೈಕೊಂಡ । ಬಡಿ । ದುರುಳಿಸೆ ವಾನರ ರುಂಡ ॥ ಹಗ । ಲಿರು ಳಾಯಿತೋ ಮಂಡೋ। ದರಿ ಪುಣ್ಯದೊಳಗೆಂಬ। ತೆರನ ಕಾಣಿಸಿದುದೊಂ।ದರೆ ಗಳಿಗೆಯೊಳಿಲ್ಲ ॥ ಹೋಯಿತು ॥ ೪ ॥ ಕೊಬ್ಬಿದ ರಾಮಸೇನೆಯನು । ಕಾಣು। ತೊಬ್ಬನೋಡಿಸಿದ ರಾವಣನು । ಹಬ್ಬಿಸಿ ಖಳ ಸೇನೆಗಳನು । ಬಲು । ಬೊಬ್ಬಿಟ್ಟು ಹರಿಕರಿಗಳನು ॥ ಅಲ್ಲಿಂ । ದೆಬ್ಬಿದ ರಾಮನ ಪಾಳ್ಯವೆಂಬುದ ರೊಳ । ಗಬ್ಬಬಾಂಧವ ಪಶ್ಚಿ । ಮಾಬ್ಧಿಗಾದುದು ಬಿಂಬ ॥ ಹೋಯಿತು ॥ ೫ ॥

### ವಾರ್ಧಿಕ

ಓಡಿಸಿದನಾ ದಿವಸ ಬಳಿಕ ದುರ್ಗವ ಸಜ್ಜು । ಗೂಡಿಸಿದ ಮಾಲ್ಯ ವಂತನ ಮಾತ ಕೇಳದೆ ವಿ । ಭಾಡಿಸಿದ ಜಾನಕಿಯ ಮುಂದೆ ಮಾಯಾಶಿರವ ರೂಢಿಸಿದ ಕಪಟದಿಂದ ॥ ಮಾಡಿಸಿದನಸುರ ವಿದ್ಯುದ್ಜಿಹ್ವನಿಂದಲತಿ । ಜೋಡಿಸಿದ ರಾಘವನ ಶಿರದಂತೆ ಬಳಿಕ ಕುಣಿ । ದಾಡಿಸಿದ ಸುವ್ರತೆಯ ಬಳಿಗೈದಿ ಬಗೆ ಬಗೆಯ ನೋಡಿಸಿದ ಜನಕಸುತೆಗೆ ॥

### ಮೋಹನ ರಾಗ - ಅಷ್ಟ ತಾಳ

ನೋಡು ಸೀತೆ । ರಾಮನ ಶಿರವ । ನೋಡು ಸೀತೆ ॥ ಪ ॥ ಓಡಿ ಹೋದವರೊಂದು । ಗೂಡಿ ಸಂಗರದೊಳೆ । ಚ್ಚಾಡಿ ತರಿದು ತುಂಡು । ಮಾಡಿದ ಶಿರವ ॥ ನೋಡು ॥ ಅ ॥ ಥಳಥಳಿಸುವ ಮೊಗ । ಸುಳಿಗುರುಳಿನ ಸೊಗ । ಸಲರಂಬನ ಧನು । ಪೊಳೆವ ಪುರ್ಬುಗಳ ॥ ನೋಡು ॥ ೧ ॥ ಕನ್ನಡಿ ಕದಪಿನ । ಚಿನ್ನದ ರೇಖೆಯ ಸನ್ನೆಗೊಳಿಪ ಸೋಗೆ । ಗಣ್ಣಿನ ಚೆಲುವ ॥ ನೋಡು ॥ ೨ ॥ ಸಂಪಿಗೆ ಬಿರಿ ಮುಗು । ಳಂ ಪೋಲ್ವ ನಾಸದ । ಸೊಂಪಿನ ತುಟಿಗಳ । ಕೆಂಪಿನ ಸೊಬಗ ॥ ನೋಡು ॥ ೩ ॥

### ಸಾರಂಗ ರಾಗ - ಅಷ್ಟ ತಾಳ

ದೃಢವಾಯಿತೇನೆ ಸೀತೆ। ರಾವಣ ಜಗ । ದೊಡೆಯನೆಂದೆಂಬ ಮಾತು ॥ ತೊಡರಿಲ್ಲವಲ್ಲ ರಾಕ್ಷಸನ ಚಿತ್ತದೊಳಿದ್ದ । ಕಡಪ ತೀರಿಸಿ ಕೊಟ್ಟು ನಡೆಸಿ ಕೊಂಬುದಕಿಷ್ಟು ॥ ದೃಢ ॥ ೧ ॥ ಸಿಂಹನ ಗವಿಯ ಪೊಕ್ಕು । ಸಿಂಗಳೀಕವು । ಸಂಹರಿಸಲು ಬಲ್ಲುದೆ ॥ ಬ್ರಹ್ಮಾದಿ ಸುರರಿಂದ ಪೂಜ್ಯನು ದಶಕಂಠ । ನಿಮ್ಮಾತನಿದಿರಾಗುವನೆ ಏತಕಿದು ಭ್ರಮೆ ॥ ದೃಢ ॥ ೨ ॥ ಗರುಡನಿದ್ದೂರೊಳಗೆ । ಗಂಭೀರವಾ । ದುರಗನುತ್ಸಾಹವುಂಟೆ ॥ ತಿರುಗಿ ರಾಘವ ನಿನ್ನನೊಯ್ವನೆಂಬಾಸಗೆ । ಬರಿದೆ ನೀ ಮರುಳಾದೆ ಕಾಂತೆ ಸದ್ಗುಣವಂತೆ ॥ ದೃಢ ॥ ೩ ॥ ಕಾಯದ ಸುಖವಿಲ್ಲದೆ । ಸುಮ್ಮನೆ ನಿನ್ನ । ಪ್ರಾಯವ ದಂಡಿಸಿದೆ ॥ ಬಾ ಇನ್ನಾದರು ಬಲ್ಲಿದವನ ಮನದೊಳಿದ್ದ । ದಾಯವ ಸಲಿಸು ಪಟ್ಟದ ರಾಣಿಯಾಗುವೆ ॥ ದೃಢ ॥ ೪ ॥

### ವಾರ್ಧಿಕ

ಈ ತೆರದ ಮಾಯದಭಿರಂಜನೆಯ ಶಿರವ ಭೂ । ಜಾತೆ ಕಂಡಂಜಿ ಮೂರ್ಛಿತೆಯಾಗಿ ಮನಮರುಗಿ । ಧಾತುಗೆಟ್ಟಂಗನೆಯ ಮುಖತುಹಿನಕರ ರಾಹು ಸೋಕಿದಂತಾಯ್ತು ಕ್ಷಣಕೆ ॥ ಘಾತಕದ ತಲೆಯನೇನೆಂದರಿಯಳಬಲೆ ರಘು । ನಾಥನೇ ನಿಜವೆಂದು ಮುಖನಾಸ ನಯನಗಳ । ನೋತು ತಡವರಿಸಿ ಮುದ್ದಿಸುತೊಡನೆ ಮುಂಡಾಡಿ ಪ್ರೀತಿ ಬಿಡದಿಂತೆಂದಳು ॥

### ರಾಗ ಘಂಟಾರವ ತೋಡಿ - ಆದಿತಾಳ

ಮತ್ಪ್ರಾಣೇಶ ಧಾರಿಣೀಶ । ಸುಪ್ರತಾಪನೆ ॥ ಅಪ್ರಮೇಯಾನಂದ ಕಾಯ। ವಿಪ್ರಪ್ರಿಯ ರಾಘವಾಯ ॥ ೧ ॥ ದುರ್ಜನಕುಲವಿಘಾತ । ಸಜ್ಜನ ಪ್ರೀತ ॥ ನಿರ್ಜರಗಣವಂದಿತ । ಗರ್ಜನಸಿಂಧು ಸಮೇತ ॥ ೨ ॥ ಅಂಗಜ ಕೋಟಿ ಲಾವಣ್ಯ । ಆಶ್ರಿತವರೇಣ್ಯ ॥ ತುಂಗವಿಕ್ರಮಕಾರುಣ್ಯ । ಸಂಗೀತ ಲೋಲಾಗ್ರಗಣ್ಯ ॥ ೩ ॥

### ಕೇದಾರಗೌಳ ರಾಗ - ಅಷ್ಟತಾಳ

ನೋಡಿದೆಯ ನೀನು ಸರಮೆ ಪೂರ್ವದಲಿ ನಾ । ಮಾಡಿದ ಸುಕೃತಂಗಳ ॥ ನಾಡ ದೈವಗಳ ನಂಬಿದವರ್ಗೆ ಶಿವ ದಯ । ಮಾಡುವ ವಿಕೃತಂಗಳ ॥ ೧ ॥ ಅಣ್ಣ ತಮ್ಮರು ಬಂಧುಬಳಗದಾಸೆಯ ಬಿಟ್ಟು।ಎನ್ನವರಡಿಯ. ಕಾದೆ ॥ ಪುಣ್ಯದ ಫಲವಿಂತು ಮಾಡಿತು ಕಾರ್ಯವ । ಕಣ್ಣಾರೆ ಕಂಡೆಯಲ್ಲ ॥ ೨ ॥ ಜಗತಿಯೊಳೆಲ್ಲಾದರಿನ್ನಿಂಥ ಚೆಲುವಿನ । ಮೊಗವುಳ್ಳ ಪುರುಷರುಂಟೆ ॥ ಬಗೆಯಲಿನ್ನೆಷ್ಟು ಹೇಳಿದರೇನು ತ್ರಿಜಟೆ ಸಾ । ವಿಗೆ ದಾರಿ ತೋರೆ ನಗೆ ॥ ೩ ॥ ಇಂತೆಂದು ಸೀತೆ ಯೋಚಿಸಿದಂಥ ಹದನವ । ನಂತರಂಗದಲಿ ಪೋಗಿ ॥ ನಿಂತು ಕೊಂಡಾ ವಿದ್ಯುಜ್ಜಿಹ್ವ ಪೇಳಿದ ಕಾಮ । ಭ್ರಾಂತನಾದ ಸುರೇಶಗೆ ॥ ೪ ॥

### ವಚನ

ಇತ್ತಲಾಗಿ ಸರಮೆ ತ್ರಿಜಟೆಯರು ಕೌಳಿಕದ ಗಳರೇಖೆಯ ನೋಡಿ ಸೀತಾ ದೇವಿಯೊಡನೆ ಏನೆಂದರು ಎಂದರೆ-

### ರೇಗುಪ್ತಿ ರಾಗ - ಏಕತಾಳ

ನಿತ್ಯಮಂಗಲೆ ನೀನು । ನಿರುತ ಶಾಶ್ವತ ರಾಮ । ಸತ್ತು ಪುಟ್ಟುವುದೆಂಬ ಸಂಸಾರವೇನೆ ॥ ನಿತ್ಯ ॥ ೧ ॥ ಅತ್ತ ಬಿಸಾಡಸುರ । ಕೃತ್ರಿಮವಿದನು ನೀ । ನೆತ್ತಿ ದುಃಖಿಸುವರೆ । ಮತ್ತೇಭಗಮನೆ॥ ನಿತ್ಯ ॥ ೨ ॥ ಗಳದ ರೇಖೆಯ ಕಂಡು । ತಿಳಿದಳಂಜಿಕೆಗೊಂಡು । ಇಳೆಗೆ ಬಿಸಾಡಲಂದು । ಆಶ್ಚರ್ಯವೆಂದು ॥ ನಿತ್ಯ ॥ ೩ ॥ ಅಳುತ ಶಾಪವನಿತ್ತ । ಳಿಂತು ರಾಮರ ಬಾಣ । ವಿಳುಹಲಿ ಧರಣಿಗಾ । ಶಿರ ಪತ್ತನೆಂದು ॥ ನಿತ್ಯ ॥ ೪ ॥

### ವಾರ್ಧಿಕ

ಅರಸು ಮಕ್ಕಳು ಕೇಳಿ ಮರುದಿವಸದುದಯದಲಿ । ಕರಿತುರಗ ರಥ ಪಾದಚಾರಿಗಳ ಸೈನ್ಯಮಂ । ನೆರಹಿ ಭೈರವಗೆ ನೂರ್ಮಡಿಯಾದ ರಕ್ಕಸರ ಪರಿವಾರಮಂ ಕೂಡಿಸಿ ॥ ಸುರಪಜಿತು ಸಕಲ ಪಡೆಗಳ ನೆರಹಿ ನಡೆತಂದು । ಧುರಕೆ ನಿಲಲಾರ್ಭಟಿಸೆ ಕಂಡು ವಾನರರು ತರ । ಪರಿಸುತಿರಲಿತ್ತ ರಾಮನ ಪಾಳ್ಯದೊಳು ವಿಭೀಷಣ ಕಾಣುತಿಂತೆಂದನು ॥

### ಭೈರವಿ ರಾಗ - ಝಂಪೆತಾಳ

ಅವಧರಿಸು ರಾಜೇಂದ್ರ । ನಾತನೇ ಶಕ್ರಜಿತು । ಭುವನದೊಳಗತಿ ಭಟನು । ಭುಜಬಲಾನ್ವಿತನು ॥ ೧ ॥ ಈತನಂಜಿಕೆಗಾಗಿ । ಈಶನಜ ಮೊದಲಾಗಿ । ಶ್ವೇತಕುಂಜರರೂಢ । ಸೋತರುರೆ ಗಾಢ ॥ ೨ ॥ ಸಕಲ ದಿವಿಜಾದಿಗಳು । ಸೇವೆಯನು ಮಾಡುವರು ॥ ಅಖಿಳ ರಾಕ್ಷಸರುಗಳು । ಆಳಾದರವರು ॥ ೩ ॥ ಈತನೊಬ್ಬನು ನಮಗೆ । ಸೋತನಾದರೆ ಕಡೆಗೆ । ಏತಕೂ ಬೇಡವರ । ವ್ರಾತಗಳ ಬವರ ॥ ೪ ॥ ಕುಂಭಕರ್ಣನಿಗೆಂತು । ಕಡೆಗು ನಿದ್ರಾ ಭ್ರಾಂತು । ಕಾಂಬೆ ಮಿಕ್ಕಾದವರ । ಡೊಂಬಿಗಳ ವಿವರ ॥ ೫ ॥

### ಶಂಕರಾಭರಣ ರಾಗ - ಮಟ್ಟೆತಾಳ

ಎಂದು ರಾಮಚಂದ್ರನೊಡನೆ । ನಿಂದು ಬಿನ್ನವಿಸಲು ಗಡಣೆ । ಯಿಂದ ನೀಲ ಸಹಿತ ರವಿಜ । ಬಂದನಲ್ಲಿಗೆ ॥ ಒಂದು ಕಯ್ಯ ಶೈಲ ಮ । ತ್ತೊಂದು ಕಯ್ಯ ವೃಕ್ಷಗಳಲಿ । ವಂದಿಸುತ್ತ ರಾಮಭದ್ರ । ಗೆಂದನಿದಿರಲಿ ॥ ೧ ॥ ಇಳೆಯನೆಲ್ಲ ಮುದುಡಿ ಕಂಕು । ಳೊಳಗೆ ಧರಿಸ ಹೇಳು ಶರಧಿ । ಜಲವನೆಲ್ಲ ಕುಡಿದು ಕಾಲ । ನೆಳೆದು ತರುವೆವು ॥ ಲಲನೆಗಳನಣುಗನೊಬ್ಬ । ಸುಲಭ ದೈತ್ಯನೊಡನೆ ಕಾದಿ । ಗೆಲುವ ಬಗೆಗೆ ಚಿಂತೆವೆ । ಗ್ಗಳಿಸಲಾದುದೆ ॥ ೨ ॥ ಕಳುಹಿ ನೋಡಿ ರಾಮಪಾದ । ದೊಲವಿನಿಂದಲಿಂದ್ರಜಿತುವ । ತಲೆಯ ತಂದು ಕೊಡುವೆನೆನುತ । ಲುಲಿವುತಂಗದ ॥ ಇಳಿದ ಭರವ ಕಂಡು ನೀಲ । ಸುಳಿದು ಬೊಬ್ಬಿಡುತ್ತಲಾಗ । ದಳವ ಬಿಟ್ಟನೆಂದು ಪಾಳ್ಯ । ಗಳ ವಿಲಾಸದಿ ॥ ೩ ॥ ಬೊಬ್ಬಿಡುತ್ತ ಬರುವ ಕಟಕ । ಉಬ್ಬಟೆಯನು ಕಂಡು

ಖಳರಿ। ಗೊಬ್ಬರೊಬ್ಬರಿದಿರು ನಿಂದ। ರಬ್ಬರಿಸುತಲಿ॥ ಕೊಬ್ಬಿದಸುರ ಪಡೆಯು ಸಹಿತ। ಸರ್ಬವಾನರರನು ಗೆಲಿಯೆ। ಪರ್ಬಿತಮರಸೈನ್ಯ ರಣದ। ಹಬ್ಬ ವೆಸಗಿತು ॥ ೪ ॥

## ದ್ವಿಪದಿ

ತರಣಿನಂದನಗೆ ತಾ ನಿಂದ ಶಕ್ರಜಿತು। ವರ ಪ್ರಹಸ್ತಗೆ ನೀಲನೊಳು ಕಲಹವಾಯ್ತು ॥ ೧ ॥ ಕುಂಭನಿಗೆ ನಳನಾ ನಿಕುಂಭಗಂಗದನು। ಜಾಂಬವರಿ ಗಿದಿರಾದ ಧೂಮ್ರಲೋಚನನು ॥ ೨ ॥ ಶತಬಲಿಯು ದುರ್ಮುಖನು ಸೆಣಸಿ ದರು ಕಡೆಗೆ। ಪ್ರತಿಯಾದರಾ ಸುರಾಂತಕ ನರಾಂತಕಗೆ ॥ ೩ ॥ ಅತಿಕಾಯ ನಿದಿರಾದನಲ್ಲಿ ಲಕ್ಷ್ಮಣನ। ಖತಿಯಿಂದ ತಡೆದ ವೃಷಭ ಸುಪಾರ್ಶ್ವ ಖಳನ ॥ ೪ ॥ ಕನಲಿ ವಿಕ್ರಮದಿಂದ ಕಂಪ ನಡೆತಂದು। ಹನುಮಂತಗಿದಿರಾಗೆ ಮತ್ಸರ ದೊಳಂದು ॥ ೫ ॥ ವಜ್ರದಂಷ್ಟ್ರನ ಕೂಡೆ ಜಗಳ ಬೇಸತ್ತು। ವಜ್ರಧರನಂದ ನಗೆ ಒದಗಿತಾ ಮತ್ತು ॥ ೬ ॥ ಮಿತ್ರಘ್ನನೊಡನೆ ನಿಂದಾ ವಿಭೀಷಣನು। ಶತ್ರುತ್ವವಂ ಬಳಸುತೊಡನೆ ಕಾದಿದನು ॥ ೭ ॥

## ಭೈರವಿ ರಾಗ - ತ್ರಿವುಡೆತಾಳ

ಆಯಿತಾಗ। ಕಲಹಗ। ಳಾಯಿತಾಗ ॥ ಪ ॥ ರಾಯದಳ ರಾಕ್ಷಸರ ಪಾಳ್ಯದಿ। ಬಾಯ ಬೊಬ್ಬೆಯ ಕದನ ಕರ್ಕಶ ॥ ವಾಯಿತಾಗ ॥ ಅ ॥ ಶರಧಿ ಮಥನದೊಳಂದು ಪುಟ್ಟಿದ। ತೆರೆಗೆ ನೂರ್ಮಡಿ ಹೆಚ್ಚಿತು। ಧರಿಸಲಾರದೆ ಭೂಮಿಭಾರವ। ಕರಿಕಮಠರೆದೆ ಚುಚ್ಚಿತು। ನೆರೆದು ನೋಡುವ ಸುರ ಸಮೂಹದ। ಕರಣಗಳ ಸೆರೆ ಬಿಚ್ಚಿತು। ಸರಳ ಮೊನೆ ತರು ಗಿರಿಗಳಾಟದಿ। ಧರಣಿ ತಲೆ ನುಗ್ಗೊತ್ತಿತೀ ಪರಿ ॥ ಯಾಯಿತಾಗ ॥ ೧ ॥ ಬಾಣಗಳು ತಾಗಿದರೆ ಕಪಿಗಳು। ತ್ರಾಣದಿಂಪಲ್ಗಿರಿವುತ। ಆನಲಾರದೆ ಗಿರಿಯ ಬಡಿತಕೆ। ದಾನವರು ಭೋರ್ಗರೆವುತ। ಕಾಣುತುಭಯ ಬಲಂಗಳಲಿ ವ್ಯೈ। ಶೋಣಿತದ ಮಳೆ ಸುರಿವುತ। ಕ್ಷೋಣಿಗತ್ಯಾಶ್ಚರ್ಯವೆನೆ ಬಲು। ಪ್ರಾಣಗಳ ಲಂಘ ಮಾಡುತೀ ಪರಿ ॥ ಯಾಯಿತಾಗ ॥ ೨ ॥

## ಶಂಕರಾಭರಣ ರಾಗ - ಅಷ್ಟತಾಳ

ಬಹಳ ಮಂದಿ ಲಯವಾಯಿತು। ರಘೂ। ದ್ವಹನ ಪಾಳ್ಯದಿ ಕಪಿ ದಾನವರೊಳಗೆ ॥ ಬಹಳ ॥ ಪ ॥ ಏಳರ್ಬುದವೆಣಿಸಿದರು ದಾನವರಲ್ಲಿ।

ಪೇಳಲೇನಯ್ಯುದ್ಧ ಸಾವಿರ ಲಯವಾಯ್ತು ॥ ಕಾಲು ಕೈ ಮುರಿದಂಥವರ ಲೆಕ್ಕ ವನು ಮಾಡಿ । ಪಾಲು ಮಾಡುವರ್ಯಾರು ಪರಮಾತ್ಮ ಬಲ್ಲ ॥ ಬಹಳ ॥ ೧ ॥ ಕಲಿ ವಿಭೀಷಣನು ಮಿತ್ರಘ್ನ ರಾಕ್ಷಸನು ತ । ಮ್ಮೊಳಗೆ ಪೌರುಷ ಪಂಥ ಹೆಣೆಕೆಯಿಂದ ॥ ತಳಮುಗುಚಲು ಜಾವಪರಿಯಂತ ಹೊಡೆದಾಡ । ಲಿಳೆಗೊರಗಿಸಿದ ಮಿತ್ರಘ್ನ ರಾಕ್ಷಸನ ॥ ಬಹಳ ॥ ೨ ॥

### ವಾರ್ಧಿಕ

ದನುಜ ಮಿತ್ರಘ್ನ ರಾಕ್ಷಸನು ಯುದ್ಧದಿ ಬಿದ್ದ । ಹೆಣನ ನೋಡಲು ಪಾಪವೆಂದು ತಾವರೆಯ ಮಿ । ತ್ರನು ಪಶ್ಚಿಮಾಂಬುಧಿಗೆ ಸಾರಿದನು ತದ್ದಿನಂ ಶಕ್ರಜಿತು ಪಂಥದಿಂದ ॥ ಮನನೊಂದುರಿಪುಗಳಂ ಜಯಿಸಿಕೊಳದನಕ ಪ । ಟ್ಟಣವ ಹೊಗೆನೆಂದು ಮಿಕ್ಕೆಲ್ಲರಂ ಕಳುಹಿದಂ । ಘನ ಪರಾಕ್ರಮದಿಂದ ಮಾಯಕದ ಕಲ್ಪಿತವ ನೆನೆದು ಮಾಡಿದ ಘಾತವ ॥

### ಮಾರವಿ ರಾಗ . ಏಕತಾಳ

ಕಾಳಗಕೆನುತಲಿ । ಮೇಲಭ್ರದಿ ನಿಂ । ದಾಳುತನದಿ ವಿಷ । ಗಾಳಿಯು ಮಹಫಣಿ । ಗೋಲನು ಮಹಿಸಿ ಕ । ರಾಳ ಶರವ ಕಪಿ । ಪಾಳೆಯಕಿಟ್ಟನು । ತೋಳ ಬಲ್ಪಿನಲಿ ॥ ಪೇಳಲೇನು ॥ ೧ ॥ ಬಸಿವಾ ರುಧಿರವ । ನೊಸೆದು ಭೂತಂಗಳು । ದೆಸೆ ದೆಸೆ ತುಂಬುತ । ಪಸರಿಸಿತೆಲ್ಲವ । ಘುಸಣಿಗೊಳುತ ಪರ । ವಶನಾಗಲು ಪವ । ಡಿಸಿದುದು ವಾನರ । ವಿಸರವು ಜಯದಿ ॥ ಪೇಳಲೇನು ॥ ೨ ॥ ಹನುಮನಿಗೊಂಭ । ತ್ತಿನಜಗೆರಡು ಮ । ತ್ತನಲಜ ಗಾರಂಗ । ದನಿಗೀರ್ರೈದ । ಪನಸಗವಯ ಮುಖ । ವನಚರಸಂಕುಲ । ವನು ತಗಲಿತು ಭುಜ । ಗನ ಶರ ಬಂದು ॥ ಪೇಳಲೇನು ॥ ೩ ॥ ಒರಗಿದ ನೀಲನು । ಸೊರಗಿದ ಶತಬಲಿ । ಮರುಗಿದ ಗವಯ ಬಿ । ದ್ದೊರಳಿ ಸುಷೇಣನು । ಭರದಲಿ ನಿದ್ರಾ । ಜ್ವರದಿಂದಲಿ ಮೈ । ಮರೆತರು ಸುರತತಿ । ಕರಗಿದರೆಲ್ಲ ॥ ಪೇಳಲೇನು॥ ೪ ॥ ದುರುಳನ ಕಪಟವ। ನರಿತಾ ಕ್ಷಣ ತರ। ಹರಿಸದೆ ದೃಢದಲಿ। ಶರ ಸ್ವೀಕರಿಸುತ । ಶರಧಿಯೊರಗೆ ನೆಲ । ಸಿರುವನಂತನ ಮೇ । ಲೊರಗು ವಂದದಿ ರಘು । ವರ ಪವಡಿಸಿದ ॥ ಪೇಳಲೇನು ॥ ೫ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಉರಗಪಾಶದ ಬಿಗುಹಿನಲಿ ಮೈ । ಮರೆದನೆಂಬುದ ಕೇಳ್ದು ನಿಶಿಯಲಿ। ಗರುಡ ಬಂದೆಬ್ಬಿಸಿದ ಖಳರಾ । ರರಿಯದಂತೆ ॥ ೧ ॥ ಮರುದಿವಸದುದಯ ದಲಿ ಕೋಟೆಯ । ಸರಿದರಂದಿನ ಘಸಣೆಗೋಸುಗ । ಪುರದ ಜನ ತಲ್ಲಣಿಸೆ ರಾವಣ । ನರಿತು ಮನದಿ ॥ ೨ ॥ ಕರೆದನಾ ಧೂಮ್ರಾಕ್ಷ ರಾಕ್ಷಸ । ನುರು ಪರಾಕ್ರಮಿ ವಜ್ರದಂಷ್ಟ್ರನ । ಧುರ ಗೆಲುವ ಬಗೆಗೆಂದು ಕಳುಹಿದ । ಭರದೊಳಂದು ॥ ೩ ॥

### ಪಂಚಾಗತಿ ರಾಗ - ಮಟ್ಟೆತಾಳ

ವಾಲಿಸುತನು ರಣದೊಳವರ । ಕಾಲನೂರಿಗಟ್ಟಲಾಗ । ಮೇಲೆ ಬಂದ ಕಂಪನೆಂಬ । ಖೂಳ ದೈತ್ಯನ ॥ ಸೀಳು ಮಾಡಿ ಬಿಸುಟ ಹನುಮ । ಬಾಳ ಸುಪ್ರತಾಪದಿಂದ । ನೀಲ ನಿಂದು ಸಚಿವಪತಿಯ । ಬೀಳಗೆಡಹಿದ ॥ ೧ ॥ ದಾನವೇಂದ್ರ ತಾನೆ ಬಂದು । ವಾನರೇಂದ್ರನೊಡನೆ ಕಾದಿ । ತ್ರಾಣದಿಂದ ಸೋಲಿಸಿದನು । ಭಾನುತನುಜನ ॥ ಕಾಣುತಿದಿರು ಬಂದು ವೈ । ಶ್ವಾನರನ ಕುಮಾರಕನನು । ಕ್ಷೋಣಿಗೊರಗಿಸಿದನು ಮೂರು । ಬಾಣದಿಂದಲಿ ॥ ೨ ॥ ಮಾರುತಜಾತನೊಡನೆ ಸೋತು । ಮರಳಿ ತಿವಿದು ಗೆಲುತಲವನ । ತೆರಳಿ ಬಂದನೀಶನಂತೆ । ಧುರಪರಾಕ್ರಮಿ ॥ ಬರುತ ಬರುತ ಕಪಿಗಳನ್ನು । ತರಿದ ನೆಂದು ಕೋಪದಿಂದ । ಧರಣಿಪಾಲನನುಜ ಪೊರಟ । ನುರುತರಾಗ್ರದಿ ॥

### ಮಾರವಿ ರಾಗ - ಮಟ್ಟೆತಾಳ

ನೀನೊ ರಾವಣೇಂದ್ರನೆಂಬ । ದನುಜ ಪಾತಕ ॥ ವಾನರರನು ಬರಿದೆ ಕೊಲುವು । ದೇನು ಘಾತಕ ॥ ೧ ॥ ಬಲ್ಲೆ ನಿನ್ನ ಬಗೆಯ ಜಾತಿ । ಕಳ್ಳನಡೆ ಭಲಾ ॥ ಅಲ್ಲಿ ಮೂಗ ಕೊಯ್ದ ಜಾಣ । ನಲ್ಲವೇನೆಲಾ ॥ ೨ ॥ ಕಳ್ಳರಂತೆ ಸೀತೆಯನ್ನು । ಕದ್ದ ತಂದವ ॥ ಬಲ್ಲತನದಿ ನೋಡು ನಮ್ಮ । ಬಾಣ ಜಾತವ ॥ ೩ ॥ ಬಾಣವೆಸೆವ ಬಗೆಯನೆಲ್ಲ । ಬಲ್ಲೆ ನಿನ್ನನು ॥ ತಾಣದಂಗಗಳ ಪರೀಕ್ಷೆ । ಕಾಣೊ ನಮ್ಮನು ॥ ೪ ॥ ಬಿಡುವ ರಾವಣನ್ನ ಶರವ । ಕಡಿದ ಲಕ್ಷ್ಮಣ ॥ ಝಡಿದು ಕೋಪದಿಂದ ಪ್ರತಿಗೆ । ತೊಡುವನಾ ಕ್ಷಣ ॥ ೫ ॥ ಹಲವು ಶಸ್ತ್ರದಿಂದ ಕಾದಿ । ಗೆಲವು ತೋರದೆ ॥ ಇಳೆಗೆ ಮೂರ್ಛೆಗೊಂಡು ಬಿದ್ದ । ಖಳನ ಬಾಧೆಗೆ ॥ ೬ ॥

# ಕುಂಭಕರ್ಣ ಕಾಳಗ

## ಪಾತ್ರಗಳು

ರಾಮ
ಲಕ್ಷ್ಮಣ
ಹನುಮಂತ
ಸುಗ್ರೀವ
ಜಾಂಬವ
ಅಂಗದ
ನೀಲ
ವೃಷಭ
ಕಪಿಗಳು
ಬ್ರಹ್ಮ
ರಾವಣ
ಕುಂಭಕರ್ಣ
ವಿಭೀಷಣ
ಅತಿಕಾಯ
ಇಂದ್ರಜಿತು
ನರಾಂತಕ
ದೇವಾಂತಕ
ಮಹೋದರ
ಶೋಣಿತಾಕ್ಷ
ತ್ರಿಶಿರ
ಮಕರಾಕ್ಷ
ನಿಕುಂಭ
ಯುದ್ಧೋನ್ಮತ್ತ

# ಕುಂಭಕರ್ಣ ಕಾಳಗ

**ಮತ್ತೇಭವಿಕ್ರೀಡಿತಂ**

ಕುಶ ವಾಲ್ಮೀಕಿ ಮುನೀಂದ್ರನಂಘ್ರಿಗೆರಗಿ ತಾ ಕೇಳ್ದ ಶ್ರೀರಾಘವಂ । ದಶಕಂಠಾಖ್ಯನ ಕಾದಿ ನಿರ್ಗಸನದಿಂ ಹೊಯ್ದುಟ್ಟಲಾ ರಾವಣಂ । ಕುಶದುಂ ಲಜ್ಜೆಯೊಳಿರ್ದು ರಾತ್ರಿ ಕಳೆವುತೇನ್ಗೈದನೆಂದೆಮ್ಮೊಳು । ಉಸಿರ್ಪೇಗೆಂದೆನಲಾ ಮಹಾಮುನಿವರಂ ಪೇಳ್ದ ಸುಮಾಂಗಲ್ಯದಿ ॥

**ಸೌರಾಷ್ಟ್ರ ರಾಗ - ತ್ರಿವುಡೆತಾಳ**

ಕೇಳು ಲವ ದಶಕಂಠ ಮರುದಿನ । ವೋಲಗದಿ ಕುಳ್ಳಿರ್ದು ಮುಂದಣ। ಕಾಳಗಕೆ ಕಲಿ ಕುಂಭಕರ್ಣನು । ಏಳದನಕ ॥ ೧ ॥ ಸಾಲದಾಯಿತು ಶಕುತಿ ಸುಮ್ಮನೆ । ಕೇಳುಹೋದರು ದನುಜ ತನುಜರು । ಸೋಲವೇ ಸಂಪ್ರಾಪ್ತಿ ಯಾಯಿತು । ಮೇಲು ಮೇಲೆ ॥ ೨ ॥ ಸಂಘಟಿಸಿಕೊಂಡಿರುವ ನಿದ್ರೆಯು । ಭಂಗವಾದರೆ ಸೆಣಸಿ ಶೌರ್ಯದಿ । ಭಂಗಿಸದೆ ಬಿಡ ರಾಮ ಸೈನ್ಯವ । ಸಂಗರ ದೊಳು ॥ ೩ ॥

**ಭಾಮಿನಿ**

ಏನುಪಾಯದಿ ನಿದ್ರೆಯನು ಸು । ಜ್ಞಾನಗೊಳಿಸುವುದೆನಲು ದನುಜ ಪ್ರಧಾನಿಗಳು ನಡೆತಂದರಾಗ ಸಮುದ್ರ ಘೋಷದಲಿ ॥ ಜೇನುನೊಣಗಳು ಮುತ್ತುವಂದದಿ । ದಾನವರು ಕೂಗಿದರು ಕಿವಿಯಲಿ । ಬಾನ ಬಿರಿಯುವ ತೆರದಿ ಹೊಯ್ದರು ವಾದ್ಯಭೇರಿಗಳ ॥

**ಮಾರವಿ ರಾಗ - ಏಕತಾಳ**

ಏಳದಿರಲು । ನಿದ್ರೆಯು ತಿಳಿಯ । ದೇಳದಿರಲು ॥ ಪ ॥ ಏಳದಿರಲು ಸುರ । ಘಾಳಿ ತಡೆದು ಹೇ । ರಾಳ ಸೇರ್ಮಣಿಸಿನ । ಧೂಳನು ತೂರದ । ಬಾಳ ಸಾಸಿವೆ ಮೂಗ । ನಾಳದಿ ಪೊಗಿಸಿ ಕ । ರಾಳ ರಕ್ಕಸರು ಬಂ । ದಾಳಿ ಬೊಬ್ಬಿರಿಯೆ ॥ ಏಳದಿರಲು ॥ ೧ ॥ ಆನೆ ಕುದುರೆ ಕಾ । ಡ್ಕೋಣ ಕರಡಿ

ಕಪಿ । ಶ್ವಾನಗಳೆನ್ನುವ । ನಾನಾಮೃಗಗಳ । ಘ್ರಾಣದಿ ಪೊಗಿಸುತ । ಗೋಣೊತ್ತುತಲಾ । ದಾನವತತಿಯಂ । ದೇಸೆಸಗಿದರು ॥ ಏಳದಿರಲು ॥ ೨ ॥ ಮೂಗಿಸೊಳಗೆ ಪೊ । ಕ್ಕಾಗಳೆ ಮೃಗಗಳು । ಸಾಗುತ ಬಾಯಲಿ । ಬೇಗಿಳಿ ದಯ್ಯುರೆ । ಯೋಗವನೆಬ್ಬಿಸು । ವಾಗಮು ಕಾಣದೆ । ಪೋಗಿ ದಶಾಸ್ಯನಿ । ಗಾಗ ಪೇಳಿದರು ॥ ಏಳದಿರಲು ॥ ೩ ॥

ಕಂದ ಪದ್ಯ

ತಮ್ಮಗೆ ನಿದ್ರೆಯು ಕೊಟ್ಟಾ । ಬೊಮ್ಮನ ಕರೆಯೆನಲು ತೀವದು ಬಂದು ವಿಧಾತ್ರಂ ॥ ಉಮ್ಮಳಿಸಿ ಕಮಂಡಲ ಜಲ । ವಂ ಮುದದಿಂ ತಳಿಯ ಲೆದ್ದನಾ ಖಳನನು ಜಂ ॥

ಪಂಚಾಗತಿ ರಾಗ - ಅಷ್ಟತಾಳ

ಆರೆಲೋ ದಾನವರೆನ್ನ । ಆರುತಿಂಗಳ ನಿದ್ರೆಯನು । ಗಾರುಮಾಡ್ಯೆ ಬ್ಬಿಸಿದಂತ। ಧೀರನ್ಯಾರಯ್ಯ ॥ ೧ ॥ ತೋರಿ ಭೋಜನಕ್ಕೆ ಸೋವ । ಸ್ಯಾರ ಗಳ ತಂದೊಂದೊಂದ । ಭೂರಿ ಬೇಗ ಬರಲಿ ಜಠರ । ಪಾರಣೆಗಿಂದು ॥ ೨ ॥ ತಿಂಬೆನೀರೇಳು ಲೋಕದ । ಕುಂಭಿನಿಯೊಳಿದ್ದಂಥವರ । ಕುಂಭಕರ್ಣ ದೈತ್ಯ ತಾನ್ಯಾ । ರೆಂಬುದರಿಯರೆ ॥ ೩ ॥ ಉಣ್ಣುವ ಮೊದಲೆ ಮಾತಲ್ಲ । ಅಣ್ಣ ರಾವಣೇಂದ್ರ ಬಲ್ಲ । ಸನ್ನಾಹವ ಮಾಡಿರೀಗ । ತನ್ನಿರೋ ಬೇಗ ॥ ೪ ॥ ಇನ್ನು ತಾಳ್ವುದಿಲ್ಲ ಘಳಿಗೆ । ಯುಣ್ಣದಿದ್ದರಿಂದೆನಗೆ । ಕಣ್ಣು ಕಾಣದು ಯಾರೆಂಬು । ದನ್ನು ತಿಳಿಯಿರೊ ॥ ೫ ॥ ಸೇವಕನೋರುವನೈತಂದು । ರಾವಣೇಂದ್ರನಿದಿರು ನಿಂದು । ಆ ವರ್ತಮಾನವನಂದು ವಿವರಿಸಲು ॥ ೬ ॥ ಸಾವಿರ ಶಾಕಂಗಳನ್ನು । ತೋವೆ ಶಾಲ್ಯದನ್ನವನ್ನು । ಕೇವಲ ಭಕ್ಷ್ಯಂಗಳನ್ನು । ತೀವ್ರದಿ ಕಳುಹೆ ॥ ೭ ॥

ಶಂಕರಾಭರಣ ರಾಗ - ತ್ರಿವುಡೆತಾಳ

ಕುಂಭಕರ್ಣನ ರಣಕೆ ಕಳುಹಬೇ । ಕೆಂಬ ಬಗೆಗೆ ರಾವಣ । ಸಂಭ್ರಮದಿ ಸನ್ನಹವ ಕಳುಹಿದ । ನುಂಬ ಬಗೆಗೆ ॥ ೧ ॥ ಹೆಂಡ ಮಾಂಸದ ಗಡಿಗೆ ಹೆಡಿ ಗೆಯು । ವಂಡೆಗಳಲಿ ಹೋರಿಸುತ । ತಂಡ ತಂಡದಿ ಕಳುಹಿದನು ಬಹು ।

ಭಂಡಿಗಳಲಿ ॥ ೨ ॥ ಮಿಂದು ಮಡಿಯುಟ್ಟೀಶ್ವರಾರ್ಚನೆ । ಯಿಂದ ಕುಳಿತು ಅವನೆಲ್ಲ ॥ ತಿಂದನರೆ ನಿಮಿಷದಲಿ ಸವಿಸವಿ । ಯಿಂದ ಜಗಿದು ॥ ೩ ॥

## ದ್ವಿಪದಿ

ಸಣ್ಣಕ್ಕಿಯನ್ನ ಶ್ಯಾವಿಗೆ ಕಡುಬು ಘೃತವ । ಎಣ್ಣೋರಿಗೆಯು ಹೋಳಿಗೆಯು ಅತಿರಸವ ॥ ೧ ॥ ಸುಕಿನುಂಡೆ ಸಕ್ಕರೆಯು ವೆರಡಿ ಪಾಯಸವ । ಸಕಲ ಭಕ್ಷ್ಯಾನ್ನ ಮಧುಮಾಂಸ ಸಮುದಯವ ॥ ೨ ॥ ತುಪ್ಪದಲಿ ಹುರಿದ ತಾಳಿಲವ ತಂಬುಳಿಯ । ಅಷ್ಟಕಜ್ಜಾಯ ಬಾಳುಕವ ಸಂಡಿಗೆಯ ॥ ೩ ॥ ಅದರಿಂದ ತೃಪ್ತಿಯಾಗದೆ ಕುಂಭಕರ್ಣ । ಮುದಿಯಾನೆ ಕುರಿಕೋಣಗಳ ತಿಂದ ಪೂರ್ಣ ॥ ೪ ॥ ಕವನಕೊದಗದ ಹೇಡಿ ಕುದುರೆಗಳ ತಿಂದ । ಬದಲು ಸತ್ತೆಮ್ಮೆ ಸಾವಿರದ ನೂರೊಂದ ॥ ೫ ॥ ಕತ್ತೆಗಳ ಕೊಂದು ತಂದಿತ್ತರೈ ನೂರು। ಮತ್ತು ಹಸುವಡಗದಿರೆ ಹೇಳಿದರು ದೂರು ॥ ೬ ॥

## ಭೈರವಿ ರಾಗ - ಝಂಪೆತಾಳ

ದುರುಳನಿಗೆ ಹಸುವಡಗ।ದಿರಲು ರಾವಣ ದೈತ್ಯ । ಗುರುವಿಗಾಜ್ಞಾಪಿಸುತ । ತೆರಳಿಸಿದನಾಗ ॥ ೧ ॥ ಮಂತ್ರಿಸಿದ ಮೊಸರನ್ನ । ವಂ ತಿನ್ನಿಸಿದ ಕ್ಷಣಕೆ । ನಿಂತಿತಾ ಹಶುತೃಷೆ ಮ । ಹಾಂತ ರಕ್ಕಸಗೆ ॥ ೨ ॥ ಉಂಡ ಕರಗಳ ತೊಳೆದು । ವೀಳ್ಯವನು ಮೆಲುತ ನಡೆ । ಗೊಂಡು ಬರುತಣ್ಣನನು । ಕೊಂಡಾಡುತಿರ್ದ॥ ೩ ॥ ಬರುವ ತಮ್ಮನ ಕಂಡು। ಬಹಳ ಹರುಷವಗೊಂಡು। ಸರಿಗದ್ದುಗೆಯಲಿ ಕು । ಳ್ಳಿರಿಸೆ ಮೋಹದಲಿ ॥ ೪ ॥ ಅಣ್ಣ ಮುಖಕಮಲಗಳು । ಬಣ್ಣಗುಂದಿಹುದೇನು । ಎನ್ನನೆಬ್ಬಿಸಿದ ಬಗೆ। ಯಿನ್ನೇನು ಹೇಳು ॥ ೫ ॥

## ಮಾರವಿ ರಾಗ - ತ್ರಿವುಡೆತಾಳ

ತಮ್ಮ ಕೇಳೆನಗೊಂದು ತೊಡರು ಬಂದೊದಗಿತು । ನಮ್ಮ ಶೂರ್ಪಣಖಿಯಿಂದ ॥ ಸುಮ್ಮನೆ ಕಲಹ ಸಾಧನವ ನೋಡಿದಳಾಕೆ ॥ ಶರ್ಮದೊಳಿರುವದಕೆ ॥ ಸಾವಿರವ್ಯಾಕೆ ॥ ೧ ॥ ದಶರಥ ಸುತ ರಾಮ ಧರಣಿಪಾಲಕ ತಮ್ಮ । ಅಸಮ ಸಾಹಸ ನಿಸ್ಸೀಮ ॥ ವಸುಧೆಯಾಳ್ವದ ಬಿಟ್ಟು ವನವಾಸ ವಿರಲಿಷ್ಟು । ಕಸರಿಕೆ ಮೊಳೆದೋರಿತು ॥ ನಮ್ಮೊಳಿನಿತು ॥ ೨ ॥ ತಂಗಿ

ಶೂರ್ಪಣಖೆಯ ಕುಚವು ನಾಸಿಕವು ಕ । ರ್ಣಂಗಳ ಕೊಯ್ದರಂತೆ ॥ ಕಂಗೊಳಿಸುವ ಖರ ದೂಷಣ ತ್ರಿಶಿರರ । ಭಂಗಿಸಿ ಮೆರೆದರೆಂದು ॥ ಹೇಳಿದಳ್ ಬಂದು ॥ ೩ ॥ ಆ ಕೋಪಕದಕಾಗಿ ತಿಳಿಯದಂದದಿ ಪೋಗಿ । ನಾ ಕದ್ದು ತರುವನಾಗಿ ॥ ಈ ಕಾಂತೆಯನು ಕೊಂಡು ಬಂದ ಕಾರಣ ದಂಡು । ಈ ಕಡೆ ಮುಖವಾಯಿತು ॥ ರಣವಾಯಿತು ॥ ೪ ॥ ಈ ಸೀತೆಯನು ಬಿಟ್ಟುಕೊಡ ಬೇಕೆಂದೆನುತ ವಿ । ಭೀಷಣ ಛಲದಿ ಪೋಗಿ ॥ ತಾ ಸೇರಿಕೊಂಡು ರಾಮನ ನಮಗಿದಿರಾಗಿ । ಈಸು ಕಾರ್ಯವ ಮಾಡಿದ ॥ ಹೊಗೆ ನೋಡಿದ ॥ ೫ ॥ ಆಯಿತೊಂದೆರಡಂತ್ರ । ಅಣುಗರ ಕದನದಿ । ಮಾಯಕದೊಳಗೆ ಕೊಂದ ॥ ನ್ಯಾಯವನ್ಯಾಯವಾದರು ಹೀಗಾಯಿತು ಮುಂದಿ । ನಾಯವ ತಿಳುಹೆ ನ್ನೊಳು ॥ ಉತ್ಸಹದೊಳು ॥ ೬ ॥

### ಶಾರ್ದೂಲವಿಕ್ರೀಡಿತ

ಇಂತೆಂದಾದ ವಿಚಾರ ಸಂಗತಿಗಳಂ ಕುಂಭಶ್ರವಂ ಕೇಳುತ । ಕಾಂತಾ ಭ್ರಾಮಕದಿಂದ ಬಂದ ಕದನಂ ಲೇಸಾಗದೀ ಸಾರಿಯೆಂ ॥ ದಂತರ್ಭಾವದಿ ನಿರ್ಣಯಂ ಗೊಳಿಸುತಿನ್ನೇನಾಗಲೆಂತಾಗಲಿ । ಸಂತಾನಕ್ಕಳಿ ಬಾರದಂತೆ ಸಹಜಂ ಶ್ರೀರಾಮನಂ ಸೇರಿಪಂ ॥

### ಕೋಡಿದೇಗಡೆ ರಾಗ - ಅಷ್ಟ ತಾಳ

ನಿನ್ನಂಥ ಜಾಣರಿಗಿದು ನೀತಿಯೆ ಪೇಳು । ಬಣ್ಣವಲ್ಲದಂತ ಪರ । ಹೆಣ್ಣ ತಂದಿಟ್ಟುಕೊಂಬುದು ॥ ನಿನ್ನಂಥ ॥ ಪ ॥ ಸೀತೆಯೆಂಬವಳೀಗ ಭೂಮಿ। ಜಾತೆಯು ಶ್ರೀಮಹಾಲಕ್ಷ್ಮಿ । ಆತ ರಾಮಚಂದ್ರ ಸಾಕ್ಷಾತ್ ವಿಷ್ಣುವು ॥ ಕೋತಿಗಳೆಂಬುದು ಪುಸಿ। ಮಾತು ಸುಪರ್ವಾಣರ್ಕೈಸೆ । ಮಾತಾಡಿ ಫಲವೇನು ಕಾರ್ಯ । ಬೀತುದೆ ಶೌರ್ಯ ॥ ನಿನ್ನಂಥ ॥ ೧ ॥ ಮುಂದುವರಿದ ಮೇಲೆ ನೀನು । ನೊಂದು ಮಾಡುವಂತಾದೇನು । ಎಂದಿಗಾದರೀ ಶರೀರ । ಎರವಿನ ಹಾರ ॥ ಇಂದುಶೇಖರನ ವರ । ದಿಂದ ಸಿಕ್ಕಿತೆಮಗೀಪುರ । ಮುಂದೆ ಬಾಳುವ ಋಣಾನು । ಬಂಧ ತೀರಿತು ॥ ನಿನ್ನಂಥ ॥ ೨ ॥ ಮಾಧವನ ಸೇವೆಗಾ ವಿ । ರೋಧದಿಂದಾದರು ಸ್ವಾಮಿ । ಪಾದವ ಹೊಂದಿಸಿ ಕೊಂಬೆ । ನಾದರಾಗಲಿ ॥ ಕಾದುವೆ ನೀ ಹೊತ್ತು ನಾನು । ಕೊಡಿಸು ವೀಳೆಯವ ನೀನು । ಸಾಧನ ಸನ್ನಾಹವಿತ್ತು । ಸಾಧಿಸೀ ಹೊತ್ತು ॥ ನಿನ್ನಂಥ ॥ ೩ ॥

ಕಂದಪದ್ಯ

ಗೆಲುವೆನು ರಾಮನ ಸೈನ್ಯವ । ಕಳುಹೆನ್ನನು ವೀಳ್ಯವಿತ್ತು ಸಲ ವಿಂದೀಗಂ ॥ ಬಲು ಕಪಿ ಪಾಳ್ಯವ ಸೋಯಿಸಿ । ಗೆಲವಂ ತೋರಿಸುವೆ ನಿನ್ನ ಕರುಣದೊಳೆಂದಂ ॥ ೮ ॥

ಸಾವೇರಿ ರಾಗ - ಅಷ್ಟತಾಳ

ತಮ್ಮ ರಣಕೆ ತೆರಳಿನ್ನು । ರಾಮನ ಪಾಳ್ಯ । ವೊಮ್ಮೆಗೆ ಗೆಲಲು ನೀನು ॥ ನಮ್ಮವರಿಗೆ ಬಂತು ಜಯವಿಂದು ಮನದಲ್ಲಿ । ಹೆಮ್ಮೆಯೊಳಿರುವ ರಾಮು ॥ ನಿಸ್ಸೀಮ ॥ ೧ ॥ ವೇಳೆಯನರಿತು ತಂದು । ತಮ್ಮನಿಗಾಗ । ವೀಳೆಯ ಕೊಡಿಸಲಂದು ॥ ಪಾಳೆಯ ನೆರಹಿ ಪೌರುಷದಿಂದ ಬರೆಯುಮ । ಗುಳೆಯ ತೆಗೆದನಂತೆ ॥ ಎಂಬಂತೆ ॥ ೨ ॥ ಶೃಂಗಾರ ರಚನೆಯಿಂದ । ಕೂಡಿದ ಚತು । ರಂಗ ಮಾರ್ಬಲಗಳಿಂದ ॥ ಸಂಗಡಿಸಿದ ನಾನಾ ಬಿರುದ ಬಣ್ಣಗಳಿಂದ । ತುಂಗ ವಿಕ್ರಮನು ಬಂದ ॥ ಪೌರುಷದಿಂದ ॥ ೩ ॥

ಭಾಮಿನಿ

ಕುಂಭಕರ್ಣನ ರಣದ ಸೊಬಗಿನ । ಸಂಭ್ರಮವ ನೋಡುವರೆ ದಿವಿಜ ಕ। ದಂಬ ನೆರೆದುದು ನಭದೊಳಗಣಿತ ವಾದ್ಯ ಘೋಷದಲಿ ॥ ಅಂಬುಜಾಂಬಕನಾ ವಿಭೀಷಣ । ನೆಂಬವನ ಕೇಳಿದರೆ ಬರುವವ । ಕುಂಭಕರ್ಣ ಮಹಾ ನಿಶಾಚರ ನೆಂದನಡಿಗೆರಗಿ ॥

ಮುಖಾರಿ ರಾಗ - ಏಕತಾಳ

ಎಂತು ಜಯಿಸುವನೊ ಶ್ರೀರಾಮನಿವನ । ಅಂತಕೋಪಮ ಕುಂಭ ಕರ್ಣದಾನವನ॥ ಎಂತು ॥ ಪ ॥ ಮೇರುಪರ್ವತದಂತೆ ತೋರುವ ಕಳೇವರವು। ಮೀರಿ ಕೆಂಗಣ್ಣು ಕೆಮ್ಮೀಸೆಗಳನು ॥ ಮೂರು ತಾಳೆಯ ಮರನ ಮೀರುತಿವೆ ಕಾಲವನ । ತೋರ ಕೈಬೆರಳು ಹೊಗಳುವಡರಿದು ಕೊರಳ ॥ ಎಂತು ॥ ೧ ॥ ಬಾನೆಯೆಂದದೊಳಿಂಬುಗೊಂಡ ಬಾಯೊಳು ಪಲು । ಕಾನನದ ಹಳ್ಳದಂತಿರುವ ಕುರುಳು ॥ ವಾನರನ ನಗೆಯಂತೆ ಹುಬ್ಬು ಕರ್ಣವು ಕದಪು । ಮೀನ ಸೊಗ ಡಿನ ಕಂಪನೆಸೆವ ದಾನವನ ॥ ಎಂತು ॥ ೨ ॥ ಇಂತೆಂದು ಸಕಲ ಸುರರೆಲ್ಲ

ಯೋಚಿಸಲು ಹನು । ಮಂತ ನೋಡಿದನು ರಾಕ್ಷಸ ಸೈನ್ಯವ ॥ ಅಂತರಂಗ ದೊಳಿವನನರಿವೆನೆನುತಿರುವಾಗ । ಭ್ರಾಂತುಮತಿಯೊಳು ದನುಜ ಬಂದು ಬೊಬ್ಬಿರಿದ ॥ ಎಂತು ॥ ೩ ॥

### ಮಾಲಿನೀವೃತ್ತ

ಅಸುರ ಪಡೆಯು ಬಂದು । ಆರ್ಭಟಿಸುತ ನಿಂದು । ಮುಸುಕಿ ಮರ್ಕಟರನು । ಘಾತಿಸಲ್ಕದರನು ॥ ಬಿಸಜನಯನನಾಗ । ಬಿಲ್ಲಗೊಟ್ಟೆಂಬು ಬೇಗ । ಎಸೆದು ಶರಗಳಿಂದ । ರಾಮ ಮಾರಾಂತುನಿಂದ ॥

### ಶಂಕರಾಭರಣ ರಾಗ - ಮಟ್ಟೆತಾಳ

ನಾನು ರಾಮ ಕುಂಭಕರ್ಣ । ನೀನು ರಾಕ್ಷಸ । ವಾನರಾದಿಗಳನು ಗೆಲುವ । ದೇನು ಸಾಹಸ ॥ ೧ ॥ ಕೊಲಿಸಬೇಡ ದನುಜರನ್ನು । ನಿಲಿಸು ಸುಮ್ಮನೆ । ಅಲಸದೆಮ್ಮ ಕೂಡೆ ನೀ ಕೈ । ಗಲಸು ಘಮ್ಮನೆ ॥ ೨ ॥ ಬಿಡು ಶರಾಶರಂಗಳನ್ನು । ತೊಡು ಮಹಾಸ್ತ್ರವ । ಒಡನೆ ವಜ್ರರಥವನೇರಿ । ಪಿಡಿಯೊ ಕೈದುವ ॥ ೩ ॥ ತೊಡುವ ತೊಡುವ ಶರಗಳನ್ನು । ಬಿಡುವ ಬಿಡುವನು । ಪೊಡೆವ ಮೊದಲೆ ಕೀಳದು ರಾಮ । ಕಡಿವನದರನು ॥ ೪ ॥ ಬಾಣ ಬಂದು ತಾಗಲಸುರ । ತ್ರಾಣವಳಿವುತ । ವಾನರರಿಗೆ ತಾಗಲವರು । ಗೋಣ ತಿರುಹುತ ॥ ೫ ॥ ಉರಗಬಾಣವೆಸೆಯೆ ದನುಜ । ಗರುಡ ವಿಶಿಖದಿ । ತರಿದು ಬಿಸುಡೆ ಗೋತ್ರ ಶರವ । ಮುರಿಯೆ ಕುಲಿಶದಿ ॥ ೬ ॥ ಉರಿ ಚಿಡಾಳಿಸಲ್ಕೆ ಜಲದಿ । ಪರಿಹರಿಸಿದನು । ಕರದಿ ಪಿಡಿದ ಧನುವ ಕಡಿದು । ಧುರದಿ ಮೆರೆದನು ॥ ೭ ॥ ಬಿಲ್ಲ ಮುರಿದ ಮೇಲೆ ದನುಜ । ಹಲ್ಲ ಕಡಿವುತ । ನಿಲ್ಲುತಿರಲು ರಾಮಚಂದ್ರ । ಕಿಡಿಯನುಗುಳುತ ॥ ೮ ॥ ರಾಮ ಮೂಲ ಶರದಿ ಶಿರವ । ಭೂಮಿಗಿಳುಹಿದ। ಆ ಮಹಾಂತ ಕುಂಭಕರ್ಣ । ಧಾಮನೊರಗಿದ ॥ ೯ ॥ ಬೀಳಲಸುರ ನಾಥನನುಜ । ಕೇಳಿ ದಿವಿಜರು । ಭೂಲಲಾಮ ಶರಣೆನುತ್ತ । ಸುಮವ ಸುರಿದರು ॥ ೧೦ ॥

### ವಾರ್ಧಿಕ

ಕುಂಭಕರ್ಣಾಖ್ಯ ಮಡಿದೊಡಲು ನೋಡಲು ಪಾಪ । ವೆಂಬ ಬಗೆಗಾಗಿ ಭಾಸ್ಕರನಾದಿನಂ ಪಶ್ಚಿ । ಮಾಂಬುಧಿಯ ಸಾರ್ದು ಮರೆಯಾಗೆ ತಮ್ಮನ

ಮರಣವಮಂ ಕೇಳ್ದು ದಶಕಂಠನು ॥ ಕುಂಭಿನಿಯನಾಳ್ವ ಮನುಜರು ಬಂದು ದನುಜರ ಕು। ಟುಂಬವಮಂ ಕೊಲುವುದೇನಾಶ್ಚರ್ಯ ಶಿವ ಶಿವ ತ್ರಿ । ಯಂಬಕ ಕಪರ್ದಿ ತ್ರಿಪುರಾರಿ ಪಾರ್ವತಿರಮಣನೆಂಬಾಗ ಬೆಳಗಾಯಿತು ॥

## ಮಾರಾವಿ ರಾಗ - ತ್ರಿವುಡೆತಾಳ

ಇನ್ನು ರಾಘವನಿಗೆ ಜಯವಾಯ್ತನುಜ ಕುಂಭ । ಕರ್ಣನು ಹೋದ ಮೇಲೆ ॥ ಬಣ್ಣಗುಂದಿತು ಸೈನ್ಯವಿದು ನೋಡೆ ಪ್ರಾರಬ್ಧ । ಪುಣ್ಯದ ಫಲ ವೆಂದನು ॥ ರಾವಣನು ॥ ೧ ॥ ಪುರವ ಸುಟ್ಟಂದೆ ಗೋಚರಿಸದಾದೆನು ಮತ್ತೆ। ಪೊರಡಿಸಿದೆನು ತಮ್ಮನ ॥ ಜರೆದೆನಂಗದನ ಸಂಧಿಯ ಮಾತು ಕೇಳದೆ । ತರುಣಿಗೆ ಮರುಳಾಯಿತು ॥ ಹೀಗಾಯಿತು ॥ ೨ ॥ ಪರಸತಿಯನು ತಂದು ಸೆರೆಯೊಳಿಕ್ಕಿದನೆಂದು । ಪಿರಿದಪಕೀರ್ತಿ ಬಂತು ॥ ಮರಣ ಸಂಭವಿಸಿತು ನಿತ್ಯ ಸೇವಿಸುವಂಥ । ಸುರರು ದೂಷಕರಾದರು ॥ ಏನಾದರು ॥ ೩ ॥

## ವಾರ್ಧಿಕ

ಪರಸತಿಗೆ ಪರುಠವಿಸಿ ಪಾರಾಯ್ತು ಪಂಥದಲಿ । ಪರಶು ಕಚ್ಚಿಣವಾಗಿ ಫಲಿಸಿತನುದಿನ ಕರವ । ಸುರಭಿಗೊಸ್ಡಾಯ್ತಮೃತ ವಿಷವಾಯ್ತು ಸೌಭಾಗ್ಯ ಹೀನಗಪಜಯವಾಯಿತು ॥ ಪುರುಷಾರ್ಥವಿಲ್ಲ ಬದುಕಿದರಿನ್ನೆನುತ್ತ ಮನ । ಕರಗುತಿಹ ವೇಳ್ಯದಿ ನರಾಂತಕಂ ನಡೆತಂದು । ಭರಿತ ಪೌರುಷದಿ ಮಂಡೋದರಿಗೆ ನಮಿಸಿ ದಶಶಿರನೊಡನೆ ಮಾತಾಡಿದಂ ॥

## ಶಂಕರಾಭರಣ ರಾಗ - ಏಕತಾಳ

ತಂದೆ ಕೇಳ್ ಮರ್ಕಟರನ್ನು । ಕೊಂದಲ್ಲದೀ ಹೊತ್ತು ನಾನು । ಬಂದೆ ನಾದರೆ ನಿಮ್ಮಯ । ಕಂದನಲ್ಲಪ್ಪೆ ॥ ೧ ॥ ಶತ್ರುಗಳೆಲ್ಲರ ನಾನೀ। ಹೊತ್ತೋ ಡಿಸದಿದ್ದರೆಯು । ಸತ್ಯವೇ ಮಂಡೋದರಿಯ । ಪುತ್ರನಲ್ಲೆಂದ ॥ ೨ ॥ ನೀಲನ ಪಾಳ್ಯವ ಯಮ । ನಾಲಯ ಕಟ್ಟದಿದ್ದರೆ । ಪೇಳಲೇ ನಿಬ್ಬರಿಗು ತಾ। ಬಾಲನಲ್ಲೆಂದು ॥ ೩ ॥ ಎಂದು ಪ್ರತಿಜ್ಞೆಯ ಮಾಡಿ । ಚಂದದಿಂದ ಧನುವ ಹಿಡಿದು । ವಂದಿಸುತ್ತ ರಣಕೆ ಪೊರಟು । ಬಂದ ರಭಸದಿ ॥ ೪ ॥ ಬರುವುದನ್ನು ಕಂಡು ವಾಲಿ । ತರಳನಾದ ಅಂಗದನು । ತ್ವರಿತದಿಂದ ಬಂದು ತಡೆದ । ದುರುಳ ದೈತ್ಯನ ॥ ೫ ॥

### ಪಂಚಾಗತಿ ರಾಗ - ಏಕತಾಳ

ಬಂದವನ್ಯಾರೊ ನೀನು । ಮುಂದೆ ಕಾರ್ಯಗಳೇನು ॥ ಬಂ ॥ ಪ ॥ ಕುಂಭಕರ್ಣನು ಹೋದ । ಸಂಬಳಕ್ಕೆ ನೀನಾದೆ । ಎಂಬುದ ಬಲ್ಲೆ ನಾನು । ಇನ್ನೇನು ॥ ಬಂ ॥ ೧ ॥ ಕಾದಲೆನುತ್ತಲಿ ಬಂದೆ । ಹೋದ ಮೇಲೆ ಮುಂದೆ ಮುಂದೆ । ಹಾದಿಯ ನೋಡಿಕೊಳ್ಳೈ । ನೀ ಕೇಳೈ ॥ ಬಂ ॥ ೨ ॥

### ಭೈರವಿ ರಾಗ - ಏಕತಾಳ

ಹೀಗವಗೆಂಬುದರೊಳಗೆ । ಬಾಣ । ತಾಗಿತು ಬಂದಂಗದಗೆ ॥ ಆಗದ ನೆಲ್ಲವ ತಡೆದ । ಮ । ತ್ತಾಗಿರಿ ಮರದಲಿ ಹೊಡೆದ ॥ ೧ ॥ ಬಾಣವ ಬಿಡುವು ದರೊಳಗೆ । ಬಿದ್ದ । ದಾನವನಾಗ ಧರಣಿಗೆ ॥ ಪ್ರಾಣವಳಿಯಲಾ ತ್ರಿಶಿರ । ಬಲು । ಜಾಣ ದೇವಾಂತಕರವರ ॥ ೨ ॥ ಕ್ಷಣದೊಳಯ್ತರೆ ಹನುಮಂತ । ತರಿ । ದನು ಮಹೋದರನ ಮಹಾಂತ । ಸೆಣಸುತಲಾತನ ನೀಲ । ಮಿಗೆ । ರಣದಲಿ ಗೆಲಿದ ಸುಶೀಲ ॥ ೩ ॥ ಯುದ್ಧೋನ್ಮತ್ತನು ವಡಬ । ನಂತೆ । ಯುದ್ಧವ ಮಾಡಲು ವೃಷಭ ॥ ಗೆದ್ದನೊಂದೇ ಕ್ಷಣದೊಳಗೆ । ಖಳ । ಬಿದ್ದನು ಮೇದಿನಿಯೊಳಗೆ ॥ ೪ ॥ ಬರುವ ಬರುವ ರಾಕ್ಷಸರು । ಯಮ । ಪುರಕೆ ಪಯಣ ಮಾಡಿದರು ॥ ಕರವ ಮುಗಿದನತಿಕಾಯ । ದಶ । ಶಿರನಿಗೆ ಪೇಳಿದ ನ್ಯಾಯ ॥ ೫ ॥

### ಶಂಕರಾಭರಣ ರಾಗ - ತ್ರಿವುಡೆತಾಳ

ಜನಕಪಾಲಿಸು ರಾಮಚಂದ್ರನು । ಮನುಜನಲ್ಲ ಭೂಮಿಯ ॥ ಘನವ ನಿಳುಹಲು ಬಂದ ನಾರಾ । ಯಣನೆ ಕೇಳು ॥ ೧ ॥ ಸಕಲದೊಳು ಪರಿಪೂರ್ಣ ವ್ಯಾಪಾ । ರಿಕನ ಕೂಡೆ ಕಲಹವು ॥ ಯುಕುತಿಯಲಿ ಸುಖ ಬಾಳ್ವುದೊಳ್ಳಿತೆ । ಮುಕುತಿಪದದಿ ॥ ೧ ॥ ಅಪ್ರಮೇಯನ ಕಾಣುತಂಘ್ರಿಯ । ಕ್ಷಿಪ್ರದಿಂದ ಸೇವಿಸಿ ॥ ತಪ್ಪುಗೆಯ್ದೆನೆನುತ್ತ ಸೀತೆಯ । ನೊಪ್ಪಿಸಯ್ಯ ॥ ೩ ॥ ಲೇಸು ಬಾರದು ಸಮರ ಮಹೆಲ । ಕ್ಷ್ಮೀಶನೊಡನೆ ಸಹಜ ವಿ ॥ ಭೀಷಣನ ಕರ ಕೊಂಡು ನಿತ್ಯೋ । ಲ್ಲಾಸದಿಂದ ॥ ೪ ॥ ಇರುವುದೊಳ್ಳಿತು ಎಂಬ ನುಡಿ ದಶ । ಶಿರನು ಕೇಳಿ ರೋಷದಿ ॥ ಜರೆಯುತಿದುವೇ ಸಮಯವೆನೆ ಕಂ । ಡೊರೆದನಾಗ ॥ ೫ ॥

### ಭೈರವಿ ರಾಗ - ಝಂಪೆತಾಳ

ತಂದೆ ಕೇಳೀ ಹೊತ್ತು । ತನಗೆ ವೀಳ್ಯವನಿತ್ತು । ಚಂದದಿಂ ರಣಕೆ ಕಳು । ಹೆಂದು ಬೆಸಗೊಂಡ ॥ ೧ ॥ ಬೇಗ ರಣವನು ಜೈಸು । ಹೋಗೆಂದು ವೀಳ್ಯವಿ । ತ್ಯಾಗ ಕಳುಹಿದ ಕರುಣ । ಸಾಗರನ ಬಳಿಗೆ ॥ ೨ ॥ ಕರಿತುರಗ ರಥ ದಾನ । ವರು ಸಹಿತ ಪೊರಟ ಸಂ । ಗರಕೆ ಸಾಹಸದಿಂದ । ಹರಿಸೇವೆ ಗೆನುತ ॥ ೩ ॥

### ಕೇದಾರಗೌಳ ರಾಗ - ತ್ರಿವುಡೆತಾಳ

ಬನ್ನಿ ರಾಮನ ಸೇವೆಗೆ । ಸಾಧುಗಳೆಲ್ಲ । ಬನ್ನಿ ರಾಮನ ಸೇವೆಗೆ ॥ ಪ ॥ ಇನ್ನು ಇಂಥಾ ವೇಳ್ಯ । ವನ್ನು ಸಿಕ್ಕುವದಲ್ಲ । ಪನ್ನಗಶಯನ ರಾಮ । ನೆನ್ನುತ್ತಲಖಿಳರು ॥ ಬನ್ನಿ ॥ ೧ ॥ ಮನು ಮುನಿಗಳು ನಿತ್ಯ । ನೆನೆವುತಿರಲು ಸತ್ಯ । ಘನತರವಾದ ಮುಕ್ತಿ । ಯನು ಸಾಧಿಸುವರೆಲ್ಲ ॥ ಬನ್ನಿ ॥ ೨ ॥ ಸರಸದಿಂದಲಿ ಶಿವ । ನರಸಿ ಜಪಿಸುವ ಪಾದ । ಸರಸಿಜವನು ಕಾಬ । ಹರುಷದಿ ಭಕ್ತರೆಲ್ಲ ॥ ಬನ್ನಿ ॥ ೩ ॥

### ವಾರ್ಧಿಕ

ಇಂತೆಂದು ಡಂಗುರವ ಹೊಯ್ಸಿ ಪಟ್ಟಣದಿಂದ । ತಾಂ ತೆರಳಿ ಬರುವ ಪಾಳ್ಯವ ನೋಡಿ ನೀಲ । ಹನು । ಮಂತ ಮುಖ್ಯಾದಿಗಳು ಮಾತಾಡುತಿರೆ ಶರಣನಿಂತೆಂದನಾ ರಾಮಗೆ ॥ ಕಂತುಪಿತ ಲಾಲಿಸತಿಕಾಯನಿವನಧಿಕ ಬಲ । ವಂತ ನಿಯಮಿತವ್ರತಂ ವೈಷ್ಣವಾದಿಗಳೊಳಾ । ದ್ಯಂತವಿಲ್ಲದ ಭಕ್ತನೆನಲು ಸೌಮಿತ್ರಿ ಮಾರಾಂತನತಿಕಾಯನಿದಿರು ॥

### ಕಾಪಿರಾಗ - ಅಷ್ಟತಾಳ

ಹೊಡೆದಾಡಿದರು ರಣದೊಳಗೆ । ಜಾಣ । ಕಡು ಪರಾಕ್ರಮ ಪಂಥ ಪೌರುಷದೊಳಗೆ ॥ ಹೊಡೆ ॥ ಪ ॥ ಮದದಿರಿಗಜದ ಮೇಲಿಡುತ । ತೇಜಿ । ಕುದುರೆ ರಾವುತರ ಮಂಡೆಗೆ ಬಾಣ ಬಿಡುತ ॥ ಬದಲಿಗೆ ಬದಲಂಬನಿಡುತ । ಸಪ್ತ । ರದ ಸಂಭ್ರಮದ ಸೌರಂಭಕೆ ಮೆಯ್ಮಗೊಡುತ ॥ ಹೊಡೆ ॥ ೧ ॥ ಮಂಗಗಳೇರಲು ಮರಕೆ । ಮುಸು । ಕಿಂಗಲಿಕಗಳು ಪಲ್ಗಿರಿವುತ ನೆಲಕೆ ॥

**ಸಂಗಡಿಸಲು** ಯಮಪುರಕೆ । ಸಮ । ರಾಂಗಣದಲಿ ಲೆಕ್ಕವಿಲ್ಲ ಪೋಪುದಕೆ ॥ **ಹೊಡೆ ॥ ೨ ॥** ಕ್ಷಯವಾಯ್ತನೇಕ ದಾನವರು। ಕಾದಿ । ಲಯವಾಯ್ತು ರಾಮ ಪಾಳ್ಯದಲಿ ವಾನರರು ॥ ಭಯವಾಯ್ತಾಕಾಶದಿ ಸುರರು । ಜಯ । ಜಯ ವೆಂದು ಭೇರಿ ದುಂದುಭಿಯ ಹೊಯ್ಸಿದರು ॥ ಹೊಡೆ ॥ ೩ ॥ ಶಕ್ತಿಯಿಂದ ಸೆಯೆ ಸೌಮಿತ್ರಿ । ದನುಜ । ಮಸ್ತಕವನು ಕೆಡಹಲ್ಕೆ ಧರಿತ್ರಿ ॥ ಎತ್ತಿಕೊಂಡು ಭಯದ ಶಕ್ತಿ । ಸುರ । ರರ್ತಿಯಿಂದೊಯ್ದು ರಾತನಿಗಾಯ್ತು ಮುಕ್ತಿ ॥ **ಹೊಡೆ ॥ ೪ ॥**

**ವಾರ್ಧಿಕ**

ಶ್ರೀ ರಾಮನನುಜ ಕೋಪದಿ ಶರವನೆಚ್ಚಡಾ । ಘೋರಶರವತಿಕಾಯ ಮಸ್ತಕವ ಕೆಡಹಲ್ಕೆ । ಭೋರೆಂದುದಾಗಸದಿ ನಿರ್ಜರರು ತೋಷದಿಂ ಪೂಮಳೆಯ ಗರೆದರಂದು ॥ ಧೀರ ರಾವಣ ಕಂಡು ಕೋಪದಿಂ ಬೆಂಗೊಂಡು । ಬೇರೆಣಿಸುತಲಿ ರಣಕೆ ನಿಂತಿರ್ದನಾ ಕ್ಷಣಕೆ। ವೋರೆಯಿಂ ಮುದುಡಿ ತನ್ನಂತಿಕದಿ ನಿಂತ ಸುರಪಾರಿಯಿಂ ಕಂಡೆಂದನು ॥

**ಭೈರವಿ ರಾಗ - ರೂಪಕತಾಳ**

ತನಯ ಮಘವವೈರಿ ನಿನ್ನ । ಅನುಜನಾದ ಅತಿಕಾಯನ್ನ । ರಣದಿ **ಕೊಂದ** ಲಕ್ಷ್ಮಣಾಂಕ । ಘನಪರಾಕ್ರಮ ॥ ೧ ॥ ದನುಜರೆಲ್ಲ ಕೊಂದರವರು । ಮನುಜರಲ್ಲ ನಿಂದರಿವರು। ಘನಪ್ರತಾಪರಾಗಿ ಮೆರೆವ । ಘನವಿವೇಕವ ॥ ೨ ॥ ಇಲ್ಲ ಸಹಸರಿಲ್ಲ ನೀ । ನಲ್ಲದೆನ್ನ ಕಂದರೊಳಗೆ। ಬಲ್ಲತನವ ತೋರಿಸಬೇ । ಕಲ್ಲ ಬಾಲಕ ॥ ೩ ॥

**ಕಂದಪದ್ಯ**

ತಂದೆಯ ವಿನಯದ ವಚನವ । ನಿಂದ್ರಾರಿಯು ಕೇಳ್ದು ಪೋಪೆನಾಹವ **ಕೆನುತಂ** ॥ ವಂದಿಸೆ ಕೊಟ್ಟನು ವೀಳ್ಯವ । ಸಂದಣಿ ಸಹಿತಾಗ ಕಳುಹಲವ ನುಯ್ತಂದಂ ॥

**ಭೈರವಿ ರಾಗ - ತ್ರಿವುಡೆತಾಳ**

ಬಂದನಾಗ । ಸಮರಕೆ । ಬಂದನಾಗ ॥ ಪ ॥ ಇಂದ್ರಜಿತು ಮರ್ಕಟರ ಸೈನ್ಯವ । ಕೊಂಡು ಬಿಸುಡುವೆನೆನುತ ಕೋಪದಿ ॥ ಬಂದನಾಗ ॥ ಅ ॥

ಓಡಿದಸುರರ ಕರೆಸಿ ಸಂಗಡ । ಕೂಡಿಕೊಂಡನು ನಿಮಿಷದಿ । ಜೋಡಿಸುತ ಗಜ ತುರಗಗಳ ಜತೆ । ಮಾಡಿಕೊಂಡನು ಹರುಷದಿ ॥ ಝಾಡಿಸುತ ಖಡು ಗವನು ಝಳಪಿಸಿ । ನೋಡಿಕೊಂಡನು ಸಹಸದಿ । ಪಾಡಿನಿಂದಲೆ ರಥಕೆ ಕುದುರೆಯ । ಹೂಡಿ ಮುಗುಳ್ನಗೆ ಸೂಸುತೊಯ್ಯನೆ ॥ ಬಂದನಾಗ ॥ ೧ ॥ ಹಾರಕುಂಡಲ ಮುಕುಟಮಣಿ ಕೇ । ಯೂರ ಕಂಕಣವಿಟ್ಟನು । ಭೂರಿ ರಚನೆ ಯುಲಿಸೆವ ವಸನವ । ವೀರ ತೆಗೆದಳವಟ್ಟನು ॥ ಚಾರು ಸೀಸಕ ಕವಚವನು ಮದ । ವೇರಿ ಗರ್ವದಿ ತೊಟ್ಟನು । ಮೂರು ಲೋಕದೊಳೆಸಗೆ ಘನ ಗಂ । ಭೀರ ನೆರೆ ಪೊರಮಟ್ಟನುಚಿತದಿ ॥ ಬಂದನಾಗ ॥ ೨ ॥ ರಣ ಜಯವ ಕೊಡಿ ನವುಗೆನುತ ಸುರ । ಗಣವ ಪ್ರಾರ್ಥಿಸಿ ಬೇಡಿದ । ಮಣಿವುತೊಳಗಯ್ದೊಂದು ತನ್ನಯ । ಜನನಿಯರ ಮೊಗನೋಡಿದ ॥ ಅನುವರಿತು ಪೋಗೆನುತಸುರ ನಂ । ದನಗೆ ನೇಮವ ನೀಡಿದ । ಕುಣಿವುತಿಹ ಪಟುಭಟರುಗಳ ಸಂ । ದಣಿಯ ಮುಂದಕೆ ನೋಡುತೊಯ್ಯನೆ ॥ ಬಂದನಾಗ ॥ ೩ ॥

### ವಾರವಿ ರಾಗ - ಏಕತಾಳ

ಏನೆಂಬೆನು ಸ್ವ । ರ್ಭಾನುವಿನಂದದೊ । ಶಾ ನಿಶಿಚರರ ವಿ । ತಾನವ ನೆರಹುತ । ದಾನವರೆರೆಯನ । ಸೂನು ವರೂಥವ । ತಾನೇರುತಲ । ತ್ಯಾನಂದದಲಿ ॥ ಬಂದನಂದು ॥ ೧ ॥ ಅಸುರ ಪಡೆಯಭರ । ವಸವನು ತಾಳದೆ । ವಸುಧೆ ತಗ್ಗಿತು ಫಣಿ । ಕುಸಿದ ಕೂರುಮನೆದೆ । ಘಸಣೆಗೊಳುತಲೇ । ಣ್ದೆಸೆಯ ಮದೇಭಗ । ಳುಸುರುಬ್ಬಸವೇನ । ಲಸಮ ಸಾಹಸದಿ ॥ ಬಂದ ನಂದು ॥ ೨ ॥

### ವಾರ್ಧಿಕ

ಬರಬರುತ ಬಿಲು ಬಾಣ ಮುಸಲ ಮುದ್ಗರ ಕಣೆಯ । ಪರಶು ಪಟ್ಟಿಸ ಭಿಂಡಿವಾಳ ಗದೆ ಕರವಾಳ । ಶರಕುಂತ ತೋಮರಾದಿಗಳಿಂದ ಮುತ್ತಿ ದರು ಮರ್ಕಟರ ಪಾಳೆಯವನು ॥ ಇರಿದರೆಸೆದರು ಪೊಡೆದರಿಟ್ಟಣಿಸು ತೊಡನೆ ಪ । ಲ್ಗಿರಿದು ಕುರುಕುರು ಗುಟ್ಟು ತೋಡಿ ಪೋಪಂಥ ವಾ । ನರರ ಸಂತಯ್ಸುತ್ತ ತರಣಿನಂದನನವರ ತಿರುಗಿಸಿದ ಧೈರ್ಯ ಪೇಳ್ದು ॥

### ವರಾಳಿಗೌಳ ರಾಗ - ಅಷ್ಟತಾಳ

ಆಯಿತು । ಯುದ್ಧ । ವಾಯಿತು ॥ ಪ ॥ ಅತಿ । ಕಾಯನಗ್ರಜನ ಪೆ । ಟ್ಟಿಗೆ ಕಪಿಬಲ ಲಯ । ವಾಯಿತು ॥ ಅ ॥ ಇನಕುಲಾಧಿಪನು ತಮ್ಮನ ರಣಕೆನುತ ಮ । ತ್ರಿನಜಾತ ಸಹಿತ ತಾ ಬರುವಾಗ । ಅಂಗ । ದನು ಸುಷೇಣನು ಸಂಗಡಿರುವಾಗ । ಮರ । ಕೊನೆ ಪರ್ವತಂಗಳ ತರುವಾಗ । ನೋಡಿದ ರಾಗ । ಅಡಿದರ್ಬೇಗ । ರಾ । ವಣಗೆ ರಕ್ಕಸರು ಹೇಳಿದರಾಗ । ಹಗ । ರಣಕೆ ಶೌರ್ಯಾದಿ ಬಂದು ನಿಲುವಾಗ ॥ ಆಯಿತು ॥ ೧ ॥ ಕೊಳುಗುಳ ದೊಳಗತಿ ಪೌರುಷದಿಂ ಕಪಿ । ಗಳ ಕೊಲ್ಲುತಿರುವ ವೇಳ್ಯದೊಳಂದು । ಬಲು । ಗೊಳು ತಿದಿರಾದ ಲಕ್ಷ್ಮಣ ಬಂದು । ರಣ । ದೊಳಗೆ ರಾಕ್ಷಸನ ಕೊಲ್ಲುವೆನೆಂದು । ಗಗನಕೆ ಹಾರಿ । ಮೇಗಲೆಡೆ ಸೇರಿ । ಬಾಣ । ಗಳ ಬಿಡು ತಿರಲು ಮರ್ಕಟರಲ್ಲಿ । ಪ್ರಾಣ । ವಳಿದು ಭೂಮಿಗೆ ಬಿದ್ದರಲ್ಲ್ಯಲ್ಲಿ ॥ ಆಯಿತು ॥ ೨ ॥ ಹನುಮ ಜಾಂಬವ ನೀಲಗವಯ ಗವಾಕ್ಷನು । ಪನಸನು ವಾಲಿತನೂದ್ಭವ । ಸುಷೇ । ಣನು ಗಜ ಸುಮುಖಾಗ್ನಿ ಸಂಭವ । ಬಲ । ವನು ಕೂಡಿ ಬರುವ ಲಕ್ಷ್ಮಣ ದೇವ । ಸಹಿತಲೆ ಕೊಂದ । ಶಕ್ರಜಿತು ಬಂದ। ರಾಮ । ನನು ಕಾಣುತೆಸೆದ ಬಾಣಗಳಿಂದ । ಮೂರ್ಛೆ । ಯನು ತಾಳ್ದ ರಘುನಾಥ ಭರದಿಂದ ॥ ಆಯಿತು ॥ ३ ॥ ರಣದಿ ಮತ್ತಲ್ಲಿ ತನ್ನಲಿ ಸೆಣಸು ವರಿಲ್ಲ । ವೆನುತ ಪಟ್ಟಣಕಾಗಿ ತಿರುಗುತ್ತ । ಮನೆ । ಮನೆಯೊಳಾರತಿಯನು ಬೆಳಗುತ್ತ । ಪುರ । ಜನರ ನೋಡುತಲಿದಿರ್ಗೊಳ್ಳುತ್ತ । ಬಲು ಹೊಗಳುತ್ತ ಮುದವೆರಸುತ್ತ । ಮಿಗೆ । ತನುಜನಿಂಗುಡುಗರೆ ಪಾಡುತ್ತ । ದಶಾ । ಸ್ಯನು ಸಂತಸದೊಳಿರುತಿರಲತ್ತ ॥ ಆಯಿತು ॥ ೪ ॥

### ವಚನ

ಇತ್ತಲಾ ವಿಭೀಷಣನು ಬಿದ್ದಂಥ ಸೈನ್ಯವ ನೋಡಿ ತನ್ನೊಳು ತಾನೆ ಏನೆಂದನು ಎಂದರೆ-

### ಕೇದಾರಗೌಳ ರಾಗ - ಅಷ್ಟತಾಳ

ಸಿರಿ ಸೀತೆ ರಾಮ ನಾರಾಯಣರಿವರೆಂದು । ಸೆರೆ ನಂಬಿ ಬಂದೆ ನಾನು॥
ಸುರಪನ ಜಯಿಸಿದ ಘನ ದಿವ್ಯ ಶರಕೆ ಮೈ । ಮರೆವುದೇನಾಶ್ಚರ್ಯವು ॥ ೧ ॥

ಕುರುಡಹೋದಲ್ಲಿ ಕತ್ತಲೆಯೆಂಬ ಗಾದೆಯು । ಸ್ಥಿರವಾಯಿತೆನಗೆ ಬಂದು ॥ ಮರುತನಂದನನಿದ್ದ ತೆರನ ನೋಡುವೆನೆನು । ತರಸುತ್ತ ನಡೆತಂದನು ॥ ೨ ॥ ಕಂಡ ವಿಭೀಷಣನಖಿಳಾಂಡಕೋಟಿ ಬ್ರ । ಹ್ಮಾಂಡ ನಾಯಕ ರಾಮನ ॥ ಪುಂಡರೀಕಾಕ್ಷಿ ಜಾನಕಿಯನ್ನು ವನದಲ್ಲಿ । ಕಂಡು ಕೈಮುಗಿದಾತನ ॥ ೩ ॥ ಕೊಂಡು ಬಂದ ಚೂಡಾಮಣಿಯ ಪಟ್ಟಣವನ್ನು । ಕೆಂಡದಂತುರುಹಿದನ ॥ ಚಂಡ ವಿಕ್ರಮನಂಜನೆಯ ಸುಕುಮಾರ ದೋ । ರ್ದಂಡ ಶ್ರೀ ಹನುಮಂತನ ॥ ೪ ॥ ಈರ್ವರೊಂದಾಗಿ ಮಾತಾಡಿಕೊಂಡಾಗ ಮ । ತ್ತೋರ್ವನ ಹುಡುಕಲೆಂದು ॥ ಪರ್ವತದಂತಿಪ್ಪ ಶವಗಳ ಕೆದರುತ್ತ । ಗರ್ವದಿಂದರಸಲಾಗ ॥ ೫ ॥

## ಕಂದಪದ್ಯ

ಆರೈ ಬಂದವ ನೀನೆನು । ತಾರಾಧಿಸಿ ಮಾತನಾಡೆ ಜಾಂಬವನಾಗಂ ॥ ಚಾರು ನಿಧಾನದ ಮಾತಿಗೆ । ಮಾರುತ್ತರ ಕೊಟ್ಟು ವಿಭೀಷಣಗಿಂತೆಂದಂ ॥

## ಶಂಕರಾಭರಣ ರಾಗ - ಅಷ್ಟತಾಳ

ಕಂಡೆಯಾ । ವಿಭೀಷಣ ರಾಮಚರಿತೆಯ । ಕಂಡೆಯಾ ॥ ಪ ॥ ಕಂಡೆಯ ಕಮಲಲೋಚನನ । ಭೂ । ಮಂಡಲದೊಡೆಯ ರಾಘವನ । ಚೆಲ್ವ । ಪುಂಡರೀಕಾಕ್ಷ ಮಾಧವನ । ಸೇನಾ । ದಂಡೆಲ್ಲ ಕೆಡಹಿ ಬಾಣದಲೀದ್ರಜಿತು ತಾನು । ದ್ದಂಡ ಪೌರುಷದೊಳು ಮೆರೆವ ಸಂಭ್ರಮವನ್ನು ॥ ಕಂಡೆಯ ॥ ೧ ॥ ಮರುತ ನಂದನನುಳಿದಿರಲು । ಸಮ । ಸ್ತರು ಎದ್ದಂತಾಯಿತಿಂದಿನೊಳು । ಎಂ । ದರಿತುಕೊ ನಿನ್ನ ಮನದೊಳು । ಆಗ । ತಿರುಗಾಡಿ ನೋಡುವದೆನು ತಲಿ ಸರ್ವರು । ವರ ಮುಖ್ಯ ಪ್ರಾಣನಿರ್ದರೆ ಕಾರ್ಯ ಜಯವಮ್ಮ ॥ ಕಂಡೆಯಾ ॥ ೨ ॥

## ಕಂದಪದ್ಯ

ವಾರಿಜಭವಸುತನೆಂದುದ। ಮಾರುತನಾತ್ಮಜನುಕೇಳ್ದು ನಡೆತಂದಾಗಂ॥ ಕಾರಿಯುವೇನುಂಟೆನಗದ । ಕಾರುಣ್ಯದಿ ಪೇಳಿರೆನಲು ಜಾಂಬವ ನುಡಿದಂ ॥

## ಆನಂದಭೈರವಿ ರಾಗ - ಏಕತಾಳ

ಉಳಿದೆಯ ಹನುಮಂತ ನೀನು । ಕಳದೆಯ ಬಾಣದುರುಬೆಯನು । ತಿಳಿದೆಯ । ಶೌರ್ಯ । ದಳತೆಯ ॥ ೧ ॥ ಜಗದ ಜೀವಪ್ರಾಣನೆಂದು ।

ಪೊಗಳಿಸಿಕೊಂಬೆ ನೀನಿಂದು । ಬಲವಂತ । ದೇವ । ಹನುಮಂತ ॥ ೨ ॥ ಚಂದ್ರದ್ರೋಣಿಯೆಂದು ಬಹಳ। ಚಂದವಾದ ಪರ್ವತದೊಳು। ಮುಂದುಂಟು। ನಾಲ್ಕೈ । ಪಥವುಂಟು ॥ ೩ ॥ ಸಂಜೆಯಾದ ಬಳಿಕ ನಾಳೆ । ಸಂಜೀವನವ ತಾ ಆವೇಲೆ । ಉಳಿವುದು । ಮೂರ್ಛೆ । ತಿಳಿವುದು ॥ ೪ ॥ ಕಾಣ ಬಾರದಯ್ಯ ಸುಪ । ವಾರ್ಣ ಮುಂತಾದಲ್ಲಿರುವ ದನುಜರು । ತಿಳಿಯೆ । ತಡೆವರು ॥ ೫ ॥

## ಮತ್ತೇಭವಿಕ್ರೀಡಿತಂ

ಕುರುಹಂ ಪೇಳ್ದ ಜಸೂನು ಬೀಳ್ಕೊಡಲವಂ ತಾ ವೇಗದಿಂ ಬಂದಡಾ । ಗಿರಿಯಂ ಕಂಡರಸಲ್ಕೆ ಕಾಣದಿರಲಂದಾ ಗೋತ್ರಮೂರೆತ್ತನು ॥ ನೆರೆ ಪೊತ್ತಾಕ್ಷಣ ತಂದು ಜಾಂಬವಗದಂ ತೋರೆ ಪಾತ್ರಾರಾತ್ರಿಯೋ । ವರ ನಾಸಾಗ್ರದಿ ಹಿಂಡಲಾ ರಘುವರಂ ಎಚ್ಚೆರ್ತನೇವೇಳ್ವೆನು ॥

## ಸಾವೇರಿ ರಾಗ - ಏಕತಾಳ

ತಿಳಿದು ಲಕ್ಷ್ಮಣನೆದ್ದಾ । ಘಳಿಗೆ ಸುಷೇಣ ಬದ್ದ ॥ ತಿಳಿದು ॥ ಪ ॥ ಉಳಿದವರಿಗೆ ಹಿಂಡಲರಿದು ಮೂರ್ಛೆಯಗೋಡು । ಮಲಗಿದ ಕಪಿಗಳೆದ್ದೆರಗೆ ರಾಘವನು ॥ ಬೆಳಗಾಗಬೇಕಾದರೀ ಪುಣ್ಯಗಿರಿಯನ್ನು । ಕಳುಹಿಸು ಮೊದಲಿದ್ದ ಬಳಿಗೆ ಎಂದೆನಲು ॥ ತಿಳಿದು ॥ ೧ ॥ ಎಸೆವ ಗಿರಿಯ ನಡಗಿಸುತ ವಾನರರನೆ । ಬ್ಬಿಸಿದ ಮಾರುತಿಯ ಸಾಹಸವ ಕೊಂಡಾಡಿ ॥ ಬಿಸಜನಾಭನು ಸಂತಸದೊ ಳಿರುತಿರೆ ಸುಮ । ನಸರು ಭರದಿ ಸುಮಮಳೆ ಸುರಿಸಿದರು ॥ ತಿಳಿದು ॥ ೨ ॥ ದಣಿದನೀದ್ರಾರಿ ಎಂಬೆಣಿಕೆಗೋಸ್ಕರವಾಗಿ । ಕಿನಿಸಿಂದ ರಾತ್ರಿ ರಾವಣನ ದುರ್ಗವನು ॥ ಪುನರ್ದಹನವ ಮಾಡಿ ಘನ ವೇಗದಲಿ ಬಂದು । ವನಜಾಕ್ಷಗೆರ ಗಿದರಶಿಳ ಮರ್ಕಟರು ॥ ತಿಳಿದು ॥ ೩ ॥

## ವಚನ

ಇಂತಾ ಲಂಕಾ ಪಟ್ಟಣವನ್ನು ಪುನರ್ದಹನ ಮಾಡಿ ತಮ್ಮ ಠಾಣೆಯ ದಲ್ಲಿ ಸ್ವಸ್ಥದಿಂದಿರಲತ್ತಲಾ ದುರ್ಗದ ಕೇರಿ ಕೇರಿಯವರು ಏನೆನ್ನುತಿರ್ದರ ದೆಂತೆನೆ-

### ಭೂರಿಕಲ್ಯಾಣಿ ರಾಗ - ಅಷ್ಟತಾಳ

ತರವಲ್ಲ । ನಾವಿ । ನ್ನಿರಸಲ್ಲ ॥ ಪ ॥ ದಶ । ಶಿರನೆಂಬ ರಕ್ಕಸ । ತಾನೊಳ್ಳೆಯವನಲ್ಲ ॥ ತರವಲ್ಲ ॥ ಅ ॥ ಹೋಯಿತು ರಾಮನ ದಂಡೆಂಬ ಮಾತು ಸು । ಳ್ಳಾಯಿತು ಕನಸಿನ ರೊಕ್ಕದಂತೆ ॥ ಬಾಯ ಬಿನ್ನಣೆ ಇಂದ್ರಜಿತು ರಣ ಗೆಲಿದುದು । ತೋಯದೊಳ್ ಮುಖಿವಾಂತು ಕೊಡಹಿದಂತಾಯಿತು॥ ತರವಲ್ಲ ॥ ೧ ॥ ಇನ್ನು ರಾವಣನಿಗೆ ಸೀತಾ ಎನ್ನುವ ರತ್ನ । ಕನ್ನಡಿ ಯೊಳಗಿನ ಗಂಟಾಯಿತು ॥ ಹೊನ್ನ ಕರಡಿಗೆಯಂತಿರುವ ಪಟ್ಟಣ ಹೋಗಿ । ಹೆಣ್ಣಗಂಡುಗಳಿಗೊಂದರುಪಯಾಯ್ತಯ್ಯ ॥ ತರವಲ್ಲ ॥ ೨ ॥ ಪಾಶವ ತೊರೆದು ಪಟ್ಟಣದಿಂದ ಹೊರವಂಟು । ದೇಶಾಂತರಕ್ಕೆ ಹೋಗುವೆವೆಂದರೆ ॥ ಸಾಸಿವೆಗೆಡೆಯಿಲ್ಲವೆಂಬಂತೆ ಕಪಿವ್ರಾತ್ರ । ತಾ ಸುತ್ತ ಮುತ್ತಿದೆ ಕಪಿಗಳ ದಂಡು ॥ ತರವಲ್ಲ ॥ ೩ ॥

### ವಾರ್ಧಿಕ

ಎಂದು ಪಟ್ಟಣದಿ ಗುಜುಗುಜಿಸುತಿರೆ ಖಳ ಸೇನೆ । ಬಂದು ರಣ ಕದಿರಾಗಿ ಸೆಣಸಿದರೆ ಹನುಮಂತ । ಕೊಂದ ಬಳಿಕಾ ಶೋಣಿತಾಕ್ಷನನಿಲಜ ನೊಡನೆ ಕಾದಿ ಸಮರಾಂಗಣದಲಿ ॥ ಸಂದನವನೇಣಿಕೆ ತಗ್ಗಿತು ಬಳಿಕ ಮಕ ರಾಕ್ಷ । ನೊಂದೆರಡು ಘಳಿಗೆ ಕಪಿಗಳ ಕೊಲುವ ಸಮಯದೊಳ । ಗಿಂದಿರಾ ರಮಣ ರಘುಕುಲಜಾತ ತಾನೆ ನಡೆತಂದು ಮಾರಾಂತು ನಿಲಲು ॥

### ಕಾಂಭೋಜಿ ರಾಗ - ಏಕತಾಳ

ಜಾನಕೀರಮಣನೆಂಬಾತ । ನೀನೇನೊ ರಾಮ । ಹೇನನೊರಸಿದಂತೆ ಕೊಲುವೆ । ನಾ ನಿನ್ನ ನಿಸ್ಸೀಮ ॥ ೧ ॥ ಅತಿಕಾಯ ಕುಂಭಕರ್ಣರಿಂ । ದತಿಶಯವೇನೊ ಮತಿಗೆಟ್ಟು ಮಾತಾಡುತಿರುವೆ । ಮರುಳರಂತಿದೇನೊ ॥ ೨ ॥ ಹಿಂದೆ ಖರದೂಷಣರ । ಕೊಂದಾತ ನೀನಹುದೆ । ಹಿಂದು ಮುಂದೆ ನೋಡದೆ ನೀ । ಬಂದು ಸಿಕ್ಕಬಹುದೆ ॥ ೩ ॥ ತಂದೆಯಿದ್ದ ಬಳಿಗೆ ನಿನ್ನ । ಹೊಂದಿಸದೆ ಬಿಡೆನು । ಮುಂದೆ ಹಾರಿ ಜುಣುಗಿ ಪೋಪೆ । ನೆಂದರೆ ಹೋಗ ಗೊಡೆನು ॥ ೪ ॥ ಹೆಂಡತಿಯ ವನದಿ ಕಳ । ಕೊಂಡಾತ ನಾ ಬಲ್ಲೆ । ಹಿಂಡು ಹಿಂಡು ವೃಕ್ಷಚರರ । ದಂಡಿಗಿರಿರುನಿಲ್ಲೆ ॥ ೫ ॥ ಜಾಣ ನೀ ನೋಡೆನ್ನ ಕೈಯ।

ಬಾಣವೆನುತ ಪೊಡೆದ। ಜಾನಕಿಯ। ರಮಣನದರ । ಕಾಣುತಾಗ ಕಡಿದ ॥ ೬ ॥ ಹತ್ತೆಂಟು ಬಾಣವ ರಘುಜ । ಮಸ್ತಕಕ್ಕೆ ಬಿಡಲು । ಕತ್ತರಿಸುತ ಪ್ರತಿಗೆ ಹೊಡೆದ । ನಿತ್ತು ಶರವ ತೊಡಲು ॥ ೭ ॥ ಎಸೆಯುತಿರಲು ರಾಮ ಶರವ। ನಸುರ ನೋಡುತಿದ್ದ । ವಶವಿಲ್ಲದೆ ತಾಗಿ ದನುಜ । ವಸುಧೆಗೊರಗಿ ಬಿದ್ದ ॥ ೮ ॥ ಇಳೆಯೊಳಸುರ ಬಿದ್ದನೆಂದು । ತಿಳಿವುತಾಗ ಸುರರು । ಭಳಿರೆ ರಾಮ ಜಯವೆಂದರಳ । ಮಳೆಯ ಹಾರಿಸಿದರು ॥ ೯ ॥

ಭಾಮಿನಿ

ಖರತನುಜ ಮಕರಾಕ್ಷ ಸಹ ಯಮ । ಪುರಕೆ ಬಿಜಯಂಗೆಯ್ಯಲಾ ಕ್ಷಣ । ಸುರಪಜಿತು ಹನುಮಂತನಿಂದುರೆ ಸೋತು ಜಾನಕಿಯ ॥ ಪರಿಯ ರೂಪವ ಕಪಟನಿರ್ಮಿಸಿ । ಮರುತ ಸುತನಿಗೆ ತೋರೆ ಮಾಯಕ । ತರುಣಿ ಎಂಬುದ ತಿಳಿಯದತಿ ಚಿಂತಿಸಿದ ರಘುನಾಥ ॥

ಕಂದ ಪದ್ಯ

ಕಪಟದ ಕಾಯವಿದೆನುತಲಿ । ಗುಪಿತದಿ ನೆರೆ ಪೇಳ್ದು ಶರಣನತಿ ಭರವಸದೊಳ್ ॥ ತಪನ ಕುಲೇಶನ ಚಿಂತೆಯ । ನಪಹರಿಸಲ್ಕಿತ್ತ ಬೇರೆಣಿಸಿ ಶಕ್ರಜಿತಂ ॥

ಸಾಂ..ತ್ಯ ರಾಗ - ರೂಪಕತಾಳ

ರಣವ ಜಯಿಸುವ ಯುಕ್ತಿ ಬೇರಿಹುದಿನ್ನು ಮಾ । ರಣ ಯಜ್ಞವನು ರಚಿಸುವೆನು ॥ ಹನುಮ ಜಾಂಬವ ವಿಭೀಷಣ ಮುಖ್ಯ ರಾಮ ಲ । ಕ್ಷ್ಮಣರ ಸಂಹಾರ ಮಾಡುವೆನು ॥ ೧ ॥ ಎನುತಾಲೋಚನೆ ಗೈವುತೇಕಾಂತದಿಂದ । ರಾ । ವಣಿ ಗೋಪ್ಯ ಸ್ಥಳವ ನೋಡುತಲೆ ॥ ಘನತರದಲಿ ಯಜ್ಞ ರಚಿಸಿರೆ ತಿಳಿದುಸಿ । ರ್ದನು ವಿಭೀಷಣ ರಘುಪತಿಗೆ ॥ ೨ ॥ ಜಗದಾಧಾರನೆ ಕೇಳು ಬಂತೊಂದಕಸ್ಮಿತ । ಬಗೆಯುನಿನ್ನೇನೆಂಬೆನಮಮ ॥ ಪಗೆಯ ಮಾರಣ ವನಿಕುಂಭಿನಿಯೊಳು ಪಠಾಳ್ದ । ಮಗನಿಂದ್ರಜಿತು ಲಾಲಿಸೆಂದ ॥ ೩ ॥ ತ್ರಿಜಗದೊಳಿದಿರಿಲ್ಲಾತನಿಗೆ ರಾಜೇಂದ್ರ ಕೇ । ಳಜನಿತ್ತವರ ಸಾಮರ್ಥ್ಯದಲಿ॥ ಭುಜಬಲವುಳ್ಳಡೆ ಬರಲೆನ್ನ ಸಂಗಡ । ಸುಜನ ವೈರಿಯ ತೋರಿಕೊಡುವೆ ॥ ೪ ॥ ನಿನ್ನ ಸೇನೆಯೊಳುಂಟೆ ನಿದ್ರೆಯು ಸತಿಸಂಗ । ಅನ್ನವರ್ಜಿತವಾದ

ವ್ರತವು॥ ಹನ್ನೆರಡಬ್ದ ಸಾಧಿಸಿದವನುಳ್ಳಡೆ । ನಿರ್ನಾಮವಹನು ಶಕ್ರಾರಿ ॥ ೫ ॥
ಕೋದು ಕೊಡುವೆ ರಕ್ಕಸನ ತಲೆ ಎಲೊ ದೇವ । ಎಂದು ಕೈಮುಗಿದು
ಸೌಮಿತ್ರಿ ॥ ಒಂದುಳಿಯದೆ ಈ ಸಾಧನಗಳಿದ್ದರೆ ಕಾದಿ । ತಂದವ ನೀನಾದೆ
ಸತಿಯ ॥ ೬ ॥ ತಡೆಯದೆ ಹನುಮ ನೀಲಾಂಗದ ಜಾಂಬವ । ರೊಡನೆ
ಪೋಗಲಿ ವಿಭೀಷಣನು ॥ ಬಡಿದು ಖಳನ ಯಜ್ಞ ಕೆಡಿಸಿ ಕಾಳಗದಲ್ಲಿ । ಪಡಿ
ಬಲವಾಗಿ ಲಕ್ಷ್ಮಣಗೆ ॥ ೭ ॥ ರಾಮನಪ್ಪಣೆಯಿಂದ ರಭಸದಿಂದಾರ್ವರು ।
ಆ ಮಹಾ ಕುಂಭಿನಿಗಿಳಿದು ॥ ತಾಮಸ ಚರರ ಸಂಹರಿಸಿ ಏಳ್ ಸುತ್ತಿನ ।
ಹೋಮ ಕೆಡಿಸಿದರೊಗ್ಗಿನಲಿ ॥ ೮ ॥ ಭುಗಿಲೆಂಬ ಭೂತಗಣವನೆಚ್ಚು
ಕಾಳ್ಗಿಚ್ಚು । ಪೊಗಿಸಿ ನಾದಿಸಿದನು ಹನುಮ ॥ ನಗುತಲಾಹುತಿಗೊಂಬ
ಭೂತ ತತಿಗಳೆಲ್ಲ । ಮೃಗಧರನಂಘ್ರಿ ಸಾರಿದರು ॥ ೯ ॥ ರಾವಣಾತ್ಮಜ
ನಿನ್ನ ರಥವೇರು ಕೊಳು ಚಾಪ । ಸಾವಕಾಲಕೆ ಯಜ್ಞವ್ಯಾಕೆ ॥ ಜೀವಗಳ್ಳರ
ಗಂಡ ಇದಿರಾಗೆನುತ್ತಲಿ । ದೇವ ಲಕ್ಷ್ಮಣ ಘರ್ಜಿಸಿದನು ॥ ೧೦ ॥ ದೀಕ್ಷೆಯ
ಬಿಸುಟೆದ್ದು ಕಡೆಗಣ್ಣನೀದ ನಿ । ರೀಕ್ಷಿಸಿ ಕಿರಿಯಯ್ಯಗೆಂದ ॥ ರಾಕ್ಷಸ
ಕುಲಗೇಡಿ ತೊಲಗೆಂದು ನಿಂದಿಸಿ । ಲಕ್ಷ್ಮಣಗಿದಿರಾದ ಖಳನು ॥ ೧೧ ॥
ಎಲವೊ ರಾವಣಿ ಕೇಳು ಪರಸತಿಯರ ದ್ರೋಹ । ನೆಲನ ಹೊಕ್ಕರು ಬೆನ್ನ
ಬಿಡದು ॥ ಛಲ ಬಿಟ್ಟು ರಾಮನ ಪದ ಪಂಕಜವ ಸೇರಿ । ಸಲಹಿಕೊ ನಿನ್ನ
ಪ್ರಾಣವನು ॥ ೧೨ ॥ ಹರಣದಾಸೆಗಳುಳ್ಳಡಣ್ಣನ ಕರೆಸಿಕೊ । ಚರಣ
ನಂಬಿದ ವಿಭೀಷಣನ ॥ ತಿರಿದುಂಬುದಕೆ ವೀಳ್ಯವಿತ್ತು ಕಳುಹು ದೇಶಾಂ ।
ತರಕೆಂದು ನುಡಿದ ಶಕ್ರಾರಿ ॥ ೧೩ ॥ ಅಣ್ಣನ ಕರೆಸುವೆನಸುರ ರಾವಣನನ್ನು ।
ಮಣ್ಣು ಕೂಡಿಸುವೆ ಲಂಕಾಪುರವ ॥ ಬಣ್ಣದಿಂದಲಿ ಶರಣಗೆ ಕೊಡಿಸುವರ
ಕೇ । ಳಿನ್ನು ಶರಾರ್ಕರಿಪ್ಪನಕ ॥ ೧೪ ॥ ಆಶ್ಚರ್ಯವೇನೆಂಬೆನಸುರ ರಥವಾಜಿ।
ಯೆಚ್ಚು ಕೆಡಹಿದ ಮಾರ್ಬಲವ ॥ ಕೊಟ್ಟ ಸೀಸಕ ಮೊಯ್ಯು ರುಧಿರಾಂಬು
ಮಯವಾಗೆ । ಮುಚ್ಚಿಲೋಚನವ ಮೈಮರೆದ ॥ ೧೫ ॥ ಎಚ್ಚರಿಸುತ
ಲೆದ್ದು ಶುಕ್ರನೌಷಧಿಯಿಂದ । ಲೆಚ್ಚನು ಬೊಮ್ಮ ಶಕ್ತಿಯನು ॥ ಅಚ್ಚು
ತಾನುಜ ವಿಭೀಷಣಗಿಟ್ಟ ಶಕ್ತಿಯ । ಮೆಚ್ಚಿಸಿದನು ಪರಿಹರಿಸಿ ॥ ೧೬ ॥
ಕೋಡೆಯ ಮಗನೀತ ಮುನಿದ ನಪ್ಪೊಡನಿದ್ದು । ಖಂಡ ಪರಶುವಿನಸ್ತ್ರದಲಿ।

ಖಂಡಿಸೆನುತ ವಿಭೀಷಣಗಿಟ್ಟ ಶಕ್ತಿಯ । ತುಂಡಿಸಿ ಬಿಸುಟನು ಹನುಮ ॥ ೧೭ ॥ ಮನುಜೇಂದ್ರ ಕೇಳನ್ನಾಹಾರವು ನಿದ್ರೆಯು । ವನಿತೆ ವರ್ಜಿತವಾದ ವ್ರತವು ॥ ನಿನಗುಳ್ಳಡಿದಿರಾಗು ಬರಿದೆ ಸಾಯದಿರೆಂದು । ಧನುವಿಗೊಡ್ಡಿದನು ಮಾರ್ಗಣವ ॥ ೧೮ ॥ ಮರುಳೆ ರಾವಣೆ ಪರಿಹರಿಸು ಮಹಾಸ್ತ್ರವ । ಸ್ಮರಿಸು ಕುಂಭಿನಿ ದೇವಿಗೆನುತ ॥ ಬರಿಸು ಶುಕ್ರನನೆಂಬನಿತರೊಳು ಶಿರವು ಕ । ತ್ತರಿಸಿ ಹಾಯ್ದುದು ನಭಸ್ಥಳಕೆ ॥ ೧೯ ॥ ಸುರರು ಘೇಯೆನುತುಬ್ಬಿ ಸೌಮಿತ್ರನಂಗದಿ । ಸುರಿದರು ಪುಷ್ಪವೃಷ್ಟಿಗಳ ॥ ಮರಳಿ ರಾಮನ ಪದಾಬ್ಜಕೆ ಬಂದು ಪೊಡಮಟ್ಟು । ಧುರದ ಸಂಗತಿಯ ಹೇಳಿದರು ॥ ೨೦ ॥

### ಭಾಮಿನಿ

ಮೂರು ಲೋಕದ ಮೃತ್ಯುವೆಮನಲಿ । ಸೇರಿದನು ಖಳನೆಂದು ರಘುಪತಿ । ಭೂರಿಹರುಷದಿ ಲಕ್ಷ್ಮಣನ ತಕ್ಕಯ್ಸಿ ಮುದ್ದಾಡಿ ॥ ಚಾರು ಸ್ನೇಹದೊಳಿರುತಿರಲು ಪಡು । ವಾರಿಧಿಯ ಮರೆಯಾಗೆ ರವಿಸುರ । ನಾರಿಯರು ಬಂದಾ ರತಿಯ ಬೆಳಗಿದರು ರಘುವರಗೆ ॥

### ಧವಳ ರಾಗ - ಆದಿತಾಳ

ತುಂಗವಿಕ್ರಮ ದಶಮುಖ ಸಂಹರಗೆ । ಮಂಗಳ ಮಧುಸೂದನ ಮುರಹರಗೆ ॥ ಮಂಗಲಂ ॥ ಪ ॥ ದಶರಥಸುತ ರವಿಶತ ಭಾಸನಿಗೆ । ಕುಸುಮನಯನ ದುರ್ಜನ ಕುಲಹರಗೆ ॥ ಅಸುರದಲ್ಲಣ ಮನುಮುನಿ ವಂದಿತಗೆ । ಬಿಸಜನಾಭ ಪಶುಪತಿ ಮಾಧವಗೆ ॥ ಮಂಗಲಂ ॥ ಜಯ । ಮಂಗಲಂ ॥

### ವಾರ್ಧಿಕ

ರಘುವಂಶವಾರಿಧಿಗಳಿರ ಕೇಳಿರಿಂದ್ರಾರಿ । ಹಗರಣದಿ ಮಡಿದಲ್ಲಿ ಗಾಯಿತೀ ಸಂಧಿಯಿಂ । ದೊಗುಮಿಗೆಯ ಹರುಷದಲಿ ನಡೆದ ಸಂಗತಿಗಳನು ಮುನಿ ಪೇಳ್ದನತಿ ದಯದೊಳು ॥ ಸೊಗಸಿಂದ ಕೇಳಿ ಪೇಳ್ದರ ಮನಕೆ ಸಂತಸವ । ನಗಣಿತದ ಸೌಭಾಗ್ಯ ಸಿದ್ಧಿಗಳನುರೆ ಕಣ್ವ । ನಗರೇಶ ಶ್ರೀಕೃಷ್ಣ ನೊಲಿದೀವನೆಡೆಬಿಡದೆ ವೇದ ಸಿದ್ಧವಿದೆಂದನು ॥

# ಕುಶಲವರ ಕಾಳಗ

## ಪಾತ್ರಗಳು

ರಾಮ
ಲಕ್ಷ್ಮಣ
ಭರತ
ಶತ್ರುಘ್ನ
ವಸಿಷ್ಠ
ವಾಲ್ಮೀಕಿ
ಕುಶ
ಲವ
ವನಪಾಲಕ
ಬೆಂಗಾವಲಿನ ಭಟರು
ದೂತರು
ಋಷಿ ಬಾಲಕರು
ಹನುಮಂತ
ಜಾಂಬವ

ಸೀತೆ
ಋಷಿ ಪತ್ನಿಯರು



# ಕುಶಲವರ ಕಾಳಗ

## ಶಾರ್ದೂಲವಿಕ್ರೀಡಿತ ವೃತ್ತ

ಶ್ರೀರಾಮಂ ರಘುನಂದನಂ ನೃಪವರಂ ನಾಕೇಂದ್ರ ಪೂಜ್ಯಂ ಪರಂ ।
ಮಹಾರಾಕಾರಮಗಣ್ಯ ಕೀರ್ತಿಲಸಿತಂ ಸಾಕೇತಪಾಲಂ ಪ್ರಭುಂ ॥
ಧೀರಂ ಕೈತವ ವಿಪ್ರಯುಕ್ತದಯಿತಂ ಶೋಕಾತಿ ದೂರಂ ಹರಿಂ ।
ವೀರಂ ಸ್ವಾಂಕಧೃತೋಲ್ಲಸತ್ಕುಶಲವಂ ರಾಕೇಂದುವಕ್ತ್ರಂ ಭಜೇ॥ ೧ ॥

## ನಾಟಿ ರಾಗ - ರೂಪಕತಾಳ

ಭಜಿಸುವೆ ಮನದಲಿ ನಿತ್ಯವು । ಭಜಕರ ಕುಲದೈವವ ಸುರ । ವ್ರಜ ಸೇವಿತನೆಂದೆನಿಸುವ । ಗಜವದನನ ಪದವ ॥ ಪ ॥ ಭಾಸುರ ಮಣಿಗಣ ರತ್ನ ವಿ । ಭೂಷಣ ಲಂಬೋದರ ವಿ । ಘ್ನೇಶ ವಿನಾಯಕ ಸುಜನರ । ಪೋಷಣ ನೆಂದೆನಿಪಾ ॥ ಏಸು ಮಹಿಮೆಯುಳ್ಳಂಥುದ । ನಾ ಸರಸಿಜಭವನರಿಯನು । ಬೇಸರದೆಲ್ಲರ ರಕ್ಷಿಪ । ಮೂಷಿಕ ವಾಹನನೆ ॥ ೧ ॥ ಗೌರಿಯ ಮೋಹದ ಪುತ್ರನೆ । ಗಣನಾಯಕ ಸುಚರಿತ್ರನೆ । ಪೌರುಷದಾಮದ ಭಂಗನೆ । ಪರತರ ಪಾವನನೆ ॥ ಬಹು ವಿಧ ಮೋಹನ ಮೂರ್ತಿಯ । ಬಹುಲೋಕದೊಳತಿ ಕೀರ್ತಿಯ। ಚೌವೇದ ಶ್ರುತಿಸಾರನ।ಪಾಶಾಂಕುಶಧರನ ॥ ೨ ॥ ಮದುವೆಯು ಮುಂಜಿಯು ಶುಭಲ । ಗ್ನದ ಕಾರ್ಯಂಗಳೊಳೆಯಲಿ । ಮೊದಲಿನ ಪೂಜೆಯಗೊಂಬುದೆ। ಅದು ನಿನ್ನಯ ಬಿರಿದು॥ ಅದರಿಂ ರಚಿಸುವ ಕಾವ್ಯದ । ಮೊದಲಿಗೆ ನಾ ಪ್ರಾರ್ಥಿಸುವೆನು । ಮಧುಪುರದೊಡೆಯನೆ ನಿನ್ನಯ । ಪದಕೆ ನಮೋಯೆಂಬೆ ॥ ೩ ॥

## ದ್ವಿಪದಿ

ಗಜಮುಖಿಗೆ ತಲೆವಾಗಿ ಗೌರಿಗೊಂದಿಸುತಾ । ಅಜನರಸಿ ಶಾರದೆಗೆ ಅರಿತು ಮನ್ನಿಸುತ ॥ ೧ ॥ ಶಂಕರಾಚಾರ್ಯರಿಗೆ ಶರಣೆಂಬೆನಕಾ । ಮುಂಕೊಂಡು ಗುರುಪದವ ಧ್ಯಾನಿಸುತ ಬಳಿಕ ॥ ೨ ॥ ಪರಶಿವಗೆ ಕೈಮುಗಿದು

ಕಮಲಜಗೆ ನಮಿಸೀ । ಸಿರಿದೇವಿಯರಸನನು ಶೀಘ್ರದಿಂ ಭಜಿಸಿ ॥ ೩ ॥ ವಾಲ್ಮೀಕಿ ಮುನಿಪತಿಗೆ ವಂದನೆಯ ಮಾಡಿ । ನಲ್ಮೆಯಿಂ ಸಕಲ ಸುರರೊಳು ಮತಿಯ ಬೇಡಿ ॥ ೪ ॥ ರಾಮಾಯಣದೊಳು ಕುಶಲವರ ಕಾಳಗವ। ಭೂಮಿಯೊಳು ಪೇಳ್ವೆ ಬಹುವಿಧ ಪರಾಕ್ರಮವ ॥ ೫ ॥ ಬಾಲಕನ ನುಡಿಯೆಂದು ಬರಿದೆ ನಿಂದಿಸದೆ । ಕೇಳಿ ಸಜ್ಜನರು ಸಂತೋಷಿಸುವುದು ಬಿಡದೆ ॥ ೬ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಧಾರುಣಿಪ ಜನಮೇಜಯಂಗಾ । ಚಾರು ವೈಶಂಪಾಯಮುನಿಪತಿ । ಭಾರತವ ಪೇಳ್ವರಲು ಬಹು ವಿ । ಸ್ತಾರದಿಂದ ॥ ೧ ॥ ತಂದೆ ಮಕ್ಕಳು ತಾವು ತಮ್ಮೊಳ । ಗೊಂದು ಮತವಾಗಿರದೆ ತಮ್ಮೊಳು । ನಿಂದು ಕಾದುವ ರುಂಟೆ ಪೇಳೆನ । ಗೆಂದ ಭೂಪಾ ॥ ೨ ॥ ಆಗ ಮುನಿ ಕರುಣಿಸಿದ ಕುಶಲವ । ರಾಘವರ ಸಂಗರದ ಕಥೆಯನು । ಈಗಲರುಹುವೆ ಯಕ್ಷಗಾನದೊ । ಳಾಗಮವನು ॥ ೩ ॥ ಧರೆಯೊಳುತ್ತಮವೆನಿಪಯೋಧ್ಯಾ । ಪುರವನಾಳುವ ರಾಮಚಂದ್ರನು । ಪೊರಟು ಕೈಕಾದೇವಿಗೋಸುಗ । ವನಕೆ ಬಂದು ॥ ೪ ॥ ದುರುಳ ಖರ ದೂಷಣರ ಕೊಂದ । ಲ್ಲಿರದೆ ಸೀತೆಯನೊಯ್ಯೆ ರಾವಣ । ಕರಡಿ ಕಪಿಗಳನೆರಹಿ ಶರಧಿಗೆ । ಸೇತುಕಟ್ಟಿ ॥ ೫ ॥ ಹತ್ತು ಶಿರದನ ಪಡೆಯು ಸಹಿತಲೆ । ಕತ್ತರಿಸಿದನು ಕುಂಭಕರ್ಣನ । ಮತ್ತೆ ಜಾನಕಿ ಸಹಿತ ಪುರವಾಳುತ್ತಲಿರಲು ॥ ೬ ॥

### ವಾರ್ಧಿಕ

ರಾವಣಾದಿಗಳ ಸಂಹರಿಸಿ ಸೆರೆಯೊಳಗಿದ್ದ । ದೇವರ್ಕಳಂ ಬಿಡಿಸಿ ಲಂಕಾಧಿಪತ್ಯಮಂ। ತೀವಿದತಿ ಸಂಭ್ರಮದೊಳಾ ವಿಭೀಷಣಗಿತ್ತು ಸುಗ್ರೀವನಂ ಮನ್ನಿಸಿ ॥ ಭಾವಶುದ್ಧಿಯೊಳಯೋಧ್ಯಾಪುರಕೆ ನಡೆತಂದು । ಭೂವರಂ ತಾನಾಗಿ ಪಾಲಿಸಿದ ರಾಜ್ಯಮಂ । ಕೋವಿದರಸನದೊಂದು ದಿನ ಚಿಂತೆಯಿಂದಿರಲು ಕಾಂತೆ ಜಾನಕಿ ನುಡಿದಳು ॥

### ವಸಂತಭೈರವಿ ರಾಗ - ಝಂಪೆತಾಳ

ಕಾಂತಾ ಶಿರೋಮಣಿಯೆ । ರಾಮ ಜಗದೀಶ । ಚಿಂತಿಸುವ ಬಗೆಯೇನು । ಚಿನುಮಯನೆ ನೀನು ॥ ೧ ॥ ನಾರಿಕುಲಮಣಿ ಕೇಳು । ಮುನ್ನಿಂದ ಮೇಲೆ । ಊರ್ವಿಗಿಲ್ಲೊಡೆಯರಂ । ತಕನಾದೆ ಕುಲಕೆ ॥ ೨ ॥

### ವಾರ್ಧಿಕ

ನೀರಿದ್ದ ಕಾಸಾರಕರವಿಂದಮಿಲ್ಲದಿರೆ । ತಾರಕಿಗಳಿರ್ದ ಗಗನಕೆ ಚಂದ್ರನಿಲ್ಲದಿರೆ । ಚಾರು ಯೌವನಮಾದ ಪೆಣ್ಗೆನಿಯನಿಲ್ಲದಿರೆ ಸನ್ನುತ ಪ್ರಜೆಗಳಿರ್ದು ॥ ಧಾರುಣಿಗೆ ಧರ್ಮದರಸಿಲ್ಲದಿರೆ ಸಿರಿಯಿದ್ದು । ದಾರ ವಂಶಕೆ ಕುವರನಿಲ್ಲದಿರೆ ಮೆರದಪುದೆ । ನಾರಿ ಪೇಳಿಸೆ ಲಜ್ಜೆಯಿಂದ ತಲೆವಾಗಿ ನಿಜ ಪತಿಗೆ ಜಾನಕಿ ನುಡಿದಳು ॥

### ವಸಂತಭೈರವಿ ರಾಗ - ಝಂಪೆತಾಳ

ಪೂರ್ವಜನ್ಮದಿ ಶಿವನ । ಪೂಜಿಸದರಿಂದ । ಸರ್ವಥಾ ಮಕ್ಕಳಿನ । ಗಾಗದೇನಯ್ಯ ॥

### ವಾರ್ಧಿಕ

ಕಾಂತೆ ಕೇಳಿನ್ನೇತರಾ ಮಾತನಾಡಿದರೆ । ಭ್ರಾಂತು ಎಂಬರು ಕೇಳ್ದ ಜನರುಗಳ್ ಪೂರ್ವಜ । ನ್ಮಾಂತರದ ಸುಕೃತವಿಲ್ಲದೊಡೆ ಬಯಸಲು ಮಕ್ಕಳಾಗುವುದೆ ಮನುಜರಿಂಗೆ॥ ಇಂತು ಸುತರಿಲ್ಲದಾಸರದಿ ಮನ್ಮನದೊಳಗೆ। ಚಿಂತಿಸುವ ಸಮಯದಿ ವಶಿಷ್ಠ ಮುನಿಪತಿ ಬಂದು । ನಿಂತಿರಲು ರಾಮನು ಪದಾರಂಗಳನ್ನೆಸಗಿ ಸಾಷ್ಟಾಂಗ ವಂದಿಸಿದನು ॥

### ಬೇಹಾಗ್ ರಾಗ - ಅಷ್ಟತಾಳ

ಜಯ ಜಯ ಮಹಾಮುನಿ । ಕುಲಶಿಖಾಮಣಿ । ಜಯ ॥ ಪಲ್ಲ ॥ ಜನುಮ ಸಫಲವಾಯ್ತು । ತವ ಪಾದದರುಶನದಿ । ಬಲುಕೃಪೆಯೊಳ್ಳೈತಂದ । ಕಾರ್ಯವೇನೆಂದ ॥ ಜಯ ॥ ೧ ॥ ಸಕಲ ಸುರಸೇವಿತ । ತ್ರಿಕರಣ ವಿರಾಜಿತ । ಮುಕುತಿದಾಯಕ ದೇವ । ಋಷಿ ಚಾರುಶೀಲ ॥ ಜಯ ॥ ೨ ॥

### ಶಂಕರಾಭರಣ ರಾಗ - ಏಕತಾಳ

ರಾಮ ರಾಮ ಇಕ್ಷ್ವಾಕುಕುಲ । ಸೋಮ ಭೂಮಿಪಾಲಕ ಪಾಹಿ । ಭೀಮವಿಕ್ರಮ ಸುಪುಣ್ಯ । ನಾಮ ಪಾಹಿಮಾಂ ॥ ೧ ॥ ಅರಿತೆ ನಿನ್ನಂತರಂಗ । ಆಗಲಿಲ್ಲ ಮಕ್ಕಳೆಂಬ । ಕೊರತೆಯನು ಕಳೆಯಲೆಂದು । ಬಂದೆ ನಾನಿಂದು ॥ ೨ ॥

### ಭೈರವಿ ರಾಗ - ಝುಂಪೆತಾಳ

ಮುಂದೇನುಪಾಯ ಮುನಿ । ಮಕ್ಕಳಾಗುವುದಕ್ಕೆ । ತಂದೆ ಮುನಿಪತಿ ಯೆನಗೆ । ತಿಳುಹಬೇಕಯ್ಯ ॥ ೧ ॥ ಜಾನಕಿಯನು ಕರೆದು ಮುನಿ । ಮಂತ್ರೋಪದೇಶವನು । ತಾನೊಂದ ಕೊಡಿಸಿದನು । ಮಕ್ಕಳಾಗುವರೆ ॥ ೨ ॥ ಮುನಿರಾಯ ಕೇಳಯ್ಯ । ಜನಿಸುವರ್ಭಕರೆನಗೆ । ತರಳರೊ ತರಳೆಯರೊ । ಎಷ್ಟಾಹರಯ್ಯ ॥ ೩ ॥ ನಿರ್ಭಯದೊಳಿರು ರಾಮ । ನಿನ್ನರಸಿ ಜಾನಕಿಗೆ । ಇಬ್ಬರುದಿಸುವರಯ್ಯ । ಈ ಸಾರಿ ನೋಡು ॥ ೪ ॥

### ಭಾಮಿನಿ

ಮುನಿಪನಾಡಿದ ಮಾತ ಕೇಳುತ । ಮನಸಿನಲಿ ಸಂತೋಷ ತಾಳಲು । ಜನಪನನು ಬೀಳ್ಕೊಂಡು ಋಷಿ ತನ್ನಾಶ್ರಮಕೆ ತೆರಳೆ ॥ ದಿನವ ಕಳೆದರು ಬಳಿಕ ರಾಜ್ಯವ । ನನುಕರಿಸಿ ಪಾಲಿಸಲಯೋಧ್ಯದ । ಜನರು ಸುಖಿಹಿತರಾಗೆ ರಾಘವನಾಳ್ವ ಕಾಲದಲಿ ॥

### ಭೈರವಿ ರಾಗ - ಝುಂಪೆತಾಳ

ಸಕಲ ಭಾಗ್ಯಗಳಿರಲು । ಸರ್ವಜನ ಶುಭಕರವು । ಸುಕೃತಿಮಂಗಳ ಕರವು । ಸಾಕೇತಪುರವು ॥ ೧ ॥ ನಾಕಾಧಿಪನ ಭೋಗ । ವೆನಗೆ ತನಗೆಂಬರ್ಗೆ। ಬೇಕೆಂಬ ಜನರಿಲ್ಲ । ಯಾಚಕರೊಳಿಂದು ॥ ೨ ॥ ಬೇಡುವರ ನಾ ಕಾಣೆ । ಬೇಕೆಂಬ ಜನರಿಲ್ಲ । ಬೀಡುಬಿಟ್ಟಳು ಲಕ್ಷ್ಮಿ । ಓಡಿತು ದರಿದ್ರ ॥ ೩ ॥

### ವಚನ

ಇಂತು ಸಕಲ ಸೌಭಾಗ್ಯದಿಂದ ರಂಜಿಸುವ ಅಯೋಧ್ಯಾಪಟ್ಟಣಕೆ ವಸಂತನೈತಂದನದೆಂತೆನೇ-

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಚಿಗುರಿದವುನದೊಳಗೆ ತರುಗಳು । ಮುಗುಳನಾಂತವು ಪುಷ್ಪ ಲತೆಗಳು । ಬಗೆಬಗೆಯ ಫಲನಿಕರ ಹಣ್ಣಾಗ । ಳಾಯಿತಾಗ ॥ ೧ ॥ ತುಂಬಿಗಳ ಝೇಂಕಾರ ಪೆಚ್ಚಿತು । ಅಂಬುಜದ ಎಸೆಬಿರಿಯೆ ಬಿಚ್ಚಿತು ।

ಅಂಬರದೊಳಾಡುವವು ಗಿಣಿಗಳು। ಸಂಭ್ರಮದೊಳು ॥ ೨ ॥ ಅಗಿಲು ಚಂದನ ಜಾಜಿಮಲ್ಲಿಗೆ । ಮಂದಮಾರುತ ಬೀಸೆ ರಾಜ್ಯದಿ । ಮಘಮಘಿಪ ಪರಿಮಳ ಗಳೆಸೆಯಿತು । ನಾಲ್ಕು ಕಡೆಯ ॥ ೩ ॥

ವಚನ

ಆ ವೇಳ್ಯದಲಿ ವನಪಾಲಕನೈತಂದು ರಾಘವೇಶ್ವರನೊಡನೆ ಕೈ ಮುಗಿದು ಏನೆಂದನು ಎಂದರೆ-

ದಿವಾಳಿ ರಾಗ - ರೂಪಕತಾಳ

ರಾಮ ರಾಘವ । ರಾ । ಜೀವಲೋಚನ ॥ ಭೂಮಿಪಾಲಕ । ಸ್ವಾಮಿ । ಭಕ್ತವತ್ಸಲ ॥ ೧ ॥ ಸುಗುಣ ತರುಗಳು । ಎಲ್ಲ । ಚಿಗುರಿ ವನ ದೊಳು । ನಿಗುರಿ ಫಲಗಳು । ಇಹುದು ಕಾನನದೊಳು ॥ ೨ ॥ ಕಾಡು ಮೃಗಗಳು । ಎಲ್ಲ ಕೂಡಿ ವನದೊಳು ॥ ಆಡುತಲಿದೆ । ಸ್ವಲ್ಪ । ಅಂಜಿ ಕಿಲ್ಲದೆ ॥ ೩ ॥

ಜುಂಜೋಟಿ ರಾಗ - ಏಕತಾಳ

ರಘುರಾಮ ರಾಜ । ಬಹು । ಸುಗುಣ ಸಮಾಜ ॥ ಅಗಣಿತ ದಯಾಳು । ನಮ್ಮ । ಬಿನ್ನಪವ ಕೇಳು ॥ ೧ ॥ ನಾಡೆಲ್ಲ ಇನಿತು । ಪೂರ್ಣ। ಧಾಮ ಧೂಮಾಯ್ತು ॥ ಕೂಡಲೆ ಬಂದು । ಕಾ । ಪಾಡು ನೀನಿಂದು ॥ ೨ ॥ ಪಿರಿದೆಮ್ಮ ದುಃಖ । ನೋಡು । ಅರಮನೆ ರೊಕ್ಕ । ತೆರಬೇಕು ಹ್ಯಾಗೆ । ನಾವು । ಹೀಗಾದ ಮೇಗೆ ॥ ೩ ॥

ವಚನ

ಇಂತು ವನಪಾಲಕರಾಡಿದ ಮಾತಂ ಕೇಳಿ ಅವರಿಗೆ ಶ್ರೀರಾಮಚಂದ್ರನು ಅಭಯವಿತ್ತು ಕಳುಹಿ ಶಬರ ವರ್ಗವನ್ನು ಕರೆಸಿ ಅವರೊಡನೆ ಏನೆಂದನೂ ಎಂದರೆ-

ಬೇಗಡೆ ರಾಗ - ಅಷ್ಟತಾಳ

ಆಡಬೇಕು । ಬೇಟೆಯನ್ನು । ಆಡಬೇಕು ॥ ಪಲ್ಲ ॥ ನಾಡಜನರನೆಲ್ಲ ಪಂಡಂ । ಪಾಡು ಮಾಡಿತೆಂಬ ವಾರ್ತೆ । ಗಾಡಿಗಾರರ್ಬಂದು ಪೇಳ್ದರ್ । ಗಾಢದಿ ನಾವೆಲ್ಲರಿನ್ನು ॥ ಆಡಬೇಕು ॥

### ದ್ವಿಪದಿ

ರಾಘವ ಪರಾಕು ಚಿತ್ತೈಸು ಬಿನ್ನಪವ । ಈಗೋರವೆವೆಮ್ಮ ಸಾಹಸದ ಕೌಶಲವ ॥ ೧ ॥ ಆಡುವೆವು ಬೇಟೆ ಈಡಾಡುವೆವು ಮೃಗವ । ಗಾಢ ದಿಂದೀಕ್ಷಿಸೆಮ್ಮಯ ಪರಾಕ್ರಮವ ॥ ೨ ॥ ಈ ವಿಷಯದಲ್ಲಿ ಜಾಪ್ಯವನು ಮಾಡಿದರೆ । ನಾವಿದ್ದುದೇಕೆ ದೇವರ ಪದಾಂಬುಜಕೆ ॥ ೩ ॥

### ವಚನ

ಆಗಲಾ ಗಜರಥಪದಾತಿಗಳೆಂಬ ಚತುರಂಗಸೈನ್ಯಮಂ ಕೂಡಿಕೊಂಡು ರಾಘವೇಶ್ವರನು ವನಕೆ ತೆರಳಿದನದೆಂತೆನೇ-

### ಮುಖಾರಿ ರಾಗ - ಏಕತಾಳ

ಬೇಟೆಯಾಡುತ್ತ ಬಂದ ರಾಮ । ಸಂತೋಷದಿಂದ । ಬೇಟೆಯಾಡುತ್ತ ಬಂದ ರಾಮ ॥ ಪಲ್ಲ ॥ ಈಟಿ ಕಠಾರಿಯು । ಕೋಟಿಮಂದಿನೆಗ । ದಾಟವ ನಾಡುತ । ನಾಟಕಧಾರಿ ॥ ಬೇಟೆ ॥ ೧ ॥ ಸೊಕ್ಕಿದ ಮೃಗಗಳ । ಧಿಕ್ಕರಿಸುತ ಮ । ತ್ತಕ್ಕರದಿಂದಲಿ । ರಕ್ಕಸವೈರಿ ॥ ಬೇಟೆ ॥ ೨ ॥ ನಾನಾ ಫಲಗಳ । ತಾ ನೆರೆ ಕೊಯ್ಯುತ । ಕಾನನದೊಳಗಾ । ಜಾನಕಿ ಸಹಿತ ॥ ಬೇಟೆ ॥ ೩ ॥ ಪುಷ್ಪದಿ ರಚಿಸಿದ । ಚಪ್ಪರ ಮಂಚದಿ । ಒಪ್ಪಿ ಸೀತೆ ಕಂ । ದರ್ಪನ ಜನಕ ॥ ಬೇಟೆ ॥ ೪ ॥

### ವಚನ

ಇಂತು ಮೂರು ನಾಲ್ಕು ದಿವಸ ಬೇಟೆಯಾಡುತ್ತಿರಲು ಆ ವೇಳ್ಯ ದಲ್ಲಿ ಏನಾಯ್ತು ಎಂದರೆ-

### ದೇಶಿ ರಾಗ - ಅಷ್ಟತಾಳ

ಮತಿವಂತೆ-ಪುಷ್ಪವತಿಯಾದಳಾ ಸೀತೆ । ಪತಿಯ ಕೂಟದಿ । ಜತೆ ಯೊಳಿರೆ ವೃಪ । ರತಿಯ ವೇಳ್ಯದಿ ಮಾನಿನಿ ॥ ೧ ॥ ಮಲ್ಲಿಕಾಸ್ಮಿತೆ ಮಧುರ ಕೋಕಿಲಗಾನೆ । ಫುಲ್ಲಲೋಚನೆ । ಸಲ್ಲಲಿತ ವನ । ದಲ್ಲಿ ಭಾಮಿನಿ ಜಾನಕಿ ॥ ೨ ॥ ಅಂಬುಜಾ-ನನೆ ಅರಸಂಚೆಗಾಮಿನಿ । ರಂಭೆ ಪುತ್ಥಳಿ । ಬೊಂಬೆ ಇನ್ನೇ । ನೆಂಬೆ ಶೃಂಗರದಂಗನೆ ॥ ೩ ॥

ತುಜಾವಂತು ರಾಗ - ಏಕತಾಳ

ಇಳೆಯ ನಂದನೆಯಿಂತು । ದೂರನಿಂದಿಹಳೇಕೆ । ತಿಳಿದು ಬಾರೆಂದು ರಾಮ । ಕಳುಹಿದ ಸಖಿಯ ॥

ತೋಡಿ ರಾಗ - ಅಷ್ಟತಾಳ

ಏನವ್ವಾ । ತಾಯೆ । ಏನವ್ವಾ ॥ ಪಲ್ಲ ॥ ಏನವ್ವ ತಾಯೆ ಈ ಮಧ್ಯ ರಾತ್ರೆಯೊಳು। ಮಾನಿನಿಯೋರ್ವಳೆ ಸುಮ್ಮನೆ ಕುಳಿತಿರ್ಪು- ॥ ದೇನವ್ವ ॥

ಕಾಂಬೋಧಿ ರಾಗ - ಏಕತಾಳ

ಮುಟ್ಟದಿರು ಮುಟ್ಟದಿರು । ಮುಟ್ಟಾದೆನು ನಾನು । ಸೃಷ್ಟಿಗೀಶ ರಾಮನೊಳು । ತಟ್ಟನೆ ನೀ ಪೋಗಿ ಪೇಳು ॥ ಮುಟ್ಟದಿರು ॥

ತುಜಾವಂತು ರಾಗ - ಏಕತಾಳ

ಸೀತೆ ದೂರದಿ ನಿಂದ । ರೀತಿಯ ಕಂಡು ರಾಮ । ತಾ ತಿಳಿದನು ಮನದೊ । ಳಾ ತತಕ್ಷಣದಿ ॥ ೧ ॥ ಚಾತುರಂಗ ಸೇನೆಯ । ತಾ ತಿರುಗಿಸಿ ಕೊಂಡು । ಭೂತಳಾಧಿಪನು ಸಾ । ಕೇತ ಪಟ್ಟಣಕೆ ॥ ೨ ॥ ಬಂದು ರಾಘವ ತನ್ನ । ಮಂದಿಗೆ ವೀಳ್ಯವಿತ್ತು । ಚಂದದಿ ಕಳುಹಿದ । ನಂದು ಮಾತಾಡಿ ॥ ೩ ॥ ಮಂದಗಮನೆಗಿಂತು । ಸಂದುದು ನಾಲ್ಕು ದಿನ । ಮಿಂದು ಬಂದಳು ತನ್ನ । ಮಂದಿರದೆಡೆಗೆ ॥ ೪ ॥ ಮಂದಿರವನು ಪೊಕ್ಕು । ಚಂದ ದಿಂದಿರುತಿರೆ । ಸಂದು ಪೋದುದು ಮ । ತ್ತೊಂದು ದಿವಸವು ॥ ೫ ॥

ಹೂ ರಾಗ - ಏಕತಾಳ

ಮದಗಜಗಮನೆಯೈದನೆ ದಿವಸದಿ ಮಿಂದು । ಸದಮಲ ವಿಧದಿಂದ ಲಂಕರಿಸುತ್ತ ॥ ಸದನಕ್ಕೆ ಬರೆ ಕಂಡು ರಾಘವದೇವ ಮು । ಟ್ಟಿದರೆ ತಾ ಗರ್ಭವನಾಂತಳು ಸೀತೆ ॥ ೧ ॥ ಚಾರುಚರಿತ್ರೆ ಚಂದ್ರಾಸ್ಯೆ ಚಂದನ ಗಂಧಿ । ವಾರಿಜ ದಳ ನೇತ್ರೆ ವಾಸವಸ್ತೋತ್ರೆ ॥ ಮೀರಿದ ಗುರುನಿತಂಬಿನಿ ಸೊಬಗಿನ ಸೋನೆ । ಮಾರನ ಚೆಲ್ವ ಮುಂಗೈಯ್ಯರಗಿಣಿಯು ॥ ೨ ॥ ಕನ್ನಡಿಕದಪು ಕಂಗಳ ನೋಟದರಳ್ಗಣ್ಣ । ಬಿನ್ನಾಣದ ಬಲೆಯ ಬಿಂಕದ ನಾರಿ ॥

ಚನ್ನಾರಚಲುವಿನ ಬೊಂಬೆಯು ಗರ್ಭದಿ । ಚನ್ನದಂದದಿ ಶಿಶುಪೊಡ ರಂಜಿಸಿತು ॥ ೩ ॥ ಮೂರು ತಿಂಗಳು ತುಂಬೆ ಮುದ್ದು ಮೋರೆಯಲಿ ಬಿ । ಳ್ಪೇರಿತು ಮೂಜಗದೊಡತಿಗೆ ಮುದದಿ ॥ ಶ್ರೀರಾಮನರಸಿಯು ಗುರುಕುಚ ವೆರಡು । ಪ್ಪೇರಿತು ಛಾಯಾಮಾತ್ರದಿ ದಿನದಿನಕೆ ॥ ೪ ॥

### ಶಂಕರಾಭರಣ ರಾಗ - ಏಕತಾಳ

ಮಂಗಳಾಂಗಿ ಸೀತೆಗೆ ನಾಲ್ಕು । ತಿಂಗಳಾಗಲಾಗ ರಘು । ಪುಂಗವನು ಸಂತೋಷದಿ ಪು । ರಂಗಳೊಳೆಲ್ಲ ॥ ಶೃಂಗರಿಸಿ ಪಟ್ಟಣದೊ । ಳಂಗನೆಯರೆಲ್ಲ ಶೋಭ । ನಂಗಳ ಪಾಡುತ ಸೀಮಂ । ತಂಗಳ ಮಾಡಿ ॥ ೧ ॥ ಆರೇಳು ತಿಂಗಳು ತುಂಬೆ । ನಾರಿ ಸೀತಾದೇವಿಗಿಚ್ಛೆ । ಬೇರೆಬೇರೆ ತಂದುಕೊಟ್ಟ । ರೂರ ಪೆಂಗಳು ॥ ಕೇರಿಕೇರಿಯ ಬಲೆಯ । ರಾರತಿಗಳನು ತಂದು । ಶ್ರೀರಾಮ ಸೀತೆಗೆತ್ತಿ । ಸಾರಿದರಂದು ॥ ೨ ॥

### ಕಂದ

ನಯ ನುಡಿಯಿಂ ಮಾತಾಡುತ । ಬಯಕೆಯದೇನೆನುತಲಾಗ ಕೇಳಲು ರಾಮಂ ॥ ಭಯದಿಂದೊರೆದಳು ತನ್ನಯ । ಪ್ರಿಯನಡಿಗೆರಗುತ್ತಲೊತನೆ ಸೀತೆ ಕೈಮುಗಿದುಂ ॥

### ಪಂಚಾಗತಿ ರಾಗ - ರೂಪಕತಾಳ

ವಾರಿಜಾಂಬಕ । ಧಾರುಣೀಪತೆ । ಮಾರಸನ್ನಿಭ । ಮಂಜುಳಾಕರ ॥ ೧ ॥ ಕೇಳು ರಾಘವ । ವನದ ಹೆಂಗಳ । ಮೇಳದಿಂದಲಿ । ಇದ್ದು ಬರು ವೆನು ॥ ೨ ॥ ಎಂದು ಬರುವೆಯೇ । ಮಂದಗಾಮಿನೀ । ಎಂದು ರಾಘವಾ। ನಂದು ಕೇಳಲು ॥ ೩ ॥ ಮೂರು ದಿವಸದ । ಮೇಲೆ ಬರುವೆನು । ಕಾರಣ ಕನೆ । ಕಳುಹಿಸೆನ್ನನು ॥ ೪ ॥

### ಭಾಮಿನಿ

ಧರಣಿಜೆಯು ತನಗಿಚ್ಛೆಯಾದುದ । ನರುಹೆ ಕಳುಹುವೆನೆಂದು ನಿಶ್ಚೈ । ಸಿರಲು ನಗರದಿ ತಿರುಗಬೇಕೆಂದಾಗ ನಡುಯಿರುಳು ॥ ಚರರ ಕಳುಹಿಸಿ ತನ್ನ

ಸುದ್ದಿಯ । ಪುರದ ಜನರೇನೆಂಬರೆನೆ ವಿ । ಸ್ತರಿಸಿದರು ಕೈ ಮುಗಿದು ನಗರದಿ ನಡೆದ ವಾರ್ತೆಯನು ॥

### ಭೈರವಿ ರಾಗ - ಝಂಪೆತಾಳ

ರಣಪರಾಕ್ರಮ ಧೀರ । ಗುಣನಿದಾನ ಕಠೋರ । ಮಣಿ ಮಕುಟ ಧೃತಹಾರ । ಮಂಜುಳಾಕಾರ ॥ ೧ ॥ ಸತ್ಯಧರ್ಮವಿಚಾರ । ಸಾಧುಜನ ಪರಿಪಾಲ । ನಿತ್ಯಮಂಗಲರೂಪ । ನಿಜಸುಪ್ರತಾಪ ॥ ೨ ॥ ಧರ್ಮದಾನ ಗಳಲ್ಲಿ । ಧೈರ್ಯಮಾನಿಗಳಲ್ಲಿ । ನಿರ್ಮಲಾತ್ಮಕನೆಂದು ನಿಮ್ಮ ಪೊಗಳುವರು ॥ ೩ ॥

### ಕೇದಾರಗೌಳ ರಾಗ - ಅಷ್ಟತಾಳ

ಬಲ್ಲಿದವರ ಕುಲದೈವ ನೀನೆಂದು ಪೂ । ರೆಲ್ಲ ಕೊಂಡಾಡುವುದು ॥ ಖುಲ್ಲ ನಿರ್ಭಾಗ್ಯನಿಂದೋರ್ವ ರಜಕ ನಿಮ । ಗಲ್ಲದ ನುಡಿಯ ಪೇಳ್ದ ॥ ೧ ॥ ವಲ್ಲಭೆ ತವರ್ಮನೆಗುಸುರದೈ। ದಿದಳೆಂದು ಕೊಲ್ಲುತ್ತವಳ ಬಿಡಲು॥ ಬಲ್ಲಿದರೊಡಬಡಿಸಲು ರಾಮನಂತೆ ಹುಚ್ಚ । ನಲ್ಲ ಕೂಡಲಿಕೆಂದನು ॥ ೨ ॥

### ಭಾಮಿನಿ

ನುಡಿಯ ಕೇಳುತ ಕೈಯ್ಯ ಧನುಶರ । ಪೊಡವಿಗುರುಳಿತು ರೋಷ ಮಯದು । ಗ್ಗಡದ ರೌದ್ರಾವೇಶದಲಿ ಮರಳಿದನು ಮಂದಿರಕೆ॥ ಮಿಡುಕುತಿ ರ್ದನು ಮನಸಿನಲಿ ಕಂ । ಗೆಡುತ ಕಣ್ಣಿಗೆ ನಿದ್ರೆಬಾರದೆ । ಪೊಡವಿಪತಿ ತನ್ನೊಳಗೆ ತಾನೆ ಮಾತನಾಡಿದನು ॥

### ಕಾಂಬೋಧಿ ರಾಗ - ಆದಿತಾಳ

ಮೋಸವಾಯಿತು । ಮಾನಿನಿಯ ತಂದು । ಮೋಸವಾಯಿತು ॥ ಪಲ್ಲ॥ ರಕ್ಕಸರ ಕೈಯೊಳಗೆ । ಸಿಕ್ಕಿ ಭಂಗಪಟ್ಟು ಅಪ । ರಿಕ್ಕಿದುಣ್ಣಲಿಲ್ಲವೆಂದು । ಲೆಕ್ಕಿಸದೆ ಮನೆಗೆ ತಂದು ॥ ಮೋಸವಾಯಿತು ॥ ೧ ॥ ಮಾನವರುಗಳನು ಕೊಂದು । ಮತ್ತೆ ಪಶುಗಳನು ತಿಂದು । ದಾನವರ ಕೈಮುಟ್ಟಿದ । ಮಾನಿನಿಯ ಮನೆಗೆ ತಂದು ॥ ಮೋಸವಾಯಿತು ॥ ೨ ॥ ಕದ್ದುಕೊಂಡು ಹೋಗಿ ತನ್ನ । ಬದ್ದಣಿಗರೊಡನೆ ಕೂಡಿ । ಶುದ್ಧವೇ ರಕ್ಕಸರ ಪುರದೊ। ಳಿದ್ದ ಸೀತೆಯ ಮನೆಗೆ ತಂದು ॥ ಮೋಸವಾಯಿತು ॥ ೩ ॥

ವಚನ

ಇಂತೆಂದು ಶ್ರೀರಾಮಚಂದ್ರ ದೇವರು ಹಲವು ಹಂಬಲಿಸುತ್ತ ರಾತ್ರೆ ಯಂ ಕಳೆದು ಮರುದಿವಸ ಉದಯದೊಳೆದ್ದು ಅನುಜನಾದ ಲಕ್ಷ್ಮಣನನ್ನು ಕರೆದು ಏನೆಂದರೂ ಎಂದರೆ-

ಮೇಚಾಳಿ ರಾಗ - ಏಕತಾಳ

ಬಾರಯ್ಯ ತಮ್ಮ ಕೇಳೆಂದನು । ದೊಡ್ಡ । ಘೋರ ಕಾನನದಲ್ಲಿ । ನಾರಿ ಜಾನಕಿಯ ಬಿಟ್ಟು ॥ ಬಾರಯ್ಯ ॥ ಪಲ್ಲ ॥ ಅಡವಿಗೆ ಕರಕೊಂಡು ಪೋಗಯ್ಯಾ । ಇನ್ನು । ಬಿಡಲಿಲ್ಲ ಜನರಪವಾದವ । ಅಲ್ಲಿ । ಮಡದಿಯೋ ವರ್ಗಳ ಬಿಟ್ಟು । ಕಡೆಗೆ ಪೇಳುವೆ ಗುಟ್ಟು ॥ ಬಾರಯ್ಯ ॥ ೧ ॥ ತಡವ ಮಾಡುವದ್ಯಾಕೊ ಸುಮ್ಮನೆ । ಈಗ । ನಡೆ ನಡೆ ಕರಕೊಂಡು ಘಮ್ಮನೆ । ಬೇರೆ । ನುಡಿಯದಿರೀ ಮಾತ । ತಡೆವುದಿದಾವ ನೀತ ॥ ಬಾರಯ್ಯ ॥ ೨ ॥

ಸಾಂಗತ್ಯ ರಾಗ - ರೂಪಕತಾಳ

ಈರೇಳು ಭುವನದೊಡೆಯ ವಿಶ್ವಪತಿ ರಾಮ । ಸಾರಸಾಂಬಕ ದೇವ ನೀನು ॥ ನಾರಿ ಜಾನಕಿಯಲ್ಲಿ ತಪ್ಪಗಾಣದೆ ಸುಮ್ಮ । ನಾರಣ್ಯದೊಳು ಬಿಡ ಲೇಕೆ ॥ ೧ ॥ ಅರಿಯದ ಮೂಢಾತ್ಮರಾರೇನ ಪೇಳ್ದರು । ಅರಿಯದೆ ದೇವರ ಮನಸು ॥ ಕರುಣಿಸಬೇಕು ಕಂಜಾಕ್ಷಿ ನಮ್ಮಮ್ಮಗೆಂ । ದೆರಗಿದ ಪಾದ ಪದ್ಮ ದಲಿ ॥ ೨ ॥ಏಳಯ್ಯ ತಮ್ಮ ನೀನೆಷ್ಟು ಪೇಳಿದರೇನು। ಕೇಳುವನಲ್ಲ ಈ ಮಾತ॥ ಬಾಳಲೋಚನನಾಣೆ ಬಲುಕಷ್ಟ ಬಂದರು ॥ ಆಳುವನಲ್ಲ ಜಾನಕಿಯ ॥ ೩ ॥ ಈ ಪರಿಯಲಿ ರಾಮ ಕೋಪಿಸೆ ಲಕ್ಷ್ಮಣ । ತಾಪವ ತಾಳಿ ಮನಸಿನಲಿ ॥ ಆ ಪುಣ್ಯವಂತೆಯ ಕರೆದು ಯೇಕಾಂತದಿ । ತಾ ಪೇಳ್ವನಾಗವನಿಜೆಗೆ ॥ ೪ ॥

ಕಲ್ಯಾಣಗೌಳ ರಾಗ - ಏಕತಾಳ

ಹರಿಣಲೋಚನೆ ಪುಣ್ಯವಂತೆ । ಜಾನಕಿದೇವಿ । ಅರಣ್ಯಕ್ಕೆ ತೆರಳ ಬೇಕಂತೆ ॥ ೧ ॥ ಅಗ್ರಜಭವನಪ್ಪಣೆಯಿಂಗ । ಕಾಡಿಗೆ ಪೋಗಲ್ । ಶೀಘ್ರದಿ ಪಯಣವಾಗು ಬೇಗ ॥ ೨ ॥ ರಥವೇರು ತಡವೇತಕಿನ್ನು । ತಾಯೆ ತೆಕ್ಕೊಳ್ಳಿ । ಜತೆಯಾಗಿ ಬೇಕಾದಂಥದ್ದನ್ನು ॥ ೩ ॥ ಪೃಥಿವಿಯಾತ್ಮಜೆ ಕೇಳೀ ಮಾತ । ನಿನ್ನಯ ಮನೋ । ವ್ರತವ ಸಲಿಸುವ ನಿನ್ನ ಕಾಂತ ॥ ೪ ॥

### ಭೈರವಿ ರಾಗ - ಝಂಪೆತಾಳ

ಅನುಜ ಲಕ್ಷ್ಮಣ ಕೇಳು । ಮುನಿಗಳಾಶ್ರಮದಿ ಭೋ। ಜನ ಮಾಡಲ ಪ್ಪಣೆಯು । ನಿನಗಾಯಿತೇನೈ ॥ ೧ ॥ ತರಿಸು ಸನ್ನಹವೆಲ್ಲ । ತನ್ನಿಂದ ತಡ ವಿಲ್ಲ । ಪರಮಪಾವನ ವನಿತೆ । ಪೊರಟಳಾ ಸೀತೆ ॥ ೨ ॥

### ವಾರ್ಧಿಕ

ಜಗದುಪತಿ ಕೇಳಿಂತು ಲಕ್ಷ್ಮಣನೊಳುಸುರುತಲೆ । ನಗಮೊಗದಿ ತನ್ನಿಷ್ಟ ದೊರಕಿತೀ ದಿನವೆಂದು । ಮಿಗೆ ಸರ್ವಭೂಷಣಂಗಳ ಧರಿಸುತಾ ಸೀತೆ ಪಯಣಸನ್ನಾಹವಾಗಿ ॥ ಅಗಿಲು ಚಂದನ ಗಂಧ ಕಸ್ತೂರಿ ಕುಂಕುಮವ। ಬಗೆಬಗೆಯ ದಿವ್ಯಾಂಬರಂಗಳಂ ತರಿಸಿಕೊಂ । ಡೊಗುಮಿಗೆಯ ಹರುಷದೊಳ ಗಂತಃಪುರಕೆ ಬಂದು ಕೌಸಲ್ಯೆಯೊಡನೆಂದಳು ॥

### ಶಂಕರಾಭರಣ ರಾಗ - ಏಕತಾಳ

ತಾಯೆ ಕೇಳಿಂದೆನ್ನ ಮಾತ । ರಾಯನಪ್ಪಣೆ ಕೇಳಿತ್ತ । ಪ್ರಿಯದಿಂ ಮುನಿವರರ । ಸ್ತ್ರೀಯರ ಕೂಡಿ ॥ ಆಯತದಿಂದಲವರಿಗೆ । ವಾಯನದಾನ ವನಿತ್ತು । ನೋಹಿಯನ್ನು ಮಾಡಿ ನಾಳೆ । ಬಾಹೆನೆಂದಳು ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಏಕೆ ಜಾನಕಿ ಯೆಂದಿಗಿಲ್ಲಿಗೆ । ದಾನವಾಂತಕ ಬರಲು ಪೇಳಿದ । ವಹಿನೀ ಮಣಿ ಜೋಕೆ ಪೋಗುವ । ಕಾನನದೊಳು ॥ ೧ ॥ ಪೋಗಿ ನಾಳೆಯೆ ಬಹೆನೆ ನುತ ತಲೆ । ವಾಗಿ ಕೈಕೆಗೆ ವರಸುಮಿತ್ರೆಗೆ । ಬೇಗ ವಂದಿಸಿ ಪಯಣವಾದಳು। ನಾಗವೇಣಿ ॥ ೨ ॥

### ನಾದನಾಮಕ್ರಿಯೆ ರಾಗ - ಅಷ್ಟತಾಳ

ರಾಮನ ಚರಣವ ನೆನೆಯುತ್ತ । ತಾಯಿ । ಭೂಮಿದೇವಿಗೆ ನಮೋ ಯೆನ್ನುತ್ತ ॥ ಗ್ರಾಮದೇವತೆಯ ಕಂಡೆರಗುತ್ತ । ಕುಲ । ಸ್ವಾಮಿಗೆ ಜಯ ವೆಂದು ಹೊಗಳುತ್ತ ॥ ೧ ॥ ಕೇರಿಕೇರಿಯ ಮನೆಮನೆಗಳ । ಅಲ್ಲಿ । ನಾರಿ ಯರಿಗೆ ಮುಗಿದು ಕರಗಳ ॥ ನಾರಿ ಜಾನಕಿ ಬೇಗ ಬಂದಳು । ರಥ । ವೇರಿ ಕಾಡಿಗೆ ನಡೆಯೆಂದಳು ॥ ೨ ॥

**ವಾರ್ಧಿಕ**

ಹಾರಿಸಿದನರೆನಿಮಿಷದಲಿ ರಥವ ಘಡಘಡನೆ । ಜಾರಿಸಿದ ಮರ ಕಲ್ಲು ಗಿರಿಪರ್ವತಂಗಳಂ । ತೋರಿಸಿದ ಬಲು ಭಯಂಕರವಾದ ಕಾನನದಿ ಹುಲಿಕರಡಿ ಸಿಂಹಗಳನು ॥ ಘೋರಿಸಿದ ರಕ್ಕಸರ ಹೊಳಲ ಮುರಿ ಮುರಿದು ಕಡೆ । ಗೂರಿಸಿದ ತೇರಕೀಲ್ಕಳಚುವಂತಾಯ್ತು ಮದ । ವೇರಿಸಿದ ಹಯಗಳಂ ಬೋಳೈಸುತಿರೆ ಕಂಡು ನಾರಿ ಜಾನಕಿ ಪೇಳ್ದಳು ॥

**ಭೈರವಿರಾಗ - ಏಕತಾಳ**

ಎಲ್ಲಿಗೆ ಪಯಣವಿದೇನು । ನಿಲು । ನಿಲ್ಲೆಲೊ ಲಕ್ಷ್ಮಣ ನೀನು ॥ ಕಲ್ಲೆದೆಯಹಾಯ್ತಿಂದೇಕೆ । ತರ । ವಲ್ಲ ಪೋಗುವದಿದು ಜೋಕೆ ॥ ೧ ॥ ಮುನಿ ವಧುಗಳ ನಾ ಕಾಣೆ । ಇದು । ವನಪಲ್ಲ್ಯ ನಿನ್ನಾಣೆ ॥ ದನುಜರ ಹೊಳಲಿದೆ ಮುಂದೆ । ರಥವನು ತಿರುಗಿಸು ನೀ ಹಿಂದೆ ॥ ೨ ॥ ಹುಲಿ ಕೇಸರಿ ಶಾರ್ದೂಲ। ಹಾವು । ಗಳು ಪರಿಯುತಲಿದೆ ಬಹಳ ॥ ಕಳವಳಗೊಳುತಿದೆ ಮನಕೆ । ಎನ್ನ । ಕಳುಹಿದುದೇಕೀ ವನಕೆ ॥ ೩ ॥

**ವಾರ್ಧಿಕ**

ನರನಾಥ ಕೇಳವನಿಸುತೆ ನುಡಿದ ಮಾತಿಗು । ತ್ತರವನಾಡದೆ ಮನ ದೊಳುರೆ ನೊಂದು ರಾಘವೇ । ಶ್ವರನೆಂದ ಕಷ್ಟಮಂ ಪೇಳ್ದಪೆನೊ ಮೇಣುಸುರದಿರ್ದಪೆನೊ ನಿಷ್ಠುರದಲಿ ॥ ತರಣಿಕುಲ ಸಾರ್ವಭೌಮನ ರಾಣಿಯಂ ವನದೊ । ಳಿರಿಸಿ ಪೋದಪೆನೆಂತು ಮರಳದಿರ್ದಡೆ ಸಹೋ । ದರನದೇನೆಂದಪನೊ ಹಾಯೆಂದು ಲಕ್ಷ್ಮಣಂ ಬೆಂದು ಬೇಗುದಿಗೊಂಡನು ॥

**ಕಂದ**

ಇಂತಾ ಲಕ್ಷ್ಮಣ ನೆನಸುತ । ಚಿಂತೆಯನುರೆ ತಾಳ್ದು ಬೆದರಿ ನಡ ನಡುಗುತ್ತಂ ॥ ಎಂತಾಗಲಿ ತಿಳುಪುವೆನೆನು । ತಂತರ್ಯಾದಿ ಧೈರ್ಯ ತಳೆದು ಸೀತೆಗೆ ನುಡಿದಂ ॥

**ಸೌರಾಷ್ಟ್ರ ರಾಗ - ತ್ರಿವುಡೆತಾಳ**

ಮೇದಿನೀ ಸುತೆ ಕೇಳು ಜನರಪ । ವಾದ ಬಂದುದ ಕಳಿಂಬಲೋಸುಗ। ಆದಮಾಂಬುಧಿ ಕಳುಪಿದನು ಮನ । ಖೇದದಿಂದ ॥ ೧ ॥ ಸೃಷ್ಟಿಗೀಶ್ವರ

ರಾಮಚಂದ್ರನು । ಸಿಟ್ಟಿನಿಂದಲಿ ನಿಮ್ಮನಡವಿಗೆ । ಬಿಟ್ಟು ಬಾರೆಂದೆನುತ ನೇಮವ । ಕೊಟ್ಟನೆನಗೆ ॥ ೨ ॥ ಬೊಮ್ಮಲಿಖಿತವ ಮೀರಿ ನಡೆಯಲು । ನಮ್ಮೊಳಳವೇ ಯೆಲ್ಲಿಗಾದರು । ಘಮ್ಮನೇ ಮನ ಬಂದೆಡೆಗೆ ಪೋ । ಗಮ್ಮ ನೀನು ॥ ೩ ॥

## ವಾರ್ಧಿಕ

ಪ್ರಳಯ ಕಾಲದ ಸಿಡಿಲು ಬಂದೆರಗಿ ವಟವೃಕ್ಷ । ವಿಳಿಗೊರಗುವಂತೆ ಲಕ್ಷ್ಮಣನ ನುಡಿ ಕೇಳಿ ಭೂ । ತಳಕೆ ಮೂರ್ಛೆಯಲಿ ಬಿದ್ದಂಬುಜಾಕ್ಷಿಯ ಕಂಡು ಸೌಮಿತ್ರಿ ಬೆರಗಾಗುತ ॥ ತಿಳಿನೀರ ಕಣ್ಗೊತ್ತಿ ಪತ್ರಗಳ ಕೊಡೆವಿಡಿದು । ಎಳೆನೀರ ಕೊಡುತ ಕಂಬನಿಯೊರಸೆ ಮೂರ್ಛೆಯಿಂ । ತಿಳಿದೆದ್ದು ಲಕ್ಷ್ಮಣನ ಮೊಗ ನೋಡಿ ಕಣ್ಣನೀರಿನೊಳವನಿಸುತೆ ನುಡಿದಳು ॥

## ಸಾಂಗತ್ಯ ರಾಗ - ರೂಪಕತಾಳ

ಕಯ್ಯಾರೆ ಖಡ್ಗವ ಕೊಟ್ಟು ತನ್ನರಸಿಯ । ಹ್ಯೊಯೆಂದು ಪೇಳದೆ ಬರಿದೆ ॥ ಒಯ್ಯನೆ ಕಾಡಿನೊಳ್ ಬಿಟ್ಟು ಬಾರೆಂದನ । ಯ್ಯಯ್ಯೊ ರಾಘವ ಕರುಣಾಳು ॥ ೧ ॥ ರಾಮನ ಭುವನಾಭಿರಾಮನ ಚರಣಸು । ಪ್ರೇಮನ ಪಾದವನಗಲಿ ॥ ಈ ಮಹಾಕಾಡಿನೊಳಿರುವಂತಾಯಿತೆ ಹಾ ಹಾ । ರಾಮ ರಾಮಾ ಯೆಂದಳಬಲೆ ॥ ೨ ॥ ಕಾಡಿನೊಳಗೆ ಹುಲಿಯಿರುವ ಸುದ್ದಿಯ ಕೇಳಿ। ನಾಡೊಳೊಕ್ಕಲ ತೆಗೆದಂತೆ ॥ ನಾಡಮಾತನು ಕೇಳುತೆನ್ನನೀ ರೀತಿಯ । ಮಾಡಿದನಲ್ಲ ಯೆನ್ನರಸ ॥ ೩ ॥ ಕಾಣಲಾರದೆ ಹಗೆಯವರು ಮಸ್ತಕದಲ್ಲಿ । ಮಾಣಿಕ್ಯವುಂಟೆಂದರವನ ॥ ಪ್ರಾಣವ ತೆಗೆದಂತೆ ಜಾಲಮಾತಿಗೆ ಯೆನ್ನ । ಪ್ರಾಣೇಶ ತೊರೆದನೆ ವಿಧಿಯೆ ॥ ೪ ॥ ಪಟ್ಟ ಪ್ರಮಾಣ ತರ್ಕಣೆ ಸಾಕ್ಷಿ ಚತುರ್ವಿಧ । ಎಷ್ಟುಂಟು ಧರ್ಮ ರಾಜ್ಯದಲಿ । ಭ್ರಷ್ಟರ ನುಡಿಗೆನ್ನ ತೊರೆದನೆ ಪ್ರಾಣೇಶ । ಕಷ್ಟ ಸಂಸಾರ ಬಡವರಿಗೆ ॥ ೫ ॥

## ವಚನ

ಈ ರೀತಿಯಿಂದ ಜಾನಕಿಯು ನುಡಿಯಲಾಗಿ ಲಕ್ಷ್ಮಣನು ಸುಮ್ಮನೆ ಇರಲು ಮತ್ತೆ ಧರಣಿಜೆಯು ಏನೆಂದಳು ಅಂದರೆ-

ನೀಲಾಂಬರಿ ರಾಗ - ಏಕತಾಳ

ಏಕಳಲುವೆ ಲಕ್ಷ್ಮಣಾ । ಕೋಪಿಸುವನು । ಕಾಕುಸ್ಥ ನಿನ್ನ ಮೇಲೆ ॥ ಸಾಕು ತಾನಾದರು ರಾಮ । ಒಳ್ಳಿತಾಗಿರಲಿ । ರಾಕೇಂದುನಿಭವದವ ॥ ೧ ॥ ವಲ್ಲಭಗಿಂತ ಮನಸು । ಬಂತಲ್ಲ ಹೀಗೆ । ಕಲ್ಲೆದೆಯಾಗುವರೆ ॥ ಕೊಲ್ಲದೆ ಬಿಟ್ಟು ಪೋಪೆಯ । ಈ ಕಾಡಿನಲ್ಲಿ । ಎಲ್ಲಿಗೈದಲಿ ಪೇಳಯ್ಯ ॥ ೨ ॥ ಕೌಸಲ್ಯೆ ಸುಮ್ಮನಿದ್ದಳೆ । ಸೌಮಿತ್ರಾದೇವಿ । ಈ ಕೆಲಸಕೊಪ್ಪಿದಳೆ ॥ ಬಹುಕಾಲವಿದ್ದ ಜಾಂಬವ । ಭಕ್ತ ಹನುಮಂತ । ತಾ ಕೇಳಿ ಸುಮ್ಮನಿದ್ದನೆ ॥ ೩ ॥ ಯಾರಿದ್ದು ಏನ ಮಾಳ್ಪರು । ಎನ್ನ ಫಣೆಯಲ್ಲಿ । ಈ ರೀತಿ ಬರೆದ ಮೇಲೆ ॥ ಮೂರು ಬಾರಿಗೆ ಪೇಳಿದಾ । ಮೇಲಿನ್ನುಂಟೆ। ಶ್ರೀರಾಮಚರಣಸೇವೆ ॥ ೪ ॥

ವಚನ

ಇಂತೆಂದು ಜಾನಕಿ ನುಡಿಯಲಾಗಿ ಲಕ್ಷ್ಮಣನು ಏನೆಂದನು ಎಂದರೆ-

ನವರೋಜು ರಾಗ - ಆದಿತಾಳ

ಅಂಬರ ಗ್ರಹಂಗಳಿರ । ಈ । ಕುಂಭಿನೀ ದೇವತೆಗಳಿರ ॥ ಶಂಭು ವಾಣೀಶರಿರ । ವಿಷ್ಣು । ವೆಂಬ ತ್ರಿಮೂರುತಿಗಳಿರ ॥ ೧ ॥ ವನದೊಳಿಹ ಮುನಿಗಳಿರ । ಹೇ । ವನಪಕ್ಷೀ ಮೃಗಗಳಿರ ॥ ಅನುಪಮ ಗಂಧರ್ವರಿರ । ಚಾ । ರಣ ಸಿದ್ಧಾಸಾಧ್ಯರಿರ ॥ ೨ ॥ ಅಷ್ಟದಿಕ್ಪತಿಗಳಿರ । ಈ । ಸೃಷ್ಟಿಗಧಿನಾಥರಿರ । ನಿಟ್ಟಿಸುತೀ ಭೂಸುತೆಯ। ದಯ । ವಿಟ್ಟು ರಕ್ಷಿಸಿರಯ್ಯಾ ॥ ೩ ॥

ವಚನ

ಈ ರೀತಿಯಿಂದ ಸಕಲದೇವತೆಗಳಿಗೆರಗಿ ಭೂದೇವಿಗೆ ಕೈಮುಗಿದು ನಿನ್ನ ಮಗಳಂ ರಕ್ಷಿಸಿಕೋ ಎಂದು ಪ್ರಾರ್ಥಿಸಿ ಲಕ್ಷ್ಮಣನು ಹಿಂತಿರುಗಲತ್ತಲಾ ಜಾನಕಿಯು ವಿರಹಸಂತಾಪದಿಂದ ಗದ್ಗದ ಸ್ವರದಿಂದ ಮರುಗಿದಳದೆಂತೆನೆ-

ಭೈರವಿ ರಾಗ - ಏಕತಾಳ

ವನದೊಳಗಿರಲು ನಾ ಹಿಂದೆ । ಎನ್ನ । ದನುಜನೊಯ್ಯಲು ಕೂಡೆ ಬಂದೆ । ಕ್ಷಣದೊಳಗಸುರನ ಕೊಂದೆ । ಬಿಡೆ । ನೆನುತ ಧೈರ್ಯವ ಮಾಡಿ ತಂದೆ ॥ ೧ ॥ ಅರಿತು ನೀನಿರು ಸುಖದೊಳಗೆ। ಎನ್ನ ತೊರೆವರೆ ಕಾನನದೊಳಗೆ॥

ಕರಗದೆ ಮನಸ್ಸು ನಿನಗೆ । ಈಗ । ಮರತರೆ ಗತಿ ಯಾರೆನಗೆ ॥ ೨ ॥ ಬಲು ಬಲು ಗುಣಗಳುಳ್ಳವನೆ । ಜಗವ । ನುಳುಹಿದ ಲಕ್ಷ್ಮಿವಲ್ಲಭನೆ ॥ ಸುಲಲಿತ ರೂಪ ಕೇಶವನೆ । ನಾ ಬಳಲುವೆ ಕಾಯೊ ಪರಶಿವನೆ ॥ ೩ ॥

### ನಾದನಾಮಕ್ರಿಯೆ

ಸೀತೆ ಹೀಗೆಂದು ಕೂಗಾಡುತ್ತ । ಭೂತ । ನಾಥನ ದೆಸೆಯನ್ನು ನೋಡುತ್ತ ॥ ಭೂತಳದೊಳು ಬಿದ್ದು ಮಾಣದೆ। ಮೈಯ । ಧಾತುಗೆಟ್ಟಳು ಕಣ್ಣು ಕಾಣದೆ ॥ ೧ ॥ ಕಂಡು ಚಮರಿಮೃಗ ಬೀಸುತ್ತ । ಮಿಗೆ ಹಿಂಡುತಳಿರ ತಂದು ಹಾಸುತ್ತ ॥ ತುಂಡ ಪಕ್ಷಗಳ ನೇವರಿಸುತ್ತ । ದೇವಿ ಪುಂಡರೀಕಾಕ್ಷನ ನೆನೆವುತ್ತ ॥ ೨ ॥ ಬಿಸಿಲು ಗಾಳಿಗೆ ಮೈಯ ಬಾಡುತ್ತ । ತಾನು । ವಸುಧೆ ಯೊಳೊರಗಿ ಮತ್ತೇಳುತ್ತ ॥ ಉಸುರದಂತೇ ಭಯ ತಾಳುತ್ತ । ರಾ । ಕ್ಷಸರ ಬೊಬ್ಬೆಗಳನ್ನು ಕೇಳುತ್ತ ॥ ೩ ॥ ಕೂಗುತಿರಲು ಸೊಲ್ಲು ಸೊಲ್ಲಿಗೆ । ಬಂದ । ನಾಗ ವಾಲ್ಮೀಕಿ ಮುನಿಯಲ್ಲಿಗೆ ॥ ಯಾಗಸನ್ನಾಹಗಳರಸುತ್ತ । ಅಲ್ಲಿ । ವಾಗವೇಣಿಯ ಕಂಡು ನುಡಿಸುತ್ತ ॥ ೪ ॥

### ಭೈರವಿ ರಾಗ - ಝಂಪೆತಾಳ

ಅಮ್ಮ ಕೇಳಂಜದಿರು । ಅಳುವದೇತಕೆ ಜರಿದೆ । ನಿಮ್ಮ ರಾಜ್ಯಗಳೆಲ್ಲಿ । ನೀವ್ಯಾರ ಮಗಳು॥ಮಾತೆ ಕೇಳ್ ನೀವ್ಯಾವ।ಭೂತಳಾಧಿಪನರಸಿ।ಏತಕೋಸುಗ ಬಂದೆ । ಈ ತಪೋವನಕೆ ॥ ೨ ॥ ಕಾಂತೆ ನಿನ್ನನು ಹಿಂದೆ । ಕಂಡ ಹೊಲಬಿದೆ ಮುಂದೆ । ಚಿಂತೆ ಬಿಡು ವಾಲ್ಮೀಕಿ । ಮುನಿ ಯೆನ್ನ ಪೆಸರು ॥ ೩ ॥ ಆಪತ್ತು ಬಂದಾಗ । ಅತಿಧೈರ್ಯವಿರಬೇಕು । ಈ ಪಾಟಿ ಮರುಗುವರೆ । ಈ ಕಾಡಿ ನೊಳಗೆ ॥ ೪ ॥ ನಯದಿಂದ ವಾಲ್ಮೀಕಿ । ನಂಬಿಸುತ ಮಾತಾಡೆ । ಭಯ ದಿಂದಲುಸುರಿದಳು । ಬಲ್ಲ ಮುನಿಯೊಡನೆ ॥ ೫ ॥

### ಸಾಂಗತ್ಯ ರಾಗ - ರೂಪಕತಾಳ

ದಶರಥ ನೃಪತಿಗೆ ಸೊಸೆಯಾಗಬೇಕೆನ್ನ ॥ ಪೆಸರು ಜಾನಕಿಯೆಂಬರೆಲ್ಲ ॥ ಎಸೆವ ರಾಘವನ ಪಟ್ಟದರಾಣಿ ಸಾಕೇತ । ಪುರಪನಾಳುವನೆನ್ನ ರಮಣ ॥ ೧ ॥ ಇರಲೊಂದು ದಿನ ನಡುವಿರುಳು ಪಟ್ಟಣದೊಳು । ತಿರುಗಲು ರಜಕನ

ಮನೆಯ ॥ ತರುಣಿ ಪುರುಷರು ತಮ್ಮೊಳಗೆ ಕೊಂಡಾಟದೊ । ಳಿರುಹಿದ ರೇನೊ ನಾನರಿಯೆ ॥ ೨ ॥ ಮರುದಿನದುದಯದೊಳನುಜನ ಕರೆದು ನಾ । ನರಿಯದಂದದಿ ನೇಮವಿತ್ತ ॥ ತರಳೆಯ ಕಾಡಿಲಿ ಬಿಟ್ಟುಬಾರೆನಲೆನ್ನ । ಕರ ತಂದನಿಲ್ಲಿ ಸೌಮಿತ್ರಿ ॥ ೩ ॥ ಆಧರಿಸದೆ ಬಿಟ್ಟುಹೋದ ಲಕ್ಷ್ಮಣ ನಿನ್ನೆ । ಹಾದಿಯ ಕಾಣದೆ ಮುಂದೆ ॥ ಹೇ ದಯಾನಿಧಿ ನಿಮ್ಮ ಪಾದವ ಕಂಡೆ ನಿ । ನ್ನಾದರು ಕಾಯಬೇಕಯ್ಯ ॥ ೪ ॥ ವಿಷವ ಕುಡಿದು ಸಾವೆನೆಂದರೆ ತನ್ನಯ । ಬಸುರಿಗಾಯಿತು ತಿಂಗಳಾರು ॥ ವಶವಿಲ್ಲವಿನ್ನು ಜೀವಿಸುವಂದವಿಲ್ಲೆಂದು । ಶಶಿಮುಖಿ ಬಿದ್ದಳಂಘ್ರಿಯಲಿ ॥ ೫ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಏಳು ಚಿಂತಿಸಬೇಡ ಜಾನಕಿ । ಕೇಳುವುದು ನಾನೆಂಬ ನುಡಿಯನು । ಲೋಲ ಲೋಚನೆ ಅಂಜಿಕೆಯ ಬಿಡು । ಪಾಲಿಸುವೆನು ॥ ೧ ॥ ಮುಗುದೆ ಕೇಳ್ ಬೇರೆ ಮನದಲಿ । ಬಗೆಯದಿರು ವಾಲ್ಮೀಕಿ ಮುನಿ ನ । ಮ್ಮಗಣಿ ತಾಶ್ರಮದೊಳಗೆ ಇರು ನೀ । ಮಗಳು ನಮಗೆ ॥ ೨ ॥

### ಮೇಚಾಳಿ ರಾಗ - ಏಕತಾಳ

ದೂರ ನಿಲ್ಲಿತ್ತ ಬರಬೇಡವೋ । ಇಂಥ । ಘೋರ ಕಾನನದಲ್ಲಿ । ನಾರಿ ಸಣ್ಣವಳು ನಾನು ॥ ದೂರ ॥

### ದೇಶೀ ರಾಗ - ಏಕತಾಳ

ನಂಬಿಕೊಳ್ಳೆ ನಂಬಿಕೊಳ್ಳೆ । ನಾರಿ ಕೇಳವ್ವ ॥ ಹಂಬಲಿಸಬೇಡ ಮರಿ । ದುಂಬೆಗುರುಳವ್ವ ॥ ನಂಬಿಕೊಳ್ಳೆ ॥ ಪಲ್ಲ ॥ ತಕ್ಕನ ಮಾತಲ್ಲ ಕೇಳು । ಚಿಕ್ಕಪ್ರಾಯದವ್ವ ॥ ಅಕ್ಕರಿಂದಿಬ್ಬರು ಸಣ್ಣ । ಮಕ್ಕಳಾಗುವ ರವ್ವ ॥ ನಂಬಿಕೊಳ್ಳೆ ॥ ೧ ॥ ಪುತ್ರರಾದ ಮೇಲೆ ನೀ । ನಿತ್ತ ಕೇಳವ್ವ ॥ ಮತ್ತೆ ರಾಮಚಂದ್ರ ದೇವ । ರೊತ್ತಿಲಿರುವೆಯವ್ವ ॥ ನಂಬಿಕೊಳ್ಳೆ ॥ ೨ ॥ ಇಕ್ಕೊ ದೂರಿಲ್ಲ ನಮ್ಮಾಶ್ರ । ಮಕ್ಕೆ ಬಾರವ್ವ ॥ ಮುಕ್ಕಣ್ಣನಾಣೆ ಬೇರೇನು । ಲೆಕ್ಕಿಸದಿರವ್ವ ॥ ನಂಬಿಕೊಳ್ಳೆ ॥ ೩ ॥

### ವಾರ್ಧಿಕ

ಘೊಡೆವ ಮಳೆ ಯೊಯ್ಲು ನೀರಲಿಮುಳುಗಿ ಸಾವವನ। ಪಿಡಿದೆತ್ತಿ ಜೀವ ವನು ಕಾಯ್ದಂತೆ ಭಯದಿಂದ।ಮಿಡುಕುತಿಹ ಜಾನಕಿಯ ಕರತಂದನಾಶ್ರಮಕೆ।

ತಾಪಸೋತ್ತಮನು ಬಳಿಕ ॥ ಕಡು ಪತಿವ್ರತೆ ಜಗಜ್ಜನನಿ ತನ್ನೆಲೆಮನೆಗೆ । ನಡೆತುದಳಿನ್ನು ಪಾವನನಾವೆನೆಂವೆನುತ । ಬಿತವೆ ಪಲಾಶಭವನವ ರಚಿಸೆ ಸಜ್ಜನರಿಗಡವಿಯೋ ಮನೆಯಾದುದು ॥

### ಯರಕಲಕಾಂಬೋಧಿ - ಏಕತಾಳ

ಬೆಳಗಾಗುತ್ತಲೆ ಏಳ್ವಳು । ಜಾನಕಿದೇವಿ । ಹೊಳೆಯಲ್ಲಿ ಮಿಂದು ಬರುವಳು ॥ ಪ ॥ ವನಜ ಪುಷ್ಪವ ಕೊಯ್ವಳು । ಆ ಹೂವ ತಂದು । ಮುನಿಪಾದಕರ್ಪಿಸುವಳು॥ ಮೂರು ಪ್ರದಕ್ಷಿಣೆ ಗೈವಳು। ವಾಲ್ಮೀಕಿಮುನಿಗೆ। ವ್ಹೋರುತೆ ಕೈಯ ಮುಗಿವಳು ॥ ೧ ॥ ಆ ಮೇಲೆ ಪರ್ಣ ಶಾಲೆಯೊಳು । ಕುಳಿತುಕೊಂಡು।ರಾಮಧ್ಯಾನವ ಮಾಳ್ಪಳು॥ ಶ್ರೀರಾಮ ರಾಮಯೆನ್ನುತ್ತ । ಜಾನಕಿದೇವಿ । ನವಮಾಸಭರಿತವಾದಳು ॥ ೨ ॥

### ಶಂಕರಾಭರಣ ರಾಗ - ಏಕತಾಳ

ಅಾಗನೆ ಸೀತೆಗೊಂಭತ್ತು । ತಿಂಗಳಾಯಿತು ಕೋಮ । ಲಾಂಗಿಗೆ ಸಂತಾಪ ಹೆಚ್ಚಿ । ಮುಂಗಾಣಿಸಿತು ॥ ೧ ॥ ಸುತ್ತಮುತ್ತಲಿರುವ ಮುನಿ । ಪತ್ನಿಯರೆಲ್ಲರು ಕೂಡಿ । ಮತ್ತಗಜಗ ಮನೆಯಾ । ಪತ್ತ ನೋಡುತ್ತ ॥ ೨ ॥ ಮತ್ತಾಕೆಗೆ ಬೇಕಾದಂತ । ವಸ್ತುಗಳೆಲ್ಲವ ತರಿಸಿ । ಸುತ್ತ ಭೂಜಾತೆಯ ಸಲ । ಹುತ್ತಲಿರ್ದರು ॥ ೩ ॥ ನಾರಿಯರತ್ತಿತ್ತ । ತಿರುಗಾಡುವ ಕಾರಣವ ಕಂಡು । ಬೇರೆಯೇನಾಹುದೊ ಯೆಂದು । ಗಾರು ಗೆಟ್ಟನು ॥ ೪ ॥ ನಾರಾಯಣನೆ ಗತಿಯೆನುತ್ತ । ವಾಲ್ಮೀಕಿ ಮುನಿಪತಾನು । ಮೂರು ದಿವಸ ಹಗಲಿರುಳು । ಕಾಯುತಿರ್ದನು ॥ ೫ ॥

### ವಾರ್ಧಿಕ

ಮುಂದಗಾಮಿನಿ ಸೀತೆ ಶುಭಲಗ್ನ ಶುಭತಿಥಿಯೊ । ಳೊಂದಿರುಳು ಪಡೆದಳು ಕುಮಾರರೀರ್ವರನು ಸುರ । ದುಂದುಭಿಯು ಮೊಳಗಿತಾಕಾಶದಲಿ ಜಯತು ಜಯತೆಂದು ಪೂಮಳೆಗರೆದರು ॥ ಮುಂದೆ ರಘುಕುಲದ ಬೆಳೆ ಯುದ್ಭವಿಸಿ ರಘುವಂಶ । ಸಿಂಧು ಚಂದ್ರಮರು ಜಾನಕಿಯ ಪುಣ್ಯಾಂ ಕುರದ। ಬಂಧುರವೊ ಯೆಂದು ತೋರಿಸಿತು ನೋಳ್ಪರ ಕಣ್ಗೆ ತೋರಿ ಬೆಳಗಿದ ರೀರ್ವರು ॥

ಶಂಕರಾಭರಣ ರಾಗ - ಏಕತಾಳ

ಹೆತ್ತ ಬಾಣಂತಿ ಮಕ್ಕಳಿಗೆ । ಹತ್ತು ರಾತ್ರೆಯಾದ ಮೇಲೆ । ಚಿತ್ರವಿಸಿ ವಾಲ್ಮೀಕಿ ಮುನಿ । ಪೋತ್ರಮ ತಾನು ॥ ೧ ॥ ಸೋಮಸೂರ್ಯರಂತಿಪ್ಪ ಸ । ತ್ಕೋಮಲಾಂಗರೀರ್ವರಿಗೆ। ಪ್ರೇಮದಿ ಕುಶಲವರೆಂದು। ನಾಮವಿಟ್ಟನು ॥ ೨ ॥ ಆ ಕುಮಾರರಿಬ್ಬರ ಶು । ಭಾಕರ ಲಗ್ನವ ನೋಡಿ । ತಾ ಕರೆದು ಸೀತೆಗೆ ವಾ । ಲ್ಮೀಕಿ ಪೇಳ್ದನು ॥ ೩ ॥ ಕೋಕಿಲ ಸುವಾಣಿ ಕೇಳು । ನಿನ್ನ ಕುಮಾರರೀರ್ವರು । ಲೋಕದೊಳಗತಿಜಾಣ । ರೆನಿಸಿಕೊಂಬರು ॥ ೪ ॥ ಸೃಷ್ಟಿಜಾತೆ ಮಕ್ಕಳೀರ್ವರು । ಹುಟ್ಟಿದ ಶುಭಲಗ್ನದಲ್ಲಿ । ಅಷ್ಟದಿಕ್ಪಾಲಕ ರಿಂಗೆ । ಶ್ರೇಷ್ಠರೆನ್ನಿಸಿ ॥ ೫ ॥ ಕಷ್ಟದಿಂದ ತಂದೆ ಮಕ್ಕ । ಳಿಷ್ಟವಾಗಿ ಮುಂದಯೋಧ್ಯ । ಪಟ್ಟವನಾಳುವರ್ಯೆಸೆ । ದೃಷ್ಟಾಂತವಿದು ॥ ೬ ॥

ವಚನ

ಈ ರೀತಿಯಿಂದ ಮುನಿಪತಿಯು ಪೇಳಿ ತನ್ನಾಶ್ರಮಕೆ ತೆರಳಾಗಿ ಮುನಿಪತ್ನಿಯರೆಲ್ಲರು ಮಕ್ಕಳನ್ನು ಚಿನ್ನದ ತೊಟ್ಟಿಲೊಳಿಟ್ಟು ತೂಗಿದರ ದೆಂತೆನೆ-

ಮಧುಮಾಧವಿ ರಾಗ - ಅಷ್ಟತಾಳ

ಕನಕನಿರ್ಮಿತವಾದ ತೊಟ್ಟಿಲ ತರಿಸಿ । ಮುನಿಪತ್ನಿಯರೆಲ್ಲ ತಾವು ಸಿಂಗರಿಸಿ ॥ ಅನುಕೂಲವನು ಮಾಡಿ ಗಣಪನ ಭಜಿಸಿ । ಜನಕಜೆ ಕುವರರ ತೊಟ್ಟಿಲೊರಿಸಿ ॥ ಜೋ ಜೋ ॥ ೧ ॥ ಜೋಜೋ ಸೀತಾದೇವಿಯ ಕಂದ । ಜೋಜೋ ಶ್ರೀರಾಮ ಪುತ್ರಾನಂದ ॥ ಜೋಜೋ ರಾಕ್ಷಸ ಕುಲವೈರಿ ಕಂದ। ಜೋಜೋಯೆನುತ ತೂಗಿದರೊಲವಿಂದ ॥ ಜೋಜೋ ॥ ೨ ॥ ಜೋಜೋ ರಾಮನ ಪ್ರೇಮದ ಕಂದ ॥ ಜೋಜೋ ಭೂಮಿಗೆ ಪತಿಯಾಗಿ ನಿಂದ ॥ ಜೋಜೋ ಭಕ್ತರ ಸಲಹುವ ಕಂದ । ಜೋಜೋ ಯೆನುತ ಪಾಡಿದರರ್ತಿ ಯಿಂದ । ಜೋಜೋ ॥ ೩ ॥

ದ್ವಿಪದಿ

ಮೊಲೆಹಾಲನುಣುತಿರುವ ಮಕ್ಕಳೀರ್ವರಿಗೆ । ವಲವುಮಿಗಿಲಾ ದಿವಸ ವರುಷವೊಂದಾಗೆ ॥ ೧ ॥ ತಪಸಿಯಾಶ್ರಮದಲ್ಲಿ ತರಳರಿರೆ ಕಂಡು ।

ಚಪಲಾಕ್ಷಿ ಮನದೊಳಗೆ ಚಿಂತಿಸಿದಳೆಂದು ॥ ೨ ॥ ಪರದೇಶಿ ಸುತರಿವರ ಪಾಪವೇನೆಂದು । ತರಳೆ ದುಃಖಿಸೆ ಮುನಿಪ ತಾ ತಿಳಿದನೆಂದು ॥ ೩ ॥ ಸುರಪುರಕೆ ಕಳುಹಿದನು ಶಿಷ್ಯರನು ಬೇಗ । ಸುರತರಳರಾಭರಣಗಳ ತಂದರಾಗ ॥ ೪ ॥ ಮಕುಟದರಳೆಲೆ ಮುತ್ತು ಮತ್ತದರ ಸುತ್ತು । ಅಖಿಳ ರತ್ನಾಭರಣವದರೊಳಿರುತಿತ್ತು ॥ ೫ ॥ ಕಾಲಲಂದುಗೆ ಗೆಜ್ಜೆ ಕಡಗ ಕೈಬೆರಳ । ಸಾಲಾಗಿ ಉಂಗುರವ ಸರಪಣಿಯ ಕೊರಳ ॥ ೬ ॥ ಪುಲಿಯುಗುರು ವಡ್ಯಾಣ ಹೂವಿನಂಗಿಗಳ । ಬಲು ಪ್ರಕಾಶದೊಳಿರುವ ಬಹುಭೂಷಣಗಳ ॥ ೭ ॥ ತೊಡಿಸಿದನು ಮಕ್ಕಳಿಗೆ ತಕ್ಕ ವಸ್ತುಗಳ । ಉಡಿಸಿದನು ಮುನಿರಾಯನುಡುವ ಪಟ್ಟೆಗಳ ॥ ೮ ॥

### ಶಂಕರಾಭರಣ ರಾಗ - ಮಟ್ಟೆತಾಳ

ಕಂಡು ಸೀತೆ ಹರುಷವಾಂತಳು । ಪುಂಡರೀಕನಯನೆ ಪುಟ್ಟ । ದಾ ಮಕ್ಕಳ ಚಲುವಿಕೆಯನು ॥ ಕಂಡು ॥ ಪಲ್ಲ ॥ ಶಶಿಯ ಪೋಲ್ವ ಮುದ್ದು ಮೊಗದೊ । ಳೆಸೆವ ಕದಪಿನಲ್ಲಿ ಪೋಲ್ವ । ಮಿಸುಪ ಕರ್ಣಕುಂಡಲ ಶಿರದೊ। ಳೆಸೆದು ಜೋಲುತಾ ॥ ಕುಸುಮಶರನ ಬಾಣಪೆರಡು । ಶಿಶುಗಳಾಯ್ತೊ ಪೊಗಳಲರಿದು । ಕುಶಲವರು ನಲಿನಲಿದು ಸಂ । ತಸದಿ ಬರುವ ಚಲುವಿಕೆಯನು ॥ ಕಂಡು ॥ ೧ ॥ ಗೆಜ್ಜೆ ಕಾಲುಂಗುರ ಪಿಲ್ಲಿ। ಮೆಂಟೆ ಘಲ್ಲಘಲ್ಲರೆನುತ । ಪ್ರಜ್ವಲಿಸೆ ನೂತನದ ಮಾ । ಗಾಯ್ಗಳುಲಿಯಲು ॥ ವಜ್ರದ ಹರಳು ಕೆತ್ತಿ । ದಾ ಮಕುಟ ಶಿರದೊಳೆಸೆಯೆ । ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು । ನಲಿದು ಬರುವ ಚಲುವಿಕೆಯನು ॥ ಕಂಡು ॥ ೨ ॥

### ಭೈರವಿ ರಾಗ - ಝಂಪೆತಾಳ

ಮೂರು ವರುಷದ ಮೇಲೆ । ಮುದದಿಂದ ಮಕ್ಕಳಿಗೆ । ಹೇರಂಬ ಅಕ್ಷರವ । ನಾರಂಭಿಸಿದನು ॥ ೧ ॥ ಬರಹವೆಲ್ಲವ ಕಲಿತು । ಬಂದ ಮಕ್ಕಳ ನೋಡಿ । ಗುರು ವೇದಶಾಸ್ತ್ರ ಪೌ । ರಾಣ ಕಲಿಸಿದನು ॥ ೨ ॥ ಸಂಗೀತ ವಿದ್ಯೆಗಳ । ಸಾಧಿಸುತ ಪಾಡಿದರು । ವಿಂಗಡದಿ ನುಡಿಸಿದರು । ವೀಣೆಗಳ ಸ್ವರವ ॥ ೩ ॥ ಆ ಮುದ್ದು ಮಕ್ಕಳಿಗೆ । ಅರ್ತಿಯಲಿ ವಾಲ್ಮೀಕಿ । ರಾಮಾಯಣದ ಕಥೆಯ । ತಾ ಮುದದಿ ಪೇಳ್ದ ॥ ೪ ॥

ವಚನ

ಇಂತು ಕುಶಲವರು ಸಕಲ ವಿದ್ಯವಂ ಕಲಿತವರಾಗಿ ಮುನಿವರ್ಯ ನೆಡೆಗೈದಿ ಏನೆಂದರು ಎಂದರೆ-

ಪೂರ್ವಿ ರಾಗ - ಅಷ್ಟತಾಳ

ಜಯ ಜಯ ರಕ್ಷಿಸೊ ಮಹಾಮುನಿವರೇಣ್ಯ । ಪಾಹಿ । ಭಯ ನಿವಾರಣ ಮಹಾತ್ಮ ಅಗ್ರಗಣ್ಯ ॥ ೧ ॥ ಬುದ್ಧಿವಂತರಾದೆವಯ್ಯ ಈಗ ನಾವು । ಬಿಲ್ಲು । ವಿದ್ಯವನ್ನು ನಮಗೆ ಕಲಿಸಬೇಕು ನೀವು ॥ ೨ ॥ ಸಣ್ಣ ವರು ಬಿಲ್ಲುವಿದ್ಯ ನಿಮಗ್ಯಾಕೆ । ಇದು । ಬಣ್ಣವಲ್ಲ ಕೇಳಿರಪ್ಪಗಳಿರ ಜೋಕೆ ॥ ೩ ॥ ಬೇಟೆಯಾಡ ಪೋಗುವಾಗ ಮಕ್ಕಳೆಲ್ಲ । ನಮ್ಮ । ಪಾಟಿಮಾಡಿ ಹೆಡ್ಡ ರೆಂದು ಬೈವರಲ್ಲ ॥ ೪ ॥ ಕಲಿಸಿದಿರಿ ನಮಗೆ ಸಕಲ ವಿದ್ಯವನ್ನು । ಮುಂದೆ। ತಿಳುಹಿ ಬಿಲ್ಲುವಿದ್ಯವನು ನಮ್ಮ ಪಾಲಿಸಿನ್ನು ॥ ೫ ॥

ಸಾರಂಗ ರಾಗ - ಏಕತಾಳ

ನೋಡು ಜಾನಕಿಯೆ ಮ । ಕ್ಕಳು ಬಿಲ್ಲುವಿದ್ಯವ । ಗಾಢದಿ ಕಲಿ ಸೆಂದು । ಕಾಡುತ್ತಲಿಹರೆಂದು ॥ ೧ ॥ ಚಲುವ ಬಾಲಕರಿವರು । ಬಲವಂತ ರಾಗಿಹ । ಕಲಿಗಳಿದಿರು ನಿಂತು । ಕಲಹಗೈಯುವರೆಂತು ॥ ೨ ॥ ಸುಲಭವಲ್ಲೆ ನಲಿಂದು । ಛಲಮಾಡುವರು ಬಂದು । ಹುಲಿಯ ಮಕ್ಕಳು ಹಾಳು । ಹುಲ್ಲ ಮೇವುದೆ ಪೇಳು ॥ ೩ ॥

ಭಾಮಿನಿ

ಆಗಲಾ ಮುನಿ ಪೇಳ್ದ ವಚನವ । ನಾಗವೇಣಿಯು ಕೇಳ್ದು ಪ್ರೇಮದಿ । ಯೋಗಿಯಡಿಗೆರಗುತ್ತ ಪೇಳ್ದಳು ಭಕ್ತಿಭಾವದಲಿ ॥ ಆಗುವಾಗದು ಗುರು ವೆನುತ ಜೋ। ಡಾಗಿರುವ ಮಕ್ಕಳನು ಕರೆದು ಸ । ರಾಗದಿಂದವರುಹಿಸಿದಳೆಬಲೆ ವಿವೇಕ ಮಾರ್ಗಗಳ ॥

ಪಂತುವರಾಳಿ ರಾಗ - ರೂಪಕತಾಳ

ಸದರವಲ್ಲ ಬೇಟೆ ಮಕ್ಕಳಿರ । ನಿಮ । ಗದರ ತಳ್ಳಿ ಬೇಡವಪ್ಪಗಳಿರ ॥ ಸದರ ॥ ಪಲ್ಲ ॥ ಚದುರರೀವು ಸಣ್ಣವರು । ಸದನ ಬಿಟ್ಟು ಹೋಗದೆ

ಮುನಿ । ಪದವ ಸೇವಿಸುತ್ತಲವರ । ಬದಿಯೊಳಗಿದ್ದು ॥ ಮುದದಿ ವೇದ ಶಾಸ್ತ್ರ ಪೌ । ರಾಣ ರಾಜ್ಯನೀತಿಗಳನು। ವದಗಿನಿಂದ ತಿಳಿದು ನಾನಾ । ವಿಧದ ವಿದ್ಯೆ ಕಲಿಯಿರಪ್ಪ ॥ ಸದರ ॥ ೧ ॥ ಕಾಡಿನೊಳಗೆ ಹುಲಿ ಕರಡಿ । ಸಿಂಹ ಶರಭ ಶಾರ್ದೂಲಂಗ । ಳೋಡುತಿಹುದು ವಿಷಸರ್ಪಗಳ । ನೋಡಿ ಬೆದರದೆ ॥ ಮೂಢ ಬೊಮ್ಮ ರಕ್ಕಸರ್ಮನೆ । ಮಾಡಿ ಕೊಂಡಿರುತ್ತ ಜನರ । ಪೀಡಿಸುವರು ಸಟೆಯಿದಲ್ಲ । ಕೇಡು ಬಹುದು ಬಾಲಕರಿರ ॥ ಸದರ ॥ ೨ ॥

**ಕೇದಾರಗೌಳ ರಾಗ - ಏಕತಾಳ**

ಹೀಗೆ ಪೇಳ್ವರೆ ಜನನಿ । ನಮ್ಮಮ್ಮ ನೀ । ಹೀಗೆ ಪೇಳ್ವರೆ ಜನನಿ ॥ ಪಲ್ಲ ॥ ಮೃಡನ ಕರುಣದಲಿ । ಕಡುವೀರರು ನಾವ್ । ಬಿಡೆವು ಬೇಟೆಯನು। ತಡೆಯಲಾಗದು ನೀವು ॥ ಹೀಗೆ ॥ ೧ ॥ ಮಿತ್ರರ ಸಲಹುವ । ಶತ್ರುವ ವಧಿಸುವ । ಉತ್ತಮ ಪರಕೆಯ । ನಿತ್ತು ಕಳುಹಿಸದೆ ॥ ಹೀಗೆ ॥ ೨ ॥

**ಶಂಕರಾಭರಣ ರಾಗ - ಏಕತಾಳ**

ಸೀತೆ ಬೇಡವೆಂದು ಪೇಳ್ದ । ಮಾತ ಕೇಳದಾಗ ಮುನಿ । ನಾಥನೆಡೆ ಗೈದಿ ನಮಿಸಿ । ಕಾತುರದೀದ ॥ ೧ ॥ ವ್ರೋತು ಶರವ ಬಿಡುವ ತೊಡುವ । ರೀತಿಯನ್ನು ಕಲಿತುಕೊಂಡು । ಜಾತರತಿ ಪ್ರವೀಣರಾದ । ರಾ ತಪೋವನದಿ ॥ ೨ ॥ ಸಾತಿಶಯದೊಳಡವಿಯಲಿ ಕಿ । ರಾತಮಕ್ಕ ಕೂಡಿ ಮೃಗ। ವ್ರಾತವ ಕೊಲುತಿದ್ದರಾ ಭೂ । ಜಾತೆಯ ಸುತರು ॥ ೩ ॥

**ಭಾಮಿನಿ**

ಪುಲಿ ಕರಡಿ ಕಾಡ್ಗೋಣ ಹಂದಿಯ । ಬಳಗವನು ಸಂಹರಿಸಲಡವಿಗೆ । ತಳುವದಣುಗರು ಪೋಗಬೇಕೆನುತಾಗ ಮನಸಿನಲಿ ॥ ತಿಳಿದು ಯೋಚಿಸು ತಿರಲು ವರುಣನು । ಕಳುಹಿಸಿದ ಚರನೋರ್ವ ಬಂದಾ । ಘಳಿಗೆಯಲಿ ವಾಲ್ಮೀಕಿ ಮುನಿಪತಿಗೆರಗುತಿಂತೆಂದ ॥

**ಸೌರಾಷ್ಟ್ರ ರಾಗ - ತ್ರಿವುಡೆತಾಳ**

ಚಿತ್ತವಿಸು ಮುನಿನಾಥ ವರುಣನು।ಮಾತ್ತೆ ಯಜ್ಞವ ನಡೆಸಲೋಸುಗ । ಉತ್ತರವ ಕಳುಹಿಸಿದ ವಾಲೆಯು । ನಿತ್ತು ನಿಮಗೆ ॥ ೧ ॥ ಕಾದಿಹರು

ಕೂಡಿರುವ ಋಷಿಗಳು । ಹಾದಿಯನ್ನೀಕ್ಷಿಪರು ಲಿಖಿತವ । ಪೋದಿ ನೋಡಿದ ಕ್ಷಣವೆ ತೆರಳೆಂದು । ಪಾದಕೆರಗೆ ॥ ೨ ॥ ವಾಲೆಯನು ಕಂಡಾಕ್ಷಣವೆ ಮುನಿ । ಪಾಲ ಸೀತೆಯ ಕರೆದು ಪೇಳಿದ । ಲೋಲಲೋಚನೆ ಕರೆಯಬಂದ ಪಾ । ತಾಳದಿಂದ ॥ ೩ ॥

### ಕಾಂಬೋಧಿ ರಾಗ - ಏಕತಾಳ

ಪೋಗಿ ಬರುವೆ ಯಾಗಕ್ಕೆ । ಈಗ ಮಕ್ಕಳ್ ಜೋಕೆ ॥ ನಾಗವೇಣಿ ನಿನ್ನ ಕುವರರ್ । ಪೋಗದೆಲ್ಲಿ ದೂರ ॥ ೧ ॥ ಎಂದಿಗೆ ಬರುವಿರಿತ್ತ । ತಂದೆ ಮುನಿನಾಥ ॥ ಕಂದರೀರ್ವರೇ ಬೇಸರ್ವ । ರೆಂದಳಾ ಸೀತೆ ॥ ೨ ॥ ನಾಳೆ ಬಹೆನೆಂದು ಮತ್ತಾ । ಬಾಲರ ನೋಡುತ್ತ ॥ ಲೀಲೆಯಿಂದ ಮುದ್ದುಮಾಡಿ । ಕಾಲಿಗೆರಗಿಸಿದ ॥ ೩ ॥

### ನೀಲಾಂಬರಿ ರಾಗ - ತ್ರಿವುಡೆತಾಳ

ನಾಳೆ ಬಹದು ಬದ್ಧವೇನಯ್ಯ । ಮುನಿ । ಪಾಲ ಬೇಸರ್ವೆವು ಹೇಳಯ್ಯ ॥ ೧ ॥ ನಾವು ಸಂಗಡ ಬಂದರಾಗದೇ । ಅಲ್ಲಿ । ನೀವು ಹೋಗದೆ ಯಜ್ಞ ಸಾಗದೇ ॥ ೨ ॥ ತರಳರು ನಡವದೆಂತಲ್ಲಿಗೇ । ಸುಮ್ಮ । ನಿರಿ ನಾಳೆ ಬರುವೆ ನಾನಿಲ್ಲಿಗೆ ॥ ೩ ॥ ಒಬ್ಬೊಬ್ಬರ್ತಿರುಗದಿರವಯಿಯಾ । ಕುಶ । ದರ್ಭೆಯ ತರಬೇಡ ಗೊಡವೆಯು ॥ ೪ ॥ ಇಬ್ಬರು ಜೋಡಾಗಿ ಇರಿಯೆಂದೂ । ಮುನಿ । ತಬ್ಬಿ ಬೀಳ್ಕೊಟ್ಟು ನಡೆದನಂದು ॥ ೫ ॥

### ಭಾಮಿನಿ

ತೆರಳಿದನು ಮುನಿಯಿತ್ತಲಾ ಕುಶ । ವರವಿಪಿನವೆಡೆಗತ್ತಲಾಲವ । ತರಳರೊಡನಾಡುತ್ತಲಿರಲಾಶ್ರಮ ಸಮೀಪದಲಿ ॥ ಇರುತಿರಲು ಲೀಲೆ ಯೊಳಯೋಧ್ಯಾ । ಪುರದ ವೃತ್ತಾಂತವನು ಪೇಳ್ವೆನು । ಧರಣಿಪತಿ ರಘುನಾಥ ದ್ವಿಜಹತ್ಯವನು ಕಳೆಯಲ್ಕೆ ॥

### ಕಾಂಬೋಧಿ ರಾಗ - ಝಂಪೆತಾಳ

ಅಶ್ವಮೇಧವ ರಚಿಸಬೇಕೆಂದು ಶ್ರೀರಾಮ । ಶಾಶ್ವತದಿ ಸನ್ನಹವ ತರಿಸಿ ॥ ವಿಶ್ವಾಮಿತ್ರಾದಿಗಳ ನೆರಹಿ ಶಾಲೆಯ ರಚಿಸಿ । ವಿಶ್ವನಾಯಕ

ದೀಕ್ಷೆಗೊಂಡ ॥ ೧ ॥ ಮತ್ತಲ್ಲಿ ಕುದುರೆಯನು ತರಿಸಿ ಶೃಂಗರಿಸಿ ಶಾ । ಸ್ತ್ರೋಕ್ತದಲಿ ಪೂಜೆಯನು ಮಾಡಿ ॥ ಉತ್ತಮದ ಬಿರಿದುಗಳ ಬರೆದು ಕುದುರೆಯ ಫಣೆಗೆ । ಕಟ್ಟಿದರು ಮಂತ್ರವಿಧದಿಂದ ॥ ೨ ॥ ಆನೆ ಕುದುರೆ ವರೂಥಸೇನೆ ಮಾರ್ಬಲ ಸಹಿತ । ತಾನೆ ತೆರಳಿದನು ಶತ್ರುಘ್ನ ॥ ನಾನಾ ಸುವಾದ್ಯರವ ಗಾನನೃತ್ಯಗಳಿಂದ । ಆನಂದದಿಂ ಪೊರಟ ಪುರವ ॥ ೩ ॥ ಅಂಗ ಕಾಳಿಂಗ ಕಾಂಭೋಜ ಕರ್ನಾಟಕ ತೆ । ಲುಂಗ ಮಲೆಯಾಳ ದ್ರಾವಿಡರ॥ ಸಂಗರದಿ ಭಂಗಿಸುತ ಶರಣಾದ ಭೂಮಿಪರ । ಪಂಗಡವನೊಡಗೊಂಡು ಮುದದಿ ॥ ೪ ॥ ಚಪ್ಪನ್ನ ದೇಶದೊಳಗಿಪ್ಪ ರಾಯರನೆಲ್ಲ । ಸೊಪ್ಪರಿದು ಕಪ್ಪವಂಗೊಂಡು ॥ ತಪ್ಪದಾ ಮಂದಿ ಕುದುರೆಯು ಸಹಿತ ವಾಲ್ಮೀಕಿ । ಇಪ್ಪಾಶ್ರಮಕೆ ಬಂದರೆಲ್ಲ ॥ ೫ ॥ ಎತ್ತಣ ತುರಂಗವಿದು ಪೊಕ್ಕು ಪೂದೋಟ ಗಳ । ಕತ್ತರಿಸಿ ಕೆಡಹಿತೆಂದೆನುತ ॥ ಚಿತ್ತದಲಿ ಕೋಪಿಸುತ ಹತ್ತಿರಕೆ ಬಂದು ಲವ । ಮಸ್ತಕದ ಲಿಖಿತವೋದಿದನು ॥ ೬ ॥

### ಭೈರವಿ ರಾಗ - ಝಂಪೆತಾಳ

ವೀರವಿತರಣಶೂರ । ವಿಜಯ ಸದ್ಗುಣ ಸಾರ । ಸಾರಸಾಂಬಕಧೀರ । ಶರಧಿಗಂಭೀರ ॥ ೧ ॥ ವೈರಿಮದ ಗಜ ಸಿಂಹ । ವಾಸವಾರ್ಚಿತ ಧರ್ಮ । ಪೌರುಷಾಗ್ರಣಿ ರಾಮ । ಪರಮನಿಸ್ಸೀಮ ॥ ೨ ॥ ಈತನೆಜ್ಞದ ಕುದುರೆ । ಇದನು ಕಟ್ಟಿದರೀಗ । ಭೂತಳದೊಳವ ಜಾಣ । ಭುಜಬಲ ತ್ರಾಣ ॥ ೩ ॥ ಹೀಗೆ ಬರೆದಿಹ ಬರವ। ವೋದಿನೋಡಿದ ಲವನು । ಮೂಗಿನಲಿ ಬೆರಳಿಟ್ಟು । ತೂಗಿದನು ಶಿರವ ॥ ೪ ॥

### ಸಾರಂಗ ರಾಗ - ಅಷ್ಟತಾಳ

ಸೀತಾನಂದನನು । ಓಲೆಯ ನೋಡಿ । ನ್ನೇತರ ಬದುಕೆಂದನು ॥ ಭೂತಳದೊಳಗೋರ್ವ। ಖ್ಯಾತನಾದಾ ಮೇಲೆ। ಪೇತುಗಳೆಂದೆಂಬ । ವಹಾತು ಬಂತೆಮಗೆ ॥ ೧ ॥ ಬಂದುದೆಲ್ಲವು ಬರಲಿ । ಈ ಪ್ರಾಣವು । ಇಂದೇ ಹೋದರು ಹೋಗಲಿ ॥ ಮುಂದ್ವರಿಯಲು ತಾಯಿ । ಮುನಿ ಕೋಪಿಸಲು ಬಿಡೆ । ನೆಂದು ಹತ್ತಿರ ಬಂದು । ನಿಂದು ನೋಡಿದನು ॥ ೨ ॥ ಮಾರನ ಬಳ್ಳಿಯು ತೆಗದಾ । ಆ ಕುದುರೆಯ ಕೊರಳ ಸಂದಿಗೆ ಬಿಗಿದಾ ॥ ವರ ಕದಳಿಗೆ

ಕಟ್ಟಿ । ಲರಸುಗಳನು ಕಂಡು । ಪರಿಹಾಸ್ಯವಲ್ಲೆನೆ । ಋಷಿಯ ಬಾಲಕರು ॥ ೩ ॥ ಮನದಿ ಹೂಂಕರಿಸಿದನು । ಕೈಯೊಳಗಿದ್ದ । ಧನುವ ಝೇಂಕರಿಸಿದನು ॥ ಅನುಮಾನವೇನೆಂದು । ಶತ್ರುಘ್ನ ತಾ ಬಂದು । ತುರಗವ ಬಿಡೆ ಎಂ । ದರೆ ನಸುನಗುತ ॥ ೪ ॥

### ಆಹೇರಿ ರಾಗ - ಝಂಪೆತಾಳ

ಕಂಡು ಬೆರಗಾದರಿವರೆಲ್ಲ । ಲವನ । ದಿಂಡುತನಕಿದಿರಿಲ್ಲ ನೋಡಿದರೆ ಬಾಲ ॥ ಕಂಡು ॥ ಪಲ್ಲ ॥ ಮುದ್ದು ಮೊಗ ಮುಗುಳ್ನಗೆಯು । ಮುನಿದಪರೊಡನೆ ಹಗೆಯು। ತಿದ್ದಿದ ಕಿರೀಟಗಳು। ತರತರದ ಹಾರಗಳು। ಬುದ್ಧಿವಂತರ ನಡೆಯು । ಬಲ್ಲತನಗಳ ನುಡಿಯು । ವಿದ್ಯವನು ಕಲಿತ ಬಾಯ್ದೆರೆಯೂ । ಕೈಯೊ । ಳಿದ್ದ ಧನುಶರದ ನೂತನದ ಬಲು ಬಗೆಯು ॥ ಕಂಡು ॥ ೧ ॥ ಕಡಿದ ಆನೆಯ ಕರವ । ಹೊಡಚದ ಕುದುರೆಯ ಶಿರವ । ಕೆಡಹಿದ ಪದಾತಿಗಳ। ಪುಡಿಗೈದ ತೇರುಗಳ । ಬಡಿದ ಮಾವುತರ ಬದಿಯು । ಸಿಡಿದ ರಥಿಕರ ತಲೆಯ । ಮಿಡಿದ ಮೈರಕ್ತದೋಕುಳಿಯಹಾ । ಖ್ಯಾತಿ । ವಡೆದಾ ರಣಾಂಗಣದ ಪೌರುಷದ ಬಗೆಯ ॥ ಕಂಡು ಬೆರಗಾದರಿವರೆಲ್ಲ ॥ ೨ ॥

### ವಚನ

ಇಂತಾ ಮಾರ್ಜಲವನ್ನು ಚಾನಾಹಾನಿಯಂ ಮಾಡಲಾಗಿ ಶತ್ರುಘ್ನನು ತಾನೆ ಬಾಲಕನ ಬಳಿಗೈದಿ ಏನೆಂದನು ಎಂದರೆ-

### ಕಮಾಚು ರಾಗ - ಮಟ್ಟೆತಾಳ

ಆರ ಕಂದನಯ್ಯ ನೀನು । ಅಂಜಿಕಿಲ್ಲದೇ । ಇಂಥಾ । ಘೋರ ಕಾಡೊಳೊಬ್ಬ ಬಂದು । ಅಶ್ವ ಕಟ್ಟಿದೆ ॥ ೧ ॥ ಕಟ್ಟಿದರೇನಾಯಿತಯ್ಯ । ದಿಟ್ಟನಾದರೇ । ಇದರ । ಬಿಟ್ಟುಕೊಂಡು ಹೋಗುವ ಧೈರ್ಯ । ಅಷ್ಟುಂಟಾದರೆ ॥ ೨ ॥ ನಾಡರಾಯನೆಂದು ಮಾತ । ನಾಡಬೇಡವೋ । ನಿನ್ನ । ಕೂಡೆ ಯುದ್ಧಮಾಡುವುದು । ತರವಲ್ಲವೊ ॥ ೩ ॥ ಬೇಡ ಬೇಡ ನಿನಗಿಷ್ಟು ಪಂಥವೆನ್ನೊಳೂ । ಅತ್ತ । ನೋಡಬಾರದೆ ಬಿದ್ದವ । ರಾರು ನಿಮ್ಮೊಳು ॥ ೪ ॥ ಮಕ್ಕಳು ಸಣ್ಣರೆಂದು । ಬಿಟ್ಟರೆ ನಿನ್ನಾ । ಇಂಥಾ । ಸೊಕ್ಕಿನವನೆಂದು

ತಿಳಿಯ । ಲಿಲ್ಲವೊ ಮುನ್ನ ॥ ೫ ॥ ದಕ್ಕದು ದಕ್ಕದು ಬಿಡು । ಧರ್ಮ ವಲ್ಲವೋ । ನಿನಗೆ । ತಕ್ಕ ಬುದ್ಧಿಯಹುದಿನ್ನು । ತಡವಿಲ್ಲವೊ ॥ ೬ ॥

ಭೈರವಿ ರಾಗ - ಮಟ್ಟೆತಾಳ

ನಿಲ್ಲುನಿಲ್ಲೆಲೋ । ನೀನು ಸಮರಕೆ ॥ ಬಲ್ಲೆ ನಿನ್ನ ಬಗೆಯನೆಂದು । ಘಲ್ಲವಿಸಿದನು ॥ ೧ ॥ ನೋಡಿ ಲವನನೂ । ಹೂಡಿ ಶರವನು ॥ ಕೊಡೆ ಬಿಡಲು ಕ್ಷಣದಿ ತುಂಡು । ಮಾಡಿ ಬಿಸುಟನು ॥ ೨ ॥ ಮತ್ತೆ ಬಂದರೂ । ಖಡ್ಗ । ವೆತ್ತಿ ನಿಂದರೂ ॥ ಸುತ್ತಮುತ್ತ ಕವಿದು ಬಾಲನ । ಮುತ್ತಿ ಕೊಂಡರು ॥ ೩ ॥ ಒಬ್ಬರಿಂದರೂ । ಲವನ । ಇಬ್ಬರೊದೆದರೂ ॥ ಸಬ್ಬ ಬಲವು ಮುಸುಕಿ ಪೆಟ್ಟಿನ । ಹಬ್ಬವಾಯಿತು ॥ ೪ ॥ ಸೀತೆಯಣುಗನೂ । ಮೈಯ । ಧಾತುಗೆಟ್ಟನೂ । ಭೂತಳದಲಿ ಬಿದ್ದನಾಗ । ಲಾ ತರಳನೂ ॥ ೫ ॥

ಭಾಮಿನಿ

ಗರುಡ ದೇವನ ಗರಿಯ ಘಾತಕೆ । ಉರಗನಿದಿರೇ ಸುತ್ತ ಮುತ್ತಿಂ । ದಿರುವ ಭಟರಿದಿರಿನಲಿ ಮಲಗಿದ ಲವನು ಮೂರ್ಛೆಯಲೀ । ತರಳನನು ಕೈ ಕಟ್ಟಿ ರಥದೊಳ । ಗಿರಿಸಿ ಕುದುರೆಯ ಬಿಡಿಸಿಕೊಳ್ಳಲು । ಮರಳಿ ತಾಪಸ ವಟುಗಳೈತಂದೊರೆದರವನಿಜೆಗೆ ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ಬೇಡವೆಂದರೆ ಮಾತ ಕೇಳದೆ । ರೂಢಿಪಾಲರ ಯಜ್ಞದಶ್ವವ । ಕಾಡ ಬಳ್ಳಿಯ ತೆಗೆದು ಕಟ್ಟಿದ । ನೋಡು ಲವನು ॥ ೧ ॥ ಬೇಡಿಕೊಂಡರು ತರಳನೆನುತವ । ನಾಡಿದಾ ಮಾತುಗಳ ಕೇಳದೆ । ಮಾಡಿದನು ಯುದ್ಧವನು ಖಾಡಾ । ಖಾಡಿಯಿಂದ ॥ ೨ ॥ ಅಷ್ಟದೆಸೆಯಲಿ ಕವಿದು ಬಾಲಗೆ । ಬಿಟ್ಟು ಬಾಣವ ಕಡೆಗೆ ಕೆಡಹುಡಿ । ಕಟ್ಟಿ ರಥದೊಳಗಿಟ್ಟುವೈವರು । ಪಟ್ಟಣಕ್ಕೆ ॥ ೩ ॥ ಕೇಳುತಾಕ್ಷಣದೊಳಗೆ ತನ್ನಯ । ಬಾಲಕನ ಭಂಗವನು ಧಾತ್ರಿಯ । ಮೇಲೆ ತಾ ತಲೆಶಿರುಗಿ ಬಿದ್ದಳು । ಲೋಲನಯನೆ ॥ ೪ ॥

ನೀಲಾಂಬರಿ ರಾಗ - ಧ್ರುವ ಝಂಪೆತಾಳ

ಕಂಜಲೋಚನಾ । ಕಾರುಣ್ಯಾಂಬುಧೇ । ಮಂಜುಳಾಕರಾ । ಮಾರ ಸನ್ನಿಭಾ ॥ ೧ ॥ ದೇಶಕೋಶವಾ । ಬಿಟ್ಟು ನಾ ವನಾ । ವಾಸಿಯಾದರೂ ।

ಲೇಸ ಕಾಣೆನೂ ॥ ೨ ॥ ಈ ಕಾಡಲ್ಲಿ ವಾ । ಲ್ಮೀಕಿ ಮಹ ಮುನೀ । ಸಾಕಿದಾ ಕೃಪೇ । ಯಿಂದ ಮಕ್ಕಳ ॥ ೩ ॥ ಆತನಿಲ್ಲದಾ । ರೀತಿಯೊ ಲವಾ । ಏತ ಕೈದಿದಾ । ಮಾತ ಕೇಳದೇ ॥ ೪ ॥ ಇಲ್ಲವೈ ಕುಶಾ । ಮಲ್ಲ ಸಾಹಸಾ । ಎಲ್ಲಿಗೈದಿದಾ । ಬಲ್ಲ ಪೌರುಷಾ ॥ ೫ ॥ ಖುಲ್ಲರಾಯರೂ । ಕೂಡಿದಾವರೂ। ಎಲ್ಲಿಗೊಯ್ದುರೋ । ಕೊಲ್ಲುವರೇನೊ ॥ ೬ ॥

### ವಾರ್ಧಿಕ

ಧರಣೀಶ ಕೇಳಿಂತು ಜನಕನಂದನೆಯು ತರ । ತರದಿ ಹಲುಬುತ್ತಲುರೆ ಬೆಂಡಾಗಿ ಬುಡಕಡಿದ । ಮರದಂತೆ ದೊಪ್ಪನೆ ಧರಿತ್ರಿಗುರುಳುತ ಬಳಿಕ ತಾನೆ ಚೇತರಿಸಿಕೊಂಡು ॥ ಬೆರಳ ಮುರುಕಿಚಿ ಶಿವಶಿವಾ ಯೆನುತ ಬಸವಳಿದು । ತರಳನಾಪತ್ತಿಗೋಸುಗ ತನ್ನ ಮಾನಸದಿ । ಮರುಗುವಾಗಲೆ ಕುಶಂ ಬಂದು ಚಿಂತಿಸುತಿಪ್ಪ ಜನನಿಯೊಡನಿಂತೆಂದನು ॥

### ಸಾರಂಗಭೈರವಿ ರಾಗ - ಏಕತಾಳ

ಚಿಂತಿಸುವುದೇತಕೆ ಪೇ । ಳಮ್ಮಯ್ಯಾ । ನಿಮ । ಗಿಂಥಾ ದುಃಖ ಬಂದುದೇತ । ಕಮ್ಮಯ್ಯಾ॥ ಅಂತರಂಗದಂತರವೇ । ನಮ್ಮಯ್ಯಾ । ಚಂದ್ರ। ನಂತ ಮುಖ ಕಂದಿತೇತ । ಕಮ್ಮಯ್ಯಾ ॥ ೧ ॥ ಕಣ್ಣನೀರು ತುಂಬಿತೇತ । ಕಮ್ಮಯ್ಯಾ। ಮೈಯು । ಬಣ್ಣ ಗುಂದಿತ್ಯಾತಕೀಗ । ಅಮ್ಮಯ್ಯಾ ॥ ಬಣ್ಣಿಸು ನೀನೆಣ್ಣಿಸದಿ । ರಮ್ಮಯ್ಯಾ । ಮು । ಕ್ಕಣ್ಣನಾಣೆ ಅಂಜದಿರು। ಅಮ್ಮಯ್ಯಾ ॥ ೨ ॥

### ವಸಂತಭೈರವಿ ರಾಗ - ಆದಿತಾಳ

ಆವರಾಯರೊ ನಾನರಿಯೆ । ಕಂದಾ ಕಂದಾ । ನಾವಿಲ್ಲಿರುವ । ದಾವಿಗಾಗಿ ಬಂದರಂತೆ । ಕಂದಾ ಕಂದಾ ॥ ಕೋವಿದಶ್ವ ತಂದರಂತೆ ಕಂದಾ ಕಂದಾ । ಲವನು ಠೀವಿಯಿಂದ ಕಟ್ಟಿದನಂತೆ ॥ ಕಂದಾ ಕಂದಾ ॥ ೧ ॥ ಹೆಮ್ಮೆ ಯಿಂದ ಪಠಾತನಾಡಿ । ಕಂದಾ ಕಂದಾ ॥ ಕಲಹವ ಬಯಸಿ ಘಮ್ಮನೆ ಶರವೆಚ್ಚನಂತೆ । ಕಂದಾ ಕಂದಾ ॥ ಸುಮ್ಮಾನದಿ ಮುತ್ತಿಕೊಂಡು । ಕಂದಾ ಕಂದಾ ॥ ಕೈ ಕಟ್ಟಿ ನಿನ್ನ । ತಮ್ಮನ ಕೊಂಡೊಯ್ದರಂತೆ । ಕಂದಾ ಕಂದಾ ॥ ೨ ॥

### ಕೇದಾರಗೌಳ ರಾಗ - ಅಷ್ಟ ತಾಳ

ಅಮ್ಮ ನೀ ಚಿಂತಿಸಬೇಡಾದರಿನ್ನೇನು । ಬ್ರಹ್ಮಲಿಖಿತ ತಪ್ಪುದೇ ॥ ಸುಮ್ಮನೆ ಮರುಗದಿರಾ ಲವಗ್ರೀವ । ಬೊಮ್ಮನ ಪಿತನಾಗಲಿ ॥ ೧ ॥ ಇಂದ್ರಾನಿಲಾಂತಕ ವರುಣ ಕುಬೇರಾಗ್ನಿ । ಸಾಂದ್ರದಿಕ್ಪಾಲಕರಾ ॥ ಮಂದಿರ ದೊಳಡಗಿಸಿದರೆನ್ನನುಜನ । ತಂದು ತೋರುವೆನು ತಾಯೆ ॥ ೨ ॥ ಲೋಕವೆ ಮುಳುಗಲಿ ನಾಕವೆ ಬೀಳಲಿ । ರಾಕೇಂದುಧರ ಮುನಿಯೆ ॥ ಶ್ರೀಕಾಂತನಾಣೆ ತಪ್ಪದೆ ಯೆನ್ನ ತಮ್ಮನ । ನಾ ಕರತರುವೆನೆಂದ ॥ ೩ ॥

### ವಚನ

ಇಂತೆಂದು ಭಾಷೆಯಂ ಪೇಳ್ದ ಕುಮಾರಂಗೆ ಹರಸಿ ವಜ್ರದ ಸೀಸಕವಂ ತೊಡಿಸಿ ಮಂಗಲ ವಾಕ್ಯಗಳಿಂದ ಆಶೀರ್ವಾದ ಮಾಡಿದಳದೆಂತೆನೆ-

### ಮುಖಾರಿ ರಾಗ - ಝಂಪೆತಾಳ

ಸ್ಥಿರಂಜೀವಿಯಾಗಿ ಸ್ಥಿರಪಂಥರಾಗೀ । ವರದರಾಗೆನುತ ಸೇಸೆಯ ನಿಟ್ಟಳು ॥ ಪಲ್ಲ ॥ ಹಗೆಯುವರ ಕೂಡೆ ನಿಜವನು ಹೇಳದಿರು ಮಗನೆ । ಅಗಲದಿರಿ ರಣರಂಗದೊಳಗೀರ್ವರು ॥ ಖಗಮೃಗಂಗಳ ಕೋಟಲೆಗೆ ಎಚ್ಚರಿಕೆಯೊಳಿರಿ । ಜಗವುಳ್ಳ ತನಕ ಬಾಳಿರಿಯೆಂದಳು॥ ಸ್ಥಿರಂ ॥ ೧ ॥ ಹಿತ ಶತ್ರುಗಳ ಕೂಡೆ ಅತಿಸ್ನೇಹ ಮಾಡದಿರಿ । ಮತಿಗೆಟ್ಟು ಕಂಡಂತೆ ವರ್ತಿಸದಿರಿ॥ ಸತತ ವೊಳ್ಳಿತು ಕೊಡಲಿ ಶಿವನು ನಿಮಗೆನುತಾಗ । ಸತಿಯೆತ್ತಿದಳು ಸುತನ ಮಸ್ತಕವನು ॥ ಸ್ಥಿರಂ ॥ ೨ ॥

### ದ್ವಿಪದಿ

ವಾಲ್ಮೀಕಿ ಮುನಿಪದಾಂಬುಜವ ಧ್ಯಾನಿಸುತಾ । ನಲ್ಮೆಯಿಂದಷ್ಟ ದಿಕ್ಕುಗಳಿಗೊಂದಿಸುತಾ ॥ ೧ ॥ ಅಮ್ಮ ಜಾನಕಿಗೆರಗುತಾಕ್ಷಣವೆ ಬಂದಾ । ತಮ್ಮ ಲವನನು ಕಾಂಬ ಕಡುತವಕದಿಂದ ॥ ೨ ॥

### ಕಾಂಬೋಧಿ ರಾಗ - ಮಟ್ಟೆ ತಾಳ

ಏನನೆಂಬೆ ಕುಶನ ಧೈರ್ಯವ । ಪರಬಲದಿ ಚಿಕ್ಕ । ಸೂನು ಸೆಣಸು ವಂಥ ಶೌರ್ಯವ ॥ ಕಾನನವನು ದಹಿಸುವ ಕೃ । ಶಾನುವೋಯೆನಲ್ಕುಂಗಾರ।

ಸೋನೆಯಂತೆ ಸರಳ ಸುರಿದು । ಹಾದಿ ಗೈದ ಶತ್ರು ಭಟರ ॥ ಏನನೆಂಬೆ ॥ ೧ ॥ ತಡೆದು ಹೋಗುವಂಥ ಸೇನೆಯ । ಹೂಂಕಾರದಿಂದ । ಬಡಿದ ಮುಂದ್ವರಿವ ಮದ್ದಾನೆಯ ॥ ಹೊಡೆದ ಕುದುರೆಗಳನು ಕ್ಷಿತಿಗೆ । ಕೆಡದ ತೇರುಗಳನು ಕ್ಷಣದಿ । ಮಡಿದ ಯೋಧ ತತಿಯ ಕಂಡು । ನುಡಿದನಾ ಸೌಮಿತ್ರಿ ಕುಶಗೆ ॥ ಏನನೆಂಬೆ ॥ ೨ ॥

### ಶಂಕರಾಭರಣ ರಾಗ - ಏಕತಾಳ

ಆರೆಲೋ ಕುಮಾರ ಚಿಕ್ಕ । ಘೋರ ನಮ್ಮ ಬಲವನಿಂತು । ಗಾರು ಗೆಡಿಸಿ ಮುಂದ್ವರಿವ । ಕಾರಣವೇನೊ ॥ ೧ ॥ ಕಾರಣವೇನೆದು ಕೇಳ್ವ । ಪಾರುಪತ್ಯ ನಿನಗೆ ಕೊಟ್ಟು । ದ್ಯಾರೊ ತಮ್ಮ ಲವನ ಬಿಟ್ಟು । ಸಾರೆಲೋ ಹಿಂದೆ ॥ ೨ ॥ ಬಿಟ್ಟುಕೊಡುವವನಲ್ಲ ಲವನ । ಸಿಟ್ಟು ತೋರ್ದರೀಗ ತಮ್ಮ । ನೊಟ್ಟು ಜತೆಯೊಳಣ್ಣಗೊಯ್ವೆ । ಪಟ್ಟಣಕೀಗ ॥ ೩ ॥ ಪಟ್ಟಣಕೊಯ್ಯುವೆ ನೆಂಬ । ದಿಟ್ಟತನವಂತಿರಲಿ । ಕುಟ್ಟಿ ಕೆಡಹದಿರೆನೆನುತ್ತ । ಬಿಟ್ಟನು ಶರವ ॥ ೪ ॥ ಬರುವ ಬಾಣಗಳನು ಪಥದಿ । ತರಿದು ಪ್ರತಿ ಶರಂಗಳನ್ನು । ಸುರಿದ ಕುಶನಿಗಾ ಸೌಮಿತ್ರಾ । ತರಳನಬ್ಬರಿಸಿ ॥ ೫ ॥ ಆರರೆ ವೀರನಹೆಯೆ ನುತ್ತ। ಧರಣಿಜಾತೆಯಣುಗ ಮೂರು।ಸರಳನೆಸೆಯೆ ಶತ್ರುಹಾಖ್ಯ। ನೊರಗಿದ ಧರೆಗೆ ॥ ೬ ॥

### ವಾರ್ಧಿಕ

ಹರಿಹರರು ತಾವಿಬ್ಬರೊಂದಾಗಿ ಕಾದಿದರೆ । ಧುರದೊಳಾರಿದಿರು ನಿಲ್ಲುವರುಂಟೆ ಭೂಪಾಲ । ತರಳರೀರ್ವರು ತಮ್ಮೊಳೇಕಮತವಾಗಿ ಪರ ಬಲವ ಕೆಡವುತೀರ್ದರು ॥ ಮುರುಳುತನದಿಂದಲಿದಿರಾದ ಶತ್ರುಘ್ನನಂ ಪರಿವಾರ ಸಹಿತ ಸುರಪಟ್ಟಣಕೆ ಕಳುಹಲಾ । ಚರನೋರ್ವನೈತಂದು ರಾಮಚಂದ್ರನ ಕೂಡೆ ಕರವ ಮುಗಿದಿಂತೆಂದನು ॥

### ಭೈರವಿ ರಾಗ - ಝಂಪೆತಾಳ

ವಿಶ್ವನಾಯಕ ಕೇಳು । ಅಶ್ವಮೇಧದ ಕುದುರೆ । ವಿಶ್ವತಂತ್ರದಿ ಪೋಗಿ । ಸಕಲ ಲೋಕಗಳ ॥ ೧ ॥ ಅರಸರೆಲ್ಲರ ಗೆಲಿದು । ಅಲ್ಲಿ ಕಪ್ಪವ ಸೆಳೆದು । ಬರುತಿರಲು ವಾಲ್ಮೀಕಿ । ಮುನಿಪನಾಶ್ರಮದಿ ॥ ೨ ॥

ತರಳರೀರ್ವರು ಕಂಡು । ತಡೆದರ್‍ಕೈ ಕುದುರೆಯನು । ಸರಳನೆಸವೆಲ್ಲರನು । ಸಾಕುಮಾಡಿದರು ॥ ೩ ॥ ಬಾಣವೆಸೆಯಲ್ಕವರ।ತ್ರಾಣಕ್ಕೆ ಜೋಡಿಲ್ಲ। ಪ್ರಾಣವುಳಿದವರ ಪರಿ । ಸ್ಥಾಣುವೇ ಬಲ್ಲ ॥ ೪ ॥ ಮಕ್ಕಳಾಟಿಕೆ ನಮಗೆ । ಮಾರಿಯಾಯಿತು ಕಡೆಗೆ । ವರ್ಕಣೆಸಲಿನ್ನೇನು । ಶತ್ರುಘ್ನನಿರವ ॥ ೫ ॥

### ದ್ವಿಪದಿ

ಕೇಳಿ ಮೂರ್ಛಿತನಾದನಾಗ ರಾಘವನೂ । ಕಾಳಗದಿ ತನ್ನವರು ಮಡಿದ ವಾರ್ತೆಯನು ॥ ೧ ॥ ಮಖತುರಗದೊಡನೆ ಶತ್ರುಘ್ನ ಬಲ ಸಹಿತ। ಅಖಿಳ ದೇಶದೊಳಿಪ್ಪ ಅರಸುಗಳ ಗೆಲುತ ॥ ೨ ॥ ಕಡೆಗವನ ಮಕ್ಕಳಿರ್ವರು ಗೆಲಿದರೆನುವಾ । ನುಡಿ ಕೇಳಿ ಲಕ್ಷ್ಮಣನೊಳೆಂದ ರಘು ಪ್ರಭವ ॥ ೩ ॥ ಹೋಗು ಸೌಮಿತ್ರ ಬಾಲಕರ ಸೆರೆವಿಡಿದೂ । ಯಾಗದಶ್ವವ ಬಿಡಿಸಿ ತಾರೀಗ ತಡೆದು ॥ ೪ ॥ ತಾಮಸವಿದೇನು ತೆರಳೆನಲು ಲಕ್ಷ್ಮಣನು । ಆ ಮುಹೂರ್ತದಿ ಪೊರಟ ಕೂಡಿ ಸೇನೆಯನು ॥ ೫ ॥

### ಕಾಪಿ ರಾಗ - ಅಷ್ಟತಾಳ

ರಣಕೆ ಸನ್ನಹವಾದರೆಲ್ಲಾ । ಲ । ಕ್ಷ್ಮಣನು ರೋಷದಲಿ ರೆಘೋಂಕರಿಸುತ ಬಿಲ್ಲಾ ॥ ರಣಕೆ ॥ ಪಲ್ಲ ॥ ಛತ್ರ ಚಾಮರ ಪತಾಕೆಗಳು । ಸುತ್ತ । ಮುತ್ತಲು ವಾದ್ಯ ತಮ್ಮಟೆ ಭೇರಿಗಳು ॥ ಎತ್ತಲು ಕುದುರೆ ಸಾಂದಿಗಳು । ಸುಘ । ಟೋತ್ತಮರ್ಕೈಲಿ ಬತ್ತೀಸಾಯುಧಗಳು ॥ ರಣಕೆ ॥ ೧ ॥ ಈಪಾದ ರಥವ ಹತ್ತಿದರು । ಮುಂದೆ । ಜೋಡು ಜೋಡಾಗಿ ಕುದುರೆಯನೊತ್ತಿದರು॥ ಕೂಡಿ ಕುಶಲವರ ಮುತ್ತಿದರೂ । ವನವ । ನೋಡುತ್ತ ಕಾಡುಕಾಡೆಲ್ಲ ಸುತ್ತಿದರು ॥ ರಣಕೆ ॥ ೨ ॥

### ವಚನ

ಈ ರೀತಿಯಿಂದ ಸೌಮಿತ್ರನ ಬಲಬಂದು ಮುಸುಕಲು ಕಂಡು ಕುಶಲವರು ತಮ್ಮೊಳಗೆ ತಾವೆ ಮಾತನಾಡಿದರದೆಂತೆನೆ-

### ಬೇಗಡೆ ರಾಗ - ಅಷ್ಟತಾಳ

ನೋಡಿದೆಯಾ । ತಮ್ಮ । ನೋಡಿದೆಯಾ ॥ ಪಲ್ಲ ॥ ಮುಂದೆ । ನೋಡು ನಮ್ಮ ಕೂಡೆ ರಣವ । ಮಾಡಬಂದ ಶತ್ರು ಪಡೆಯ ॥

ನೋಡಿದೆಯಾ ॥ ಅನುಪಲ್ಲ ॥ ಮೊದಲು ನಾವು ಕಟ್ಟಿಕೊಂಡ । ಕುದುರೆ ಗಾಗಿ ಸೆಣಸಿದವರ । ಸದದು ಚಾಣಾಹಾನಿಯನ್ನು । ಮಾಡಿದ ಮೇಲೆ ॥ ಆದರೊಳೋರ್ವ ತಪ್ಪಿಹೋಗಿ । ಪದಗಿ ಊರಿನಿಂದ ಮತ್ತೆ । ಬದಲು ಪಡೆಯ ನೆರಹಿ ನಮ್ಮೊ । ಳಿದಿರು ನಿಲಲು ಬರುವ ಭಟರ ॥ ನೋಡಿದೆಯಾ ॥ ೧ ॥ ಎತ್ತಣಿಂದ ಬಂದುದೋ ಭೂ । ಪೋತ್ತಮರ ಮಂದಿ ಕುದುರೆ । ಕತ್ತಲೇ ಬಂದು ಸೂರ್ಯನ । ಮುತ್ತಿದ ಹಾಗೆ ॥ ಬತ್ತೀಸಾಯುಧಗಳು ತಮ್ಮ । ಹಸ್ತದಲ್ಲಿ ಪಿಡಿದುಕೊಂಡು । ಸುತ್ತಲು ನಮ್ಮೊಡನೆ ಖಡ್ಗ । ವೆತ್ತಿ ಬಹ ಉತ್ತಮ ಭಟರ ॥ ನೋಡಿದೆಯಾ ॥ ೨ ॥ ಅಬ್ಬರಿಸಿ ತಮ್ಮೊಳು ತಾ ॥ ವಿಬ್ಬರೇ ಮಾತಾಡಿಕೊಂಡು । ಮಾರ್ಬಲದೊಳಗೆ ಪೊಕ್ಕು । ಆರ್ಭಟಿಸುತ್ತಾ। ಉಬ್ಬಿ ರೋಷದಿಂದ ಬಿಲ್ಲ । ತೆಬ್ಬ ಟ್ಠೇಂಕರಿಸುತಾಗ । ಸರ್ಬ ಬಲವ ಕೊಂದು ಮಾರಿಗೆ । ಹಬ್ಬವಿಕ್ಕಿ ಮೆರದರವರು ॥ ನೋಡಿದೆಯಾ ॥ ೩ ॥ ಬಂದ ಬಂದ ಬಲವನೆಲ್ಲ । ಕೊಂದು ಕೊಂದು ಬಿಸುಟ ಮೇಲೆ । ನಿಂದ ಲಕ್ಷ್ಮಣಾಂಕ ಕಾದ । ಲೆಂದು ಹರುಷದಿ। ಚಂದಿರವದನ ರಾಮ । ಚಂದ್ರನಂತೆ ಶೋಭಿಸುವ । ಚಂದ ಕಂಡು ವಿಸ್ಮಯವೊ । ಳೆಂದನವರೊಳಿಂತು ನಯದಿ ॥ ನೋಡಿದೆಯಾ ॥ ೪ ॥

### ಕೇದಾರಗೌಳ ರಾಗ - ಮಟ್ಟೆತಾಳ

ಪುಟ್ಟ ಬಾಲಕರಿರ ನಿಮ್ಮ । ಪೆತ್ತವರ್ಯಾರು ॥ ಕಟ್ಟಿಕೊಂಡ ನಮ್ಮ ಕುದುರೆ । ಬಿಟ್ಟುತ್ತ ಸಾರು ॥ ೧ ॥ ಪೆತ್ತವರ್ಯಾರಾದರೇನು । ಕಾಳಗ ನಡೆಸು ॥ ಸತ್ವವಿರಲು ಕಟ್ಟಿದುಥ ಕುದುರೆಯ ಬಿಡಿಸು ॥ ೨ ॥ ಕಂದರಿರ ನಿಮ್ಮೊಳ್ಳೋರೆ । ಸೋತಹಾಗಲ್ಲ ॥ ಮಂದಮತಿಯ ಬಿಟ್ಟು ತೆರಳಿ । ಕಾದಿ ಫಲವಿಲ್ಲ ॥ ೩ ॥ ಕಾದಲಾರದೆಮ್ಮನಿಂತು । ಬೆದರಿಪ್ಪದ್ಯಾಕೆ ॥ ಹಾದಿ ಹಿಡಿದು ಬಂದ ತೆರದಿ । ಹೋಗೆಲೋ ಜೋಕೆ ॥ ೪ ॥ ಹೋಗುವಾತನಲ್ಲ ಯಜ್ಞ । ತುರಗವ ಬಿಟ್ಟು ॥ ಜಾಗುಜಾಗೆನುತ್ತ ಸುರಿದ । ಬಾಣವ ಕಟ್ಟು ॥ ೫ ॥ ಬರುವ ಕಣೆಗಳನ್ನು ಕಡಿದು । ಕುಶಲವರ್ಕಡೆಗೆ ॥ ಎರಡು ಬಾಣ ಬಿಡಲು ಬಿದ್ದ । ಸೌಮಿತ್ರಾ ಧರೆಗೆ ॥ ೬ ॥

### ವಾರ್ಧಿಕ

ಧರಣೀಶ ಲಾಲಿಸೈ ತರಳರೊಳ್ ಲಕ್ಷ್ಮಣಂ । ಧುರದಿ ಮೂರ್ಛೆಯ ತಳೆದ ಸಂಗತಿಯನೆಲ್ಲಮಂ । ಚರನೋರ್ವನೈತಂದು ರಾಮಚಂದ್ರನ ಕೊಡೆ

ವಿಸ್ತಾರದಿಂದುಸುರಲು ॥ ಹರಪರಾ ವಿಧಿಯೆ ಲಕ್ಷ್ಮಣನು ಮಡಿದನೆಯೆಂದು। ಬೆರಳ ಮೂಗಿನೊಳಿಟ್ಟು ಶಿರವನ್ನೆ ತೂಗುತ್ತ । ಧರೆಯೊಳೀ ತೆರದ ನಗೆಗೇಡಾಯ್ತೆ ಹಾ ಯೆನುತ್ತಳಲಿದಂ ಹಲವಂಗದಿ ॥

### ನೀಲಾಂಬರಿ ರಾಗ - ಆದಿತಾಳ

ಲಕ್ಷ್ಮಣಾ ರುದ್ರ ಪ್ರತಾಪ । ಇಕ್ಷ್ವಾಕು ಕುಲದೀಪ ॥ ಈ ಕ್ಷಿತಿಯೊಳಿದ ಮೇಲೆ । ದೀಕ್ಷೆಯಾತಕಿನ್ನು ॥ ೧ ॥ ಬೊಪ್ಪಾದಿ ದೇವರ್ಕಳೊಳು । ತಮ್ಮಗೆಣೆಯುಂಟೆ ॥ ನಮ್ಮ ಶೌರ್ಯ ತಗ್ಗಿ ಕ್ಷತ್ರಿ । ಧರ್ಮ ಕೆಟ್ಟಿತಿನ್ನು ॥ ೨ ॥ ಕರ್ಮವಶವಲ್ಲದಿಷ್ಟು । ವರ್ಮ ಬಾರದಲ್ಲ ॥ ಸುಮ್ಮನೆ ಕಳುಹಿ ರಣಕೆ । ನೆಮ್ಮದಿ ಹೋಯ್ತಲ್ಲ ॥ ೩ ॥

### ನೀಲಾಂಬರಿ ರಾಗ - ರೂಪಕತಾಳ

ಏನ ಪೇಳಲಿ ನಾನು । ಈ ವಿಷಮ ಗತಿಗಿನ್ನು । ಸೂನುಗಳಿಂದಲಿ ವಂಶಕೆ । ನ್ಯೂನತೆ ಬಂತಲ್ಲ ॥ ಏನ ॥ ಪಲ್ಲ ॥ ಶರಧಿಗೆ ಸೇತುವ ಕಟ್ಟಿದೆ । ಸರ್ವರಿಗು ಸರಿಯೆನಿಸಿದೆ । ಧುರದೊಳು ದುಷ್ಟರ ಶಿರಗಳ । ತರಿದೆನು ಸಾಹಸದಿ ॥ ಇರದಾ ಭಾರ್ಗವ ರಾಮನ । ಗರುವವ ನಿರೆ ಭಂಗಿಸಿದೆನು । ತರಳರು ವಂಶಕೆ ಮತ್ತಾ । ದುರುಳರೊ ನಾನರಿಯೆ ॥ ಏನ ॥ ೧ ॥ ಏತಕೆ ತೊಡಗಿದೆ ಯಜ್ಞ ವಿ । ದೇತಕೆ ಕಳುಹಿದೆ ನನುಜರ । ನೇತಕೆ ತಡೆದರೊ ತರಳರಿ । ನ್ನೇತಕೆ ಕಾದಿದರೊ ॥ ಏತಕೆ ಮಡಿದರೊ ಸಹಜರು । ಏತಕೆ ರಾಜ್ಯವು ನಮಗಿ । ನ್ನೇತಕೆ ದೊರೆತನ ವೆಂಬುದಿ । ದೇತಕೆ ಶಿವಶಿವನೆ ॥ ಏನಾ ॥ ೨ ॥

### ಕಂದ ಪದ್ಯ

ಅನುಜನ ಕೇಡಿಂಗೋಸುಗ । ವನಜಾಂಬಕ ಚಿತ್ತದಲ್ಲಿ ಮರುಗಲ್ಕಾಗಂ॥ ವಿನಯದಿ ಕೈಕಾತ್ಮಜ ಬಂ । ದನುನಯದಲಿ ನುಡಿದ ರಾಘವನೊಳತಿ ನಯದಿಂ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಅಣ್ಣ ಚಿಂತಿಪ ಕಾರ್ಯವೇನಿದು । ಬಣ್ಣಗಾರರ ಮಾತಿದೇತಕೆ । ಪುಣ್ಯನಿಧಿ ಲಕ್ಷ್ಮಣನ ಕೆಡಹುವ । ಚಿಣ್ಣರುಂಟೆ ॥ ೧ ॥ ನಾಡಮಾತಿಗೆ

ನೀನು ಚಿಂತೆಯ । ಮಾಡಲ್ಯಾತಕೆ ಪುಸಿಯೊ ದಿಟವೋ । ನೋಡಿ ಬರುವೆನು ಕಳುಹು ತನ್ನನು । ಗಾಢದಿಂದ ॥ ೨ ॥ ಅಪ್ಪಣೆಯ ಕೊಡುಯೆನುತಯೋಧ್ಯ ದೊ । ಳಿಪ್ಪ ಬಲವನು ನೆರಪಿಕೊಂಡಾ । ಸರ್ಪ ಶಯನಗೆ ಕೈಮುಗಿದ ಕಂ । ದರ್ಪರೂಪ ॥ ೩ ॥

ವಚನ

ಈ ಪರಿಯಿಂದ ಭರತನು ಮಹಾಬಲವಂ ಕೂಡಿಕೊಂಡು ಬರುವ ಸಂಭ್ರಮವಂ ದೂರದಿಂದ ಕಂಡು ಕುಶಲವರು ತಮ್ಮೊಳು ಮಾತನಾಡಿದರ ದೆಂತೆನೇ-

ರೇಗುಪ್ತಿ ರಾಗ - ಆದಿತಾಳ

ಭರತ ಸಂಗರಕೆಂದು । ಬರುತಾನೆಂಬುದ ಕಂಡು । ಅರಿತು ಬಾಲಕ ರಂದು । ತ್ವರಿತಾಗ್ರಕೊಂಡು ॥ ೧ ॥ ಶರತುದಿಗೇರಿಸಿ ಮೈ । ಮರತಿರಬಾರ ದೆಂದು । ತರತರ ಬಾಣವೆಚ್ಚ । ರೀರ್ವರೊಂದಾಗೀ ॥ ೨ ॥ ಎಚ್ಚ ಬಾಣವು ಬಂದು । ಕಟ್ಟಿತೆಲ್ಲರಿಗಂದು । ಬೆಟ್ಟತವರ ದಂಡು । ಆಶ್ಚರ್ಯಗೊಂಡು ॥ ೩ ॥ ಎಚ್ಚರಿತು ತಮ್ಮೊಳು । ಹೆಚ್ಚಿದ ವಿಕ್ರಮಗಳು । ಎಚ್ಚ ಶರಗಳು ಬಂದು । ಮುಚ್ಚಿತು ದಂಡು ॥ ೪ ॥ ಬಾಲಕರ ಮೊಗದೂಹೆ । ಗಳನೆಲ್ಲ ತಾ ಕಂಡು । ಶ್ರೀಲೋಲ ರಾಮನ । ರೂಪು ಪ್ರೋಲ್ವರೆಂದು ॥ ೫ ॥ ಲೀಲೆ ಯಿಂದಲಿ ಬಂದು । ಪೇಳಲ್ಯಾರುತಿಯೆಂದು । ಕೇಳಬೇಕಿವರನೆಂದು । ಭರತ ನೈತಂದ ॥ ೬ ॥

ಕೇದಾರಗೌಳ ರಾಗ - ಅಷ್ಟತಾಳ

ಕಂದ ನಿಮ್ಮನು ಪೆತ್ತ ತಂದೆ ತಾಯಿಗಳ್ಯಾರು । ಬಂದುದಲ್ಲಿಂದ ನೀವೂ ॥ ಇಂದು ನಮ್ಮಯ ವಾಜಿ ಕಟ್ಟಿ ನಮ್ಮನುಜರ । ಕೊಂದ ಕಾರಣ ವದೇನೊ ॥ ೧ ॥ ಈ ಧುರದೊಳು ಮೊದಲಾದ ದುರ್ಬುದ್ಧಿಯ । ಕಂಡೆ ನಿಮ್ಮಯ ಗುಣವ ॥ ಕ್ರೋಧನ ಬಿಡು ಹಯ ಬಿಟ್ಟು ತಾಯ್ ಬಳಿಗಿ । ನ್ನಾದರು ನಡೆಯಿರಣ್ಣ ॥ ೨ ॥ ತುರಗವ ಬಿಡಬೇಕಾದರೆ ಕೆಲಸಗಳುಂಟು । ದುರುಳರಂದದಲಿ ನೀವು ॥ ತರಳರು ಯಾರೆಂದು ಬೆಸಗೊಂಬುದೀಗಳೀ ।

ದುರುಳತನವಿದಲ್ಲೇನೋ ॥ ೩ ॥ ಸಂಗರದೊಳು ಬಿಡು ಸರಳ ಸಹಸದ ಪ್ರ। ಸಂಗವೇತಕೆ ಮರುಳೆ ॥ ಅಂಗದೊಳಗೆ ಭಯವುಳ್ಳಡೆ ನಿನಗೆ ತು । ರಂಗದಾಸೆಯನು ಬಿಡು ॥ ೪ ॥

ಮಾರವಿ ರಾಗ - ಏಕತಾಳ

ಎಂದತಿ ರೋಷ ದೊ । ಳಂದಾ ಬಾಲರು । ಕುಂದದಿ ಚಾಪದಿ । ಸಂಧಿಸಿ ಬಾಣ್ಗಳ । ವೃಂದವನೆಸೆಯುತ । ಮಂದಿ ಕುದುರೆ ಗಜ । ವೃಂದವ ನಿಮಿಷದಿ । ಕೊಂದರು ಧುರದೀ ॥ ಶೌರ್ಯದಿಂದ ॥ ೧ ॥ ಪತ್ತು ಭರತಗಿ। ಪ್ಪತ್ತು ನಳಗೆ ಮೂ । ವತ್ತು ಜಾಂಬವ ಗೈ । ವತ್ತಂಗದ ಗೆಂ । ಭತ್ತು ಸುಷೇಣಗೆ । ಬಿತ್ತರದಿಂದಲಿ । ಮತ್ತು ಮತ್ತು ಶರ । ಮೊತ್ತ ಕವಿಸಿದರೂ॥ ಘಾತಿಗೊಂಡೂ ॥ ೨ ॥ ಮರಳಿದ ಹನುಮನು । ನರಳಿದ ಜಾಂಬವ । ತೆರಳಿದ ಗವಯನು । ವರಲಿದ ಶತಬಲಿ । ಸುರುಳಿದನಂಗದ । ಭರದಿಂದೆಲ್ಲ ಕ । ಣ್ಣರಳಿ ಭರತ ಮೈ ಮರದನು ರಣದಿ ॥ ಏನನೆಂಬೇ ॥ ೩ ॥

ವಚನ

ಈ ಪ್ರಕಾರ ಭರತ ರಣರಂಗದೊಳ್ ಮೈಮರೆತುದಂ ಕಂಡು ಚರರು ನಡೆತಂದು ದುಗುಡದಿಂ ರಘುವರಗೆ ಒಸ್ನೈಸಲು ಅದಂ ಕೇಳ್ದು ಶ್ರೀರಾಮ ಏನೆಂದನು ಎಂದರೆ-

ಭೈರವಿ ರಾಗ - ಝಂಪೆತಾಳ

ಭರತ ಸಂಗರದಿ ಮೈ । ಮರತನೆಂಬುದ ಕೇಳಿ । ಅರಿತು ಮನದೊಳಗಂದು । ಶುರಿತಾಗ್ರಗೊಂಡು ॥ ೧ ॥ ಯಾಗ ದೀಕ್ಷೆಯ ನಿಲಿಸು । ತಾಗ ಮಂತ್ರಿಯ ಕರೆಸಿ । ರಾಘವನು ಹೊರಪಟ್ಟಣ । ವಾದ ನಾ ಕ್ಷಣದಿ ॥ ೨ ॥

ಆಹೇರಿ ರಾಗ - ಝಂಪೆತಾಳ

ಪೊರವ ಹೊರವಂಟ ಶ್ರೀರಾಮಾ । ತನ್ನ । ಪರಿವಾರ ಸಹಿತ ಸಂಗರಕೆ ನಿಸ್ಸೀಮಾ ॥ ಪೊರವ ॥ ಪಲ್ಲ ॥ ಪೊಡವಿಯುಗಲದೊಳೈದು ವಾನೆಗಳ ಸೇನೆಗಳ । ಎಡಬಲದಿ ನಡೆತರುವ ದಂತಿಗಳ ಪಂಬ್ತಿಗಳ । ನಡುವೆ

ಸಂದಣಿಸುತಿಹ ತೇಜಿಗಳ ರಾಜಿಗಳ । ಒಡಗೂಡಿ ಸಂಗಡಲಿ ಬರುವ ಮಂತ್ರಿಗಳ ॥ ಪುರವ ॥ ೧ ॥ ಶಿವನ ಹಣೆಗಣ್ಣೊ ಪ್ರಳಯದ ಕಾಲ ಭೈರವನೊ । ವಿವರಿಸಲು ಕಡೆಯ ಬಡಬಾನಲನೊ ಯೆಂಬಂತೆ । ಅವಘಡಿಸಿ ಚತುರಂಗ ಮಾರ್ಬಲವೊ ಯೆನುತಿರಲು। ನಿವಹ ಕುಶಲವರಿಪ್ಪ ವನ ಮುತ್ತಿದರು॥ ಪುರವ ॥ ೨ ॥

ಕಾಪಿ ರಾಗ - ಅಷ್ಟತಾಳ

ಕುಶಲವರನು ಕಂಡ ರಾಮಾ । ಸಾ । ಹಸದಿ ಬಿಲ್ಬಾಣರಂಜಿಸುವ ನಿಸ್ಸೀಮ್ಮಾ॥ ಕುಶ ॥ ಪಲ್ಲ ॥ ರಣದಿ ಬಿದ್ದವರನ್ನು ನೋಡೀ । ಸತ್ತ । ಹೆಣಗಳ ತಿಂಬ ಭೂತಂಗಳ ಪೋಡೀ ॥ ನೊಣಗಳು ಕವಿದೊಂದು ಗೂಡೀ । ೮ । ಕ್ಷ್ಮಣನ ಕಾಣುತ ಮನದಲಿ ಚಿಂತೆ ಮಾಡಿ ॥ ಕುಶ ॥ ೧ ॥ ಭರತ ಶತ್ರುಘ್ನರ ಕಂಡಾ । ಮನ । ಕರಗಿ ಕಾತರಿಸುತ್ತ ಮಿಗೆ ಮೂರ್ಛೆಗೊಂಡಾ । ಕರಿರಥ ತುರಗದ ತಂಡಾ । ಬಿದ್ದು । ಹೊರಳುತಿರಲು ದಿಟ್ಟ ವೀರರ ಮುಂಡ ॥ ಕುಶ ॥ ೨ ॥

ಭಾಮಿನಿ

ರಣದೊಳಗೆ ಸಾಲಾಗಿ ಮಲಗಿಹ । ರೆಣಸುವರೆ ತುದಿಗಾಣೆ ನೆಲ್ಲಿಯು। ಹೆಣನಮಯವೇ ಮಯವು ವಾಲ್ಮೀಕಿ ಮುನಿಪನಾಶ್ರಮದೀ ॥ ಗುಣಕೆ ಹಾರುದೇ ಜಾಣರೆನುತಲೆ । ರಣಕೆ ಸನ್ನಹರಾದ ಮಕ್ಕಳ । ಗುಣದಿ ಮಾತಾಡಿಸಿದ ತನ್ನಯ ರಾಜನೀತಿಗಳ ॥

ಯರಕಲಕಾಂಬೋಧಿ ರಾಗ - ಅಷ್ಟತಾಳ

ಇನ್ನಾದರು ಬೇಡ ಬೇಡ ಮಕ್ಕಳಿರ । ಸನ್ಮತ ನಿಮಗಲ್ಲವಿದು ಬಾಲಕರಿರಾ ॥ ಪಲ್ಲ ॥ ಶಿಶುಗಳು ನೀವು ನಿಮ್ಮೊಡನೆ ಕಾಳಗವೇಕೈ । ವಶವಾದರಾಗಲಿ ಆಗದಿದ್ದರೆ ನಿಮ್ಮ । ಹೆಸರೇನು ತಂದೆ ತಾಯಾ । ಬಿಲ್ವಿದ್ಯೆಯ । ಕಲಿಸಿದನ್ಯಾಯ ರಾಯ । ನೀವಿಬ್ಬರು । ಋಷಿಯಾಶ್ರಮದೊಳಿಪ್ಪುದಿನ್ಯಾವ ನ್ಯಾಯ ॥ ೧ ॥ ಮಕ್ಕಳು ನಾವು ನಿಮ್ಮೊಡನೆ ಕಾಳಗಕೆ ಪೆ । ಮ್ಮಕ್ಕಳಂದದಿ ನಮ್ಮನ್ಯಾರೇದು ಬೆಸಗೊಂಬು । ದಕ್ಕೆ ನಮ್ಮೊಡನೆ ನಂಟೇ। ನಮ್ಮನು ಕಕ್ಕು। ಬೆಕ್ಕಾಗಿ ಕಾಯುದುಂಟೇ । ಕ್ಷತ್ರಿಯರ ವಂ। ಶಕ್ಕೆ

ನೀತಿಯೆ ಕಾದಲು ಮನಸುಂಟೆ ॥ ೨ ॥ ಚತುಃ ಸಾಗರವನಾಳ್ವ ದೊರೆ ಗಳು ನೀವ್ ನಿ । ಮ್ಮ ತಿಶಯ ಬಿರುದು ವಿಕ್ರಮಶಾಲಿಯದರೊಳು । ಗತಿ ಯಿಲ್ಲದವರು ನಾವೂ । ಕಾದುವದಕ್ಕೆ । ಮಿತಿಯಿಲ್ಲದಿಹಿರಿ ನೀವು । ನಿಮಗೆ ಬಾಣ । ಪ್ರತಿಯಾಗಿ ಹೂಡಲಿಕರಿಯೆವು ನಾವು ॥ ೩ ॥

### ವಚನ

ಈ ರೀತಿಯಿಂದ ಕುಶಲವರೆಂದ ವಚನಮಂ ಕೇಳಿ ಶ್ರೀರಾಮನು ಜಾಂಬವನೊಡನೆ ಏನೆಂದನು ಎಂದರೆ-

### ಭೈರವಿ ರಾಗ - ಝಂಪೆತಾಳ

ಕಪಿರಾಯ ಕೇಳ್ವೆ ಕು । ಮಾರಕರೆ ಮಾತುಗಳು । ನಿಪುಣರಿವರ್ಯಾವ ಪುರು । ಷನಿಗೆ ಜನಿಸಿದರೊ ॥ ೧ ॥ ಈಗಲಿವರೊಳು ಕಾದಿ । ಹ್ಯಾಗಾಗು ವುದೊ ಕಾಣೆ । ನಾಗಭೂಷಣ ಬಲ್ಲ । ನಟನೆಗಳನೆಲ್ಲ ॥ ೨ ॥ ಈ ಹುಡುಗ ರೊಳು ರಣದಿ । ಸೋತುಪೋಪುದರಿಂದ । ಜೀವವನು ರಣಮುಖದಿ । ಬಿಡುವುದೇ ಲೇಸು ॥ ೩ ॥

### ವಚನ

ಇಂತೆಂದು ರಣಕೆ ಸನ್ನಹವಾದ ಶ್ರೀರಾಮನಂ ಕಂಡು ಲವನೊಡನೆ ಕುಶನು ಏನೆನ್ನುತಿರ್ದನದೆಂತೆನೆ-

### ಸೌರಾಷ್ಟ್ರ ರಾಗ - ಅಷ್ಟತಾಳ

ಮೊದಲು ಬಂದವರಂತೆ ಹದಗಾರನಲ್ಲೀತ । ನೋಡು ತಮ್ಮಾ ॥ ಈತ । ನಿದಿರು ನಿಲ್ಲುವುದಕ್ಕೆ ಸದರವಲ್ಲವು ಜೋಕೆ । ನೋಡು ತಮ್ಮಾ ॥ ೧ ॥ ಬಿಲ್ಲು ವಿದ್ಯಂಗಳ ಬಲ್ಲ ಕೋವಿದನೀತ । ನೋಡು ತಮ್ಮಾ ॥ ಪಾಶ್ರಿ ನಲ್ಲಿ ಚತುರನೆಸಗಾಣೆ ಕೇಳ್ ನಿನ್ನಾಣೆ । ನೋಡು ತಮ್ಮಾ ॥ ೨ ॥ ತುಂಗ ವಿಕ್ರಮ ರಣರಂಗ ಸಾಹಸನೀತ । ನೋಡು ತಮ್ಮಾ ॥ ಸಮ । ರಾಂಗಣ ದೊಳು ನಮ್ಮ ಭಂಗಿಸದಿರನಿವ । ನೋಡು ತಮ್ಮಾ ॥ ೩ ॥

### ನಾದನಾಮಕ್ರಿಯೆ ರಾಗ - ಅಷ್ಟತಾಳ

ಅಣ್ಣನಾಡಿದ ಮಾತ ಲವ ಕೇಳೀ । ಮು । ಕ್ಕಣ್ಣನಂದದಿ ಧೈರ್ಯ ವನು ತಾಳೀ ॥ ೧ ॥ ಕಣ್ಣಾರೆ ನೋಡಿವನ ಪಾಡೇನೂ । ತಾಬು ।

ಪುಣ್ಯವಿದ್ದರೆ ಸಡ್ಡೆ ಮಾಡೆನು ॥ ೨ ॥ ಎನುತ ಬಿಲ್ಲಿಗೆ ತೆಬ್ಬ ಬಿಗಿದನೂ।ತಾಯಿ। ಮುನಿ ವಾಲ್ಮೀಕಿಗೆ ಕೈಯ ಮುಗಿದನು ॥ ೩ ॥

### ಮಾರವಿ ರಾಗ - ಮಟ್ಟೆತಾಳ

ವೀರ ರಾಮು ರಣದಿ ಮದ । ವೇರಿ ಹೂಂಕರಿಸುತಿರಲು । ಕ್ರೂರ ಶರಗಳನ್ನು ಕುಶನ । ಮೋರೆಗಿಟ್ಟನು ॥ ೧ ॥ ಸಾರಿ ಮುಂದುವರಿದು ಬಾಣ। ಘೋರುಗುಡಿಸುತಿರಲು ಕಂಡು । ಬೇರೆ ಬೇರೆ ಕಡಿದು ಬಿಸುಟ । ಧಾರುಣಿ ಯಲಿ ॥ ೨ ॥ ತುಂಡುಮಾಡಿ ಪರ್ವತಾಸ್ತ್ರ । ಮಂಡೆಗಾಗಿ ಬಿಸುಡುತಿರಲು। ಖಂಡಲಾಯುಧಂಗಳಿಂದ । ಖಂಡಿಸಿದನು ॥ ೩ ॥ ಪುಂಡರೀಕನಯನನೆಸದ। ತಂಡತಂಡದುರಗಶರವ । ದಿಂಡುದರಿದ ಗರುಡ ಬಾಣ । ದಿಂದಲದರನು ॥ ೪ ॥ ಭಾಪು ಭಳಿರೆ ತರಳನೆನುತ । ಚಾಪವನ್ನು ನೆಗಹಿಕೊಂಡು । ಭೂಪ ನೆಸದನಗ್ನಿಬಾಣಾ । ಕೋಪದಿಂದಲಿ ॥ ೫ ॥ ತಾಪವಡರಿ ಜಗವನೆಲ್ಲ । ರೂಪುಗೆಡಿಸುತಿರಲು ಶರವು । ಶ್ರೀಪತಿಯ ತನಯ ಜಲದಿ । ಮಾಪ್ತ ಗೈಸಿದಾ ॥ ೬ ॥ ಹಿಂದೆ ರಾವಣಾದಿಗಳನು । ಕೊಂದು ತಿರುಗಿ ಬರುವ ಬಾಣ । ವೊಂದುಳಿಯದಂತೆ ರಣದಿ । ಕುಂದಿತೆಲ್ಲವೂ ॥ ೭ ॥ ಕಂದರಾಟ ವಹಾರಿಯಾಯಿ । ತೆಂದು ರಾಮು ಕುಶನ ಕಣ್ಣ । ಮುಂದೆ ನಿಲುವ ವೀರ ನ್ಯಾರು। ಎಂದಿಗಾದರು ॥ ೮ ॥ ಎಚ್ಚ ಬಾಣತತಿಯನೆಲ್ಲಾ। ನುಚ್ಚುನೂರಾಗೆ ಧರಣಿ । ಬಿಚ್ಚುವಂತೆ ಕುಶಗೆ ಶೌರ್ಯ । ಹೆಚ್ಚಿತಾಗಲೇ ॥ ೯ ॥ ಮಚ್ಚರಂಗಳಿಂದ ರಾಮು । ಹುಚ್ಚನಂತೆ ಕಾದುತಿರಲು । ಬೆಚ್ಚಿ ಬೆದರಲ ಮರರೆಲ್ಲ । ಅಚ್ಚರಿಯೆನೆ ॥ ೧೦ ॥

### ಕೇದಾರಗೌಳ ರಾಗ - ಅಷ್ಟತಾಳ

ಮಕ್ಕಳೊಡನೆ ರಾಮಚಂದ್ರಗೆ ತಾ ಮನ । ದಕ್ಕರುಂಟೇನೆಂಬುದಾ ॥ ಲೆಕ್ಕಿಪ ಬಗೆಯಿಂದ ಕುಶನೆಚ್ಚ ಶರ ಬಂದು । ಹೊಕ್ಕಿತು ವಡಲೊಳಗೆ ॥ ೧ ॥ ರಕ್ಕಸರಿಪು ಬಸವಳಿದು ಬೇಸಿಗೆಯ ಝು । ಳಕ್ಕೆ ಬಾಡಿದ ಲತೆಯ ॥ ಧಿಕ್ಕನೆ ರಥದಿಂದ ಬಿದ್ದು ಮೂರ್ಛಿತನಾಗಿ । ಫಕ್ಕನೆ ಪವಡಿಸಿದ ॥ ೨ ॥ ಲೋಕನಾಯಕ ರಣದೊಳು ಮಲಗಿರೆ ಕಂಡು । ಶೋಕಿಸೆ ದಿಕ್ಪಾಲಕರು ॥

ರಾಕೇಂದು ಮಂಡಲವಿರದೆ ಬಾಡಿದ ರಾಹು। ಸೋಕಿದ ಮುಖದ ಹಾಗೆ ॥ ೩ ॥ ಶ್ರೀ ಕಂಬುಕಂಠವೊಳೆಸೆದು ರಂಜಿಸುತಿಪ್ಪ । ಏಕಾವಳಿಯ ಹಾರವ॥ ಆ ಕುಮಾರರು ಕೊಂಡು ಭರತ ಶತ್ರುಘ್ನರಿ । ದ್ದಾ ಕಡೆಗೈತಂದರು ॥ ೪ ॥ ವಿಪರೀತವಿದು ನೋಡು ತಮ್ಮ ಮುತ್ತಿನಲಿ ಕ । ಟ್ಟಿಹುದ ಕೊರಳ ದಂಡೆಯ॥ ಅಪರೂಪವಿದು ನಮ್ಮ ತಾಯಿಗಾಗುವದೆಂದು । ಅಪಹರಿಸಿದರೀರ್ವರು ॥ ೫ ॥ ತಪಸಿಗೆ ಕಾಣಿಕೆ ಕೊಡಬೇಕೆಂದೆನುತಲೆ । ಕಪಿಗಳನೀರ್ವರನು ॥ ನಿಪುಣರಿನ್ನಿವರೆಡೆಗೈಯ್ಕೆ ಮಾರುತಿ ಕಂಡು । ತಪಗುಟ್ಟುತಿಂತೆಂದನು ॥ ೬ ॥

ತೋಡಿ ರಾಗ - ಅಷ್ಟತಾಳ

ಕಂಡಿರೇ । ನೀವು । ಕಂಡಿರೇ ॥ ಪಲ್ಲ ॥ ಕಂಡಿರೇ ನೀವು ಕುಶಲವರುಗಳಾ। ಹಿಂಡು ಸೇನೆಯನೆಲ್ಲ ಭಂಡು ಮಾಡಿಹುದಾ ॥ ಕಂಡಿರೇ ॥ ಅನುಪಲ್ಲ ॥ ರಣದೊಳಗೆಲ್ಲರ ಮಲಗಿಸಿ ಮತ್ತಾ । ಗುಣನಿಧಿ ರಾಮನ ಕೊರಳಿಂದ ಕಿತ್ತಾ ॥ ಮಣಿಗಳ ಮುತ್ತಿನ ಹಾರವ ಹೊತ್ತಾ । ಕ್ಷಣದೊಳಗೈದಿ ಬರುವರು ನಮ್ಮಿತ್ತಾ ॥ ಕಂಡಿರೇ ॥ ೧ ॥ ಕೊಂಡುಹೋಗಲಿ ನಮ್ಮನಲ್ಲಿಗೆ ಸೀತೇ । ಕಂಡರೆ ರಕ್ಷಿಸುವಳು ಜಗನ್ಮಾತೇ ॥ ಪುಂಡು ಹುಡುಗರೊಳು ಜಗಳಾಟವೇಕೇ । ಮಂಡಲದೊಳು ನಮ್ಮ ಕೊಲದಂತೆ ಜೋಕೆ ॥ ಕಂಡಿರೇ ॥ ೨ ॥

ವಚನ

ಇಂತೆಂದು ಹನುಮ ಜಾಂಬವರು ಪ್ರಸಂಗಿಸಲಾಗಿ ಅತ್ತಲಾ ಜಾನಕಿಯು ಸುತರು ಬರಲಿಲ್ಲವೆಂದು ಚಿಂತಿಸುತಿರ್ದಳದೆಂತೆನೆ-

ಸಾವೇರಿ ರಾಗ - ಏಕತಾಳ

ತರಳ ಲವನ ಕರ । ತರುವೆನೆನುತ ಕುಶ । ತೆರಳಿ ಪೋದವನಿನ್ನು । ಬರಲಿಲ್ಲವೇಕೇ ॥ ೧ ॥ ಏನ ವಹಾಡಿದರೊ ಇ । ನ್ನೆಂತು ಕಾದಿದರೊ । ಸೂನುಗಳಳಿದರೊ । ಕಾನನದೊಳಗೇ ॥ ೨ ॥ ತಮ್ಮನ ಕರತಾರೆಂ । ದೆನ್ನಯ ಮಗನನ್ನು । ಸುಮ್ಮನೆ ಕಳುಹಿದೆ । ನಮ್ಮಯ್ಯೊ ಕುಶನ ॥ ೩ ॥ ಹದಿಮೂರು ವರುಷ ವಾ । ಗದ ಬಾಲರೀರ್ವರು । ಕದನದೊಳರಿಗಳೊ । ಳೆಂತು ಕಾದಿದರೋ ॥ ೪ ॥ ಸದನದೊಳಗೆ ಮುಸಿಪ । ನಿಲ್ಲದ ಪೇಳ್ಕರಿ ।

ಕುದುರೆ ಬಂದುದ ಲವ । ನೇಕೆ ಕಟ್ಟಿದನೋ ॥ ೫ ॥ ಬೇಡಪೆಂದೆಂದರೆ । ಲ್ಲರ ಮಾತ । ಕೇಳದೆ । ಕೇಡುಕಾಲಕೆ ನಾವು । ತಪಸಿ ಕಾನನವು ॥ ೬ ॥ ಮಾಡುವದೇನಿನ್ನು । ಪುತ್ರೊಬ್ಬರೆನಗಿಲ್ಲ । ನೋಡಿ ಬರುವದಕ್ಕೆ । ಸೊಸು ಗಳನ್ನು ॥ ೭ ॥

## ದ್ವಿಪದಿ

ಬಳಲಿ ಜಾನಕಿ ಸುತರು ಬಾರರ್ಯಾಕೆಂದು । ಹಲುಬಿದಳು ತನಮನಿಗೆ ಮನಸಿನಲಿ ನೊಂದು ॥ ೧ ॥ ಪಾತಾಳದಿಂದ ಮುನಿವರ ಬಾರನ್ಯಾಕೇ । ಸೀತೆ ಹೀಗೆಂದು ಮೂರ್ಛಿತಳಾದಳಾಕೆ ॥ ೨ ॥ ಎಂಬ ಸಮಯದಿ ಹನುಮ ಜಾಂಬವರ ಬಿಗಿದೂ । ಕುಂಭಿನಿಯೊಳೆಳಕೊಳುತ ಬರುತಿರಲು ನಡೆದೂ ॥ ೩ ॥ ಏನಾದರೋ ತರಳರೆಂದು ಚಿಂತಿಸುತಾ । ತಾನಿರ್ಪ ಸಮಯದಲಿ ಕುಶಲವರು ಬರುತಾ ॥ ೪ ॥ ತಾಯ ಮುಂದಿನಲಿ ತಂದೊಡವೆಗಳನಿರಿಸೀ । ಪ್ರಿಯದಲಿ ತೋರಿದರು ಬೇರೆ ವಿಂಗಡಿಸೀ ॥ ೫ ॥

## ಸೌರಾಷ್ಟ್ರ ರಾಗ - ಅಷ್ಟತಾಳ

ಮಂಗಳ ಮಹಿಮ ರಾಮನ ಕಂಠಸರವನ್ನು । ನೋಡೆಯಮ್ಮಾ ॥ ರಣ । ರಂಗದಿ ಬಿದ್ದ ಲಕ್ಷ್ಮಣನ ಮಕುಟವನ್ನು । ನೋಡೆಯಮ್ಮಾ ॥ ೧ ॥ ಕಂಗೊಳಿಸುವ ಭರತನ ಕೈಯು ಕಡಗವ । ನೋಡೆಯಮ್ಮಾ ॥ ಸಮ । ರಾಂಗಣದೊಳು ಬಿದ್ದ ಶತ್ರುಘ್ನನುಡುದಾರ । ನೋಡೆಯಮ್ಮಾ ॥ ೨ ॥ ಪೊಡವಿಪಾಲರು ಕೈಯೊಳ್ ಪಿಡಿದ ಬಿಲ್ಬಾಣವ । ನೋಡೆಯಮ್ಮಾ ॥ ಇಕ್ಕೊ । ಕಮ ಜಾಣ ಹನುಮಂತ ಮಿಡುಕುತ್ತಲಿರುವುದ । ನೋಡೆ ಯಮ್ಮಾ ॥ ೩ ॥ ಬಿಡದೆ ನಮ್ಮೊಡನೆ ಕಾಪಲು ಬಂದ ಪಡೆಯನ್ನು । ನೋಡೆಯಮ್ಮಾ ॥ ನಡ । ನಡುಗುವ ಜಾಂಬವನ ಹೆಡೆಮುಡಿ ಬಿಗಿದುದ । ನೋಡೆಯಮ್ಮಾ ॥ ೪ ॥

## ವಾರ್ಧಿಕ

ಮೃಗವು ಹುಲಿಗಂಜಿ ಮಸಿದಿರುವ ಸಿಂಹದ ಬಾಯ್ಗೆ । ಹೊಗು ವಂತೆ ಮೊದಲೆ ಚಿಂತಿಸುತಿಪ್ಪ ಜಾನಕಿಯು । ರಘುವರನ ಕೊರಳ ಹಾರವ

ಕಂಡು ಶೋಕದಿಂದಿಳೆಗುರುಳಿ ಬಿಡಾಗಲು ॥ ಪಗರಣಂಗಳ ಕಂಡು ಬಾಲಕ ರಿರ್ದೇನೆಂದು । ಬಗೆ ಬಗೆಯೊಳುಪಚರಿಸುತಿರಲು ಚೇತರಿಸುತ್ತ । ಲೊಗುವ ಕಂಬನಿಯಿಂದ ತರಳರು ಮುಂಡಾಡಿ ಸೀತೆ ಮರುಗುತ್ತಿರ್ದಳು ॥

ಯರಕಲಕಾಂಬೋಧಿ ರಾಗ - ಏಕತಾಳ

ಮಗನೆ ನೀನಿಂತು ಮಾಳ್ಪರೇ । ಅಯ್ಯಯ್ಯೊ ಎನ್ನ । ಮಗನೆ ನೀನಿಂತು ಮಾಳ್ಪರೇ ॥ ಪಲ್ಲ ॥ ರಘುವಂಶಾಬ್ಧಿ ಪೂರ್ಣಚಂದ್ರ । ಅಗಣಿತ ಭೋಗ ದೇವೇಂದ್ರ । ಸುಗುಣ ಎನ್ನ ಕಾಂತ ರಾಘವಾ ॥ ಮಗನೆ ॥ ೧ ॥ ತಂದೆ ರಾಮಚಂದ್ರನ ತ । ಮ್ಮಂದಿರ ಬೇರೆ ಮೂವರ । ಕೊಂದಿರಲ್ಲ ರಣದಿ ಕಾದಾಡೀ ॥ ಮಗನೆ ॥ ೨ ॥ ವಾನರ ಕುಲಕೆ ಅಧಿ । ಮಾನಿಗಳಿವರಿಗಿಂತ । ಮಾನಭಂಗವೇನು ಮಕ್ಕಳಿರ ॥ ಮಗನೆ ॥ ೩ ॥ ಪಾತಾಳದಿಂದ ಮುನಿ । ನಾಥ ಬರಲಿಲ್ಲವಿನ್ನು । ಯಾತರ ಉಪಾಯವಿದಕಯ್ಯೋ ॥ ಮಗನೆ ॥ ೪ ॥

ಘಂಟಾರವ ರಾಗ - ಏಕತಾಳ

ಸೀತೆ ಮಕ್ಕಳಿಗೆಂದ । ಮಾತ ಕೇಳುತ ಮುನಿ । ನಾಥ ವಾಲ್ಮೀಕಿ ಋಷಿ । ಪಾತಾಳದಿಂದ ॥ ೧ ॥ ಬಂದಾ ಮುನಿಯು ದೂರ । ದಿಂದ ನೋಡುತ ಸೀತೆ । ಕಂದರ್ಪ ಹಿತ ಪಾದ । ದ್ವಂದ್ವದೊಳೆರಗೀ ॥ ೨ ॥ ತಂದೆ ನೀವಿಲ್ಲದ । ವೇಳ್ಯದೊಳಿಂದೆನ್ನ । ಕಂದರ್ಮಾಡಿದ ಕೃತ್ಯ । ವೆಂದಳಾ ಜನನಿ ॥ ೩ ॥ ಕರವ ಮುಗಿದು ಬೆದ । ರಿರುವ ಬಾಲರ ಮುನಿ । ವರನು ಮೈ ದಡವಿದ । ನತಿ ಪ್ರೀತಿಯಿಂದ ॥ ೪ ॥ ತರಣಿಕುಲಜರೊಳು । ಧುರವೆಂತಾಯಿತು ಯಾವ । ಪರಿಯಿಂದ ಕೊಂದಿರಿ । ಅರುಹಿ ಬಾಲರಿರ ॥ ೫ ॥

ಮಧ್ಯಮಾವತಿ ರಾಗ - ಏಕತಾಳ

ಕೇಳಿ ವಾಲ್ಮೀಕಿ ಮಹಮುನಿರಾಯಾ । ಕಾಳಗದೊಳು ನಮ್ಮೊ । ಳಾದ ವೃತ್ತಾಂತವ ॥ ಕೇಳಿ ॥ ಪಲ್ಲ ॥ ರಾಮನೆಂಬವನೊಂದು ಸೀಮೆಯು ದೊರೆಯಂತೆ । ಪ್ರೇಮದನುಜರವಗೆ ಮೂವರಂತೆ ॥ ಆ ಮಖತುರಗ ಕೋಸುಗವೆ ನಮ್ಮೊಡನೆ ಸಂ । ಗ್ರಾಮದೊಳಗೆ ಕಾದಿ ಮಡಿದಂಥ ಪರಿ ಯನ್ನು ॥ ಕೇಳಿ ॥ ವಾನರಕುಲಕಭಿಮಾನಿಗಳಿವರಂತೆ । ಜನವಮಾಡಿದರು

ಸಾವಿಲ್ಲವಂತೆ ॥ ಈ ನಿಮ್ಮ ಚರಣಕೊಪ್ಪಿಸಬೇಕೆಂದೆನುತಲೆ । ಮಾನಭಂಗವ ಮಾಡಿ ಕಟ್ಟಿತಂದೆವು ಸ್ವಾಮಿ ॥ ಕೇಳಿ ॥ ೨ ॥

**ಪಂತುವರಾಳಿ ರಾಗ - ಅಷ್ಟತಾಳ**

ಏನ ಮಾಡಲಿ ಮುನಿಯೆ । ತಿಳಿಯದೆನ್ನ । ಸೂನುಗಳಿಂದಲಿ । ಊನಬಂದೊದಗಿತು ॥ ಏನ ॥ ಪಲ್ಲ ॥ ವನದೊಳಗಿರಲು ನಾ ದನುಜ ನೊಯ್ಕಲು ಕೂಡೆ । ವನಜಾಕ್ಷ ಕಳುಹಲಾಕ್ಷಣದಲ್ಲಿ ಧೀಕಪಿ । ಹನುಮ ಲಂಕೆಗೆ ಹಾರಿದಾ । ಮುಪ್ಪ್ರಯುಂಗುರವ । ವಿನಯದಿಂದಲಿ ತೋರಿದ ॥ ನೋಡಿದರಿಂಥಾ । ಗುಣವುಳ್ಳವಗೆ ಮಾನಭಂಗ ಮಾಡಿದರಲ್ಲ ॥ ಏನ ॥ ೧ ॥ ಹಿಂದೆ ನಾ ಬಲು ಬಲು ನೊಂದುಕೊಂಡವಳಿನ್ನು । ಮುಂದಾದರು ಲೇಸಾಗಿರುವೆ ಯೆಂದರೆ ಯೆನ್ನ । ಕಂದರಿಂದಿಂತಾಯಿತೂ । ವಾಲೆಭಾಗ್ಯವು । ಕುಂದಿ ಲಕ್ಷಣ ಹೋಯಿತೂ । ಮಾಡುವದೇ । ನೆಂದರು ಹಿಸು ಕಾರ್ಯ ವೆಲ್ಲ ಹಾಳಾಯಿತು ॥ ಏನು ॥ ೨ ॥

**ಭೈರವಿ ರಾಗ - ಝಂಪೆತಾಳ**

ಅಮ್ಮ ಕೇಳಂಜದಿರು । ಅಳಲಿ ಮಾಡುವದೇನು । ಬ್ರಹ್ಮಲಿಪಿ ತಪ್ಪುವುದೆ । ಬಾಯಾರಲ್ಯಾಕೆ ॥ ೧ ॥ ಸಾವು ಹುಟ್ಟುಗಳೆಂಬ ಸಂಸಾರ । ಮನುಜರಿಗೆ । ಆರಿಗಾದರು ಉಂಟು । ಅವರವರ ಕರ್ಮ ॥ ೨ ॥ ನಿತ್ಯ ವಲ್ಲವು ಜೀವ ನೀರಜಾಂಬಕಿ ಕೇಳು । ಅತ್ತು ಸಾವವರುಂಟೆ । ಸತ್ತವರ ಕೂಡೆ ॥ ೩ ॥ ಇಂದವರು ನಾಳೆ ನಾ । ಮೆಂದಿಗಾದರು ಸಾವು । ಹೊಂದು ವದು ಈ ಜೀವ । ವೊಂದೆ ನಿಮಿಷಕ್ಕೆ ॥ ೪ ॥

**ವಚನ**

ಇಂತೆಂದು ಜಾನಕಿಯೊಳುಸುರಿ ವಾಲ್ಮೀಕಿ ಮುನಿವರಂ ಲವಕುಶ ರೊಡನೆ ಏನೆಂದನು ಎಂದರೆ-

**ಕಲ್ಯಾಣಿ ರಾಗ - ಅಷ್ಟತಾಳ**

ತಪ್ಪ ಮಾಡಿದಿರಿ ನೀವೂ । ಕೇಳಿದರಿದ । ಕೊಪ್ಪಲೋಕದ ಜನರು॥ ಸ್ವಲ್ಪ ಬುದ್ಧಿಗಳಾಯ್ತು । ಅವರ ಕೊಂದಿರಿ ರಾಮು । ನಪ್ಪನಲ್ಲವೆ ನಿಮಗೆ ।

ಕೇಳಿ ಬಾಲಕರಿರ ॥ ೧ ॥ ಭೂಮಿಯೊಳಗೆ ದುಷ್ಟರಾ । ಸಂಹರಿಸಲು । ರಾಮಾವತಾರನಾಗಿ ॥ ಪ್ರೇಮದಿ ದಶರಥ । ನುದರದಿ ಜನಿಸಿ ಶ್ರೀ । ರಾಮನೆ ವಿಷ್ಣು ಜಾ । ನಕಿಯೆ ಶ್ರೀ ಲಕ್ಷ್ಮಿಯು ॥ ೨ ॥ ಶಾಲೆಯ ಬಿಟ್ಟು ದೂರಾ ಪೋಗದಿರೆಂದು । ಪೇಳಲಿಲ್ಲವೆ ಕುವರಾ ॥ ಕೇಳದೆ ಹೀನ ಕ । ರ್ಮವ ಮಾಡಿದಿರಿ ನಿಮ್ಮ । ಬಾಳಿಗಿನ್ನೇನುಸು । ರುವೆನು ಮಕ್ಕಳಿರಾ ॥ ೩ ॥ ತರಳೆ ನೀ ಮರುಗದಿರೂ । ಆದರು ನೋಡಿ । ಬರುವೆ ಬಿದ್ದ ವರ್ಯಾರ್ಯಾರೂ ॥ ಅರಿಯದೆ ಬಂದ ಕೃ । ತ್ಯಗಳಿದು ದೋಷಕ್ಕೆ । ಪರಿ ಹಾರವುಂಟು ಮುಂದೆ । ಕೇಳಿಲೆ ಹಿಂದೆ ॥ ೪ ॥

ವಚನ

ಇಂತೆಂದು ಜಾನಕಿಯೊಳು ಸಂತೈಸಿ ಮುನಿಯು ಕುಶಲವರಂ ಕರ. ಕೊಂಡು ಬಂದು ಆ ರಣಾಂಗಣವಂ ಕಂಡನವೆಂತೆನೆ-

ಕೇದಾರಗೌಳ ರಾಗ - ಅಷ್ಟತಾಳ

ಎತ್ತ ನೋಡಿದರು ರಾಮನ ಮುಂದಿ ಕುದುರಾನೆ । ಸತ್ತ ಪೆಣಗಳ ರಾಶಿ ॥ ಛತ್ರ ಚಾಮರ ಕೊಂಬು ವಾದ್ಯ ತಮ್ಮಟೆ ಭೇರಿ । ಸುತ್ತ ಮುತ್ತೆಡ ಬಲದಿ ॥ ೧ ॥ ಹಸ್ತದೊಳಗೆ ಧನುರ್ಬಾಣವ ಪಿಡಿದಿಹ । ರಕ್ತದೋಕುಳಿಯ ಮೇಲೆ ॥ ಮುತ್ತುವ ನೊಣಗಳು ಕವಿವ ರಾಮನ ಮುನಿ । ಪೋತ್ತಮನದನು ಕಂಡು ॥ ೨ ॥ ಕಂದಿದ ಮುಖಕಾಂತಿ ಮೈಪೊಳೆಯುವ ಸಾ । ನಂದ ಸೌಂದರ್ಯ ರೂಪಾ ॥ ಅಂದವಾಗಿಪ ತೊಡೆ ಕೈಕಾಲುಗಳು ಚೆಲ್ವ । ಕುಂದಣದಂತಿರಲು ॥ ೩ ॥ ಚಂದ ಚಂದದ ಮಣಿ ಮಕುಟ ಹಾರಗಳಿಂದ । ಅಂದದಿಂದೆಸೆದಿರುವ ॥ ಒಂದಾಗಿ ಮಲಗಿದ ಭರತ ಶತ್ರುಘ್ನರ । ಮುಂದೆ ಲಕ್ಷ್ಮಣನ ಕಂಡ ॥ ೪ ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ರಣದೊಳಗೆ ಸಾಲಾಗಿ ಮಲಗಿಪ । ಪೆಣಗಳನು ಕಾಣುತ್ತ ಮುನಿ ಪತಿ । ಮನಸಿನಲಿ ನೆನೆಸಿಡನು ನಾರಾ । ಯಣನ ಪದವ ॥ ೧ ॥ ಈಕ್ಷಿಸಿದ ಭೂಪಾಲ ಸೇನೆಯ । ಪ್ರೋಕ್ಷಿಸಿದನು ಕಮಂಡಲೋದಕ । ರಾಕ್ಷಸಾಂತಕ ನೆದ್ದ ಮುನಿಪನ । ವೃಕ್ಷದಂತೆ ॥ ೨ ॥ ನಿದ್ದೆಯಲಿ ಮಲಗಿರುವ

ಲಕ್ಷ್ಮಣ । ನೆದ್ದನಾ ಸಮಯದಲಿ ಭರತನು । ಯುಧ್ದ ಸೈನ್ಯವು ಸಹಿತ ಕುಣಿವು । ತೈದ್ದುದಲ್ಲೀ ॥ ೩ ॥

ವಚನ

ಈ ರೀತಿಯಿಂದ ಸರ್ವರೂ ಏಳುತ್ತಿರಲಾಗಿ ಶ್ರೀರಾಮಚಂದ್ರನು ವಾಲ್ಮೀಕಿ ಮುನಿವರನ ಸ್ತುತಿಸುತ್ತಿರ್ದನದೆಂತೆನೆ-

ಬಿಲಹರಿ ರಾಗ - ಏಕತಾಳ

ಜಯ ಜಯ ಲೋಕಪಾಲಕಾ । ವಾಲ್ಮೀಕಿ ಮುನಿಯೇ । ಜಯಜಯ ಲೋಕಪಾಲಕಾ ॥ ಪಲ್ಲ ॥ ಸೂರ್ಯಕೋಟಿ ಸಮಕಾಯ । ದಯಾಂ ಬುಧಿ ದೇವನೇ । ಧೈರ್ಯವಾನ ಸುಜನ । ಪರಿಪಾಲ ॥ ೧ ॥ ಸಕಲ ಶಾಸ್ತ್ರ ನಿಗ । ಮಾಗಮಪೂರಿತ । ಮುಕುತಿ ದಾಯಕಾ । ಶ್ರೀವರದ ॥ ೨ ॥

ತುಜಾವಂತು ರಾಗ - ಏಕತಾಳ

ಕೇದರಿವರ್ಯಾರು ಮುನಿಯೆ । ಇವರ । ತಂದೆತಾಯಿಗಳ್ಯಾರು ಮುನಿಯೆ ॥ ಮಂದಿರವೆಡೆಯೆಲ್ಲಿ ಮುನಿಯೇ । ಇವರು । ನಿಂದ ಊರ್ಯಾ ವುದು ಮುನಿಯೆ ॥ ೧ ॥ ಬಿಲ್ಲು ವಿದ್ಯೆಗಳ ಮುನಿಯೇ । ಮಕ್ಕ । ಳಿಲ್ಲಿ ಕಲಿತರಯ್ಯ ಮುನಿಯೇ ॥ ಇಲ್ಲಿಗೆ ಬಂದಯ್ಯಾಕೆ ಮುನಿಯೇ । ನಮ್ಮ । ಕೊಲ್ಲಲು ಕಾರಣವೇನು ಮುನಿಯೆ ॥ ೨ ॥

ಭೈರವಿ ರಾಗ - ಝಂಪೆತಾಳ

ಭಾನುವಂಶಜ ಕೇಳು । ಬಹಳ ಮಾತುಗಳೇಕೆ । ಈ ನಡತೆ ಮೊದ ಲುಂಟೆ । ಈ ರಾಜ್ಯದೊಳಗೆ ॥ ೧ ॥ ತಂದೆ ಮಕ್ಕಳು ತಾವು । ತಮ್ಮೊಳಗೆ ಕಾದುವದು । ಹಿಂದೆ ಕೇಳಿದುದಿಲ್ಲ । ಹೀಗೆಂಬ ವಾರ್ತೆ ॥ ೨ ॥ ದಾನವಾಂತಕ ಕೇಳು । ಆ ಮಾತು ನಿನಗೇಕೆ । ಏನಾಗಬೇಕಿವರು । ಜಾನಕಿಯ ಸುತರು ॥ ೩ ॥ ಅರಿಯದವನೇ ನೀನು । ಆಯಿತಾಯಿತು ಸಾಕು । ಬರಿಯ ಮಾತಿ ನೊಳಿಮ್ಮ । ಮರುಳುಮಾಡುವದೂ ॥ ೪ ॥ ಮಕ್ಕಳಿವರಿಂತೆಂಬ । ಮಾತ ಕೇಳುತಲಾಗ । ರಕ್ಕಸಾಂತಕ ನುಡಿದ । ಲಕ್ಷ್ಮಣನ ಕೂಡೆ ॥ ೫ ॥

### ತೋಡಿ ರಾಗ - ಅಷ್ಟತಾಳ

ಏನಯ್ಯಾ । ತಮ್ಮ । ಏನಯ್ಯಾ ॥ ಪಲ್ಲ ॥ ಏನಯ್ಯ ತಮ್ಮ ಈ ಋಷಿಗಳ ಮಾತೂ । ಜಾನಕಿ ಮಕ್ಕಳ ಪಡದಳಿನ್ನೆಂತೂ ॥ ಏನಯ್ಯಾ ॥ ಅನುಪಲ್ಲ ॥ ಜನರಪವಾದ ಬಂದುದು ಸೀತೆಗೆಂದೂ । ವನದೊಳಗೊಬ್ಬಳ ಬಿಟ್ಟುಬಾರೆಂದು ॥ ನಿನಗೆ ಪೇಳಿದ ಮೇಲೆ ಏನಾಯಿತೆಂದೂ । ಎನಗೆ ವಿಸ್ತರಿಸಲಿಲ್ಲವೆ ನೀನು ಮುಂದೂ ॥ ಏನಯ್ಯಾ ॥ ೧ ॥ ಕಾಡಿನೊಳಿರುವರೆ ಮನೆಯೆಲ್ಲಿ ಬಂತು । ರೂಢಿಯೊಳಿಷ್ಟು ದಿವಸವೆಲ್ಲಿ ಸಂತೂ ॥ ನೋಡಿದರತಿ ಮುದ್ದು ಸೊಬಗಿನೊಳಿಂತೂ । ಜೋಡು ಮಕ್ಕಳ ಸೀತೆ ಪಡೆದಳಿನ್ನೆಂತು ॥ ಏನಯ್ಯಾ ॥ ೨ ॥ ಅಣ್ಣ ನಿನ್ನಪ್ಪಣೆಯಿಂದಲಿ ನಾನೂ । ಮಿಣ್ಣನೆ ರಥವ ನೇರಿಸಿ ಭೂಜಾತೆಯನೂ । ಎಣ್ಣಿಸಿ ವನದೊಳೊಬ್ಬಳ ಬಿಟ್ಟು ಬಂದೇ । ಬಣ್ಣಿಸಲರಿಯದಾದೆನು ಅದರ ಮುಂದೆ ॥ ಏನಯ್ಯಾ ॥ ೩ ॥

### ವಚನ

ಇಂತೆಂದು ಲಕ್ಷ್ಮಣನು ನುಡಿಯಲಾಗಿ ವಾಲ್ಮೀಕಿ ಮುನೀಶ್ವರನು ರಾಘವನೊಡನೆ ಏನೆನ್ನುತಿರ್ದನದೆಂತೆನೆ-

### ಪೂರ್ವಿ ರಾಗ - ಏಕತಾಳ

ಒಂದೆ ಮನಸಲ್ಲಾ ರಾಘವಗೆ । ಹಿಂದಣದಿನಿಸಿಲ್ಲಾ ॥ ಒಂದೆ ॥ ಪಲ್ಲ ॥ ಕಂಡವರ ಮಾತಕೇಳಿ । ಹೆಂಡತಿಯ ಬಿಡುವರೇ । ಕಂಡು ಕಂಡು ತಿಳಿದು ತಿಳಿದು । ಪುಂಡಾಟವ ಮಾಳ್ಪರೆ ॥ ಕೊಂಡಾಡುವರ್ಪೂರಿದಕೆ ಭೂ । ಮಂಡಲದೊಳು ತಿಳಿದರೆ । ಹಿಂಡು ದೊರೆಗಳಿದ ಕೇಳಿದರೆ । ಕಂಡು ತೋಷ ಪಡುವರೆ ॥ ಒಂದೆ ॥ ೧ ॥ ಕಾಡಿನೊಳಗಳುವ ಸೀತೆ । ಯನ್ನು ಒಡಂಬಡಿಸಿದೇ । ಬೇಡ ದುಃಖವೆಂದು ಧೈರ್ಯ । ಪೇಳಿ ತೋಷ ಪಡಿಸಿದೆ ॥ ಮಾಡಿ ಪರ್ಣಶಾಲೆಯನ್ನು । ಬೇರೆ ವಿಂಗಡಿಸಿದೆ । ಜೋಡು ಮಕ್ಕಳನ್ನು ಪಡೆದ । ಇಷ್ಟು ದಿವಸ ಸಲಹಿದೆ ॥ ಒಂದೆ ॥ ೨ ॥ ಕುಶಲವರೆಂದಿಬ್ಬರಿಗೆ । ಎಸವ ಪೆಸರನಿರಿಸಿದೇ । ಅಸಮ ವಿದ್ಯೆಂಗಳ ನಾನು । ಕುಶಲದಿಂದ ಕಲಿಸಿದೆ ॥ ವಸದು ಬಿಲ್ಲು ವಿದ್ಯೆಂಗಳ । ನೆಸವ ಬಗೆ ತೋರಿಸಿದೆ । ಅಸುರ ವೈರಿ ನೀ ನಿರೀಕ್ಷಿಸು । ನಿನ್ನ ಮುಂದೆ ನಿಲಿಸಿದೆ ॥ ಒಂದೆ ॥ ೩ ॥

### ಬೇಗಡೆ ರಾಗ - ಅಷ್ಟತಾಳ

ಓದಿದರೂ । ಮಕ್ಕ । ಳೋದಿದರೂ ॥ ಪಲ್ಲ ॥ ಮುನಿಯ । ಪಾದ ಕೆರಗಿ ಭಕ್ತಿಯಿಂದ । ವೇದ ಶಾಸ್ತ್ರ ಪೌರಾಣವ ॥ ಓದಿದರೂ ॥ ಅನುಪಲ್ಲ ॥ ತುಂಬುರು ನಾರದ ಯಕ್ಷ । ಗಂಧರ್ವ ಸಂಗೀತ ವೀಣೆ । ಅಂಬುಜನಾಭನ ಮುಂದೆ । ಅರ್ತಿಯಿಂದಲಿ ॥ ಕುಂಭಿನಿಜಾತೆಯ ಮಕ್ಕ । ಳೆಂಬ ಬಿರುದು ಪೊಗಳುತಿರಲು । ಸಂಭ್ರಮವ ಕೇಳಿ ರಾಮ । ಸಂತೋಷವ ಮಾಡಿದ ॥ ಓದಿದರೂ ॥ ೧ ॥ ಬಣ್ಣಿಸಿ ಬಣ್ಣಿಸಿ ಸ್ವರ । ಕಿನ್ನರಿಯ ಮೀಟುವಂತೆ । ಸಣ್ಣ ಬೆರಳಿಂದ ನುಡಿಸುವ । ಸೊಬಗ ಕಾಣುತಾ ॥ ಪುಣ್ಯವಂತೆ ಸೀತೆಯೆಂದು । ಮನದೊಳು ಹರುಷ ತಾಳಿ । ಚಿಣ್ಣರನ್ನು ಪಿಡಿದಪ್ಪಿ । ಮುದ್ದು ಮಾಡುತ ರಾಮ ॥ ಓದಿದರೂ ॥ ೨ ॥

### ಮುಖಾರಿ ರಾಗ - ಝಂಪೆತಾಳ

ವಾಲ್ಮೀಕಿ ಮುನಿಪತಿಗೆ । ಶರಣು ಶರಣೂ ॥ ಪಲ್ಲ ॥ ಗುರುರಾಯ ನಿಮ್ಮಂಥ । ಗುಣನಿಧಿಗಳ್ಯಾರಿನ್ನು । ಕರವ ಮುಗಿಯುವೆ ನಿಮಗೆ । ಕರುಣಿಸಿನ್ನೆನಗೆ ॥ ೧ ॥ ಇನವಂಶದಲಿ ಜನಿಸಿ । ಕ್ಷೀಣವಾಗಲು ಕಂಡು । ಅನುಜರೆಲ್ಲರ ಸಹಿತ । ಗುಣದಿ ಪಾಲಿಸಿದೆ ॥ ೨ ॥ ಲಲನೆ ಜಾನಕಿ ಸಹಿತ । ತೆರಳುವುದು ಪುರಕಿಂದು । ಬಳಿಕ ಯಾಗವ ಮುಗಿಸಿ । ಬರಬಹುದು ನೀವು ॥ ೩ ॥

### ದ್ವಿಪದಿ

ರಾಘವನ ನುಡಿಕೇಳಿ ಹಾಗಾಗಲೆನುತಾ । ಬೇಗದಲಿ ವಾಲ್ಮೀಕಿ ಮುನಿಪ ನಸುನಗುತ ॥ ೧ ॥ ಶಿಷ್ಯರನು ಕಳುಹಿದನು ಶೀಘ್ರದೊಳಗಂದೂ। ಆಶ್ರಮದ ಸೀತೆಯನು ಕರೆತನ್ನಿರೆಂದೂ ॥ ೨ ॥ ಪೋದರಾಕ್ಷಣದಲ್ಲಿ ಕಂಡು ಜಾನಕಿಯಾ । ಪಾದದಪ್ಪಣೆಯಾಯ್ತು ನಿಮಗೆ ವಾಲ್ಮೀಕಿಯಾ ॥ ೩ ॥ ಪೊರಡಬೇಕೆಂದವರ ವಾರ್ತೆಯನು ಕೇಳೀ । ಹರಿಣಲೋಚನೆ ಬಹಳ ಹರುಷವನು ತಾಳೀ ॥ ೪ ॥ ಬಂದಳಾಕ್ಷಣ ಸೀತೆ ಕಡುತವಕದಿಂದಾ । ಮಂದಗಾಮಿನಿಗೆ ಕೈಮುಗಿಯೆ ಜನವೃಂದಾ ॥ ೫ ॥ ಧರಣಿಜಾತೆಯ ನೋಡು ತಾಕ್ಷಣವೆ ರಾಮಾ । ಹರುಷದಿಂದಿರುತಿರ್ದ ಮನದಿ ನಿಸ್ಸೀಮಾ ॥ ೬ ॥

### ಕಲ್ಯಾಣಿ ರಾಗ - ತ್ರಿವುಡೆತಾಳ

ಪತಿಯ ನೋಡಿದಳು ಸೀತೇ । ಮೂಜಗದ್ವಿಖ್ಯ । ಪತಿಯ ನೋಡಿದಳು ಸೀತೇ ॥ ಪಲ್ಲ ॥ ಕ್ಷಿತಿಯ ಸಜ್ಜನರನ್ನು ಪಾಲಿಸುವಾ ಪಶು । ಪತಿಯ ಸುಕೃಮನ ರಘುರಾಯನಾ ॥ ಅತುಲಿತ ಮಹಿಮನ ಪ್ರತಿರಹಿತನ ಶಚಿ । ಪತಿಸೇವಿತನ ಶುಭಾಕರನ ರಾಘವನಾ ॥ ಪತಿಯ ॥ ೧ ॥ ಎಡಬಲದೊಳಗೆ ಮೂವರು ತನ್ನನುಜರು । ತೊಡೆಯೊಳಗೀರ್ವರು ಬಾಲರೂ ॥ ಕಡು ಹನುಮ ಜಾಂಬವರೊಡನೆ ಶೋಭಿಪ ಮುನಿ । ಮೃಡನಿದಿರಿನಲಿ ರಂಜಿಸುವ ವಲ್ಲಭನಾ ॥ ಪತಿಯ ॥ ೨ ॥

### ವಾರ್ಧಿಕ

ರಥವೇರಿ ರಾಮಚಂದ್ರನು ಜಾನಕಿಯು ಸಹಿತ । ಅತಿಶಯದೊಳೇರಿದರು ಮುನಿಗಳಂದಣಗಳಲಿ । ಪೃಥಿವಿಜೆಯು ತರಳರೀರುವರಾನೆ ಶಿರಗಳಲಿ ಕುಳಿತು ಬರುತಿರಲು ಬಳಿಕಾ ॥ ಜತೆಯಾಗಿ ವಾಹನಂಗಳನೇರಿ ಬರುತ ಮುನಿ। ಪತಿಯು ಪಲ್ಲಂಕಿಯಲಿ ಕುಳಿತಿರಲು ಬಳಿಕ ರಘು । ಪತಿಯು ಸಂತೋಷದಿಂ ತನ್ನನುಜರೊಡಗೂಡಿ ನಿಜಪುರಕೆ ಬರುತಿರ್ದನು ॥

### ಬೇಹಾಗ್ ರಾಗ - ಆದಿತಾಳ

ಪುರಕೆ ತೆರಳಿದನು ರಾಮ । ಸಂತೋಷದಿಂದ । ಪುರಕೆ ತೆರಳಿದನು ರಾಮಾ ॥ ಪಲ್ಲ ॥ ಭರತ ಶತ್ರುಘ್ನರು । ವರಜಾಂಬವಾದಿಗಳ್ । ತರಳರೀರ್ವರು ಸಹಿತ । ತೆರಳಿದರಾಕ್ಷಣ ॥ ಪುರಕೆ ॥ ೧ ॥ ಕೊಂಬು ಕಹಳೆ ವಾದ್ಯ । ತಂಬಟೆ ಭೇರಿ ಜತು । ರಾಂಬುಧಿಯ ಮಧ್ಯದಿ । ತುಂಬಿತು ರಭಸವು ॥ ಪುರಕೆ ॥ ೨ ॥ ಕೇರಿ ಕೇರಿಯ ಹೆಂಗ । ಳೋರಂತೆ ಪಾಡಿ ವಿ । ಸ್ತಾರದಿಂದಲಿ ಮಂಗ । ಳಾರತಿ ಯೆತ್ತಿದರು ॥ ಪುರಕೆ ॥ ೩ ॥

### ಧವಳಾರ ರಾಗ - ಏಕತಾಳ

ಕಡಹದ ಕನಕಮಂಟಪದಿ । ಪೊಡವಿಪನಿರಲು ಸಂಭ್ರಮದಿ । ಬಿಡದೆ ಕುಶನು ತಂದೆತೊಡೆಯೊಳೊಟ್ಟಿರಲು । ಜಡಿವ ವಾದ್ಯಗಳುಗ್ಗಡಿಸಿ ಕೂಡಿರಲು॥ ಬೆಡಗಿಲಿ ರಾಮಗು ಮಡದಿ ಜನಕಜೆಗು। ಜಡಜದಾರತಿಯ ಬೆಳಗಿರೆ॥

ಶೋಭಾನೆ ॥ ೧ ॥ ಮಂಜುಳ ತರದ ಸುವೇಣಿಯರು । ಕುಂಜರಸನ್ನಿಭ ಗಮನೆಯರು । ಮಂಜುಳ ಹರಿವಾಣದೊಳಳವಟ್ಟು । ರಂಜಿಪ ಅಕ್ಷತೆ ಘಣೆ ಯೊಳಗಿಟ್ಟು । ಕಂಜದಳಾಕ್ಷಗೆ ಧಾರುಣಿಜಾತೆಗೆ । ರಂಜಿಯಾರತಿಯ ಬೆಳಗೀರೆ ॥ ಶೋಭಾನೆ ॥ ೨ ॥ ಧಾರುಣಿಯೊಳಗತಿ ಚದುರೆಯರೂ । ನೀರೇರು ಹದಳ ನಯನೆಯರೂ । ಮೂರು ಜಗದೊಳುದ್ಧಾರರಾಗೆನುತಾ। ಸಾರಸಾಕ್ಷಿಯರು ಬಂದು ಹರಸುತಾ । ಭೂರಿತರದ ಸ್ನೇಹದಿ ಕುಶಲವರಿಗೆ । ಮೇರು ವೆಯಾರತಿಯ ಬೆಳಗೀರೆ ॥ ಶೋಭಾನೆ ॥ ೩ ॥

## ವಾರ್ಧಿಕ

ಇಂತಾರತಿಯನೆತ್ತಿದ ಬಲಿಯರನುಪಚರಿಸಿ । ಸಂತಸದಿ ಪತ್ನಿಯೊಡ ಗೂಡಿ ರಘುವರ ಸಪ್ತ । ತಂತುಮಂ ಮುನಿಗಳಭಿಮತದಿಂದ ಸಾಂಗ ಪೂರಯಿಸಿ ಯಾಚಕಜನಕ್ಕೆ ॥ ಚಿಂತಿತಾರ್ಥವನಿತ್ತು ಭೋಜನಾದಿಗಳಿಂದ । ಸಂತುಷ್ಟರೆನಿಸುತಖಿಳರ ಕಳುಹಿನಿಜನಗರಿ । ಗಂ ತಳರ್ದಮಿತ ವೈಭವದಿ ಸತಿಸುತರೊಡನೆ ಧರೆಯ ಪಾಲಿಸುತಿರ್ದನು ॥

ಕೇಳಿದೆಯ ಜನಮೇಜಯಾಖ್ಯ ರಾಘವನೊಡನೆ । ಕಾಳಗದಿ ಕುಶ ಲವರು ಸೆಣಸಿದಂದದಿ ಧುರಕೆ । ಮೇಳವಿಸಿ ಕಲಿಬಭ್ರುವಾಹನಂ ವಿಕ್ರಮದಿ ಪಾರ್ಥನಿಂಗಿದಿರಾದನು ॥ ಹೇಳುವೆನು ಮುಂದಾದ ಕಥನಮಂ ವಿಸ್ತರಿಸಿ । ನಾಳೆ ನಿನಗೆಂದು ಮುನಿಯೊರೆದೀ ಪ್ರಸಂಗವನು । ಹೇಳಿ ಕೇಳ್ವರ ಕಣ್ವ ಪುರದೊಡೆಯ ಗೋಪಾಲಕೃಷ್ಣ ರಕ್ಷಿಸುವ ಬಿತವೆ ॥ ೨ ॥

# ಕೃಷ್ಣ ಚರಿತೆ

## ಪಾತ್ರಗಳು

ಬ್ರಹ್ಮ
ಮಹಾವಿಷ್ಣು
ದೇವತೆಗಳು
ಕಂಸಾಸುರ
ವಸುದೇವ
ನಾರದ ಮುನಿ
ನಂದಗೋಪ
ಬಾಲಕೃಷ್ಣ
ದೂತರು

ಭೂದೇವಿ
ದೇವಕಿ
ಯಶೋದೆ
ಪೂತನಿ
ಮಾಯಾಪೂತನಿ
ಕೊರವಂಜಿ
ಗೋಪಸ್ತ್ರೀಯರು

---

# ಕೃಷ್ಣ ಚರಿತೆ

### ಶಾರ್ದೂಲವಿಕ್ರೀಡಿತ ವೃತ್ತ

ಶ್ರೀಗೋಪಾಲ ಮುಕುಂದ ಭಕ್ತವರದಂ ಶಾಂತಂ ಯಶೋದಾರ್ಭಕಂ ।
ನಾಗಾರಾತಿಸುವಾಹನಂ ಗಿರಿಧರಂ ಕ್ಷೀರಾಬ್ಧಿಜಾತಾಧವಂ ॥
ವಾಗೀಶಾದಿ ಸುಪರ್ವಸನ್ನುತ ಮಹಾ ಗೋಪಾಂಗನಾವೇಷ್ಟಿತಂ ।
ಯೋಗೀಂದ್ರಾರ್ಚಿತ ಪಾದಪದ್ಮಯುಗಳಂ ವಂದೇ ಸರೋಜಾಂಬಕಂ॥

### ನಾಟಿ ರಾಗ - ಝಂಪೆತಾಳ

ಜಯ ಗೋಪಿಕಾನಂದ । ಜಯ ಗೋಪಜನವೃಂದ । ಜಯ ಸಚ್ಚಿದಾನಂದ । ಜಯತು ಗೋವಿಂದ ॥ ಜಯ ॥ ಪಲ್ಲ ॥ ನಂದಗೋಪಕುಮಾರ । ನವನೀತ ವರಚೋರ । ಸಿಂಧುಕನ್ಯಾ ರಮಣ । ಸರಸಿರುಹ ಚರಣ ॥ ಇಂದ್ರಾದಿಸುರ ನಮಿತ । ಸ್ಥಾಣುಸಖ ಶುಭಚರಿತ । ಸುಂದರಾತ್ಮಕ ವರ್ಣ । ಸಕಲಗುಣ ಪೂರ್ಣ ॥ ಜಯ ॥ ೧ ॥ ಕಂಸದೈತ್ಯವಿನಾಶ । ಕಮಲನೇತ್ರ ವಿಲಾಸ । ಹಂಸವಾಹನ ತಾತ । ಲೋಕ ವಿಖ್ಯಾತ॥ ವಂಶ ಶರನಿಧಿ ಸೋಮ। ಶರಣು ಮುನಿಜನ ಪ್ರೇಮ । ಹಂಸಡಿಬಿಕರ ಪ್ರಾಣ । ಕಳೆದ ನೆರೆ ಜಾಣ ॥ ಜಯ ॥ ೨ ॥ ಪುಣ್ಯನಾಮ ವಿಧೇಯ । ಪರಮ ಮಂಗಳ ಕಾಯ । ಅರ್ಣವ ಸುಗಂಭೀರ । ನತ ಜನೋದ್ಧಾರ ॥ ಪೂರ್ಣಚಂದ್ರ ಸುವದನ । ಕ್ಷೀರ ವಾರುಧಿ ಶಯನ । ಕಣ್ವಪುರ ಸ್ಥಿರವಾಸ । ಕೃಷ್ಣಜಗದೀಶ ॥ ಜಯ ॥ ೩ ॥

### ವಾರ್ಧಿಕ ಷಟ್ಪದಿ

ಗುರುಗಣಪ ಗೌರಿಶಂಕರ ಶಾರದಾಂಬಿಕೆಯ । ಚರಣಕಮಲಕೆ ನಮಿಸಿ ಸರಸಿಜಾಸನನೆರಗಿ । ತರಣಿ ಶಶಿ ಮುಂತಾದ ಸಕಲಸುರ ದೇವರ್ಕಳಿಗೆ ಕರವ ಮುಗಿದು ಬಳಿಕ ॥ ಪರಮವೈಷ್ಣವ ಶುಕಾಚಾರ್ಯ ಮುನಿವದನಸರ । ಸಿರುಪದಿಂದೊಗೆದ ಶ್ರೀಕೃಷ್ಣಚರಿತವನು ನಾ । ವಿರಚಿಸುವೆ ಕನ್ನಡದ ಯಕ್ಷಗಾನದಲಿ ಒವಕರುಣಿಸಿದ ಬುದ್ಧಿಯಿಂದ ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ಶ್ರೀ ಮಹೋನ್ನತ ಭಾಗವತವ। ನ್ನಾ ಮಹಾಯೋಗೀಂದ್ರ ಶುಕನತಿ । ಪ್ರೇಮದಿಂ ಪೇಳ್ದನು ಪರೀಕ್ಷಿತ । ಭೂಮಿಪತಿಗೆ ॥ ೧ ॥ ಆ ಪುರಾಣ ಕಥಾ ಸಮುದ್ರದಿ । ಗೋಪಿಜನ ಲೀಲಾ ಚರಿತ್ರವ । ನಾ ಪೊಗಳಿ ವರ್ಣಿಸುವೆನತಿ ಸಂ । ಕ್ಷೇಪದಿಂದ ॥ ೨ ॥ ಜಾಲಮಾತುಗಳಲ್ಲ ಮಾನವ । ರಾಳಿದಂತ ಚರಿತ್ರ ವಲ್ಲಿದು । ಪೇಳಿ ಪೊಗಳಲು ಮುಕುತಿ ರಾಜ್ಯವ । ನಾಳಬಹುದು ॥ ೩ ॥

ದ್ವಿಪದಿ

ಆ ಪರೀಕ್ಷಿತ ರಾಯ ಬೆಸಗೊಂಡನೊಲಿದು। ತಾಪಸೇಂದ್ರನೊಳೊಂದು ದಿವಸ ಕೈಮುಗಿದು ॥ ೧ ॥ ಜಗದಪತಿ ದೇವಕಿಗೆ ಜನಿಸಿ ರಾಕ್ಷಸರ । ಪಗೆಯಿಂದ ಕರಿದು ಸಲಹಿದನೆಂತು ಸುರರಾ ॥ ೨ ॥ ಬಲರಾಮ ಸಹಿತೊಡನೆ ಬಳೆದು ಗೋಕುಲದಾ । ಲಲನೆಯರ ಮೋಹಿಸುತಲೆಂತು ಸೋಲಿಸಿದ ॥ ೩ ॥ ಎನಗೆ ಕರುಣಿಪುದೆಂದು ಎರಡಿಲ್ಲದಂದು । ಮುನಿಯ ಪಾದಕೆ ನಮಿಸಲಾ ದಯಾಸಿಂಧು ॥ ೪ ॥ ಕೇಳಿದನು ಭೂಪತಿಯ ಕಡು ದೈನ್ಯ ನುಡಿಯ । ಪೇಳಿದನು ಭಾಗವತ ಪೌರಾಣ ಕಥೆಯ ॥ ೫ ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ಭೂಪ ಕೇಳೈ ಮೊದಲು ಸಂದ । ದ್ವಾಪರಾಯುಗದೊಳಗೆ ರಾಕ್ಷಸ । ಭೂಪರಿದ್ದರು ಭೂಮಿಗಧಿಕ ಪ್ರ । ತಾಪದಿಂದ ॥ ೧ ॥ ದಾನವರು ದಿನದಿನದೊಳೆಸಗುವ । ಹೀನ ಕರ್ಮವ ತಡೆಯಲಾರದೆ । ತಾನೆ ಭುವಿ ಯೋಚಿಸಿದಳದು ಸಿ । ಧಾನದಿಂದ ॥ ೨ ॥ ಧರಣಿ ತಾ ಬಡ ಗೋವು ರೂಪವ । ಧರಿಸಿ ಬಂದಳು ಸತ್ಯಲೋಕಕೆ । ಸರಸಿಜೋದ್ಭವಗೆರಗಿ ಪೇಳ್ದಳು । ಮರುಕದಿಂದ ॥ ೩ ॥

ಕಾಂಭೋಜ ರಾಗ - ಅಷ್ಟತಾಳ

ಕರುಣಿಸು ಕಮಲ ಸಂಜಾತ। ಅವ।ಧರಿಸಿ ಲಾಲಿಪುದೊಂದು ಮಾತಾ ॥ ದುರುಳ ದಾನವರು ಮಾಡುವ ದುಶ್ಚರಿತ್ರವ । ನೊರವೆನೆಂದರೆ ಯೆದೆ ತರೆಪರಗೊಳುತಿದೆ ॥ ೧ ॥ ಸುಜನರ ತಿರುಗಾಡಗೊಡರು । ದೈತ್ಯ ।

ಕುಜನರೆಸಗುವಂತ ತೊಡರು ॥ ಯಜನ ಕರ್ಮಗಳೆಲ್ಲ ವನದ ಪಾಲಾಯಿತು । ನಿಜವೇದ ಮತಗಳು ತ್ಯಜವ್ಯಾತು ಧರೆಯೊಳು ॥ ೨ ॥ ಧರ್ಮ ನಾಶನ ವಾಯಿತಯ್ಯ । ಅ । ಧರ್ಮ ವೆಗ್ಗಳವಾಗಿ ಮಹಿಯ ॥ ನಿರ್ಮಲಾತ್ಮಕ ನಿರಂಜನನ ಪೂಜಿಸದ ದು । ಷ್ಕರ್ಮಿಗಳನು ಪೊತ್ತು ದಣಿದೆನು ಬೇಸತ್ತು ॥ ೩ ॥ ತಂದೆ ಮಕ್ಕಳ ನಂಬಲಾರ । ಬಂಧು । ಬಾಂಧವರಲಿ ಬದ್ಧ ವೈರ॥ ಒಂದ ಕೊಟ್ಟೊಂಭತ್ತ ಕೊಂಬರ ನ್ಯಾಯದಿ । ಬಂದಿಕಾರರ ಕಾಟ ದಿಸೂತ್ಯ ಕೊಂದಾಟ ॥ ೪ ॥

ವಾರ್ಧಿಕ

ಧರಣಿಯಿಂತೆಂದಜನ ಚರಣದೊಳ್ ಮಣಿದಿರಲು । ಕರುಣದಿಂದಾ ಧರೆಯ ಶಿರವನುಂ ನೆಗಪಿ ನೀ । ಮರುಗದಿರು ನೋಳ್ಪೆನೆಂದರವಿಂದಭವನ ಭವ ಸುರಪ ಮುಖ್ಯಾಮರರನು ॥ ಕರದೆಂದನೊಡನೆ ಹರಿವುದಲ್ಲಿದು ಜಗ॥ ದ್ಭರಿತನಹ ವಿಷ್ಣುವಿಂಗರುಹಲೇಳಿರೆನುತ್ತ । ಸುರರನೊಡಗೊಂಡತುಳ ಹರುಷದಿಂದೈದಿದಂ ಭರದೊಳಿಂಗಡಲ ತಡಿಗೆ ॥

ಕಂದ ಪದ್ಯ

ಆ ಪಾಲಾಂಬುಧಿಯಿಂ ಕಂ । ಡಾ ಪರಮೇಷ್ಠಿ ಮೊದಲಾದ ನಿರ್ಜರ ವ್ರಾತಂ ॥ ಶ್ರೀಪತಿಯಂ ಪೊಗಳುತ್ತಿರ । ಲೀ ಪರಿ ಬಿನ್ನಪವ ಗೈದ ಭಾರತಿನಾಥಂ ॥

ತ್ರಿಪದಿ ನೀಲಾಂಬರಿ ರಾಗ - ಝಂಪೆತಾಳ

ಜಯ ಸದಾನಂದ ಭಗವಂತ । ಕಮಲಾಕ್ಷ । ಜಯಲೋಕನಾಥ ಜಯ ಜಯ ರಮಾಕಾಂತ॥ಜಯ ॥ ಪಲ್ಲ ॥ ದನುಜ ಶಿಶುಪಾಲ ಮದಕಂಸಾ। ರಾಕ್ಷಸರ । ಪೆಸರು ಘನವ್ಯಾತು ಖಳವಂಶಾ । ಅನ್ಯಾಯ । ವೆಸಗುವರು ಮಿತಿಯಿಲ್ಲ ತಿಂದು ಮಧುಮಾಂಸ ॥ ಜಯ ॥ ೧ ॥ ಸಜ್ಜನರಿಗೆತೆಯಿಲ್ಲ ವೈಯ್ಯ । ಲೋಕದೊಳು । ದುರ್ಜನರು ಬಲು ಹೆಚ್ಚಿತಯ್ಯ । ದಾನವರ । ಘರ್ಜನೆಯ ನಿಲಿಸಿ ನಮ್ಮುವನು ಸಲಹಯ್ಯ॥ ಜಯ॥ ೨ ॥ ಭೂತನ್ನೆ ಮೊರೆ ಯಿಡುವಳೆನಗೆ । ಬಿನ್ನಪವ । ನಾ ಕಾಲದೊಳು ಗೈವೆ ನಿನಗೇ । ಜಗದುಪತಿ। ನೀ ಕರುಣದಿಂದ ನೀಡಭಯ ಧಾರುಣಿಗೆ ॥ ಜಯ ॥ ೩ ॥

ವಾರ್ಧಿಕ

ಇಂತೆಂದು ಸುರರೆಲ್ಲ ಬಿನ್ನವಿಸುತಿರಲಾಗ । ಕಂತುಪಿತ ಮನದಿ ಗೋಚರಿಸುತಾಕ್ಷಣದೊಳಗೆ । ಸಂತಸವ ತಾಳಿಯಭಯವ ನಿತ್ತನಾಗಲಾ ನುತಶಯನನು ಕರುಣದಿ ॥ ಚಿಂತೆ ಬೇಡಿನ್ನು ಗೋಕುಲದೊಳಗೆ ಪಶುವ ಕಾ । ವಂತ ಚನ್ನಿಗರಾಗಿ ನೀವೆನುತ ಗಗನ ನುಡಿ । ಯಂತೆ ಕೇಳಿಸಿತದರ ನಾಲಿಸುತಲಜನು ಭೂಕಾಂತೆಯೊಡನಿಂತೆಂದನು ॥

ನಾದನಾಮಕ್ರಿಯೆ ರಾಗ - ಏಕತಾಳ

ಕೇಳಿದೆಯ ಭೂದೇವಿ । ಇನ್ನೇನೇ । ಸತ್ಯ । ಕಾಲವು ಬಂದೊದಗಿದಾ ಮೇ । ಲಿನ್ನೇನೇ ॥ ೧ ॥ ನೀಗಿತಮ್ಮ ನಿನ್ನ ಬಾಧೆ । ಇನ್ನೇನೇ । ಲಯ । ವಾಗುವರು ದನುಜರು ಮುಂ । ದಿನ್ನೇನೇ ॥ ೨ ॥ ಪೋಗು ನೀ ಸದನಕ್ಕೆ । ಇನ್ನೇನೇ । ಧೈರ್ಯ । ವಾಗು ಸುಖದಿಂದ ಬಾಳು । ಇನ್ನೇನೆ ॥ ೩ ॥

ಕಂದ ಪದ್ಯ

ವಾರಿಜಭವನೀ ಪರಿಯಿಂ । ಧಾರುಣಿಯನು ಸಂತವಿಟ್ಟು ನಿಜ ಮಂದಿರಕಂ ॥ ಭೋರನೆ ನಡೆತಂದಸುರರ । ವೈರಿಯ ನೆನೆವುತ್ತಲಿದ್ದನತಿ ಭಕ್ತಿಯೊಳಂ ॥ ೧ ॥

ಭಾಮಿನಿ

ಧರಣಿಪತಿ ಕೇಳಿತ್ತ ಮಧುರಾ । ಪುರದೊಳಗೆ ನೃಪನುಗ್ರಸೇನನ । ತರಳ ಕಂಸನೆನಿಪ್ಪ ದುಷ್ಟನುದಾರ ಗರ್ವದಲಿ । ದುರುಳರಿಗೆ ಗುರುವೆನಿಸಿ ದೈತ್ಯರ । ನೆರವಿಯಲಿ ಧರೆಗರಸನಾಗುತ । ಮೆರವುತಿರ್ದನು ಭುಜಬ ಲೋನ್ನತ ಮದದ ಮೋಡಿಯಲಿ ॥ ೧ ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ಈ ತೆರದೊಳಿಹ ಕಂಸನೆನಿಪನ । ತಾತನಗ್ರಜ ದೇವಕನ ಸಂ । ಜಾತೆ ದೇವಕಿಯೆಂಬವಳು ರೂ । ಪಾತಿಶಯದಿ ॥ ೧ ॥ ಮೆರವುತಿರ್ದಳು ವರಾತೆ ವಿತರಿಗೆ । ಹರುಷವನು ಬೀರುತ್ತ ಸದ್ಗುಣ । ಭರಿತೆಯಾಗಿ ಸುಶೀಲದಲಿ ಹೊಸ । ಹರೆಯದಿಂದ ॥ ೨ ॥ ವರನ ನರಸುತ್ತಿರಲು ತತ್ಪುರ ವರನು

ಶೂರನೃಪಾಲನಣುಗನು । ಸ್ಮರನ ಲಾವಣ್ಯವತಿ ಸದ್ಗುಣ। ಭರಿತನಾಗಿ ॥ ೩ ॥ ಇರಲು ವಸುದೇವಾಭಿಧಾನವ । ನರಿತು ಸಾರಸಗಮನೆಗೀತನೆ । ಪರಿಸೆನುತ ನಿಶ್ಚಸಿ ಖಳಗೆ । ಚ್ಚರಿಸೆ ಮುದದಿ ॥ ೪ ॥ ನೋಡಿ ಕಂಸನು ಪಿತನನುಜ್ಞೆಯ ಬೇಡಿ ತಂಗಿಗೆ ಪರಿಣಯುವ ತಾ । ಮಾಡಬೇಕೆಂದೆನುತ ಸಂತಸ । ಗೂಡಿ ಭರದಿ ॥ ೫ ॥

### ಶಂಕರಾಭರಣ ರಾಗ - ಏಕತಾಳ

ಸತ್ಯವಂತ ವಸುದೇವ ನೃ । ಪೋತ್ತಮಂಗೆ ಮದುವೆಯಾಗೆ । ಪೃಥ್ವಿ ಪಾಲರೆಲ್ಲ ಬಂದ । ರುತ್ಸಾಹಕೆಂದು ॥ ೧ ॥ ರಂಗ ಮಂಟಪದಿ ಕೋಮ । ಲಾಂಗಿ ದೇವಕಿ ವಸುದೇವ । ಗಂಗನೆಯ ರೆತ್ತಿದರು। ಮಂಗಳಾರತಿಯ ॥ ೨ ॥ ಪೊಂಗಲಶಕುಚದ ಮೋಹ । ನಾಂಗಿಯರೆಲ್ಲರು ಶೋಭಾ । ನಂಗಳ ಪಾಡಿದ ರಾಗ । ಶೃಂಗಾರದಿಂದ ॥ ೩ ॥

### ಕೇದಾರಗೌಳ ರಾಗ - ಅಷ್ಟತಾಳ

ದಾರೆ ಚತುರ್ಥಿನಾಗೋಲೆಯ ಕಳೆದುಪ । ಚಾರ ಮನ್ನಣೆಗಳಿಂದ ॥ ಬೇರೆ ಬೇರರಸುಗಳಿಗೆ ಕೊಟ್ಟನುಚಿತವ ॥ ಭೂರಿ ಸಂತೋಷದಿಂದ ॥ ೧ ॥ ಚಾರುಚರಿತೆ ತನ್ನ ಮಗಳಿಗೆಂದೆನುತಾಗ । ನೂರು ತುರಗ ಕೊಟ್ಟನು ॥ ಮೀರಿದ ಮದವೆತ್ತಾನೆಗಳ ಶೃಂಗರಿಸಿ ನಾ । ನೂರೆಣಿಕೆಯೊಳಿತ್ತನು ॥ ೨ ॥ ಸಾರಥಿ ಸಹಿತ ಸಂದಣಿಸಿದ ತೇರ್ಗಳ । ತೋರಿದನತಿ ಬೆಲೆಯ ॥ ಹೇರಳ ಪಟ್ಟೆ ಪೀತಾಂಬರವಿತ್ತ ಕು । ಮಾರಿಗೆ ಬಳುವಳಿಯ ॥ ೩ ॥ ಪಾವಕನಂತೆ ಪ್ರಜ್ವಲಿಪ ರತ್ನಗಳ ರಾ । ಜೀವಾಕ್ಷಿಗಿತ್ತನೆಲ್ಲ ॥ ಸೇವೆಯ ಮಾಳ್ಪ ದಾಸಿಯರ ಕೊಟ್ಟುದಕಿನ್ನು । ದೇವ ಶಂಕರನೆ ಬಲ್ಲ ॥ ೪ ॥ ಎಲ್ಲಿ ನೋಡಿದರು ದಂಡಿಗೆ ಯಾನೆ ಕುದುರೆಯ । ಚೆಲ್ಲಾಟ ಘನವಾಯಿತು ॥ ಅಲ್ಲಲ್ಲಿ ಪಿಡಿದ ಚಾಮರ ಛತ್ರ ಬಿರುದಿನ। ಘಲ್ಲಣೆ ಮಿತಿಮೀರಿತು ॥ ೫ ॥ ವಲ್ಲಭೆ ಸಹಿತಾಗ ವಸುದೇವ ಮಣಿರಥ । ದಲ್ಲಿ ಕುಳ್ಳಿರ್ದು ಬಂದು ॥ ಉಲ್ಲಾಸದೊಳು ತೇರ ನಡೆಸುತ್ತ ಬರುತಿರ್ದ । ಬಲ್ಲಿದ ಕಂಸನಂದು ॥ ೬ ॥

### ಮಾರವಿ ರಾಗ - ತ್ರಿವುಡೆತಾಳ

ವಸುಧೆ ಪಾಲಕನೆ ಕೇಳಾ । ವೇಳ್ಯದೊಳೊಂದು । ವಿಷಮ ಸಂಭವಿಸಿ ದುದ ॥ ವಸುದೇವ ದೇವಕಿಯರ ಕಳುಹಿಸಲು ಬಂ । ದಸುರ ಕಂಸಾಖ್ಯ ಗಾಗಸದೊಳಗೆಸೆದುದ ॥ ವಸುಧೆ ॥

ಭಾಮಿನಿ

ಕೇಳೆಲವೊ ಖಳ ಕಂಸ ತಂಗಿಯ । ಮೇಲೆ ಮೋಹವ ಮಾಳ್ಪೆ ನಿನಗೀ । ಕೋಲಲೋಚನೆಯುದರದೊಳಗೆಂಟನೆಯ ಗರ್ಭದಲಿ ॥ ಶ್ರೀಲಲಾಮನು ಜನಿಸಿ ಬಲು ದೈ । ತ್ಯಾಳಿಯನು ಸಂಹರಿಸಿ ನಿನ್ನನು । ಸೀಳುವನು ಪುಸಿ ಯಲ್ಲೆನುತ್ತಡಗಿತು ನಭೋವಚನ ॥

ಭೈರವಿ ರಾಗ - ಏಕತಾಳ

ಖಳನತಿ ಕೋಪವ ತಾಳ್ದು । ಕಂ । ಗಳೊಳಿಂಗಳವನುಗುಳ್ದು ॥ ಜಳಪಿಸಿ ಖಡ್ಗವನುಗಿದೂ । ಖತಿ । ಯೊಳು ತಾನಧರವನಗಿದು ॥ ೧ ॥ ಘಡ ತಂಗಿಯೆ ತನಗಿವಳೂ । ಎ । ನ್ನೊಡಲಿಗೆ ವಿಷವಾದವಳೂ ॥ ನುಡಿದರೆ ಫಲವೇನಿನ್ನು । ತಲೆ । ಕಡಿದೀಗಲೆ ತೀರ್ಚುವೆನು ॥ ೨ ॥ ಕೆಡೆಯೆನುತಲಿ ಬಾಲಕಿಯ । ಕೊರೆ । ಳೆಡೆಗಾನಿಸೆ ಕೂರಸಿಯ ॥ ಮಿಡುಕುತಬಲೆ ಬ್ಯಾ ಬಿಡಲು । ಕಂ । ಡೊಡನೆಲ್ಲವರಳುತಿರಲು ॥ ೩ ॥

ಕಂದ ಪದ್ಯ

ಈ ವಿಧಮಂ ಕಂಡಾ ವಸು । ದೇವಂ ನಡುಗುತ್ತಲಿಳಿವ ಕಂಬನಿ ಯಿಂದಂ ॥ ಹಾ ವಿಧಿಯೆಂದತಿ ಸುಯ್ಸುತ । ಕೋವಿದನಂ ತಡೆವುತಸಿಯ ಪಿಡಿದಿಂತೆಂದಂ ॥

ನಾದನಾಮಕ್ರಿಯೆ ರಾಗ - ಏಕತಾಳ

ಲೇಸು ಕಾರ್ಯವೇನೊ ನಿನಗೆ। ಕಂಸರಾಯ। ಇವಳ। ಘಾಸಿ ಮಾಳ್ಪು ದುಚಿತವಲ್ಲ। ಕಂಸರಾಯ॥ ಹೇಸದಿಹಳೆ ಭಾಗ್ಯಲಕ್ಷ್ಮಿ। ಕಂಸರಾಯ । ಕೀರ್ತಿ। ಮಾಸುವುದು ಗ್ರಹಿಸಿ ನೋಡು । ಕಂಸರಾಯ ॥ ೧ ॥ ಮಹಿನಿಯ ಕೊಲೆಗೆ ಬಯಸಿ । ಕಂಸರಾಯ । ನಿನ್ನ । ಮಹಾನ ಕೆಡಿಸಿ ಕೊಳದಿರಯ್ಯ ಕಂಸರಾಯ ॥ ಜ್ಞಾನವಂತನಾಗಿ ನೀನು । ಕಂಸರಾಯ । ಇಂತು । ಹೀನ ಬುದ್ಧಿ ಯೋಚಿಸು ವರೆ । ಕಂಸರಾಯ ॥ ೨ ॥ ಒಡಲು ಶಾಶ್ವತವಲ್ಲ । ಕಂಸರಾಯ । ಮಳೆ । ಹೊಡದ ನೀರನೆರೆಗಳಂತೆ । ಕಂಸರಾಯ ॥ ಮಡದಿ ಮಕ್ಕಳೆಂಬ ಭಾಗ್ಯ । ಕಂಸರಾಯ । ಪ್ರಾಣ । ಬಿಡುವ ವೇಳ್ಯೆ ಕೊದಗದಯ್ಯ । ಕಂಸರಾಯ ॥ ೩ ॥

ಕಂಡು ಕಂಡು ತಿಳಿದು ತಿಳಿದು । ಕಂಸರಾಯ । ಯಮನ । ದಂಡನೆಗೆ ಸಿಲುಕದಿರಯ್ಯ । ಕಂಸರಾಯ ॥ ಬಂಡಾಟಗಳುಚಿತವಲ್ಲ । ಕಂಸರಾಯ । ನರಕ । ಕುಂಡದೊಳಗೆ ಬೀಳದಿರಯ್ಯ । ಕಂಸರಾಯ ॥ ೪ ॥

### ಮಾರವಿ ರಾಗ - ಏಕತಾಳ

ಎನಲಾ ಕಂಸನು ಕನಲುತಲೆಂದನು । ನಿನಗೀ ಧರ್ಮವನು । ವಿನಯದಿ ಕಲಿಸಿದನ್ಯಾರವ ನಾರಿಂ । ಗೆನುತಿಹೆ ನೀನಿದನು ॥ ೧ ॥ ಮರೆಯದೆ ಪಾಲಿಸು ವರಿಗುಸುರುವ ದೀ । ಪರಮ ರಹಸ್ಯಗಳ ॥ ಒರೆಯದಿರ್ದೆ ಸಾಕರಿತಿಹೆ ನಾನೀ। ಪರಿಯ ಪ್ರಯತ್ನಗಳ ॥ ೨ ॥ ಆರು ಕೊಲುವರಾರಿಂದಾರಳಿವರು । ಬೇರು ಬಲ್ಲರಿಗೆಲೆಯ ॥ ತೋರುವುದುಚಿತವೆ ಸಾರುತ್ತಲು ನಾ । ತೀರಿಸುವೆನು ಸತಿಯ ॥ ೩ ॥

### ನೀಲಾಂಬರಿ ರಾಗ - ರೂಪಕತಾಳ

ಕೊಂದವರಿಗೆ ಕೊಲೆ ತಪ್ಪದು । ಕಡೆಗೀ ಭಯ ನಿನಗಪ್ಪುದು । ನೊಂದರೆ ಪ್ರಾಣದ ಹಗೆಯೆಂ । ದೆಂದಿಗು ಬಿಡದಯ್ಯ ॥ ಪಲ್ಲ ॥ ಹುಟ್ಟಿದ ಕೊಡಲೆ ಮರಣವ । ಕಟ್ಟಿರಿಸಿದ ವಿಧಿ ಘಣೆಯಲಿ । ಕೆಟ್ಟಿಲ್ಲವೆ ಲೋಕದಿ ಮನ । ಪುಟ್ಟದು ಮನುಜರಿಗೆ ॥ ಸಿಟ್ಟೇಕೀಪರಿ ನಿನ್ನೊಡ । ಹುಟ್ಟಿದ ಸೋದರಿಯಲ್ಲವೆ । ನಿಷ್ಠುರವ ಬಿಡು ಪಾತಕ । ತಟ್ಟದಿರದು ನಿನಗೆ ॥ ೧ ॥ ಮುಳ್ಳೊನೆ ಕಾಲಿಗೆ ನೆಟ್ಟರೆ । ಮುಳ್ಳೊನೆ ಚುಚ್ಚುವದೇತಕೆ । ಸುಳ್ಳನಸಿನ ಭ್ರಮೆಯಿಂದಲಿ । ಕಳ್ಳನ ಮಾಡದಿರು ॥ ತಾಳ್ಮೆಮತೆಯ ನೆನ್ನೀ ಸತಿ । ಯೊಳ್ಮಾಡದಿರ ಕೃತ್ಯವ । ಜನ್ಮಾಂತ್ರಕು ಬಿಡದವಗುಣ । ಪಾಳ್ಮಾಡಿಸದಿರದು ॥ ೨ ॥ ಮತ್ತೊಂದನು ಕೇಳೀ ಸತಿ । ಪೆತ್ತಂದಿಗೆ ತನಗುದಿಸಿದ । ಪುತ್ರಂದ್ಯ ರನೆಲ್ಲರ ತಂ । ದಿತ್ತಂದಿಗೆ ನಿನ್ನ ॥ ಚಿತ್ತದ ಭಯ ನೀಗಿಸುವೆನು । ಸತ್ಯದ ಮಾತಿದು ನೀ ಕೇ । ಳುತ್ತಮ ಮಾಂಗಲ್ಯದೊಳವ । ಕೃತ್ಯವ ಮಾಡದಿರು ॥ ೩ ॥

### ತೋಡಿ ರಾಗ - ಅಷ್ಟತಾಳ

ನಿಜವಲ್ಲ । ಮಾತು । ನಿಜವಲ್ಲ ॥ ಪಲ್ಲ ॥ ನಿಜವಲ್ಲವೀ ಮಾತು ನಿನ್ನಂತರಂಗ । ಕುಜನರ ಕೂಟಾದುವಂಥ ಪ್ರಸಂಗ ॥ ನಿಜವಲ್ಲ ॥ ಅನುಪಲ್ಲ॥

ಬೀಸಿದ ಕೈ ತಪ್ಪಿ ನಡೆದರೆ ಮುಂದೆ । ಸಾಸಿರ ಕಾಲವೆಂಬರು ಗಾದೆ ಹಿಂದೆ ॥ ನೀ ಶಿಶುಗಳ ತಂದು ಕೊಡುವ ಮಾತುಂಟೆ । ಲೇಸೆಂದು ನಂಬಿ ಬಿಟ್ಟರೆ ಟೆಂಟೆಮಂಟೆ ॥ ನಿಜವಲ್ಲ ॥ ೧ ॥ ಬೆಟ್ಟದ ಮೊಸಳೆಯ ಜಲದೊಳು ತಂದು । ಬಿಟ್ಟರುಪಕಾರವೆಂದರಿವುದೆ ಮುಂದು ॥ ದುಷ್ಟರಿಗುಂಟೆ ದಾಕ್ಷಿಣ್ಯವೆಂದೆಂದು। ಭ್ರಷ್ಟಕಾರ್ಯದ ಮಾತಾಡುವರೆ ನೀನಿಂದು ॥ ನಿಜವಲ್ಲ ॥ ೨ ॥

**ಭಾಮಿನಿ**

ನಂಬು ನಿಶ್ಚಯವಿನ್ನು ಹಲವನು । ಹಂಬಲಿಸಬೇಡೆಂದು ಕಂಸಗೆ । ನಂಬುಗೆಯ ನೀಡಿದರೆ ಬಿಟ್ಟನು ಸತಿಯ ಮುಂದಲೆಯ ॥ ತೂಂಬನುಗಿ ದಂತಿರುವ ಕಂಗಳ । ಕಂಬನಿಯೊಳಾ ಖಳನ ಬೀಳ್ಕೊ । ಟ್ಟಂಬುಜಾನನೆ ಸಹಿತಲಾ ವಸುದೇವ ನಡೆತಂದ ॥

**ಭೈರವಿ ರಾಗ - ಝಂಪೆತಾಳ**

ಇತ್ತಲರಮನೆಗೆ ನಡೆ । ತಂದು ಕಾಲಾಂತರಕೆ । ಪುತ್ರನನು ಪಡೆದಳಾ । ಮತ್ತಗಜಗಮನೆ ॥ ೧ ॥ ಉತ್ತಮ ಗುಣಾಢ್ಯನಹ । ವಸುದೇವ ನೃಪತಿ ತಂ । ದಿತ್ತನಿದಕೋ ಸತಿಯು । ಪೆತ್ತಳೆಂದೆನುತ ॥ ೨ ॥ ಕಂಡನಾ ಖಳತಿಲಕ । ಗಂಡುಗಲಿತನದಿರವ । ಕೊಂಡು ಪೋಗೀ ಶಿಶುವ । ದಂಡಿಸಲದ್ಯಾಕೆ ॥ ೩ ॥ ಏಳು ಪರಿಯಂತರವು । ಯೆನಗೆ ಗೋಚರವಿಲ್ಲ । ಮೇಲೆ ನಿನಗುದಿಸಿದರೆ । ಬಾಲಕರನೆನಗೆ ॥ ೪ ॥ ತಂದುಕೊಡು ಸಾಕೆನ್ನ । ಕುಂದ ನೆಣಿಸದೆ ನಿನ್ನ । ಕಂದರನು ಸಲಹಿಕೋ ತಂಗಿಯಿರುವನಕ ॥ ೫ ॥

**ಭಾಮಿನಿ**

ಎಲೆ ಪರೀಕ್ಷಿತರಾಯ ಕೇಳಾ । ಲಲನೆ ಕೆಲವು ದಿನಕ್ಕೆ ದಂಡಕೆ । ಘಳಿಸಿದರ್ಥದ ತೆರದಿ ಪಡೆದಳು ಕುವರರೈವರನು ॥ ಸಲಹಿಕೊಂಡಿರಲಿತ್ತ ನಾರದ । ನಿಳಿದನಂಬರದಿಂದ ಕಂಸನ । ನಿಲಯ ಕಮಲಪ್ರಭೆಯ ಚಂದ್ರಮನಂತೆ ಥಳಥಳಿಸಿ ॥

**ಕಂದ ಪದ್ಯ**

ಸುರಮುನಿಯಂ ದೂರದೊಳಂ । ಪರಿಕಿಸುತಿದಿರೆದ್ದು ನಮಿಸುತಾ ಋಷಿಯಡಿಗಂ ॥ ಕರವಿಡಿದಾಸನದೊಳ್ಕು । ಳ್ಳಿರಿಸುತ ತತ್ಪದವನರ್ಚಿಸಿದನಾ ಕಂಸಂ ॥

### ಸಾಂಗತ್ಯ ರಾಗ - ರೂಪಕತಾಳ

ಮರುಳಾದೆಯೇನಯ್ಯ ನೀ ಮಾಡಿದುದು ಸರಿ । ಬರಲಿಲ್ಲೆನಗೆ ಕಂಸ ರಾಯ ॥ ಒರೆಯಲಿನ್ನಾ್ಯತಕೆ ವಸುದೇವನಣುಗರ । ಮರಳಿ ನೀ ಕೊಟ್ಟುದ ನ್ಯಾಯ ॥ ೧ ॥ ಒಂದೆರಡೆಂಟೇಳು ಲೆಕ್ಕವ ಗಣಿಸಲು । ಹಿಂದು ಮುಂದಕೆ ಸಮನಹುದು ॥ ಇಂದಿರೆಯರಸ ಯಾವಾಗ ಪುಟ್ಟುವನೊ ಹೀ । ಗೆಂದು ನಿಶ್ಚಯವಾರಿಗಿಹುದು ॥ ೨ ॥ ಪೊಳೆಯಲ್ಲಿ ಕಿಚ್ಚ ನಂದಿಸದಿರ್ದಡದು ಮತ್ತೆ । ಬೆಳೆಯಲು ಮಣಿಯದೋರುವರ । ತಲೆಗೇರದನಕ ತಗ್ಗಿಸದಡೆ ವಿಷವದು । ನೆಲೆಗೊಳ್ಳದಲ್ಲ ಪಂಡಿತರ ॥ ೩ ॥ ಪರಿಕಿಸೆ ನೀ ಕಾಲನೇಮಿ ನಿನ್ನಲ್ಲಿ ನಿ । ರ್ಜರರಿಗೆ ವೈರ ಪೂರ್ವದೊಳು । ಅರಿತುಕೋ ಮನದಲ್ಲಿ ಯಾದವರಲ್ಲದೆ । ಪರರಿಲ್ಲ ನಿನಗೆ ಶತ್ರುಗಳು ॥ ೪ ॥ ಯಾರೆತ್ತಲಾದರೆ ನಮಗೇನು ಗೋವಿಂದ। ನಾರಾಯಣಾಚ್ಯುತಯೆಂದು ॥ ನಾರದನುತಿಸಿ ಪೋಗಲು ಕಂಸ ಗಜರಿ ಕಾ । ಕೋರಗಗೆಣೆಂಬಾದನಂದು ॥ ೫ ॥

### ಭೈರವಿ ರಾಗ - ಏಕತಾಳ

ಸುರಮುನಿಯಿಂತೆನುತತ್ತಾ । ತಾ । ತೆರಳಲು ಖಳ ಗಜರುತ್ತ ॥ ಪೊರೆಯುಬ್ಬಿದ ಭುಜಗನನು । ಪೋ । ಲ್ದುರೆ ಕೋಪವ ತಾಳಿದನು ॥ ೧ ॥ ಕರೆಸಿದ ವಸುದೇವನನು । ತಾ । ತರಿಸಿದ ತತ್ಪುತ್ರರನು ॥ ತರುಣಿ ಮರುಗ ಲಾರ್ವರನು । ಬಡಿ । ದುರುಳಿಸಿದನು ಖಳವರನು ॥ ೨ ॥ ಸೆರೆ ಸಂಕೋಲೆ ಯೊಳವರ । ತಾ । ನಿರಿಸುತುಳಿದ ಯಾದವರ ॥ ಪರಿ ಪರಿ ವಿಧದಾಜ್ಞೆ ಯಲಿ । ಖಳ । ಮರುಗಿಸಿದನು ಖಾತಿಯಲಿ ॥ ೩ ॥

### ವಾರ್ಧಿಕ

ಮದಕಂಸನಾಜ್ಞೆಯಲಿ ವಸುದೇವ ದೇವಕಿಯು । ರದೆಯುರಿತದಿಂದ ಸೆರೆಮನೆಯೊಳಳುತಿರಲಿತ್ತ । ಪದುಮ ಸಂಭವನರಿತು ಪರರಿಗುಪಕಾರವಂ ವರಾಳ್ಪುದೇ ಸತ್ಯವೆಂದು ॥ ಮುದದಿಂದ ಕೃಷ್ಣ ಜನನ ಸ್ಥಿತಿಯ ಗೋಕುಲದ। ಸುದತಿಯರ ಸೌಭಾಗ್ಯ ದುಷ್ಟಾಪಹಾರಗಳ । ಮೊದಲಾದ ಗುಣಗಳಂ ಪೇಳ್ವ ಮನದಿಂದೊಲಿದು ಲೋಕೇಶನಣಿಯಾದನು ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಅರಸ ಕೇಳಾ ಹರಿಯ ಜನನದ। ಪರಿಯ ದೇವಕಿಗೊರೆಯಲೋಸುಗ। ಸರಸಿಜೋದ್ಭವನಂದು ಮಾಯೊ । ಕೊರವಿಯಾದ ॥

### ಶಂಕರಾಭರಣ ರಾಗ - ಅಷ್ಟತಾಳ

ಬಂದಳು ಕೊರವಂಜಿ ನೀರೇ । ಮುದ । ದಿಂದ ತ್ರಿಭುವನ ವಿಚಾರೇ। ಸುಂದರಮಾಸದ ಶರೀರೇ । ಮನ । ಕುಂದದೆ ಶರಧಿ ಗಂಭೀರೇ । ರಾಕಾ । ಚುದಿರವದನೆ ಆ । ನಂದಪೂರದನೆ ಬಾ । ಲೇಂದು ಶೇಖರ ಶರ । ಣೆಂದು ಸಜ್ಜನನುತೆ ॥

### ಕಂದ ಪದ್ಯ

ಪದುಮಾನನೆಯೊಪರಿಯಿಂ । ಮುದದಿಂ ತಾ ಕಣಿಯ ಪೇಳ್ದು ತಿರುಗುತಲಿಳೆಯೊಳ್ ॥ ಮಧುಹರನಂ ಧ್ಯಾನಿಸುತಲಿ । ಮಧುರಾಪಟ್ಟಣಕೆ ಬಂದಳತ್ಯುತ್ಸಹದೊಳ್ ॥

### ನಾದನಾಮಕ್ರಿಯೆ ರಾಗ - ಅಷ್ಟತಾಳ

ಮಧುರಾ ಪಟ್ಟಣಕಾಗಿ ಬಂದಳು । ಅಲ್ಲಿ । ಸುಧೆಯ ಬಾಗಿಲ ಮುಂದೆ ನಿಂದಳು ॥ ಮುದದಿ ಕಣಿಯ ಕೇಳಿರೆಂದಳು । ಹಿಂದಾ । ದುದ ಮುಂದಹುದ ಪೇಳ್ವೆನೆಂದಳು ॥ ೧ ॥ ಈ ವಿಧಗಳ ಸುದ್ದಿ ಪೇಳುತ್ತಾ । ನಾರಿ । ದೇವಕಿ ಹರುಷವ ತಾಳುತ್ತ ॥ ಕಾವಲಂಗನೆಯರ್ಗೆ ಪೇಳುತ್ತಾ । ಕರಸಿ । ಕೋವಿದೆ ಯನ್ನು ಕಂಡೇಳುತ್ತ ॥ ೨ ॥

### ವಚನ

ಅಮ್ಮ ಕೇಳಡಿಯಮ್ಮ ಅಮ್ಮೋಯಮ್ಮ ಸಂದೋಷ ಮಾಯಾಲ್ ಪೋರ್ಂದು. ಕಣಿಯಾನ್ ಚೊಲ್ಲೇನ್ ನಾನ್, ಯೋಚನೈವೇಂಡಾವನ್ ನೀನ್ ನಿನಚ್ಚುಕಾರ್ಯ ಮೊಲ್ಲಾಂ ಕೈಗೂಡುಂ ತಿರುನಾರಾಯಣನ್ ಕೃಪೆಯಾಸೇ.

### ಪಂತುವರಾಳಿ ರಾಗ - ಏಕತಾಳ

ಯಾವ ದೇಶದಿಂದ ಬಂದೆ । ದೇವಿ ಕೊರವಂಜಿ ॥ ಯಾವಲ್ಲಿಗೆ ಪಯಣವಿಂದು ನಾರಿ । ಕೊರವಂಜಿ ॥ ೧ ॥ ಪೊಂಗಳಶ ಕುಚದ ಬಾಲೆ।

ಯಾರೆ ಕೊರವಂಜೀ ॥ ಶೃಂಗಾರದ ಸದನೆ ಸುಪ್ರ । ವೀಣೆ ಕೊರವಂಜಿ ॥ ೨ ॥ ನೋಡಿಯೆನ್ನ ಮನದ ಕೊರತೆ । ನೀಗಿದೆ ಕೊರವಂಜಿ ॥ ಪಾಡಿನಿಂದ ಪ್ರಶ್ನೆಯೊಂದ । ಪೇಳೆ ಕೊರವಂಜಿ ॥ ೩ ॥

### ಕೇದಾರಗೌಳ ರಾಗ - ಅಷ್ಟತಾಳ

ನೀ ಕೇಳು ತರುಣಿ ನಾಯಕರನ್ನೆ ನಾ ಸತ್ಯ । ಲೋಕದೊಳಿರುವೆ ಕಾಣೆ ॥ ನಾಕು ರಾಜ್ಯವನೆಲ್ಲ ತಿರುಗುತಿಲ್ಲಿಗೆ ಬಂದೆ । ನಾ ಕೊರವಂಜಿ ಜಾಣೆ ॥ ೧ ॥ ಲೋಕದ ಸಕಲ ಪ್ರಪಂಚವನರಿತು ವಿ । ವೇಕದಿ ಸತಿಯರಿಗೆ ॥ ವಾಕು ತಪ್ಪದೆ ಪೇಳಲುಂಟಮ್ಮ ಕೊಲ್ಲೂರ । ಮೂಕಾಂಬೆ ದಯವೆನಗೆ ॥ ೨ ॥ ಎಂಬ ವಚಾತನು ಕೇಳಿ ಹರಿಣಾಕ್ಷಿ ತೋಷದೊ । ಳಂಬುಜಸುಮ ತರಿಸಿ ॥ ಪೊಂಬಣ್ಣ ರಂಗವಾಲೆಯನಿಕ್ಕುತಕ್ಷತೆ । ತಾಂಬೂಲಗಳನಿರಿಸಿ ॥ ೩ ॥ ಲಿಂಬೆಯ ಹಣ್ಣನು ಕಾಣಿಕೆಗಳನಿತ್ತು । ತುಂಬಿ ಮುತ್ತಿನ ಸೇಸೆಯಾ । ಮುಂಬರಿದಿಡಲು ಮಾಡಿದಳಾಗ ಕೊರವಿ ಹೇ । ರಂಬನ ಪ್ರಾರ್ಥನೆಯ ॥ ೪ ॥

### ಕಂದ ಪದ್ಯ

ಗಣಪತಿಯಂ ಪೂಜಿಸುತಲಿ । ತ್ರಿಣಯಂಗೆರಗುತ್ತ ಮನದೊಳತಿ ಭಕ್ತಿ ಯೊಳಂ ॥ ಮಣಿದಾಕಣೆಗೂಡೆಗೆ ಮನ । ದಣಿಕೆಯ ದೇನೆನಲು ಜವದಿ ದೇವಕಿ ನುಡಿದಳ್ ॥

### ಸಾಂಗತ್ಯ ರಾಗ - ರೂಪಕತಾಳ

ನೀ ಕೇಳು ಕೊರವಿ ಎನ್ನಂಗದ ವ್ಯಥೆಯನ್ನು । ಲೋಕೇಶ ಶಿವನೊಬ್ಬ ಬಲ್ಲ । ಕಾಕಾ ಕದಂಬಪಟ್ಟುತ್ತಲಿರುವ ಮರಿ । ಕೋಕಿಲೆಯಂತಾದೆನಲ್ಲ ॥ ೧ ॥ ಶ್ವಾನನ ಬಾಲದ ತ್ರಾಣ ತಗ್ಗಿಸಲೇದು । ಕೋಣನ ಬಲಿಯ ಕೊಟ್ಟಂತೆ ॥ ಭಾನುವಾಕ್ಯವ ಕೇಳಿ ಕಳೆದನೆನ್ನುಣುಗರ । ಪ್ರಾಣವನಣ್ಣನೋ ರಂತೆ ॥ ೨ ॥ ಘೋರೆಯ ಗಂಟಿಕ್ಕಿ ಮೊದಲು ನಮ್ಮೊರ್ವರ । ಸೇರಿಸಿದನು ಸೆರಮನೆಗೆ ॥ ಘೋರ ದಾನವರ ಕಾವಲನಿಕ್ಕಿ ನಿತ್ಯ ಕ । ಣ್ಣೀರ ಕೊಳಿಸುವ ನಮಗೆ ॥ ೩ ॥ ಶೂರ ನೃಪಾಲನ ಮಗನೆತ್ತ ಸಂಕೋಲೆ । ಸೇರಿಸಿಕೋಬುದಿ ದೆತ್ತ ॥ ಧಾರೆಯ ನೀರಿಗೆ ಕೈಯೊಡ್ಡಿದಂದೀದ । ನೀರ ತಾನುಂಡ ಭಾಗ್ಯಗಳ ॥ ೪ ॥

### ಸೌರಾಷ್ಟ್ರ ರಾಗ - ಅಷ್ಟ ತಾಳ

ಕೈಯ ತೋರಿಸೆ ನಾರಿಯರ ಮೌಕ್ತಿಕವೆ ನಿನ್ನ । ಕೈಯ ತೋರೆ । ಬಲು । ವೈಯಾರದೊಳಗೊಂದು ಕುರುಹ ನಾ ಪೇಳುವೆ । ಕೈಯ ತೋರೆ ॥ ೧ ॥ ಅಕ್ಕರದಿಂದ ಬಾಂಧವರನುದ್ಧರಿಸುವ । ಕೈಯ ತೋರೆ । ಸಣ್ಣ ಮಕ್ಕಳ ಬಿಡದೆ ಮುದ್ದಿಸಿ ನೋಡಿ ಸಲಹುವ । ಕೈಯ ತೋರೆ ॥ ೨ ॥ ಧಿಕ್ಕರಿಸದೆ ದ್ವಿಜಜನಕೆ ದಾನವನೀವ । ಕೈಯ ತೋರೆ । ಚಲ್ವ । ಮುಕ್ಕಣ್ಣ ಶಿವ ಮುರಹರನ ಪೂಜೆಯ ಮಾಳ್ಪ । ಕೈಯ ತೋರೆ ॥ ೩ ॥

### ಮಧುಮಾಧವಿ ರಾಗ - ಏಕತಾಳ

ವಸುದೇವನರಸಿ ಕೇಳ್ ಮದ್ವಚನವನು । ರಸೆಯೊಳು ಕಾಣೆ ನಿನ್ನಂತ ಸ್ತ್ರೀಯರನು ॥ ಎಸಳು ರೇಖೆಯು ಸಂತಸದ ಸೌಭಾಗ್ಯವನು । ಉಸುರಲೇನಿನ್ನು ಪೇಳುವೆ ಮುಂದಹುದನು ॥ ೧ ॥ ಪೂರ್ವ ಜನ್ಮದಲಿ ನೀ ಮಾಡಿದಿ ತಪವ । ಸರ್ವಲೋಕೇಶನೊಳು ಬೇಡಿದಿ ವರವ ॥ ಸರ್ವಥಾ ಮಗನಾಗಲೆಂದ ಕಾರಣವ । ಗರ್ವ ನಿನ್ನುದರದೊಳೀಗ ಜೀವಿಸುವ ॥ ೨ ॥ ಮೊದಲೆರಡಂತ್ರ ಪುಟ್ಟಿದನು ಗೋವಿಂದ । ಇದುವೆ ಮೂರನೆಯ ಪ್ರಾರಂಭದೊಳಾದ ಕಂದ ॥ ಬೆದರಬೇಡಿನ್ನು ಕಾರ್ಯಗಳೆಲ್ಲ ಚಂದ । ಮುದದಿಂದ ನಂಬು ತಪ್ಪದೆ ಮಾತಿದೊಂದ ॥ ೩ ॥ ಶಿಶುಪಾಲ ದಂತವಕ್ತ್ರರ ಕೊಲ್ವ ಬಗೆಗೆ । ವಸುಧೆಯೊಳವತರಿಸುವನಮ್ಮ ನಿಮಗೆ ॥ ಅಸುರ ಕಂಸನ ಕಳುಹಿಸುತೆಮನೆಡೆಗೆ । ವಸುಧೆ ಪಟ್ಟವನೀವನುಗ್ರಸೇನನಿಗೆ ॥ ೪ ॥ ಪಾಂಡು ನಂದನರೊಳು ಬೆಳಸುತ್ತ ನಂಟೂ । ಹಿಂಡು ಕೌರವರ ಕೊಲ್ಲಿಸುವ ನಿಘಂಟು ॥ ಕಂಡು ಹದಿನಾರು ಸಾವಿರದ ನೂರೆಂಟು । ಹೆಂಡಿರನೊಲಿಸುತಾಳುವ ಯೋಗವುಂಟು ॥ ೫ ॥

### ಕಂದ ಪದ್ಯ

ಕಂದನು ನಿಮಗುದಿಸಿಪ ಬಲು । ಬಂಧನವಂ ಕಿತ್ತು ಬಾಲಲೀಲೆಯ ತೋರ್ದುಂ ॥ ಮುಂದತಿ ಭಾಗ್ಯದೊಳಿಹಿರೆನೆ । ಚಂದಿರಮುಖಿ ಕೇಳ್ದು ಪೇಳ್ದಳಾ ಕೊರವಿಯೊಳಂ ॥

### ರೇಗುಪ್ತಿ ರಾಗ - ತ್ರಿವುಡೆತಾಳ

ಮನಸೊಡಂಬಡದು ಕಾಣೆ । ಮಾತಿನ ಹೋಲ್ಕೆ । ಎನಗಾಹದಿಲ್ಲ ಜಾಣೆ ॥ ಘನತರ ಪುಣ್ಯ ಸಾಧನವೆನಿಸುವ ಕೃಷ್ಣ । ಜನಿಸಿ ಖಂಡಿಸುವ ಬಂಧನವೆಂಬ ಮಾತಿಗೆ॥ ಮನ ॥ ೧ ॥ ಹುಟ್ಟಿದರೆಂತಾದರೂ । ರಕ್ಷಿಸುವಂಥ। ಬಟ್ಟೆ ಹ್ಯಾಗಮ್ಮ ತೋರೂ ॥ ಕಟ್ಟು ಕಾವಲು ಕಂಸನಾಜ್ಞೆಯೆಂಟನೆಯಲ್ಲಿ । ಕೃಷ್ಣನುದ್ಭವಿಸಿ ಕೊಲ್ಲುವನೆಂಬ ಮಾತಿಗೆ ॥ ಮನ ॥ ೨ ॥ ಲೊಟ್ಟೆ ಜೋಯಿಸ ಗಾರರೂ । ಶಕುನ ವಾಕ್ಯ । ಮುಟ್ಟಿ ಪೇಳ್ವರಂತೆಲ್ಲರೂ ॥ ಪೊಟ್ಟೆಗೋಸುಗ ವಾಗಿ ನುಡಿದ ನಿಮಿತ್ತದಿ । ಪಟ್ಟಿಂಗಾಗುವದಿಲ್ಲ ದಿಟ್ಟೆ ನಂಬುವದಕ್ಕೆ ॥ ಮನ ॥ ೩ ॥

### ಶಂಕರಾಭರಣ ರಾಗ - ತ್ರಿವುಡೆತಾಳ

ಹೊನ್ನಿನಾಸೆಗೆ ಬಂದುದಿಲ್ಲವು । ಹಸ್ತಿಗಮನೇ ನಿನ್ನಯಾ ॥ ಪುಣ್ಯ ವನು ನಿನಗೊರೆಯಲೋಸುಗ । ಬಂದೆನಮ್ಮ ॥ ೧ ॥ ನಾಡ ಮಾತನು ಪೇಳಿ ಪೋಗಲು । ಬಂದುದಿಲ್ಲಾ ಶಿವದಯಾ ॥ ಮಾಡಿದುದ ನಿನಗೊರೆಯ ಲೋಸುಗ । ಬಂದೆನಮ್ಮ ॥ ೨ ॥ ಕಟ್ಟು ಬಣ್ಣದ ಜಾಲ ಮಾತಿನ । ಕೊರವಿಯಲ್ಲಾ ಲೋಕದ ॥ ಸೃಷ್ಟಿಗಧಿಪತಿತನಕೆ ಯೋಗ್ಯದ । ಕೊರವಿಯಮ್ಮ ॥ ೩ ॥

### ತ್ರಿಪದಿ ಆನಂದಭೈರವಿ ರಾಗ - ಏಕತಾಳ

ಎಷ್ಟು ಪೇಳಿದರು ಮನವು । ತುಷ್ಟಿ ಹೊಂದದಮ್ಮ ನಿತ್ಯ । ಕಷ್ಟ ಬಿಡುವೆನೆಂತು ಬಿಡಲಿ ॥ ಕ್ಲೇಶವಾ । ಮೋಹ । ಪಾಶವಾ ॥ ೧ ॥ ವಂಶ ವೃದ್ಧಿಯಾಗದಂತೆ । ಕಂಸನೆನ್ನ ಸುತರ ನಿಂತು । ಹಿಂಸಿಸಿ ಕೊಲ್ಲುವನೆಂಬು ॥ ದರಿವೆನೇ । ನಾ ಬಾ । ಳಿರುವನೆ ॥ ೨ ॥ ಎಂದಿಗೆ ನೀಗುವುದೆನಗೆ । ಬಂದ ಬಾಧಕವಿದಮ್ಮ । ಇಂದಿರೇಶ ದಯಮಾಡಿ ॥ ಕಾವುದೂ । ಸುಖ । ನೀವುದು ॥ ೩ ॥

### ಭೈರವಿ ರಾಗ - ಝಂಪೆತಾಳ

ನಿನ್ನ ಪಾಡೇನಮ್ಮ । ಮುನ್ನ ನಾರಿಯರೊಳಗೆ । ಬನ್ನ ಬಿಟ್ಟವ ರುಂಟು । ಬಹಳ ದುಃಖದಲಿ ॥ ೧ ॥ ಹಿಂದೆ ಜನಕನ ಮಗಳು ।

ಹ್ಯಾಗಿದ್ದ್ದೆದ ಹೇಳು । ಮುಂದವಳ ಸುಖವೇನು । ಮನದಿ ತಿಳಿ ನೀನು ॥ ೨ ॥ ನಳನೆಂಬ ಭೂಪಾಲ । ನರಸಿ ದಮಯಂತಿ ಸುಳಿ । ಸುಳಿದು ವನ ಗಳನೆಲ್ಲ । ಸುಖದಿಂದಲಿರಳೆ ॥ ೩ ॥ ಪೊಡವಿಯೊಳು ಹರಿಶ್ಚಂದ್ರ । ಮಡದಿಯಹ ಚಂದ್ರಮತಿ । ಪಡೆದ ಮಗ ಲೋಹಿತನ । ಸುಖವ ತಿಳಿ ನೀನು ॥ ೪ ॥ ಎಲೆ ದೇವಿ ಕೇಳು ನೀ । ನೆಂದಿಗಾದರು ದೈವ । ನೆಲೆಯ ಮಿರುವರುಂಟೆ । ನರರೊಳಗೆ ಕಾಂತೆ ॥ ೫ ॥

### ಕೇದಾರಗೌಳ ರಾಗ - ಏಕತಾಳ

ಸೊಲ್ಲ ಕೇಳೆ ಸೊಲ್ಲ ಕೇಳೆ । ಸೊಗಸುಗಾರರವ್ವ ॥ ಬಲ್ಲಿದ ಸುಜಾಣೆ ಮರಿ । ಹುಲ್ಲೆಗಣ್ಣೆನವ್ವ ॥ ೧ ॥ ಇಳೆಯೊಳವತರಿಸಿ ಖಳರ । ಕೊಲುವನು ನೋಡವ್ವ ॥ ಗೆಲವಿನಿಂದ ನಿಮ್ಮೆಲ್ಲರ । ಸಲಹುವ ಕಾಣವ್ವ ॥ ೨ ॥ ಸಣ್ಣ ಕೂಸಿಗೊಂದಿಷ್ಟಾದ । ರನ್ನವ ನೀಡವ್ವ ॥ ಚೆನ್ನಕೃಷ್ಣರಾಯನೆಂದು । ಚೆಲುವಾಗಿರವ್ವ ॥ ೩ ॥

### ವಾರ್ಧಿಕ ಷಟ್ಪದಿ

ಪರಮ ಮಂಗಳಕರವ ಪೇಳ್ದು ಕೊರವಂಜಿಗಾ । ತರುಣಿ ತಾ ಸಕಲ ವಸ್ತುವನಿತ್ತು ಬೀಳುಕೊಡ । ಲರವಿಂದ ಭವನ್ಯೆದಿದಂ ತನ್ನ ನಿಜಲೋಕಕಿತ್ತ ಹರಿ ಶರಣೆನ್ನುತ ॥ ಸೆರೆಮನೆಯೊಳಿರಲು ದೇವಕಿಗೇಳನೆಯ ಗರ್ಭ । ಕರಗಿ ಭುಜಗಾಧಿಪತಿ ರೋಹಿಣಿಗೆ ಜನಿಸಿದಂ । ಸುರರಿಗಭಯವನಿತ್ತು ಹವಣಮಂ ಮನದಿ ಗೋಚರಿಸಿದಂ ಜಗದೀಶನು ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಇತ್ತ ಕಂಸನು ಗರ್ಭವಡಗಿದ । ವರ್ತಮಾನವ ಕೇಳಿ ತನ್ನಯ । ಚಿತ್ತದಲಿ ಖತಿಯಹಂತು ಚಿಂತೆಗೆ । ತೆತ್ತು ಮನವ ॥ ೧ ॥ ಹರಿಯು ಬಹು ಕಪಟಿಗನು ವೈಮರ । ದಿರಲು ಬಾರದೆನುತ್ತ ತಾನೇ । ಸೆರೆಮನೆ ಯೊಳಿರ್ದಂತೆ ಕಾದಿರ । ಲಿರುಳು ಹಗಲು ॥ ೨ ॥ ತರುಣಿ ದೇವಕಿ ಜಠರ ದೊಳು ಹರಿ । ಯಿರದೆ ನೆಲಸಿದನೇನನೆಂಬೆನು । ಪರಮ ಪುರುಷನ ಮಹಿಮೆ ಯನು ಕೇಳ್ಧರಣಿಪಾಲ ॥ ೩ ॥

## ದ್ವಿಪದಿ

ದೇವಕಾ ದೇವಿಯುದರದೊಳಗಚ್ಯುತನು । ತಾ ವಾಸವಾದನೆಂದರಿತು ಕಮಲಜನು ॥ ೧ ॥ ಶತಮಖಾದ್ಯಮರ ಸಂದೋಹ ಸಹಿತಂದು । ನುತಿ ಗೈವುತಿರ್ದರಾಗಂಬರದಿ ನಿಂದು ॥ ೨ ॥ ಸ್ಫಟಿಕ ಕಲಶದ ದೀಪದಂತೆ ದೇವಕಿಯಾ । ಜಠರದೊಳಗೊಪ್ಪುತಿರ್ದುದು ಬಿಂಬ ಹರಿಯ ॥ ೩ ॥ ಖಳ ಕಂಸನನುಜೆಯಂಗಚ್ಛವಿಯ ನೋಡಿ । ತಿಳಿದನೀತನೆ ವೈರಿಯೆಂದು ಭಯ ಗೂಡಿ ॥ ೪ ॥ ಅರೆನಿಮಿಷವೆಡೆಬಿಡದೆ ದುಷ್ಟಬಲ ಸಹಿತ । ಸೆರೆಮನೆಯ ಕ್ಕಾದಿರ್ದ ದಿನವ ಲೆಕ್ಕಿಸುತ ॥ ೫ ॥

## ವಾರ್ಧಿಕ

ಅರಸ ಕೇಳಿಂತಿರಲು ದೇವಕಿಯ ಬಸುರಿಂಗೆ । ತೆರಳೆ ನವಮಾಸಮನಿತ ರೊಳು ಶ್ರಾವಣ ತಿಂಗ । ಳಿರುಳ ಪರ ಪಕ್ಷದಷ್ಟಮಿ ದಿನದಿ ರೋಹಿಣಿಗನಂತ ನುದಿಸಿದ ಸಮಯದಿ ॥ ಧರಣಿಗವತರಿಸಿದಂ ಪುರುಷೋತ್ತಮಂ ಸುರರು । ನೆರೆದಭ್ರದೊಳಗೆ ಜಯವೆಂದು ಸುಮವೃಷ್ಟಿಯಂ । ಗರೆದರಂಬುಜಭವಾದಿ ಗಳೆರಗಿನುತಿಸಿದರ್ ಜಗಕೆ ಮಂಗಳವಾದುದು ॥

## ದ್ವಿಪದಿ

ಸಿರಿಮುಡಿಯ ಸುಳಿಗುರುಳ ತರುಣ ತುಲಸಿಗಳ । ಮಿರುವ ನಾಸಿಕದ ಮಣಿಮಕುಟ ದೀಪ್ತಿಗಳ ॥ ೧ ॥ ಕರ್ಣಕುಂಡಲ ಕಪೋಲಗಳ ಚುಬುಕುಗಳ। ಅರ್ಣವಸುಗಂಭೀರದತಿಶಯದ ಕೊರಳ ॥ ೨ ॥ ವೈಜಯಂತಿಯ ವನಾಲೆ ಕೌಸ್ತುಭವು ಮೇಲೆ॥ ತೇಜದಿಂದೆಸೆವ ನವರತುನಗಳ ಲೀಲೆ ॥ ೩ ॥ ಶಶಿನೀಲ ಶುಭಕಾಂತಿ ಭುಜ ಚತುಷ್ಟಯದ । ನಿಜ ಶಂಖ ಚಕ್ರ ಗದೆ ಪದ್ಮ ಧಾರಣದ ॥ ೪ ॥ ಮುಂದೆಸೆವ ಬಾಲಕನ ಕಂಡು ವಸುದೇವ । ವಂದಿಸಿದ ದೇವಕಿಯು ಸಹಿತಲರೆಜಾವ ॥ ೫ ॥

## ರೇಗುಪ್ತಿ ರಾಗ - ಏಕತಾಳ

ಕೃಷ್ಣ ಹರೇ ಪಾಹಿಮಾಂ । ಜಯ ಜಯ ಬಾಲ । ಕೃಷ್ಣ ಹರೇ ಪಾಹಿಮಾಂ ॥ ಜಿಷ್ಣು ಮುಖ್ಯಸುರೌಘವಂದಿತ ಪರ । ಮೇಷ್ಠಿ ಪೂಜಿತ

ಚಲ್ವವಾದ ವಿನೋದ ॥ ೧ ॥ ಇಂದಿರಾಸತಿ ರಮಣ । ಸಕಲ ಮುನಿ । ವಂದಿತ ಸಚ್ಚರಣ ॥ ಸುಂದರಾಂಗ ಸರ್ವಲೋಕ ನಾಯಕ ದಯಾ । ಸಿಂಧು ಶ್ರೀವನಮಾಲ ಸಜ್ಜನ ಪಾಲ ॥ ೨ ॥

### ಪಂತುವರಾಳಿ ರಾಗ - ಏಕತಾಳ

ಕರುಣಿಸು ಕಂಜದಳ ನೇತ್ರ । ಕೋಮಲಗಾತ್ರ । ಪರಮ ಪಾವನ ಸುಪ್ರಸನ್ನ । ಕೀರ್ತಿಸಂಪನ್ನ ॥ ಪಲ್ಲ ॥ ಎಂತು ಧರಿಸಿದೆ ನಿನ್ನ ನಾನು । ಎನ್ನುದರಾಬ್ಧಿಯೊ। ಳಿಂತು ಪುಟ್ಟಿದೆಯಯ್ಯ ನೀನು। ನೋಡಿದರಾ । ದ್ಯಂತ ವಿಲ್ಲದ ಕಾಮಧೇನು ॥ ಕಾಲ ಕಾಲದೊ ; ಳಂತರಂಗದಲಿ । ಚಿಂತಿಪ ಭಕ್ತರ। ಸಂತತಿಗೊಲಿವಾ । ನಂತ ಗುಣಾಢ್ಯ ॥ ಕರುಣಿಸು ॥ ೧ ॥ ಕಂಸ ದೈತ್ಯನು ಕಡುಕೋಪಿ । ಕಂಡರೆ ನಿನ್ನ । ಹಿಂಸೆಮಾಡದುಳಿಯನು ಪಾಪಿ । ನೋಡಲು ನಮ್ಮ । ವಂಶದೊಳೆಲ್ಲ ಸುಪ್ರತಾಪಿ ॥ ಹೊತ್ತಿಲ್ಲವು ಕಾಯೋ । ಹಂಸ ವಾಹನ ಪಿತ । ನೀಂ ಸರ್ವೋತ್ತಮ । ಪುಂಸರಿಪೂದ್ಭವ । ಧ್ವಂಸವಮಾಡಯ್ಯ॥ ಕರುಣಿಸು ॥ ೨ ॥

### ವಾರ್ಧಿಕ

ವಸುದೇವ ದೇವಕಿಯರಿಂತೆಂದು ಕೈಯ ಮುಗಿ । ದಸುರ ಕಂಸನ ಬಾಧೆಗೆಣೆಯಿಲ್ಲವೆಂದೆನಲು । ವಸದು ಗೋಕುಲದೊಳು ಯಶೋದೆಗಾತ್ಮಜೆ ಯಾಗಿ ಮಾಯೆಯಿಪ್ಪಳೀ ರಾತ್ರಿಯೆ ॥ ಕೊಸರುಗೊಳದೆನ್ನ ಕೊಂಡಲ್ಲಿರಿಸಿ ತರುತಲಾ । ಶಿಶುವ ಕಂಸಂಗೆ ಕೊಡಿರೆನಲುಟ್ಟ ಧೋತ್ರವನು । ಮುಸುಕಿಡಲು ಸತಿಪುರುಷರಿಬ್ಬರಿಗೆ ಕಾಲ ಸಂಕಲೆ ಕಳಚಿತಾ ಕ್ಷಣದೊಳು ॥

### ಧನಾಸರಿ ರಾಗ - ಅಷ್ಟತಾಳ

ಲಾಲಿಸು । ಮಾತ । ಲಾಲಿಸು ॥ ಪಲ್ಲ ॥ ಮೂಲೋಕದೊಡೆಯನ ಮಹಿಮೆಯ ಕಿವಿಗೊಟ್ಟು ॥ ಲಾಲಿಸು ॥ ಅನುಪಲ್ಲ ॥ ಕಾರೆಂಬ ಕತ್ತಲೆ ಕವಿಯಲು ದಶದಿಕ್ಕು । ಘೋರೆಂದು ಮಳೆ ಹೊಯ್ವುತಿರಲಾಗ । ಶ್ವೇತ । ದ್ವಾರದೊಳಾಲಿಯಿಂಡಿಗೆ ಬೇಗ । ಕಳಚಿ । ದಾರಿಯಾಯಿತು ಶೌರಿ ಬರುವಾಗ। ಕಾಣುತಿರುವಾಗ । ಕಾವಲವರಾಗ । ನಿದ್ರೆ । ಭಾರಿಸಲೆಚ್ಚರಿಲ್ಲದ ಯೋಗ । ಸೂತ್ರ । ಧಾರಿಯ ಮಹಿಮೆಯಿಂದಲಿ ಬೇಗ ॥ ಲಾಲಿಸು ॥ ೧ ॥ ಒಡೆಯ

ಕೋಟಿಸಬಾರದೆನುತ ಪನ್ನಗರಾಜ । ನಡುವಿರುಳಿನೊಳಿದ್ದು ಬಂದನು । ಮಳೆ । ಹೊಡೆಯಲಂಜುಪ್ಪದನ್ನು ಕಂಡನು । ತನ್ನ । ಪೆಡೆಯನಂಬರಕೆತ್ತಿ ನಿಂದನು । ಮಣಿಣಿಕ್ಯಗಳನು । ಪ್ರಕಾಶಗಳನು । ತೋರ । ಲಡಿಯಿಡುತಲೆ ನಡೆತಂದನು । ಭೋ । ರ್ಗುಡಿಸುವ ಯಮುನೆಯ ಕಂಡನು ॥ ಲಾಲಿಸು ॥ ೨ ॥ ಬಂದು ತನ್ನಯ್ಯಗೆ ತಾ ಕೈಯ ಮುಗಿಯ ಜೇ । ಕೆಂದಾಗ ಮನದಿ ಯೋಚಿಸಿದಳು । ಭಕ್ತಿ । ಯಿಂದಲಾಕ್ಷಣವೆದ್ದು ನಿಂದಳು । ಮುದ । ದಿಂದ ಪೋಗಲು ದಾರಿ ಕೊಟ್ಟಳು । ದಾಟಿ ಜವದೊಳು । ಬರೆ ಪಥದೊಳು। ದೂರ । ದಿಂದ ಗೋಕುಲದ ವೈಭವಗಳು । ಕಣ್ಗೆ । ಮುಂದೆ ಕಾಣಿಸಲತಿ ಭಯದೊಳು ॥ ಲಾಲಿಸು ॥ ೩ ॥ ಪೊತ್ತುಕೊಂಡಿರ್ದ ಗೋವಿಂದನ ವಸು ದೇವ । ನತ್ತುಕೊಳುತ ತಗ್ಗಿಗಿರಿಸಿದ । ಕೈಯೊ । ಳೆತ್ತಿ ಮಾಯಹಾಂಗಿಯ ಧರಿಸಿದ । ಕಾ । ಣುತ್ತಲಿ ಮನದಿ ಕಾತರಿಸಿದ । ಪಿಂತಿರುಗಿದಾ । ಸೆರೆ ನಿಲಯದ । ಬಳಿ । ನಿತ್ತೊಳ ಪೊಗಲು ಮುಚ್ಚಿತು ಕದ । ಕಾಲಿ । ಗೊತ್ತೆ ಸಂಕಲೆ ಪೇಳಲೇನದ ॥ ಲಾಲಿಸು ॥ ೪ ॥

## ಸೌರಾಷ್ಟ್ರ ರಾಗ - ತ್ರಿವುಡೆತಾಳ

ಕೇಳು ಭೂವರ ಬಳಿಕ ಮಹಾಯಾ । ಬಾಲಕಿಯು ಬಲು ತೆರದಿ ಚೀರಿದ। ಳಾಲಯದಿ ಹೊರಗಿರ್ದ ಖಳನದ । ನಾಲಿಸುತಲಿ ॥ ೧ ॥ ಪುಟ್ಟಿದನು ಪಗೆ ಯೆಂದು ಮನದಲಿ । ಬಿಟ್ಟ ಮಂಡೆಯೊಳೊದರಿ ಬಲು ಬುಸು । ಗುಟ್ಟು ತೇಳುತ ಬೀಳುತಲೆ ಕಂ । ಗೆಟ್ಟು ಭರದಿ ॥ ೨ ॥ ತಡವುತೆಡಹುತ ಬಂದು ಬಾಗಿಲ । ನೊಡೆದು ಹುಂಕರಿಸುತ್ತ ಶಿಶುವನು । ಕೊಡು ಕೊಡೆನುತಾರ್ಭಟಿಸಿ ನಿಂದನು । ಘುಡು ಘುಡಿಸುತ ॥ ೩ ॥ ಕಂಡು ದೇವಕಿ ಮನದೊಳಗೆ ಭಯ। ಗೊಂಡಳುತ ಬಾಲಕಿಯನಪ್ಪುತ । ದಂಡದಂತೆರಗುತ್ತ ಪೇಳಿದ । ಳಂಡ ಲೆಪುತ ॥ ೪ ॥

## ನೀಲಾಂಬರಿ ರಾಗ - ತ್ರಿವುಡೆತಾಳ

ಅಣ್ಣಯ್ಯ ಕೊಲ್ಲಬೇಡ । ಕಡೆಯೊಳೊಂದು । ಹೆಣ್ಣು ಪುಟ್ಟಿತುದು ನೋಡ ॥ ಪುಣ್ಯವಂತನೆ ನಿನ್ನ ಸೊಸೆಯೆಂದೆನಿಸುತೆನ್ನ । ಕಣ್ಣ ಮುಂದಿರ ಲೋರ್ವಳು । ದಯಮಾಳು ॥ ೧ ॥ ಅಶರೀರವಾಣಿಯಿಂದು । ಎನ್ನೆಂಟನೆ ।

ಬಸುರಿನ ಮಗನು ಬಂದು ‖ ಕುಸುರಿದರಿವನೆನುತುಸುರಿ ಜಾರಿದ ಮಾತು । ಪುಸಿಯಾಯಿತಲ್ಲ ನೋಡು ‖ ದಯಮಾಡು ‖ ೨ ‖ ಪಡೆದ ಬಾಲಕರನೆಲ್ಲ । ಬರಿದೆ ಕೊಂದೆ । ಕಡೆಗೆ ಹೆಣ್ಣಾದಿಸಿತಲ್ಲ ‖ ಕಡುಪಾಪಿ ತಾನ್ಯೆಸೆ ನುಡಿದಿನ್ನು ಫಲವೇನು ಹುಡುಗಿಯನುಳುಹಿಸಯ್ಯ ‖ ದಮ್ಮಯ್ಯ ‖ ೩ ‖

## ವಾರ್ಧಿಕ

ಹಲವು ಪರಿಯಲಿ ಬೇಡಿಕೊಳೆ ಕೇಳದಾ ಶಿಶುವ । ಸೆಳೆದು ಕಾಲೆರಡ ಹಿಡಿದಪ್ಪಳಿಪೆನೆನಲೆದೆಯ । ತುಳಿದು ಚಿಗಿದಂಬರದೊಳಷ್ಟಭುಜೆಯಾಗಿ ತಾ ಖಳನ ಜರೆದಿಂತೆಂದಳು ‖ ಎಲೆ ಪಾಪಿ ಕೇಳು ನೀನೆನ್ನ ಕೊಲುವುದಕೆ ಗಂ । ಟಲೊಳಿಳಿವ ತುತ್ತಲ್ಲ ನಿನ್ನರಿಪು ಧಾತ್ರಿಯಲಿ । ಬಳೆವುತಿರುವನು ಕೊಲ್ಲದಿರ ನೆಂದು ಪೇಳಲಿಂತೆಂಬ ನುಡಿ ಕೇಳಿಸಿದುದು ‖

## ಭೈರವಿ ರಾಗ - ಝಂಪೆತಾಳ

ಚಂಡಿಕೆಯ ನುಡಿಗೆ ಭ್ರಮೆ । ಗೊಂಡು ಬಳಿಕಾ ದೈತ್ಯ । ಮಂಡೆ ಯನು ಬಡಿದಂತೆ । ಮನಕಾಯ್ತು ಚಿಂತೆ ‖ ೧ ‖ ಋಷಿ ನಾರದನ ಮಾತು । ಪುಸಿಯಾಯ್ತು ವ್ಯರ್ಥ ದಂ । ಡಿಸಿದೆ ತಂಗಿಯನು ರಿಪು । ವಶವಾಗಲಿಲ್ಲ ‖ ೨ ‖ ನಾನು ಮನದೊಳು ನೆನೆದು। ದೊಂದಾಯ್ತು ದೈವಗತಿ। ತಾನೊಂದ ನೆಣಸಿತಿದ । ಕೇನು ಗತಿ ಮುಂದೆ ‖ ೩ ‖ ಎನ್ನ ಪ್ರಾಣವ ಕಳೆವ । ಚಿಣ್ಣನನು ಹಿಡಿವದಕೆ । ಕನ್ನಡಿಯ ಗಂಟಾಯ್ತು । ಕೈ ತಪ್ಪಿ ಹೋಯ್ತು ‖ ೪ ‖ ಇಳೆ ಯೊಳಗೆ ಬೆಳೆದ ಮ । ಕ್ಕಳನೆಲ್ಲ ಕೊಲಿರೆನುತ । ಖಳರಿಗಪ್ಪಣೆಯಿತ್ತ । ಕಂಸ ಕೋಪಿಸುತ ‖ ೫ ‖

## ಕಂದ ಪದ್ಯ

ಹಿಂದವಗುಣವಾಯ್ತೆನುತಲೆ । ಬಂಧನವಂ ಬಿಡಿಸಿ ತೆಗೆಸಿ ಕಾವಲ ನಾಗಳ್ ‖ ಮುಂದಿರಿ ಸುಖದೊಳಗೆನುತಂ । ಚಂದದಿ ದಂಪತಿಯರನು ಪಚರಿಸಿದ ಕಂಸಂ ‖

## ಕಾಂಬೋಧಿ ರಾಗ - ಝಂಪೆತಾಳ

ಬಂದು ಮನೆಯೊಳು ಕುಳಿತು ಖಳ ದುಷ್ಟ ಮಂತ್ರಿಗಳೊ । ಳೆಂದನಿರುಳಾದ ಸಂಗತಿಯ ‖ ಮುಂದೇನುಪಾಯ ಕಂಡಿರಿ ನೀವೆನಲು

ನುಡಿದ । ರಂದವರು ಜಳಪಿಸುತ್ತಸಿಯ ॥ ೧ ॥ ಜೀಯ ಚಿಂತಿಪ್ಪದೇಕೆ ಸಿಕ್ಕನಾ ವಿಷ್ಣು ಬಲು।ವಹಾಯಾವಿಯಾಗಲದಕೇನು॥ನೋಯಿಸದೆ ಕೊಲ್ಲು ವ ಉಪಾಯ ನವೊಳ್ಳಗುಂಟು । ಬಾಯ ಬಿಡದಿರು ಬರಿದೆ ನೀನು ॥ ೨ ॥ ಪೊಡವಿಯೊಳು ಗೋದ್ವಿಜರ ಬಡಿದು ಶಿಶುಗಳ ತರಿದು । ತಡೆಯದೆ ಜ್ಞಾದಿ ಕರ್ಮಗಳ ॥ ಕೆಡಿಸಿದರೆ ತಾಳಲಾರದೆ ಬರುವನವನೆಂದು । ನುಡಿದರವರತಿ ಪೌರುಷಗಳ ॥ ೩ ॥

### ವಾರ್ಧಿಕ

ಅಹುದು ತಪ್ಪಲ್ಲವೀ ನುಡಿಯೆಂದೊಡಂಬಡುತ । ಲಹಿತನನು ಕೊಲ್ವದೀ ತೆರದಿಂದಲೆಂದವರ । ವಿಹಿತ ಸಂತೋಷದಿಂ ಬೀಳ್ಕೊಟ್ಟು ಕಂಸ ನಿರಲತ್ತಲಾ ಗೋಕುಲದಲಿ ॥ ಮಹಿಳೆಯರ್ಬರುತಳುವ ಬಾಲನಂ ಕಾಣುತ್ತ। ಲಹಹ ಸಿರಿವಂತೆ ನಮ್ಮೊಡತಿಯೆಂಬೊಸಗೆಯಂ । ಬಹಳ ಸಂಭ್ರಮದಿಂದ ನಂದಗುಸುರಲ್ಕೇಳುತತಿ ಸಂತಸಂಬಟ್ಟನು ॥

### ದ್ವಿಪದಿ

ಇಂತೆನೆ ಮಹೋತ್ಸವದಿ ದಾನಗಳನಿತ್ತು । ಅಂತರಂಗದಿ ನಂದಗೋಪ ಮುದವೆತ್ತು ॥ ೧ ॥ ಪುರಜನವ ಪರಿಜನವ ಮನ್ನಿಸುತಲಾಗ । ಹರುಷದಲಿ ಜೋಯಿಸರ ಕರೆಸಿದನು ಬೇಗ ॥ ೨ ॥ ತನುಜನುದಿಸಿದ ವೇಳ್ಯವೆಂತೆನಲಿಕ ವರು । ಗುಣಿಸಿ ನೋಡುತಲೆಂದರಧಿಕ ಕೋವಿದರು ॥ ೩ ॥ ನಂದ ಲಾಲಿಸು ನಿನ್ನ ಮಗನು ಲೋಕದಲಿ । ಇಂದಿರಾಧವನಂತೆ ಮೆರೆವ ಗುಣಗಳಲಿ ॥ ೪ ॥ ಎನಲು ಕೇಳುತ ಸಕಲವುಡುಗರೆಯನಿತ್ತು । ವಿನಯದಿಂ ಕಳುಹಿದನು ಘನ ಹರುಷವೆತ್ತು ॥ ೫ ॥

### ಭಾಮಿನಿ

ನಂದಗೋಪನು ತನಯನುದಿಸಿದ । ನೆಂದು ಸಂತೋಷದಲಿ ಧನ ಪಶು । ವೃಂದವಿತ್ತನು ಧರಣಿಸುರರಿಂಗಪರಿಮಿತವಾಗಿ ॥ ಬಂದರಾ ಯಾಚಕರು ಮಧುರೆಗೆ । ಮಂದಮತಿ ಖಳ ಕೇಳಿ ತಾ ಭಯ । ದಿಂದ ಪೂತನೆಯೆಂಬ ದಾನವಿಯೊಡನೆ ತಾನೆಂದ ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ಹರಿಯು ತನ್ನನು ಕೊಲ್ವನೆಂದವ । ತರಿಸಿದನು ಭೂತಳದೊಳೆಂದೆನ। ಗರುಹಿದಳು ಚಂಡಿಕೆಯು ಚಿಗಿದಂ । ಬರದಿ ನಿಂತು ॥ ೧ ॥ ವಿಷದ ಪೊಲೆ ಯನು ಕೊಟ್ಟು ಲೋಕದ । ಶಿಶುಗಳನು ಸಂಹರಿಸಿ ಪೋಗೆಂ । ದಸುರ ನೇಮಿಸಿ ಕಳುಹಿಸಿದನು ರಾ । ಕ್ಷಸಿಯ ಭರದಿ ॥ ೨ ॥

ಭೈರವಿ ರಾಗ - ತ್ರಿವುಡೆತಾಳ

ಬಂದಳಾಗ । ಪೂತನೆ । ಬಂದಳಾಗ ॥ ಪಲ್ಲ ॥ ಮಂದಮತಿ ಕಂಸಾಖ್ಯ ನಾಜ್ಞೆಯೊ । ಳಂದು ಶಿಶುಗಳ ಕೊಂದು ಕೂಗುತ । ಬಂದಳಾಗ॥ ಅನುಪಲ್ಲ॥ ಅಸುರಭಾವವ ಮರೆಸಿ ನಡುವಿನೊ । ಳೆಸೆವ ಸೀರೆಯನುಟ್ಟಳು । ಬಿಸಜ ಕೋರಕ ಕುಚಕೆ ಕುಪ್ಪಸ । ಹೊಸೆದು ಹೊಂದಿಸಿ ತೊಟ್ಟಳು । ನೊಸಲಿಗ ಮರುವ ದಿವ್ಯ ಕಸ್ತುರಿ । ಎಸೆವ ನಾಮವನಿಟ್ಟಳು । ಕುಸುಮಶರನರಗಿಣಿಯ ಭಾವದೊ । ಳೊಸಗೆ ಮಿಗೆ ರಂಜಿಸುತ ಬೇಗದಿ ॥ ಬಂದಳಾಗ ॥

ಸೌರಾಷ್ಟ್ರ ರಾಗ - ತ್ರಿವುಡೆತಾಳ

ವನಿತೆಯರ ಸಂಗಡದಿ ನಂದನ । ಮನೆಗೆ ಬಂದಳು ದುಷ್ಟಪೂತನೆ । ಘನಪರಾಕ್ರಮದಿಂದ ಕೃಷ್ಣನ । ಕೊಲುವೆನೆಂದು ॥ ೧ ॥ ಮಲತು ಮಲಗಿಹ ಹರಿಯ ರಾಕ್ಷಸಿ । ಎರಡು ಕೈಯಲಿ ನೆಗಹಿ ಗರಳವ । ಸುರಿವ ಪೊಲೆಯನು ಬಾಯಿಗಿಟ್ಟಳು । ಮರುಳುತನದಿ ॥ ೨ ॥ ಲೋಕ ಶಿಶುಗಳ ಕೊಂದ ಪೊಲೆ ಯನು । ತಾ ಕರಾಗ್ರದಿ ಪಿಡಿದು ಬಾಯ್ಗೊಡ । ಲೌಕಿ ಪಲ್ಲಿನೊಳೆಳೆವುತುಂಡನು। ಲೋಕನಾಥ ॥ ೩ ॥

ಕಾಂಬೋಧಿ ರಾಗ - ಝಂಪೆತಾಳ

ಸೋಕಿದರೆ ಮೈಯೊಡೆವ ವಿಷವಕಟ ಬಾಯಿಂದ । ಲಾಕುಳಿಸುತುಗುಳು ತೆಳೆದೆಳೆದು ॥ ಆ ಕುಟಿಲೆಯಂಗರಕುತವ ಹೀರಿ ಬಿಡಲು ಪರಿ । ದೋಕುಳಿಯ ತೆರದಿ ತೋರಿದುದು ॥

### ಕಮಾಚು ರಾಗ - ಏಕತಾಳ

ಬಿಡು ಕಂದ ಬಿಡು ಕಂದ । ಒಂದೇ ಕ್ಷಣ ಮಾತ್ರ । ಬಿಡು ಕಂದ ಬಿಡು ಕಂದ ॥ ಪಲ್ಲ ॥ ನಮ್ಮಯ ಕಂದನಿ । ಗಿಮ್ಮಡಿ ನೀನೇ । ಭಿಮ್ಮೆನಿಸುವೆ ಸೈ । ದಮ್ಮಯ್ಯ ಕೊಲದಿರು ॥ ಬಿಡು ಕಂದ ॥ ೧ ॥ ಕೊತ್ತಾಗುವೆ ಕಣ್ । ಗತ್ತಲೆ ಬರುತಿದೆ । ವೃತ್ತ ಕುಚಂಗಳು । ಬತ್ತಿದವೆನ್ನಯ ॥ ಬಿಡು ಕಂದ ॥ ೨ ॥ ಒರಗಿಸದಿರು ಕರಿ । ವರದ ವೆಂಕಟಗಿರಿ । ಯರಸನೆ ನಿನಗಾಂ । ಕರಗಳ ಮುಗಿವೆನು ॥ ಬಿಡು ಕಂದ ॥ ೩ ॥

### ಕಾಂಬೋಧಿ ರಾಗ - ಝಂಪೆತಾಳ

ಛೀ ಕುವರ ಬಿಡು ಸಾಕೆನುತ್ತೆರಡು ಕೈಯಿಂದ । ನೂಕಿದರೆ ಬಿಡದದರು ತುಣಲು ॥ ನಾ ಕೆಟ್ಟೆನೆಂದೆನುತ ಬಾಯಾರಿ ಬಸವಳಿದು । ಭೀಕರಾಕೃತಿಯು ತೋರಿದಳು ॥ ೧ ॥ ಮಗುವಲ್ಲವಿದು ಮಾರಿ ಎನುತ ನಿಷ್ಠುರದಬ್ಬ । ರ ಗಳಿಂದ ಬ್ಯಾಬಿಡುತ ಕೂಗಿ ॥ ಮಿಗೆ ಬಿದ್ದಳಸುರೆ ತಾನೈದು ಯೋಜನದುದ್ದ। ದಗಲದಲಿ ನಗರಕಿದಿರಾಗಿ ॥ ೨ ॥ ಒಡಲು ಬೀಳ್ವಾಗ ಪುರಸೌಧ ಗೋಪುರ ವೆಲ್ಲ । ಪುಡಿಯಹಾಯ್ತನೇಕ ಪಟ್ಟಣದಿ ॥ ಬುಡತುದಿಯ ನೋಡಿದರೆ ನೀಲಾದ್ರಿಯಂತೆ ಭಯ । ಪಡಿಸಿದಳು ನಂದ ಗೋಕುಲದಿ ॥ ೩ ॥ ಮಡದಿ ಯರು ಬಂದಾ ಯಶೋದೆಗುಸುರಲು ಕೇಳಿ । ನಡೆತಂದು ರಾಕ್ಷಸಿಯ ಮೇಲೆ॥ ಅಡರಿದಣುಗನ ತನ್ನ ಮನೆಗೊಯ್ದಳಾಗ ನಡ । ನಡುಗಿ ಭೀತಿಯೊಳಾ ಸುಶೀಲೆ ॥ ೪ ॥

### ಕಂದ ಪದ್ಯ

ಭರದಿಂ ಮನೆಗೊಯ್ದಣುಗನ । ಕರಸಲ್ಕಂದೊಡನೆ ವಿಷದ ಗಾರುಡಿ ಗರನುಂ ॥ ಉರಗಾಧಿಪಶಯನನಗೆ ಚ । ಚ್ಚರದೊಳ್ ಮಂತ್ರಿಸುತ ಸೊಪ್ಪ ನಿಕ್ಕಿದರಾಗಳ್ ॥

### ಪಂತುವರಾಳಿ ರಾಗ - ಅಷ್ಟತಾಳ

ಸೊಪ್ಪನಿಕ್ಕಿದರು ಗಾರುಡಿಗರು । ಶೇಷ । ತಲ್ಪಗೆ ವಿಷ ತಲೆಗೇರಿ ತೆಂದೆನುತ ॥ ಸೊಪ್ಪ ॥ ಪಲ್ಲ ॥ ವಿಷವ ಭುಂಜಿಸುವನ ಮೇಲೇರಿ ಬಪ್ಪಗೆ ।

ವಿಷಕಂಧರನ ಮಿತ್ರ ಮಾಧವಗೆ ॥ ವಿಷವ ತೊಡೆದು ಮೊಲೆಯುಣ್ಣ ನೆನುತಲನಿ । ಮಿಷರು ವಂದಿಸುವಂತ ಪಾದ ಸರೋಜಗೆ ॥ ಸೊಪ್ಪ ॥ ೧ ॥ ಕಣ್ಣು ಕೈ ಕಾಲಾಡಿಕಿನ್ನು ಯಶೋದೆಯ । ಪುಣ್ಯದಿಂದುಳಿಯಿತು ಶಿಶು ವೆನುತ ॥ ಕಣ್ವಪುರದಿ ನಿಂತ ಕೃಷ್ಣ ಕರುಣಾಳು । ಚೆನ್ನಾಗಿ ಸುಖದಿಂದ ಬಾಳಿ ರೆಂದೆನುತಲಿ ॥ ಸೊಪ್ಪ ॥ ೨ ॥

ವಾರ್ಧಿಕ

ಘೋರ ಪೂತನಿಯ ಕೊಂದಾ ಮೇಲೆ ಶಕಟನ ಶ । ರೀರ ವಡಗಿಸುತ ಯಮಳಾರ್ಜುನರ ಭಂಗಿಸುತ । ವೀರ ತೃಣವರ್ತಧೇನುಕ ವಿವಿಧ ವತ್ಸರಂ ಸೇರಿಸಿದ ಯಮುನ ಪುರಕೆ ॥ ಶ್ರೀರಮಣ ಕೃಷ್ಣ ಬಲರಾಮರೆಂದಿಬ್ಬರಿಗೆ । ಚಾರುನಾಮವನಿರಿಸುತ ನಂದಗೋಪನ ಕು । ಮಾರರನು ತೊಟ್ಟಿಲೊಳ ಗಿಟ್ಟು ಪಾಡಿದರಾಗ ನಾರಿಯರು ಸಂಭ್ರಮದೊಳು ॥

ಮಧ್ಯಮಾವತಿ ರಾಗ - ಅಷ್ಟತಾಳ

ಗೋಕುಲದೊಳಗುಳ್ಳ ಗೋಪನಾರಿಯರ । ರಾಕೇಂದು ನಿಭಮುಖಿ ಕರೆದು ಮನ್ನಿಸುತ ॥ ಆ ಕೀರವಾಣಿಯರೊಡನೆ ಯಶೋದೆ। ಶ್ರೀಕೃಷ್ಣರೆನ್ನಿರೆ ನೀರೆಯರೆನುತ ॥ ಜೋಜೋ ॥ ೧ ॥ ಉನ್ನತ ನವರತ್ನ ಮಂಟಪದೊಳಗೆ। ಸನ್ನುತಾಂಗಿಯರತಿ ಸಂತಸದೊಳಗೆ ॥ ಚಿನ್ನದ ಮಿಣಿಗಳ ಕಟ್ಟಿ ಯಶೋದೆ । ರನ್ನದ ತೊಟ್ಟಿಲೊಳ್ ಶಿಶುವ ತಂದಿರಿಸಿ ॥ ಜೋಜೋ ॥ ೨ ॥ ಜೋಜೋ ಜೋ ದೇವ ಸಚ್ಚಿದಾನಂದ । ಜೋಜೋ ದೇವಾದಿದೇವ ಮುಕುಂದ ॥ ಜೋಜೋಜೋ ಗೋಪಗೋಪಿಯ ಕಂದ । ಜೋಜೋಜೋ ಗೋಪ ಕೃಷ್ಣ ಗೋವಿಂದ ॥ ಜೋಜೋ ॥ ೩ ॥

ಭಾಮಿನಿ

ಇಂತು ಗೋವಿಂದನನು ತೂಗಿದ । ಕಾಂತೆಯರ ಮನ್ನಿಸಿ ಯಶೋದೆ ಮ । ಹಾಂತ ವಿಭವದೊಳಣುಗರನು ಸಲಹುತ್ತಲಿರುತಿರಲು ॥ ಚಿಂತಿತಾರ್ಥ ಪ್ರದನು ತಾನೆ । ಬಂತೆ ಗೋಕುಲ ವಾಸಿಗಳಿಗ । ತ್ಯಂತ ಮಹಿಮೆಯ ತೋರುತಿರ್ದನು ಬಾಲಲೀಲೆಯಲಿ ॥ ೧ ॥

### ಭೈರವಿ ರಾಗ - ಝಂಪೆತಾಳ

ಬಾಲರುಡಿಗೆಗಳುಟ್ಟು । ಬಂಗಾರಗಳ ತೊಟ್ಟು । ಕಾಲೊಳಾಡುತ ಬರುವ ಕಾಣಲತಿ ಚೆಲುವ ॥ ೧ ॥ ನಡೆವದನು ಕಲಿಸುವರು । ನಂದನರ ಕೈ ಪಿಡಿದು । ನುಡಿಯುವರೆ ಕಲಿಸುವರು ನಟನಗಾರರಿಗೆ ॥ ೨ ॥ ಅಂಬೆಗಾಲಿಕ್ಕು ತಂಗಳದೊಳಗೆ ಕುಣಿದಾಡಿ । ಬೆಂಬಿಡದೆ ನಡೆಯುವರು ಬೀಳುತಡಿಗಡಿಗೆ ॥ ೩ ॥

## ಬಾಲಲೀಲೆ

### ವಾರ್ಧಿಕ

ಮೆಲ್ಲ ಮೆಲ್ಲಡಿಯಿಡುತ ಪಶುಪಾಲಕರ ಸ್ನೇಹ । ದಲ್ಲಿ ಗೋವ್ಗಳ ಮೇಯಿಸುತ್ತ ಬಹರನವರತ। ಎಲ್ಲಿ ಮುಳ್ಬೇಲಿ ಹಾವ್ಚೇಳುಗಳ ನಿಕರವಿದ್ದಲ್ಲಿ ಗೊದಗುವರು ಬಿಡದೆ ॥ ಬಲ್ಲತನದಿಂ ಗೋಪಿಯವರೊಸರ ಗಡಿಗೆಗಳ । ಉಲ್ಲಾಸದಿಂ ಪೊತ್ತುಕೊಂಡು ಪುರಬೀದಿಯೊಳಗಲ್ಲಲ್ಲಿ ಮಾರುತ್ತೈತಂದ ರೊಂದು ದಿನ ಪುರದಂಗಡಿಯ ಬಾಗಿಲೊಳಗೆ ॥

### ಪಂತುವರಾಳಿ ರಾಗ - ಏಕತಾಳ

ಮೊಸರ ತೆಕ್ಕೊಳ್ಳಿರವ್ವಾ । ಮಾನಿನಿಯರು । ಮೊಸರ ತೆಕ್ಕೊಳ್ಳಿ ರವ್ವ । ಪಶುಗಳ ಕರೆದು ಹಾಲಿಗೆ ಹೆಪ್ಪುಕೊಟ್ಟ ಅಚ್ಚ-ಕೆನೆ । ಮೊಸರ ತೆಕ್ಕೊಳ್ಳಿರವ್ವ ॥ ೧ ॥ ಕಂದನ ಮನೆಯ ಬಾಗಿ । ಲಿಂದೋಡುತ ಸಣ್ಣ ಕಂದನು ಬರುವ ಮುಂದಗಮನೆಯರ ಆ । ನಂದವ ಕಂಡು ಸುರಿದ ನಿವ ನ್ಯಾವ । ನೆಂದು ಭ್ರಮಿಸುತಿರೆ । ಬಂದು ಸುಂಕಗಾರನು ತಾ । ನೆದು ತಡೆದು ನಿಲ್ಲಿಸಿ ಪೇಳ್ದ ॥ ೨ ॥

### ಕಲ್ಯಾಣಿ ರಾಗ - ಅಷ್ಟತಾಳ

ಕೊಟ್ಟು ಪೋಗೆನ್ನ ಸುಂಕವ । ಕಣ್ಣ । ಬಿಟ್ಟುರಂಜುವನಲ್ಲ । ದಿಟ್ಟೆ ಮೆಂಗಳಿರ ॥ ಕೊಟ್ಟು ॥ ಪ ॥ ಕುಂಭಿನಿಯೊಳಗೆ ಈ ನಂದಗೋಕುಲದಲ್ಲಿ ಒಂಭತ್ತು ಕಡೆಯಲ್ಲಿ ಠಾಣ್ಯವುಂಟು । ಒಂಭತ್ತು ಕಡೆಯೊಳು । ತೊಂಭತ್ತು ಸರಶಿಗೆ । ಡೊಂಬಿಗೆ ಪೋಗುವ ಜಂಬಾರವಾಯ್ತು ॥ ಕೊಟ್ಟು ॥

### ಪೂರ್ವಿರಾಗ - ಅಷ್ಟತಾಳ

ಸುಂಕದ ನಿಜವೇನು ಪೇಳು । ನಿನ್ನ । ಅಂಕೆಗೆ ನುವಂಜುವವರಲ್ಲ ಕೇಳು ॥ ಸುಂಕದ ॥ ಪ ॥ ಬೆಣ್ಣೆ ಮಣವಿಗೊಂದು ತಾರ । ಮೂರು ಹೊನ್ನು ಮೊಸರ ಭಾರ ಕಹುದು ನೀವಿದರ । ಮನ್ನಿಸದಿರೆ ನಿಮ್ಮೆಲ್ಲವರ । ಮನೆ । ಯನ್ನೊಳ ಪೊಕ್ಕು ಸೆಳಗೊಂಬೆ ಪಾಲ್ಮೊಸರ ॥ ಸುಂಕದ ॥ ೧ ॥ ನುದಗೋಪನ ಸುಕುಮಾರ । ಸಣ್ಣ । ಕಂದ ನಿನಗಿದ್ಯಾತಕಿನಿತು ವಿಚಾರ । ಮುಂದೆಮ್ಮ ತಡದರಿದರ । ನಿನ್ನ । ತಂದೆ ತಾಯ್ ಬಳಿಗೈದು ಪೇಳ್ವೆವು ದೂರ ॥ ಸುಂಕದ ॥ ೨ ॥

### ಕಂದ ಪದ್ಯ

ಶಶಿವದನೆಯರಿಂತೈದಿಯೆ । ಮೊಸರಂ ಮರ್ದಿಸುತಲಿಪ್ಪಾ ವೇಳ್ಯದಿ ಬಂದಾ । ವಸುದೇವಾತ್ಮಜ ತಾ । ಕಾಣಿಸಿಕೊಳ್ಳದ ತೆರದಿ ಕದ್ದು ಮೆದ್ದೆ ತಂದಂ ॥

### ಶಂಕರಾಭರಣ ರಾಗ - ಅಷ್ಟತಾಳ

ಯಾರೆ ಬಂದವರು । ಇಲ್ಲಿಗೆ ಕಳ್ಳ । ರ್‍ಯಾರೆ ಬಂದವರು । ಸೋರೆಯ ಮೊಸರು ಬೆಣ್ಣೆಯ ತಿಂಬು ತೋಡಿದ । ರ್‍ಯಾರೆ ಬಂದವರು ॥ ಪ ॥ ಸಿಕ್ಕ ದೊಳಿರಿಸಿದ ಮಡಕೆಗಳೊಳಗೆ ಕಾ । ಡ್ಬೆಕ್ಕಿನ ಹಾಗೆಲ್ಲ ಹುಡುಕಾಡುತ್ತ । ಅಕ್ಕನವರು ಭಾವಗೆಂದು ಕಟ್ಟಿರಿಸಿದ । ಸಕ್ಕರೆ ಜೇನು ತುಪ್ಪವ ತಿಂಬು ತೋಡಿದ ॥ ಯಾರೆ ॥ ೧ ॥ ಸುತ್ತಲು ಚಾವಡಿಯೊಳು ಮಲಗಿರುವಾಗ । ಹಿತ್ತಿಲ ಬಾಗಿಲಿಂದೊಳಗೆ ಬಂದು । ಅತ್ತೆಯು ಮಲಗಿ ನಿದ್ರಿಸಲಾಕೆ ಕೊರ ಳಿಂದ । ಮುತ್ತಿನ ಸರವನ್ನು ಹರಿದು ಬಿಟ್ಟೋಡಿದ ॥ ರ್‍ಯಾರೆ ॥ ೨ ॥ ಹುಣ್ಣಿಮೆ ದಿವಸ ಮುತ್ತೈದೆ ಬ್ರಾಹ್ಮರಿಗೆಲ್ಲ । ಚೆನ್ನಾಗಿ ಬರಹೇಳಿ ಬಡಿಸ ಲೆಂದು । ಅಣ್ಣನವರು ತೆಗೆದಿರಿಸಿದ ರಸಬಾಳೆ । ಹಣ್ಣಿನ ಗೊನೆಯ ವಂಚನೆ ಮಾಡುತ್ತೋಡಿದ ॥ ಯಾರೆ ॥ ೩ ॥

### ಕಂದ ಪದ್ಯ

ನಿದ್ದೆಯ ಹೊತ್ತಿಲಿ ಬೆಣ್ಣೆಯು । ಮುದ್ದೆಯು ರಸಬಾಳೆ ಹಣ್ಣು ಜೇನ್ ತುಪ್ಪಗಳಂ ॥ ಕದ್ದವರಾರೆನೆ ಕೇಳುತ । ಬುದ್ಧಿವಿಶಾಲತೆಯೊಳೆಂದ ಳೊಬ್ಬಳು ತರುಣಿ ॥

### ಸೌರಾಷ್ಟ್ರ ರಾಗ - ಅಷ್ಟತಾಳ

ಮರುಳಾದೆ ಏನೆ ಬಾಲೆ । ಇಲ್ಲಿಗೆ ರಾತ್ರಿ । ಬರುವರಾರೆಂದು ಪೇಳೆ । ನೆರೆಹೊರೆಯವರು ಎಚ್ಚರಿತುಕೊಂಡಿರುವಾಗ । ಸರಿರಾತ್ರಿಯೊಳಗೋರ್ವ ಸುಳಿವ ವಹಾತುಂಟೆನೆ ॥ ಮರುಳಾದೆ ॥ ೧ ॥ ಚಿನ್ನ ಬೆಳ್ಳಿಗಳ ಬಿಟ್ಟು । ಸಕ್ಕರೆ ಬಾಳೆ । ಹಣ್ಣಗೆಂದಾಸೆ ಪಟ್ಟು । ಬೆಣ್ಣೆ ತುಪ್ಪಗಳ ಮೆಲ್ಲರೆ ಮನೆಯೊಳಗಿದ್ದ । ಸಣ್ಣವರಾಟವಲ್ಲದೆ ಬೇರಿನ್ನಾರುಂಟು ॥ ಮರುಳಾದೆ ॥ ೨ ॥ ಅಕ್ಕ ನೀ ಸುಮ್ಮನಿರೆ । ಆದರೆ ಕಳ್ಳ । ಸಿಕ್ಕದೆ ಪೋಗ ಬಾರೆ । ದಕ್ಕದು ಕಳವು ಹಾದರವೆರಡಕು । ಸಣ್ಣ ಮಕ್ಕಳಾದರು ಕಂಡು ಸೊಕ್ಕ ಮುರಿಯಬೇಕು ॥ ಮರುಳಾದೆ ॥ ೩ ॥

### ಭಾಮಿನಿ ಷಟ್ಪದಿ

ವನಿತೆಯರು ತಮ್ಮೊಡನೆ ಯೋಚಿಸಿ । ಮನೆಗೆ ಬಂದಾಕ್ಷಣವೆ ಮಕ್ಕಳ। ಘನತರದೊಳಂಜಿಸುತ ಕೇಳುತ್ತಿರಲು ರಾತ್ರಿಯಲಿ ॥ ಕನಸ ಕಂಡಂದದಲಿ ಮರುದಿನ । ಕೆನೆ ಮೊಸರ ಸುರಿದೋಡುತಿರಲಾ । ಧ್ವನಿಯ ಲಾಲಿಸಿ ತಿಳಿದು ಬಳಿಕಿಂತೆಂದಳಾ ತರುಣಿ ॥

### ನಾದನಾಮಕ್ರಿಯೆರಾಗ - ಝಂಪೆತಾಳ

ಅಕ್ಕ ಕೇಳೀ ಕೇರಿ । ಒಕ್ಕಲೊಳು ಕಳುವವರು । ಮಕ್ಕಳೊಳಗಲ್ಲದೆ ಮತ್ತೊಬ್ಬರಲ್ಲ ॥ ೧ ॥ ಪೇಳಲಂಜುವೆ ಬಂದ । ಹೊಸ ಪರಿಯ ಬಾಲಕಗೆ । ಕಾಲಲಂದುಗೆ ಗೆಜ್ಜೆ ಕಡಗ ಮೊದಲುಂಟು ॥ ೨ ॥ ಪೀತಾಂಬರವನುಟ್ಟು । ಫಣೆಗೆ ತಿಲಕವನಿಟ್ಟು । ಜಾತಿ ತುಳಸಿಯ ದಂಡೆ ಕೊರಳೊಳಗೆ ಕಂಡೆ ॥ ೩ ॥ ನೀಲವರ್ಣದ ಮೈಯ । ನುಡಿವ ಕೊಳಲಿದೆ ಕೈಯ । ಬಾಲಕೃಷ್ಣನ ರೂಪ ಪ್ರತಿಯಾಗಿ ತೋರ್ವ ॥ ೪ ॥ ನಂದಗೋಪ ಯಶೋದೆ । ಕಂದನಲ್ಲದೆ ಮನೆಗೆ । ಬಂದು ಕಳುವವರಿಲ್ಲ ಬದಲೊಬ್ಬರಿಲ್ಲ ॥ ೫ ॥ ಅರಸುಗಳ ಬಾಲಕರು ಅನ್ಯಾಯ ಮಾಡಿದರೆ । ಪರರೊಡನೆ ಪೇಳ್ವರದ ಪರಿಪರಿಪರ್ರ್ಯಾರು ॥ ೬ ॥

### ಭಾಮಿನಿ ಷಟ್ಪದಿ

ಶರಧಿ ಮೇರೆಯ ತಪ್ಪಿತಾದರೆ । ಧರಣಿ ತಲೆಕೆಳಗಾಗಿ ಪೋದರೆ । ಕರುಣವಿಲ್ಲದೆ ಬೇಲಿಯೇ ಬೆಳೆತಿಂದು ಕೆಡಿಸಿದರೆ ॥ ಅರಸುಗಳೊಳನ್ಯಾಯ ವಾದರೆ । ಪರಿಹರಿಪರಿಲ್ಲೆಂದು ಗೋಕುಲ । ದರಸಿಯಾದ ಯಶೋದೆ ಯೆಡೆಗೈತಂದರರಮನೆಗೆ ॥

### ಸೌರಾಷ್ಟ್ರ ರಾಗ - ಅಷ್ಟತಾಳ

ಏನಿರೆ ಸತಿಯರೆಲ್ಲರು ನಡೆತಂದಿರಿ । ಏನಿರವ್ವ । ಮಾನಿನಿಯರಿರ ಮಂಚದಲಿ ಕುಳ್ಳಿರಿ ಬನ್ನಿ । ಏನಿರವ್ವ ॥ ಪಲ್ಲ ॥ ಆನನ ರಸತಗ್ಗಿ ತಂಬುಜ ವದನೆಯ । ರೇನಿರವ್ವ । ನಿಮ್ಮ । ಮಾನಸ ಹರುಷ ನಿ । ಧಾನವಾಗಿರುವ ದಿ । ದೇನಿರವ್ವ ॥ ೧ ॥ ಊಟ ಮಿಾವುಗಳಲ್ಲಿ ತೊಡರು ಬಂದಡರಿತೆ । ಏನಿರವ್ವ । ಬಲು । ಕಾಟಕ ಜನರಿಂದ ಮುನಿಸು ಬಂದೊದಗಿತೆ । ಏನಿರವ್ವ । ಕೋಟಲೆ ಮನೆಯ ಸಂಸಾರ ವೆಗ್ಗಳಿದು । ದೇನಿರವ್ವ । ಆಟಕವಲ್ಲಿದು ಪೇಳ್ಕ ಸಾಧಿಸಿ ಬಂದು । ದೇನಿರವ್ವ ॥ ೨ ॥ ಅಂತರಂಗ ದೊಳನುತಾಪವೆಗ್ಗಳಿಸಿಹು । ದೇನಿರವ್ವ । ಬಲು । ಚಿಂತೆಯಿಂದ ರಮನೆ ಗೈತಂದ ಕಾರಣವೇನಿರವ್ವ । ಕಾಂತೆಯರಿರ ಕಪಟವ ಮಾಡದುಸುರಿ ಮ । ತ್ತೇನಿರವ್ವ । ಲಕ್ಷ್ಮೀ । ಕಾಂತನು ದಯದಿ ನಮ್ಮೆಲ್ಲರ ಸಲಹುವ । ಏನಿರವ್ವ ॥ ೩ ॥

### ಕಂದ ಪದ್ಯ

ಪದುಮದಳಾಕ್ಷಿ ಯಶೋದೆಯು । ಸುದತಿಯರಂ ಮನಿಸುತ್ತ ವೀಳ್ಯವ ಕೊಡಲು । ಮದಗಜಗಮನೆಯರಾಗಲೇ ಮುದದಿಂ ಪೇಳಿದರು ಕೃಷ್ಣ ನಾಟಂಗಳನು ॥

### ಶಂಕರಾಭರಣ ರಾಗ - ಮಟ್ಟೆ ತಾಳ

ಕೇಳೆ ಗೋಪಿ ರಂಗನಾಟವ । ನೀ ಕರುಣದಿಂದ । ಕೇಳೆ ಗೋಪಿ ರಂಗನಾಟವ । ಪೇಳದಿರುವುದುಚಿತವಲ್ಲ । ಪೇಳ್ದೊಡೊಂದು ಕಾರ್ಯವಿಲ್ಲ । ಕೇಳೆ ಗೋಪಿ ರಂಗನಾಟವ ॥ ಪಲ್ಲವಿ ॥ ಸರಿಯ ರಾತ್ರಿಯೊಳಗೆ ಬಾಗಿಲ್ಮುರಿ ಯಲಾಗಿ ಬೆದರಿ ಕದವ । ತೆರೆಯಲೊಳಗೆ ಬಂದು ನಾ । ಪರಿಯದಂತೆ

ಹಾಲು ಮೊಸರ । ಸುರಿವು ತೋಡಿ ಬರುವ ಸುಮ್ಮನೆ । ಇರಲು ಸಕ್ಕರೆಯು ಕದ್ದು ಮೆಲುವ । ಘಮ್ಮನೆ । ನಗುತ ಮೇಲ್ । ಬರಿಯ ಮಾಡಿ ಬಿಡುವ ನಮ್ಮನೆ ನೀ । ಕರುಣದಿಂದ ॥ ಕೇಳೆ ॥ ೧ ॥ ಅಟ್ಟದ ಮೇಲಡಗಿಸಿ ಬ । ಚ್ಚಿಟ್ಟರದರ ಬುಡಕೆ ಕೋಲಲಿಟ್ಟು ತೂತು ಮಾಡಿ ಬಂದಷ್ಟು ಬಾಯಬಿಟ್ಟು ಸವಿಯ । ತೊಟ್ಟಿನವರ ಕರೆದು ಕೊಡುವನು । ಬೆದರಿಸಲುಕ । ಲ್ಲಿಟ್ಟು ಭಾಂಡಗಳನು ಒಡೆವನು । ಸತಿಪತಿಯರ । ಜುಟ್ಟು ಜುಟ್ಟು ಕಟ್ಟಿ ದಿಡು ವನು ನೀ । ಕರುಣದಿಂದ ॥ ಕೇಳೆ ಗೋಪಿ ॥ ೨ ॥

### ಕಂದ ಪದ್ಯ

ಬಾಲೆಯರಿಂತೆಂದಾ ಗೋ । ಪಾಲನ ದೂರಂನರುಹಲು ಪಸುಪಸು ತಾಗಂ ॥ ಬಾಲಕನೆಸಗಿದರೆಮ್ಮಯ । ಮೇಲಪಕೀರ್ತಿಯು ಬಹುದೆನುತವ ರೊಡನೆಂದಳ್ ॥

### ಕಾಂಬೋಜಿ ರಾಗ - ಏಕತಾಳ

ಅಮಮ ಇದೆಂಥ ಚೋದ್ಯವು ॥ ಇವರಾಡುವ ಮಾತುಗ । ಳಮಮ ಇದೆಂಥ ಚೋದ್ಯವು ॥ ಪಲ್ಲ ॥ ತಮ್ಮ ಮನೆಗೆ ರಾತ್ರಿಯೊಳಗೆ ತ್ವೋ । ಗೆಮ್ಮ ಬಾಲ ಬಾಗಿಲ ಮುರಿದನು ಗಡ । ಅಮಮ ॥ ಅ. ಪಲ್ಲ ॥ ಸಂಜೆಯೊಳಂಗಳಕಿಳಿಯದ ಬಾಲನು । ಪರರೊಡವೆಯ ಮುಟ್ಟಲಿ ಕಂಜುತ್ತಲಳುಕುತ್ತ । ಲಿಹ ಗೋಪಾಲನು ಮೊಸಲ್ಗೊಸರ್ಟಣ್ಣೆಯ ಎಂಜಲ ಮಾಡಿದನಂತೆ ವಿಶಾಲನು । ಶಿವಶಿವಾ ನಾವು ರಂಜಿಸಿ ಕೇಳಿದೆ ವೀಪರಿ ಜಾಲವನು ॥

### ಕೇದಾರಗೌಳ ರಾಗ - ಅಷ್ಟ ತಾಳ

ಸರಿ ರಾತ್ರಿಯೊಳಗೆನ್ನ । ತರಳ ಮನೆಗೆ ಬಂದ । ಗುರುತವೇನಮ್ಮ ಪೇಳು ॥ ಇರುಳು ಪಟ್ಟಣದ ರಕ್ಷಿಪ ತಳವಾರಿನ । ಚರರ ನೀ ಕರೆಸಿ ಕೇಳು ॥ ೧ ॥ ಕಂದನಿರುಳು ನಿಮ್ಮ । ಮಂದಿರದೊಳು ಬೆಣ್ಣೆ । ತಿಂದಿಹ ಗುರುತ ವೇನೆ ॥ ಒಂದರ ಮೇಲೊಂದಿಟ್ಟೊಡೆದ ಭಾಂಡದ ಚಿಪ್ಪು । ತಂದು ತೋರು ವೆವು ಕಾಣೆ ॥ ೨ ॥

ಕಂದ ಪದ್ಯ

ಪರಿಹಾಸ್ಯದಿಂದ ನಗುತಾ । ತರುಣಿಯರಂ ಬಹುಮಾನಿಸುತ ಕಳು ಹಲ್ಕಂದು ॥ ಮರುದಿನ ಮಾಡಿದ ಲೂಟಿಯ । ಭರದಿಂದೈತಂದು ಪೇಳ್ದ ಳೊಬ್ಬಳು ತರುಣಿ ॥

ಕಲ್ಯಾಣಿ ರಾಗ - ಅಷ್ಟತಾಳ

ಎಷ್ಟೆಂದು ಪೇಳಲಮ್ಮ । ಗೋಪಾಲನ। ದುಷ್ಪತನವ ಗೋಪಮ್ಮ ॥ ಕಟ್ಟಿದ ಕರುಗಳ। ಬಿಟ್ಟು ಕರೆವ ಮುನ್ನ । ಹಟ್ಟಿಯಿಂ ನೆಗೆದೋಡಿದ । ಕೇಳು ವಿನೋದ ॥ ಎಷ್ಟೆಂದು ॥ ೧ ॥ ಬಣ್ಣಗತಿಯಲಿ ಬಂದ । ಪಾಲ್ಮೊ ಸರ್ತುಪ್ಪ । ಬೆಣ್ಣೆಯ ಕದ್ದು ತಿಂದ । ಮಿಣ್ಣನೆ ಮಲಗಿದ್ದ । ಚಿಣ್ಣನ ಮೂಗಿಗೆ । ಸುಣ್ಣವ ಬರೆದೋಡಿದ ನೀ ಕೇಳವ್ವ ॥ ೨ ॥ ಇಷ್ಟೆಲ್ಲ ಕಂಡು ನಾವು । ಅಟ್ಟದಲಿ ಬ । ಚ್ಚಿಟ್ಟ ದುಗ್ಧದ ಭಾಂಡವು । ಪುಟ್ಟಗೋಪಾಲರ ಹೆಗಲೇರಿ ಕೆಳಗೆ ಮೈ । ದಿಟ್ಟೋಡಿ ಪೋದ ಕಾಣೆ । ಕೇಳೆಲೆ ಜಾಣೆ ॥ ೩ ॥ ಭಟ್ಟ ಬ್ರಾಹ್ಮಣರಿಗೆನ್ನುತ್ತ । ಮೂಲೆಯಲಿ ಬ । ಚ್ಚಿಟ್ಟರ್ದದ ನೋಡುತ। ಕೆಟ್ಟ ಮೂಳಿಯ ಮಕ್ಕಳೆನುತ ಬಾಗಿಲ್ಗೆ ಕ । ಲ್ಲಿಟ್ಟೋಡಿ ಪೋದನಮ್ಮ । ಕೇಳೆ ಗೋಪಮ್ಮ ॥ ೪ ॥

ಕಂದ ಪದ್ಯ

ಮಕ್ಕಳ ಮಾಣಿಕ ಪಾಲ್ಮೊಸ । ರಿಕ್ಕಿದರದನುಣ್ಣಲೊಲ್ಲ ಸೇರದು ಬೆಣ್ಣೆ ॥ ಚಿಕ್ಕವ ನಿಮ್ಮಡಿಗೆಯ ಮನೆ । ಪೊಕ್ಕನು ಸರಿರಾತ್ರಿಯೊಳೆಂಬು ದಿದಚ್ಚರಿಯಂ ॥

ಕಲ್ಯಾಣಿ ರಾಗ - ಅಷ್ಟತಾಳ

ಸಣ್ಣವರಾಟವಲ್ಲ । ಸಂಗಡ ಬಂದ ಚಿಣ್ಣರೊಳ್ ಕೇಳ್ದೆವೆಲ್ಲ । ಅಣ್ಣರಾ ಮರಿಯದಂದದೊಳೋಡಿ ಬಂದಿವಳ । ಬಣ್ಣದುಟಿಯ ಸವಿದ ಕೇಳು ವಿನೋದ ॥ ಸಣ್ಣವ ॥ ೧ ॥ ಎಂದೂ ಎನ್ನಣುಗನಿಗೆ । ಆಲದ ಹಣ್ಣು । ತಿಂದು ಅಭ್ಯಾಸವಾಗೆ । ಒಂದರಿಯದ ಬಾಲ ಮುಗುದೆ ನಿನ್ನಧರವ । ತಿಂದ ರಿಂದೇನಾಯಿತೆ । ಪೇಳೆಲೆ ಕಾಂತೆ ॥ ಸಣ್ಣವ ॥ ೨ ॥ ನಸುಬೆಳಕಾಗುವಾಗ ।

ಯವ್ವನವತಿ । ಪೊಸರ ಪಂ । ತಿಸುತಿಪ್ಪಾಗ । ಕುಶಲದಿಂದೆಳೆದ ಪರ್ದಪ್ಪುತ ತರುಣಿಯು । ಪೊಸ ಕುಚಂಗಳ ಮುಟ್ಟಿದ । ಕೇಳು ವಿನೋದ ॥ ೩ ॥ ದೇವತಾರ್ಚನೆಗೆನ್ನುತ್ತ । ಏಕ್ತ್ಯದಲಿ ರಾ । ಜೀವಗಳನು ಕೊೖವಂಥ । ತಾವರೆ ಪೊಗ್ಗಂದರಿಯದೆ ಮುಟ್ಟಲು । ಬಹುಪೂಸಗಳು ಕುಂದಿತೆ । ಕೇಳೆಲೆ ಕಾಂತೆ ॥ ೪ ॥ ಸಣ್ಣವ ॥ ನೀರನು ತರಲು ಪೋದ । ಈ ಸುದತಿಯ । ದಾರಿಯಡ್ಡವ ಕಟ್ಟಿದ । ನಾರಿ ಹೇಳಿದಕೇನು ಬೆಲೆಕೊಟ್ಟೆ ಯೆನುತುಟ್ಟ । ಸೀರೆಯ ನೆಗದೋಡಿದ । ಕೇಳು ವಿನೋದ ॥ ೫ ॥ ಆರೇಳು ವರ್ಷವಾದ । ಬಾಲಕನುಟ್ಟ । ಸೀರೆಯಂದವ ನೋಡಿದ । ಸೌರಮ್ಯಾಂಬರ ವಿದರ ಬೆಲೆ ಏನೆನುತ ಮೇಲ್ । ಹಾರಿಸಲೇನಾಯಿತೇ । ಪೇಳೆಲೆ ಕಾಂತೆ ॥ ೬ ॥

## ಬಿಲಹರಿ ರಾಗ - ಅಷ್ಟತಾಳ

ಮಗಗಿನ್ನಾದರು ಬುದ್ಧಿ ಪೇಳೆ । ಇನ್ನು । ನಗೆಯಲ್ಲಿ ಕೈ । ಮುಗಿವೆವು ಪಾತ ಕೇಳೆ ॥ ಮಗ ॥ ಪಲ್ಲ ॥ ಕಳವು ಹಾದರವು ಮದ್ದಲ್ಲಿ । ನೀವು ಇಳೆಯಪಾಲಿಸುವರಿ। ಗಿದು ಯೋಗ್ಯವಲ್ಲ॥ ಬಳಸುವುದಪಕೀರ್ತಿ ಎಲ್ಲ। ರಾಜ್ಯ ದೊಳಗಿರುವುದು ಕಷ್ಟ ನೀ ಕೇಳು ಸೊಲ್ಲ ॥ ೧ ॥ ಉಂಡದ ಕಳಲುವರಾರು। ನೆಲ । ನುಂಡು ಕೆಟ್ಟಿತು ಎಲ್ಲ ಪಾಲ್ಬೆಣ್ಣೆ ಮೊಸರು । ಕಂಡ ಕಡೆಯಲಿ ಚೆಲ್ಲು ವರು । ಕಪಿವಿಂಡುಗಳಿಗೆ ಸಹ ಕರೆದು ಕೊಡುವರು ॥ ೨ ॥

## ಪಂತುವರಾಳಿ ರಾಗ - ರೂಪಕತಾಳ

ಚಂದವಾಯಿತು ಮಗನೆ । ಚಂದವಾಯಿತು । ನಂದಗೋಪನಣುಗ ಕದ್ದು । ತಿಂದನೆಂಬ ಮಾತು ಬಂದುದು ॥ ಪಲ್ಲ ॥ ಪರರ ಮನೆಯ ಪಾಲು ಬೆಣ್ಣೆ । ಸುರಿವು ತೋಡಿಬರುವುದಕ್ಕೆ । ಅರಮನೆಯಲಿ ಕರವದೇನು ಕಡಿಮೆ ಯಾಯಿತೆ । ಅಯ್ಯಯ್ಯೊ ನಡತೆ ॥ ಚಂದ ॥ ೧ ॥ ನರಿಯು ನಾಯಿ ತಿಂದು ಪೋದುದೆಮ್ಮ ತೋಟದಲ್ಲಿ ಪಣ್ಗಳ । ತರಿಸಲ್ಯಾರು ಬೇಡವೇದರೇ । ಬೇಕೆಂಬುದಾದರೆ ॥ ಚಂದ ॥ ೨ ॥ ಪರರಿಗೆಲ್ಲ ಬುದ್ಧಿ ಪೇಳಿ ಪಾಲಿಸುತ್ತಿರುವ ನಾವು । ನೆರೆಮನೆಯೊಳ್ಕಳವು ಪಾಳ್ಪರೆ । ಕೈಮಾಡಿದಾದರೆ ॥ ೩ ॥

### ಕಲ್ಯಾಣಿ ರಾಗ - ಅಷ್ಟ ತಾಳ

ಗೊಲ್ಲ ಹೆಣ್ಣುಗಳು ಕೂಡಿ । ನಿನ್ನೊಡನೆಲ್ಲ । ಸಲ್ಲದ ಮಾತನಾಡಿ । ಖುಲ್ಲಗಾತಿಯರು ಮತ್ಸರದಿ ದೂರುವರೆನ್ನ । ಕೊಲ್ಲ ಬೇಕೆನುತಲಮ್ಮ । ಕೇಳ್ ಗೋಪಮ್ಮ ॥ ೧ ॥ ನೆರೆಮನೆಯೊಳ್ಕುಳುವರೆ - ಪಾಲ್ಮೊಸರ್ಗೇನು । ಬರಗೆಟ್ಟು ಪೋದುದೇನು । ಇರುಳು ಪಟ್ಟಣವ ಸಂಚರಿಸಲ್ಕೆನಗೇನು । ಮರುಳಾಟವಾಯ್ತೇನಮ್ಮ । ಗೋಪಮ್ಮ ॥ ೨ ॥ ಮೊಸಲು ಮೊಸರುಂಡರೆ। ಮಾನವರ್ಗದು। ದೋಷದ ಗುಣವಲ್ಲವೆ। ಆ ಸುದತಿಯರೆಂದ। ಮಾತಿಗಣ್ಣನ ಕೂಡೆ । ನೀ ಸಾಕ್ಷಿಗಳನು ಕೇಳು । ಆ ಕ್ಷಣದೊಳು ॥ ೩ ॥

### ಕಂದ ಪದ್ಯ

ಕಂದನ ನುಡಿಯಂ ಕೇಳ್ದಾ । ನಂದನ ಸತಿ ಮಗುವ ಮುದ್ದು ಮಾಡುತ್ತಾಗಂ । ಬಂದರೆ ನಿಮ್ಮನೆಗೀತನ ತಂದೆನಗೊಪ್ಪಿಸುವದೆಂದೊಡಂಬಡಿಸಿದಳಾಗಳ್ ॥

### ವಾರ್ಧಿಕ

ಮುಂದಗಾಮಿನಿ ಯಶೋದೆಯು ಪಾತಿಗವರು ನಡೆ । ತಂದು ಕೃಷ್ಣನ ಹಿಡಿಯಬೇಕೆಂಬ ಮೊದಲವರ । ಮುಂದಿರವ ಪೊಕ್ಕೊಡನೆ ನಲವಿನಿಂದಿಟ್ಟಿರುವ ಬಿಂದಿಗೆಯ ಮೊಸರ ಸುರಿದು ॥ ಮುಂದೆ ಪಾಲ್ಮೊಸರು ಬೆಲ್ಲವನಿಟ್ಟ ಠಾವಾವು । ದೆಂದು ಹುಡುಕಾಡುತಿಹ ಸಮಯದೊಳು ಗೋಪಿಯರು । ಇಂದಿರಾಪತಿಯ ನಡ್ಡವ ಗಟ್ಟಿ ಹಿಡಿದು ಎಳೆ ತಂದರು ಯಶೋದೆಯೆಡೆಗೆ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಬಂದು ಗೋಪಿಯ ಕೈಯೊಳಿದ್ದ ಮು । ಕುಂದನನು ಕಾಣುತ್ತ ಬರಿಗೈ । ಯಿಂದ ತಾವಿದ್ದಿರವನೀಕ್ಷಿಸು ತಂದು ಭ್ರಮಿಸಿ ॥ ೧ ॥ ಮಾತ ನಾಡದೆ ನಾಚುತಲಿ ಮನ । ಸೋತು ಸುಮ್ಮನೆ ಮನೆಗೆ ಬಂದತಿ। ಕೌತುಕದ ಶಿಶುವೆನುತ ಕೃಷ್ಣನ ಪೊಗಳುತಿಹರು ॥ ೨ ॥ ಕಾರಣೀಕದ ನಂದಗೋಪ ಕು । ಮಾರಕನ ಪಡೆ । ದವರ ಪುಣ್ಯ ವಿ । ಚಾರವೆಂದೇ ಪೊಗಳುತಿರ್ದರು । ಕೇರಿಯೊಳಗೆ ॥ ೩ ॥

### ಆನಂದಭೈರವಿ ರಾಗ - ಏಕತಾಳ

ತಪ್ಪಿಸಿಕೊಳ್ಳದ ಹಾಗೆ । ಕಟ್ಟುವ ಸಿಕ್ಕಿದರೆ ಕೈಗೆ । ಬಾಲನ । ಚಾರು ಶೀಲನ ॥ ೧ ॥ ಜಾಗರದೊಳಿರುವ ನಾವು । ಜತನವೆಂದು ಮಹಾತಾ ಡುತ್ತ । ಪೋದರು । ಮನೆಯೊಳ್ ಕಾದರು ॥ ೨ ॥ ಕದ್ದು ಮೊಸರು ಬೆಣ್ಣೆ ತುಪ್ಪ । ಮೆದ್ದೋಡಲಾ ಕೃಷ್ಣನ । ತಡೆದರು । ಎಲ್ಲ ಹಿಡಿದರು ॥ ೩ ॥

### ಮಧ್ಯಮಾವತಿ ರಾಗ - ಅಷ್ಟತಾಳ

ಸಿಕ್ಕಿದ । ಕಳ್ಳ । ಸಿಕ್ಕಿದ । ಇವನ ಸೊಕ್ಕುಗಳನೆ ಮುರಿ । ದಿಕ್ಕಿದೆ ಬಿಡೆವು ॥ ಸಿಕ್ಕಿದ ॥ ೧ ॥ ಬೊಂಬೆಯ ಮದುವೆಯಾಟದೊಳಿರಲಿವ ಬಾಲ । ನೆಂಬುದಕಾಗಿ ಸುಮ್ಮನೆ ಬಿಟ್ಟೆವು । ಕಂಬದ ಮರೆಗಾಗಿ ಕರೆದೊಯ್ದೀ ತರುಣಿಯ । ಚುಂಬಿಸಿ ತುಟಿಕಚ್ಚಲುಚಿತವೇ ನಮ್ಮ ॥ ಸಿಕ್ಕಿದ ॥ ೨ ॥ ಮೊಸರು ತುಪ್ಪ ಬಾಳೆಯ ಹಣ್ಣ ಮೆಲುವಾಗ । ಹಸುಮಗುವೆಂದು ಲಾಲಿಸಿ ಕೊಂಡೆವು । ನಿಶೆಯೊಳಗಡಗಿ ಬಳಿಗೈತಂದೀ ತರುಣಿಯ । ಪೊಸಕುಚಗಳ ಮುಟ್ಟಲುಚಿತವೇನಮ್ಮ ॥ ಸಿಕ್ಕಿದ ॥ ೩ ॥ ಕಣ್ಣಮುಚ್ಚಾಲೆಯಾಡುವ ಎಂದು ಕರೆವಾಗ । ಸಣ್ಣವನೆಂದು ಸುಮ್ಮನೆ ಬಿಟ್ಟೆವು । ಕಣ್ವಪುರೀಶ ಶ್ರೀಕೃಷ್ಣ ಈ ತರುಣಿಯ । ಬೆನ್ನ ಮೇಲೇರಿರಬಹುದೆ ಏನಮ್ಮ ॥ ೪ ॥

### ವಾರ್ಧಿಕ

ಗೋಪಾಲಕೃಷ್ಣ ಸಿಕ್ಕಿದನಿವನ ಬೆಳಗಾಗೆ । ಗೋಪಿಯಿದ್ದೆಡೆಗೊಯ್ದು ಬುದ್ಧಿ ಕಲಿಸುವೆನೆನುತ । ಆ ಪುಣ್ಯಚರಿತೆಯರು ಸರಿರಾತ್ರೆಪರಿಯಂತ ಕಾದಿರ್ದರಾ ಬಾಲನ । ಶ್ರೀಪತಿಯು ಮನೆಗೆ ತಾ ಬಾರದಿರಲು ಯಶೋದೆ । ತಾಪವನು ನೆರೆತಾಳಿ ಮಗನೆಲ್ಲಿ ಪೋದನೆಂ । ದಾ ಪುರದ ಕೇರಿಯೊಳಗರಸಿ ದಳು ಶ್ರೀಹರಿಯ ಗುಣ ರೂಪಮಂ ಪೊಗಳುತ ॥

### ರೇಗುಪ್ತಿ ರಾಗ - ಅಷ್ಟತಾಳ

ರಂಗ ಬಂದನೇ । ಪಾಂಡು । ರಂಗ ಬಂದನೆ । ರಂಗು ಮಹಾಣಿಕದ ಹರಳ । ಉಂಗುರದ ಕಯ್ಯ ಬೆರಳ ॥ ಪಲ್ಲವಿ ॥ ಸಿರಿಯ ಸೋಲ್ಮುಡಿಯ ಸೌಂ । ದರ್ಯ ಪುಷ್ಪಮಾಲೆಯ । ಧರಿಸಿ ಕುಂಕುಮವ ಕ । ಸ್ತೂರಿಯ

ನಾಮ ಹಣೆಯೊಳಿಟ್ಟು ॥ ರಂಗ ॥ ೧ ॥ ಕೊರಳ ಕೌಸ್ತುಭ ಹಾರ । ಮೆರೆವ ಕರ್ಣಕುಂಡಲದ । ಕರದಿ ಕಂಕಣ ಪೀತಾಂ । ಬರದುಡಿಗೆಯನುಟ್ಟು ॥ ರಂಗ ॥ ೨ ॥ ಉರದೊಳೊಪ್ಪುವ ರತ್ನ । ಸರ ವೈಜಯಂತೀಮಾಲೆ । ಕರದಿ ಕೊಳಲ ಪಿಡಿದ ಕಣ್ವಪುರದ ಗೋಪಾಲಕೃಷ್ಣ ॥ ೩ ॥

### ಕಂದ ಪದ್ಯ

ತಂದರೆ ಮಾಳ್ಪೆ ವಿಚಾರವ । ನೆಂದಾಡಿದ ಮಾತಿಗಾಗಿ ಗೋಪಿಯು ರಾಗಳ್॥ವಂದಿಸಿ ಸಿಕ್ಕಿಹ ನಿನ್ನಯು।ಕಂದಗೆ ನೀಂ ಬುದ್ಧಿ ಹೇಳೆನುತ್ತಿಂತೆಂದರ್॥

### ಭೈರವಿ ರಾಗ - ಏಕತಾಳ

ಗೋಪಮ್ಮ । ನಿಮ್ಮ । ಕಂದನ ಕಳ್ಳ ಚಾಡಿಯ ಬಿಡಿಸೇ । ಬೇಡ। ವೆಂದೊಡಂಬಡಿಸೇ । ದಯ । ದಿಂದ ನಮ್ಮೆಲ್ಲರ ಸಡೆಸೇ । ಬೇ । ಕೆಂಬ ವಸ್ತುಗಳೆಲ್ಲ ಕೊಡಿಸೆ ॥ ಗೋಪಮ್ಮ ॥ ಪಲ್ಲವಿ ॥ ಸುಳ್ಳು ಮಾತಾಡುವಿರಿ ನೀವೆಂದೆ । ಗೋಪಾಲಕೃಷ್ಣ । ಒಳ್ಳೆಯವನೆಂದೆ । ಗುಣದಿ ಹಿಂದೆ । ದಯ ಉಳ್ಳಡಿನ್ನಾದರು ಮುಂದೆ । ಇಕೊ । ಕಳ್ಳನ ಒಪ್ಪಿಸಿದೆವು ಇಂದೆ । ಸಟೆಯಲ್ಲ ಕೈಮುಗಿದು ಬೇಡುವದೊಂದೆ ॥ ಗೋಪಮ್ಮ ॥ ೧ ॥ ಬೆಳಗು ಜಾವದಲಿ ಮೆಲ್ಲಗೆ ಬಂದ । ದಂಪತಿಗಳು ಕೋಣೆಯೊಳಗೆ ಮಲಗಿರೆ ನಾಚಿಕೆ ಗೊಂಡ । ನಮ । ಗಳವಲ್ಲ ಪೇಳಲ್ಕಾ ಭಂಡ । ನೋಡ । ಲಿಳೆಯೊಳ ಗೀತನು ಬಲು ಷಂಡ । ಮುದದೊಳ ನಗುತಿರುವನು ದೇವ ಮುಕುಂದ ॥ ಗೋಪಮ್ಮ ॥ ೨ ॥

### ಭಾಮಿನಿ

ವಾರಿಜಾಕ್ಷಿಯರಿಂತು ಕೃಷ್ಣನ । ದೂರುಸುರುತಿರೆ ತಿಂದ ಪೊಸರಿನ । ನೀರು ತುಪ್ಪದ ಜೊಲ್ಲು ಕೈ ಬ್ಯಾಯೊಂಜಲೂಡಿರಲು ॥ ಚೋರನಿವನಹು ದೆನಲು ತನ್ನ ಕು । ಮಾರನ ಕಂಡಬಲೆ ನಾಚಿ । ವಿಕಾರಮತಿಯಲಿ ಮನೆ ಗೊಯ್ದು ಬೆದರಿಸಿದಳರ್ಭಕನ ॥

### ಘಂಟಾರವ ರಾಗ - ಝಂಪೆತಾಳ

ಚೋರತನದಲಿ ಪಾಲು ಪೊಸರು ಬೆಣ್ಣೆಯ ಮೆಲಲು । ಧಾರಿಣೀ ಪತಿಗಳಿಗೆ ಧೀರತನವೇನೋ ॥ ೧ ॥ ಇನಿತು ದಿನ ಸೈರಿಸಿದೆ ಈ ಮಾತುಗಳು

ನಿನ್ನ । ಘನತರದಿ ನೋಡಿದೆನು ಗಂಭೀರ ಗುಣವ ॥ ೨ ॥ ಕಂಡಪರ ಮನೆಯ ಪಾಲುಂಡು ವೊಸರ್ಕಳುವುದಕೆ । ಘಂಡು ಘೋಕನೆ ನೀನು ಪುರುಷಾರ್ಥವೇನು ॥ ೩ ॥ ಬೆಣ್ಣೆ ತುಪ್ಪ ಬೇಡಿ ಬೇಸರಿಸಿ ಕಾಡುವರೆ । ಉಣ್ಣಲಿಲ್ಲದ ತಿರುಕುಳಿಯ ಕೊಟದವನೆ ॥ ೪ ॥

### ಶಂಕರಾಭರಣ ರಾಗ - ಅಷ್ಟ ತಾಳ

ತರವೇನೊ ರಂಗ । ತಾಳು ತಾಳಯ್ಯ । ತರುಣಿಯ ಒಡನಾಟ ಬೇಡವೆ ನಿನಗೆ ॥ ತರವೇನೊ ॥ ಪಲ್ಲವಿ ॥ ಸರಿ ರಾತ್ರೆಯುವರ ಮಂದಿರದಿ ದಂಪತಿಗಳು । ಸರಸದೊಳಿರಲೊಳ ಸರಿಯುತ್ತಲ್ಲಿ ॥ ಮರಿಯಾದೆ ಕೆಟ್ಟು ಮೈ ಮುಟ್ಟಿವಂಚಿಸುತವ । ರರಿಯದಂ । ತೋಡಿ ಕಾಡುವ ಮಂಗಚೇಷ್ಟೆಯು ॥ ೧ ॥ ಅನ್ಯರ ಮನೆಯೊಳಗಡಗಿರಿಸಿದ ಬಾಳೆ । ಹಣ್ಣಿನ ಗೊನೆಯ ತುಪ್ಪವ ಭಕ್ಷಿಸಿ ಹೆಣ್ಣು ಮಕ್ಕಳು ಮೊರ್ಕಡೆವಾಗ ಬಲುಮೆಯೊಳ್ । ಪನ್ನ ಮೋಲಡರಿ ಚೆಂದುಟಿಯ ಕಚ್ಚುವದಿದು ॥ ತರವೇನೋ ॥ ೨ ॥ ಬಚ್ಚಲು ಮನೆಯೊಳು ನೀನಡಗಿರುವುದಕೆ ನೀ । ಹುಚ್ಚಾದೆಯೇನೊ ನೀ । ಮಂದಿರ ಬಿಟ್ಟು । ಉಚ್ಚೆಯ ಹೊಯ್ವದರೊಡನೆ ದೃಷ್ಟಿಸುವುದೇ । ನಾಶ್ಚರ್ಯ ಘೋಕವಿದ್ಯೆಗಳ ಪಠಾಡುವದಿದು ॥ ತರವೇನೋ ॥ ೩ ॥ ಚೋರರ ಹಿಡಿದು ಬುದ್ಧಿಯ ಪೇಳಿ ನಡೆಸುವ । ಧಾರಿಣೀಪತಿಗಳೆ ನಾವಾಗೀ । ಸೇರದ ನಡತೆಯ ನಡಸುವದಪಕೀರ್ತಿ । ಊರ ಮಕ್ಕಳ ಕೂಡಿಕೊಂಡು ಪುಂಡೇಳ್ವದು ॥ ತರವೇನೊ ॥ ೪ ॥ ಅರಿತವರಂತರಂಗದಿ ನಿನ್ನ । ವರ ಕಣ್ವಪುರದ ಶ್ರೀ ಗೊಪಾಲಕೃಷ್ಣನೆಂದು । ಹಿರಿಯಣ್ಣ ಬಲರಾಮನುರಗೇಂದ್ರ ನೆಂಬಂಥ । ಮರಿಯಾದೆಯಲಿ ಪಾತಕರು ಪೋಗಳುವುದಾಗಿ ॥ ೫ ॥

### ಕಂದ ಪದ್ಯ

ಮದಗಜಗಮನೆ ಯಶೋದೆಯು । ಬೆದರಿಸಲವನಂಜದಂತೆ ಸುಮ್ಮ ನಿರಲ್ಕಾ । ಮದನಪಿತನ ಪ್ಯೆದಡವುತ ವಿಧುಮುಖಿ ಪಾಲ್ಕುಡಿಸುತ ಸಂತೈಸಿ ದಳ್ ॥

### ಕೇದಾರಗೌಳ ರಾಗ - ಅಷ್ಟ ತಾಳ

ಮರುದಿನ ಬೆಳಗಾಗೆ ಗೋಕುಲದೊಳಗಿದ್ದ । ತುರುಗಾವರೊಡ ನಾಡುತ್ತ । ಕರು ದನಂಗಳ ಬಿಟ್ಟು ನೊಡೆದು ವೃಂ । ದಾವನಾಂತರಕೆ

ತಾ ತೆರಳಿ ಬಂದ ॥ ೧ ॥ ಕೊಳಲ ಧ್ವನಿಯ ಕೇಳಿ ತಲೆದೂಗಿ ಗೋವ್ಗಳು ಬಳಗ ಸಂಗಡ ಓಡುತ್ತ । ಬಳಲಿ ನೀರಡಿಕೆ ಆಹಾರವೆನ್ನದೆ ಸುತ್ತಿ ತೊಳಲಾಡು ತಿರ್ದರಲ್ಲ ॥ ೨ ॥ ಫಲಮರಂಗಳನೇರಿ । ಪಣ್ಗೊನೆಗಳ ನೀರಿಂ । ಗಿಳಿದು ಪಂಕಜವ ಕೊಯ್ದು । ಬಲರಾಮ ಸಹಿತ ಗೋವಳರೊಡನಾಡುತ್ತ । ಗೆಲವಿನಿಂದಿರಲಿತ್ತಲು ॥ ೩ ॥

ಕಂದ ಪದ್ಯ

ಗೋಕುಲದೊಳ್ ಸುದತಿಯ ರಾ । ಶ್ರೀಕೃಷ್ಣನ ಕಾಣದಿರಲು ಬಲು ಬೇಸರದಿಂ । ಏಕಾಂತದಿ ಮಾತಾಡುತ । ಶ್ರೀಕಾಂತನ ಗುಣವ ಪೊಗಳು ತ್ತಿರಸಿದರಾಗಳ್ ॥

ತೋಡಿ ರಾಗ - ಏಕತಾಳ

ಎಲ್ಲಿಗೆ ಎದ್ದು ಪೋದ । ಗೋಪಾಲ । ಫುಲ್ಲಲೋಚನ ಪರಮಾತ್ಮ ತಾ ಮುನಿಸಿಂದ ॥ ಎಲ್ಲಿಗೆ ॥ ಪಲ್ಲ ॥ ಬೆದರಿಸೆ ತಾಯ ಮಾತಿಗೇ । ಕೋಪಿಸಿ ಕೊಂಡು । ಬದಲೊಂದು ರಾಜ್ಯ ಸೇರಿದನೋ ಗೋವಳರಾಯ ॥ ೧ ॥ ಗಾಡಿಗಾರಿನ ಮುದ್ದು ಮೋರೆ ನಟನೆಯಿಂದ । ಆಡುತ್ತ ದಿನದಿನ ಬರುವ ಗೋಪಾಲ ತಾ ॥ ಎಲ್ಲಿಗೆ ॥ ೨ ॥ ಬಲರಾಮ ಸಹಿತ ಗೋವಳರೊಡಗೊಂಡು ಗೋ । ಕುಲದ ಬೀದಿಯೊಳಾಡುತಿರುವ ಕೃಷ್ಣಯ್ಯ ತಾ ॥ ಎಲ್ಲಿಗೆ ॥ ೩ ॥

ಆನಂದಭೈರವಿ ರಾಗ - ತ್ರಿವುಡೆ ಅಷ್ಟ ತಾಳ

ಕಾಣದೆ ನಿಲಲಾರೆವೈ ಗೋಪಾಲಕೃಷ್ಣನ ॥ ಪಲ್ಲವಿ ॥ ಕಾಣದೆ ನಿಲಲಾರೆ ಪ್ರಾಣನಾಯಕ ಪಂಚ। ಬಾಣ ಜನಕ ಶ್ರೀ। ವೇಣುಗೋಪಾಲನ ॥ ಅನುಪಲ್ಲವಿ ॥ ಅಂಬುಜದಳನೇತ್ರನ । ಆಶ್ರಿತನಿಕು । ರುಂಬ ಲಲಿತ ಗಾತ್ರನ। ಸದ್ವಿಜ ಕ । ದಂಬ ಸನ್ನುತಿ ಪಾತ್ರನ । ಕಂಬು ಚಕ್ರಾಂಕ ಪೀ । ತಾಂಬರಧರ ದೇವ । ಶಂಭು ಮಿತ್ರ ಸರ್ವೇಶ । ಶ್ರೀಕೃಷ್ಣನ ॥ ಕಾಣದೆ ॥ ೧ ॥ ವಿಷದ ಮೊಲೆಯನುಂಡನ । ಮಹಾಂತ ರಾ । ಕ್ಷಸಿಯ ಪ್ರಾಣವ ಗೊಂಡನ । ಗೋಕುಲಕೆ ಬಂದಸಮದೈತ್ಯರ ಕೊಂದನ । ಮೊಸರು ಬೆಣ್ಣೆಯ ಕದ್ದು । ಮೆದ್ದು ಗೋವಳರಿಗಿತ್ತು । ಹಸನಾಗಿ ನಲಿದಾಡುತ್ತಿರುವ ಕೃಷ್ಣಯ್ಯನ ॥ ಕಾಣದೆ ॥ ೨ ॥

### ಕಂದ ಪದ್ಯ

ಪಾರಿಜಲೋಚನ ತಾ ಮೈ । ದೋರದೆ ವಂಚಿಸಿದಕೆ ನಾವೀಗಲೆ ಯಮುನಾ । ತೀರದಿ ಮಳಲಿನ ಗೌರಿಯ । ನಾರಾಧಿಸಿ ಮನದಿರವಂ ಪಡೆವುದುಚಿತಂ ॥

### ಸವ್ವಾ ರಾಗ - ಏಕತಾಳ

ಬಂದರು ಯಮುನಾ ತೀರದೊಳೆಲ್ಲರು । ಮಿಂದು ಮಡಿಯ ವಸನವ ನುಟ್ಟು । ಚಂದದಿ ಮಳಲಿನ ಗೌರಿಯ ಮಾಡುತ । ಮಂದ ಗಮನೆಯರು ಪೊಡಮಟ್ಟು ॥ ೧ ॥ ಬರಿಸುತ ಬ್ರಾಹ್ಮಣ ದಂಪತಿಗಳನುಪಚರಿಸಿ ಕನಕ ವಸ್ತ್ರಂಗಳಲಿ । ಪರಿಪರಿಯಲಿ ಪೂಜಿಸಿ ಪಾದಾಂಬುಜ । ಕೆರಗುತವರೊಳಪ್ಪಣೆ ಬೇಡಿ ॥ ೨ ॥

### ಸೌರಾಷ್ಟ ರಾಗ - ತ್ರಿವುಡೆತಾಳ

ಹಲವು ವಿಧದಲಿ ನಲಿದು ಪ್ರಾರ್ಥಿಸಿ । ಕಲಶ ಕನ್ನಡಿ ಧೂಪ ದೀಪಂ। ಗಳ ಮಹಾ ನೈವೇದ್ಯ ಗಂಧಾಕ್ಷತೆಗಳಿಂದ ಪೂಜಿಸಿದರು ॥ ೧ ॥ ಶರಣು ಸಕಲಾಭೀಷ್ಟದಾಯಕಿ । ಶರಣು ತ್ರಿಭುವನ ಪಾಲಕಿ ॥ ಶರಣು ಶ್ರೀ ತ್ರೈಲೋಕ್ಯನಾಯಕಿ । ಶರಣು ವರ ನೀಲಾಳಕೀ । ಶರಣು ಶರಣೂ ॥ ೨ ॥ ಪಂಕಜಾನನೆ ಪರಮ ಪಾವನೆ । ಶಂಕರಾರ್ಧ ಶರೀರಿಣೀ । ಶಂಖಚಕ್ರ ಗದಾಬ್ಜಪಾಣಿ ಭ । ಯಂಕರೋಂಕಾರಾತ್ಮಕಿ ॥ ಶರಣು ಶರಣು ॥ ೩ ॥

### ವಚನ

ಇಂತೆಂದು ಬೇರೆಬೇರೆ ಪ್ರಾರ್ಥಿಸುತ್ತಾ ಆ ಗೋಕುಲದ ನಾರಿಯರು ದಂಪತಿಗಳಿಗೆ ಬಾಯನ ದಾನವಿತ್ತು ಉಪಚರಿಸಿ ನವರತ್ನದಾರತಿಯನ್ನು ಬೆಳಗಿದರದೆಂತೆನೆ-

### ಧವಳಾರ ರಾಗ - ಅಷ್ಟತಾಳ

ಶ್ರೀ ಗೌರಿಗೆ ಶುಭ ಶೋಭನವೆ । ನಾಗವೇಣಿ ಪದ್ಮಾಂಬಿಕೆಗೆ ॥ ಪ ॥ ಭುವನವ ನುಂಗುವೆ ತಾನೆಂದ । ಬವರಕೆ ಮಹಿಷದಾನವ ತಾ ಬಂದ । ವಿವರವ ತಿಳಿದು ರಣಾಂಗದೊಳವನ ಜವನಗರಿಗೆ ಕಳುಹಿದವಳಿಗೆ ॥ ಶ್ರೀ ಗೌರಿಗೆ ॥ ೧ ॥ ಚಂದಿರವದನೆಗೆ ಚಾರು ಚರಿತ್ರೆಗೆ । ಇಂದ್ರಾದಿ ಸಕಲ

ದಿವಿಜನುತೆಗೆ । ಕಂದರ್ಪ ವೈರಿಯ ರಾಣಿ ಭವಾನಿಗೆ । ಸೌಂದರ್ಯ ರೂಪ ಮಹೇಶ್ವರಿಗೆ ॥ ಶ್ರೀ ಗೌರಿ ॥ ೨ ॥ ಧರೆಯೊಳಗಧಿಕ ಕೊಲ್ಲಾಪುರದೊಳಗೆ । ಸ್ಥಿರವಾಗಿ ಭಕ್ತರ ಪೊರೆವವಳೆ । ಕರಿಮುಖ ಜನನಿಗೆ ಕಲಕೀರವಾಣಿಗೆ । ಕನಕದ ಬೊಂಬೆ ಮುಕಾಂಬಿಕೆಗೆ ॥ ೩ ॥ ಗಜಮುಖ ಜನನಿಮಹೇಶ್ವರಿಯೆ । ಭುಜಬಲಯುತೆ ಹಿಮಗಿರಿತನಯೆ । ಭಜಿಸಿದೆವೈ ನಿನ್ನಯ ಪಾದದ ಪಂ । ಕಜನಾಭನ ಕರುಣಿಸು ನಮಗೆ ॥ ೪ ॥

ಘಂಟಾರವ ರಾಗ - ಏಕತಾಳ

ಹೂವ ಕೊಡೆ । ಗೌರಿ । ಹೂವ ಕೊಡೆ । ಸತ್ಯಭಾಮೆಯ ರಮಣ ನಮ್ಮ ಆಳುವಾತನಾಗುವಂತೆ । ಹೂವ ॥ ಎನ್ನ ಮನದಭೀಷ್ಟಂಗಳನ್ನು ನೀ ಪಾಲಿಸಿದರೆ । ಹೊನ್ನ ಗೋಪುರಕ್ಕೆ ಕಲಶವನ್ನು ಸಲಿಸುವೆ । ಚಿನ್ನದ ತೋರಣವ ಕಟ್ಟಿ । ಮುತ್ತಿನ ಚಪ್ಪರವನಿಕ್ಕಿ । ಹನ್ನೊಂದು ನವಮಿಯ ಉಪವಾಸ । ವನ್ನು ಮಾಳ್ಪೆ ನೀ ಬಲಗೈಯ ॥ ಹೂವ ॥ ೧ ॥ ಪುಂಡರೀಕ ನೇತ್ರನೆನ್ನ । ಗಂಡನಾಗಿದ್ದರೆ ನಿನ್ನ । ಮಂಡೆಗೆ ರತ್ನದ ಮಕುಟ । ಕೊಂಡು ತಂದಿರಿಸುವೆನು । ದುಂಡುಮಲ್ಲಿಗೆ ಸುವರ್ಣ । ಕೆಂಡ ಸಂಪಿಗೆಯ ಮುಡಿಸಿ । ಮಂಡಲಾರ್ಧ ದಿವಸ ವ್ರತವ ಕೈಗೊಂಡು ನಾ ಜಾಗರವ ಮಾಳ್ಪೆ ॥ ೨ ॥ ॥ ಹೂವ ॥

ಕಂದ ಪದ್ಯ

ಮಾಧವನಾಗಲಿ ಪತಿಯೆಂ । ಬಾ ದೇವಿಯ ಬೇಳುಗೊಂಡು ಮುಂದ ಲ್ಲಿಂದಂ ॥ ಪೋದರು ಯಮುನೆಯ ತಡಿಗಂ । ಕ್ರೊದರು ವನ ಕುಂಜದೊಳಗೆ ಫಲಪುಷ್ಪಗಳಂ ॥

ಮಾರವಿ ರಾಗ - ಅಷ್ಟ ತಾಳ

ಮಿಂದು ಪೋಗುವ ನಾವು ಮನೆಗೆ । ಇಲ್ಲಿ । ಬಂದು ಹೊತ್ತಾಯಿತು ಈ ಜಲದೊಳಗೆ ॥ ಮಿಂದು ॥ ಪಲ್ಲವಿ ॥ ಉಟ್ಟ ಸೀರೆಗಳ ಬಿಚ್ಚಿರಿಸಿ । ಅಳ । ವಟ್ಟ ಕುಪ್ಪಸದಿ ಚಿನ್ನಗಳ ಕಟ್ಟಿರಿಸಿ । ಕಟ್ಟಿದ ಮುಡಿಯ ಸಡಿಲಿಸಿ । ನೀರಿ । ಗೊಟ್ಟಾಗಿ ಇಳಿದರೆಲ್ಲರು ಧಡಧಡಿಸಿ ॥ ಮಿಂದು ॥ ೧ ॥ ಕಂಕಣಗಳು ಘಲಿ ರೆನುತ । ಗಂಧ । ಕುಂಕುಮ ಪರಿಮಳಂಗಳನು ತೊಳೆಯುತ ॥ ಸೋಂಕಿದ

ಕೆಸರನೊರಸುತ । ಹರಿ । ಶಾಂಕ ವದನೆಯರೊಬ್ಬೊಬ್ಬರೆಳೆಯುತ ॥ ೨ ॥ ಜಲಕ್ರೀಡೆಯೊಳಗಿದ್ದರೆಲ್ಲ । ತಂತ । ವೊಳಗೊಬ್ಬೊಬ್ಬರ ಎಳೆದಾಡುತ್ತ । ಪುಲ್ಲಶರನರಗಿಣಿಯಂತೆ ಪೋಲ್ವ । ಚೆಲ್ವ ಲಲನೆಯರೆಲ್ಲ ನೋಡಿದ ಲಕ್ಷ್ಮೀನಲ್ಲ ॥ ೩ ॥

### ಭಾಮಿನಿ

ಬಾಲೆಯರು ತಮತಮಗೆ ಸೊಗಸಿನ । ಮೇಲೆ ಚೆಲ್ಲುವರುದಕಗಳ ಬಿರು । ಗಾಳಿಯಿಂದದೊಳೋಡಿ ಧುಮ್ಮಿಕ್ಕುವರು ಜಲದೊಳಗೆ ॥ ಆಳ ಸರಿ ಮರನೇರಿ ಲಂಘಿಸಿ । ಸೂಳನಿಡುತೊಬ್ಬೊಬ್ಬರಳುಕದೆ । ಏಳುವರು ಘಟಿಕಾ ಪ್ರಮಾಣದೊಳಾ ಜಲಾಂತರದಿ ॥ ೧ ॥ ಆಡುತಿರಲಾ ಸಮಯದೊಳಗದ । ನೋಡುತಿದ್ದನು ಕೃಷ್ಣನಿವರನೆ । ಕೂಡಲಿದುವೇ ಸಮಯವೆನುತೈತಂದ ನಾ ಕ್ಷಣಕೆ ॥ ಗಾಢದಿಂದಾವರಿಸಿ ಸೀರೆಯ । ಮೋಡಿಯಿಂದಲಿ ತೆಗೆದು ನಲಿನಲಿ । ದಾಡಿ ಕಡಹದ ಮರವನೇರಿದ ನಿಮಿಷ ಮಾತ್ರದಲಿ ॥ ೨ ॥

### ಕಂದ ಪದ್ಯ

ಸೀರೆಯ ಸೊಯ್ದುದ ಕಂಡಾ । ನಾರಿಯರಾರೆಂದು ತಿಳಿಯದಿರೆ ಲಜ್ಜಿಸುತಂ । ಭೋರೆಂದೆನುತೆಲ್ಲರು ಬಾ । ಯಾರುತ ಕೂ ಕೂ ಕು ಎಂದು ಕೂಗಿದರಾಗಳ್ ॥

### ಭೈರವಿ ರಾಗ - ಅಷ್ಟತಾಳ

ಕು ಕ್ಕೂ ಕೂ । ಎಂದು ಕೂಗಿಡೆ ಸತಿಯರು । ದಿಕ್ಕೆಲ್ಲ ಕೇಳಿತು ಕು ಕ್ಕೂ ಕೂ । ಅಕ್ಕೊ ಮತ್ತಿಕ್ಕೊ ಮರನೇರದಿರು ಬೊಮ್ಮ ರಕ್ಕಸ ನೈದನೆ ಕುಕ್ಕೂಕೂ ॥ ೧ ॥ ಕೊಲುವನು ದನುಜ ಸಾಯಲು ಬೇಡ । ಮರದಿಂದ । ಇಳಿಯಯ್ಯ ಶ್ರೀಕೃಷ್ಣ ಕುಕ್ಕೂಕೂ ॥ ಮೆಲುವನು ಭೇತಾಳ । ಬ್ರಹ್ಮರಾಕ್ಷಸನಿಪ್ಪ । ಸ್ಥಳವಯ್ಯ ಇದು ತಿಳಿ ಕುಕ್ಕೂ ಕೂ ॥ ೨ ॥ ಸೀರೆಯ ಸೊಯ್ವರೆ ಶ್ರೀಕೃಷ್ಣ ನಿನಗೀಥ । ಚೋರವಿದ್ಯೆ ಯದೇಕೊ ಕುಕ್ಕೂ ಕೂ । ಸೋರೆಯ ಮೊಸರ್ಬೆಣ್ಣೆ । ಸೂರೆಯ ಮಾಳ್ಪ ವಿಚಾರವಿದಲ್ಲಯ್ಯ । ಕುಕ್ಕೂ ಕೂ ॥ ೩ ॥ ಮನೆಮನೆ ಗೈತಂದು ಕೆನೆಮೊಸರನೆ ತಿಂದು । ಜುಣುಗಾಡಿದಂತಲ್ಲ ಕುಕ್ಕೂ ಕೂ ॥ ಮನೆಯವರಿದ ಕೇಳಿದರೆ ನಿನ್ನ

ಎಳೆದ್ಯೊದು । ದಣಿಸಿ ದಂಡಿಸುವರು ಕುಕ್ಕೂ ಕೂ ॥ ೪ ॥ ಅಂಬರಗಳ ನೊಯ್ದುದುಚಿತವೆ ನಿನಗೆ ಪೀತಾಂಬರ ಧಾರಿಯೆ ಕುಕ್ಕೂ ಕೂ ॥ ಶಂಬರ ವೈರಿಯ ಜನಕ ಈ ಪರಿಯಲ್ಲಿ ಡೊಂಬಿ ಏಳುವುದಯ್ಯ ಕುಕ್ಕೂ ಕ್ಕೂ ॥ ೫ ॥ ಮತ್ಸ್ಯ ಕೂರ್ಮ ವರಾಹ ನರಸಿಂಹನಾದ ಶ್ರೀ । ಚಿತ್ತಜನಯ್ಯನೆ ಕುಕ್ಕೂ ಕೂ ॥ ಮತ್ತೆ ವಾಮನನಾದ ಕ್ಷತ್ರಿಯರನು ಕೊಂದ । ಉತ್ತಮ ರಾಮನೆ ಕುಕ್ಕೂ ಕೂ ॥ ೬ ॥ ಹೊಡೆದುಂಥ ಮಳೆಗೇಳು ದಿನ ಗೋವರ್ಧನ ವನ್ನು । ಕೊಡೆಪಿಡಿದಾತನೆ ಕುಕ್ಕೂ ಕೂ ॥ ಮಡದಿಯ ವ್ರತವನ್ನು ಕೆಡಿಸಿ ವಾಜಯನೇರಿ ನಡೆದ ನಾರಾಯಣ ಕುಕ್ಕೂ ಕೂ ॥ ೭ ॥ ವಸನಂಗಳನು ಕದ್ದ ವಸುದೇವ ನಣುಗನೆ । ವಶವಾದೆವೈ ನಿನ್ನ ಕುಕ್ಕೂ ಕೂ ॥ ವಸುಧೆ ಯೊಳಗೆ ಕಣ್ವಪುರದ ಗೋಪಾಲನ । ಬಿಸರುಹ ಚರಣಕ್ಕೆ ಕುಕ್ಕೂ ಕೂ ॥ ೮ ॥

## ಕಂದ ಪದ್ಯ

ಅಂಬುಜವದನೆಯರಿನಿತತಿ । ಸಂಭ್ರಮದಿಂ ಕೂಗೆ ಕೇಳ್ದುನಸುನಗುತಾ ಗಃ । ಶಂಬರಮರ್ದನಪಿತನಂ । ದಂಬುಜ ವದನೆಯರ ನೋಡಿ ನಗು ತಿಂತೆಂದಂ ॥

## ಘರಜು ರಾಗ - ಏಕತಾಳ

ಮರುಳಾದಿರಿ ನೀವು ಮರುಳಾದಿರಿ । ಮರುಳಾದಿರಿ ನೀವು ಕೆರೆ ಯೊಳು ನಿಂತುಕೊಂಡು । ಶಿರವರಿದವರಂತೆ । ಮೊರೆಯಿಟ್ಟು ಕೂಗಲ್ಯಾಕೆ ॥ ೧ ॥ ಘೋಮ್ಮರಕ್ಕಸ ತಿಂದರೆ । ನಮ್ಮವರ್ಗಲ್ಲದೆ । ನಿಮ್ಮೊಳೇನಿದೆ ನೀವು । ಸುಮ್ಮನೆ ಮರುಗಲ್ಯಾಕೆ ॥ ೨ ॥ ಸತ್ಯವುಳ್ಳವರು ನೀವು ನಿ । ಮಿತ್ತವನ್ನು ಕೇಳಿಕೊಳ್ಳಿ । ಮತ್ಯಾವುದಕ್ಕು ಮನೆಗೆ ಚಿತ್ತೈಸಿರೆಲ್ಲ ಹೀಗೆ ॥ ೩ ॥ ಕಾಣಲಿಲ್ಲವೆಂದು ಹೀಗೆ । ಆಣೆ ಕೊಡುವೆ ನಿಮಗೆ ಬಂದು । ಜಾಣೆಯರ್ನೀವೆ ಕಳವ ಕಾಣಿಸಿ ಕೊಡಿರಿ ॥ ೪ ॥ ಧರೆಯೊಳು ಕಣ್ವಪುರದ ಕರುಣಿ ಶ್ರೀಕೃಷ್ಣರಾಯ ಎನ್ನ । ದೂರಿಕೊಳ್ಳಲ್ಯಾಕೆ ಹೆಣ್ಣು । ಗಳಿರ ಜೋಕೆ ॥ ೪ ॥

## ಶಂಕರಾಭರಣ ರಾಗ - ಏಕತಾಳ

ಅರಿಯದೆ ಮೋಸಹೋದೆವು । ಮರಿಯಾದೆ ಕೆಡಿಸದಿರು । ಅರವಿಂದ ನೇತ್ರ ಬೇಡುವೆವು । ಸೆರಗೊಡ್ಡಿ ನಿನ್ನ ನಾವು ॥ ಬರಿದೆ ಬೇಡಿಕೊಂಬುದೇನು।

ಅರಿಯೆ ನಿಮ್ಮ ವಸ್ತ್ರಗಳನು । ತರವಲ್ಲ ನಿಮ್ಮ ಕಣ್ಣಾಣೆ । ತರುಣಿಯರಿರ ॥ ೧ ॥ ಕಾಣಿಸಿಕೊಂಡಂಥದಕ್ಕು ಆಣೆ ಭಾಷೆ ಕೊಡುವ ಠಕ್ಕು । ಜಾಣತನ ಬಿಟ್ಟು ಕೊಡಿಸು । ನೀನು ವಸ್ತ್ರವ ॥ ಏನನೆಂಬೆ ನಿಂಥ ಮಡಿಯ । ಮಾನಿನಿಯರೆಂದ ಮೇಲೆ । ಜಾಣೆಯರ್ನೀವೆನ್ನ ಕಳವ । ಕಾಣಿಸಿಕೊಡಿರೆ ॥ ೨ ॥ ದಾಸಿಯರಾದೆವಯ್ಯ । ವಸನವ ನೀಡು ದಮ್ಮಯ್ಯ । ಲೇಸಲ್ಲ ಬಳಲಿಸುವದಿಂತು । ಈ ಸಾರಿ ಕೃಷ್ಣ ॥ ದಾಸಿಯರಾಗಿರುವುದತಿ ಹೇಸಿಕೆಯು ಮನೆಗಳಲ್ಲಿ । ಸಾಸಿರ ಸೀರೆಗಳಿಲ್ಲವೆ । ಏಸುದತಿಯರಿರ ॥ ೩ ॥ ಅಂಬುಧಿಯೊಳಾಡುವ ದಿ । ಗಂಬರೆಯರಾವು ಮನೆಗೆ । ಬೆಂಬಿಡದೈದುವದೆಂತು । ಅಂಬುಜವದನ ॥ ಕುಂಭಿನಿಯೊಳಗಾಶ್ಚರ್ಯ । ವೆಂಬುದ ಕೇಳ್ದಿವೀ ಪರಿಯ । ರಂಭೆಯರ್ನೀವು ಬತ್ತಲೆ ಮಿಂಪ ಸಂಭ್ರಮವೇನು ॥ ೪ ॥ ಸೀರೆಗಳ ಕೊಡದಿದ್ದರೆ ದೂರುವೆವು ಗೋಪಿಯೊಡನೆ । ಸಾರವಲ್ಲವೆಲವೊ ಕೇಳ್ಳೈ ನೀರಜನಯನ ॥ ಊರ ತಳವಾರರೊಳು । ದೂರ ಪೇಳಲವರು ಎನ್ನ ಸದ್ದಿ । ಚಾರವ ಮಾಳ್ಪರು ತೆರಳಿ ನೀರೆಯರೆಲ್ಲ ॥ ೫ ॥ ಪಾಳುಮಾಡ ಬೇಡವಯ್ಯ ಪೇಳ್ವುದ ಕೇಳ್ವೆವು ದಮ್ಮಯ್ಯ । ಕಾಲಿಗೆ ಬೀಳ್ವೆವು ಈಗ । ಪಾಲಿಸೊ ಬೇಗ ॥ ಕಾಲಿಗೆ ಬೀಳುವುದೇಕೆ । ಬಾಲೆಯರೆ ನೀರಿಂದ ನೀವು । ಮೇಲೆ ಬನ್ನಿ ಕೊಡುವೆ ನಿಮ್ಮ ಸೀರೆಗಳನೆಲ್ಲ ॥ ೬ ॥ ಎಂದ ಮಾತ ಕೇಳಿ ಮದನ । ಮಂದಿರವ ಮರೆಗೊಳ್ಳುತ್ತ । ಬಂದರಾಗ ದಡವಹತ್ತಿ ಮಂದ ಗಮನೆಯರು ॥ ಇಂದಿರೆಯರಮಣ ಕೇಳು ಇನ್ನಾದರು ದಯೆಯ ಮಾಡು । ಬಂದೆವಲ್ಲ ದಡವ ಹತ್ತಿ ಕಂದರ್ಪಜನಕ ॥ ೭ ॥ ಬತ್ತಲೆ ಕೊಳವಿಳಿದ ಪ್ರಾಯ। ಶ್ಚಿತ್ತವಾಗಿ ನೀವು ಸುರರ್ಗೆ । ಭಕ್ತಿಯಿಂದ ನಮಿಸಿಕೊಡುವೆ । ಸುತ್ತು ವಸ್ತ್ರವ ॥ ಮಡದಿಯರು ತಮ್ಮ ತಮ್ಮ ಜಡೆಯಬಿಚ್ಚಿ ಪಸರಿಸುತ್ತ । ಒಡನೆ ಮುಗಿದರೊಂದೆ ಕೈಯ । ಬಿಡದೆ ನಾಚುತ್ತ ॥ ೮ ॥ ಒಂದು ಕೈಯ ಮುಗಿವರೆ ದೇವೇಂದ್ರ ಮುಖ್ಯ ದೇವರ್ಕಳಿಗೆ । ಚಂದವಲ್ಲ ಎರಡು ಕೈಗ । ಳಿಂದ ಮುಗಿಯಿರೆ ॥ ಮಾರನ ಮಂದಿರಕೆ ತೊಡೆಯ ಸೇರಿಸುತ್ತ ಮುಚ್ಚಿಕೊಂಡು । ಬೇರೆ ಬೇರೆ ಎರಡು ಕೈಯ । ತೋರಿ ಮುಗಿದರು ॥ ೯ ॥ ಧಾರುಣಿಯೊಳು ಕಣ್ವಪುರದ । ಶ್ರೀರಂಗ ಗೋಪಾಲನೆಂದ । ತೋರಿಸಿ ಸೀರೆಯ ಗುರುತ ನಾರಿಯರೆ ನಿಮ್ಮ ॥ ೧೦ ॥

### ನವರೋಜು ರಾಗ - ಏಕತಾಳ

ಅಂಗಜ ಜನಕ ಕೇಳಾನುಟ್ಟ ಸೀರೆ ಕು । ರಂಗಲೋಚನದ ಬಣ್ಣ ॥ ಹೊಂಗೇದಗೆಸಳಿನ । ತೆರ ಕುಪ್ಪಸವ ದೇವೋ । ತ್ತುಂಗ ನೀ ದಯವಮಾಡು ॥ ೧ ॥ ಇಂದ್ರಾದಿಸುರ ಸೇವ್ಯ । ನಭರಾಜ ವರದ ಶ್ರೀ । ಚಂದ್ರಶೇಖರನ ಪ್ರಿಯ । ಚಂದ್ರಕಾವಿಯ ಸೀರೆ । ಚಂದದ ರವಕೆ ಗೋ । ವಿಂದ ನೀ ದಯ ಮಾಡು ॥ ೨ ॥ ಪಗಲರಸನ ಕೋಟಿ । ತೇಜ ಸರ್ವೇಶ ನೀ । ಜಗದಂತರಾತ್ಮಕನೆ । ನಗಧರ ನಾರಾಯಣದೇವ ನಾನುಟ್ಟ । ಪಗಡೆ ಬಣ್ಣದು ಪಾಲಿಸೊ ॥ ೩ ॥ ಶ್ರೀಲೋಲ । ಪರಮ ಕೃಪಾಳು ದಾನವ ಶಿಶು । ಪಾಲ ಮರ್ದನನೆ ಬೇಗ । ಶಾಲೆಯುದಕೊ ಬಲಗಡೆಯೊಳಿಹುದು ಗೋ । ಪಾಲ ನೀ ದಯವ ಮಾಡು ॥ ೪ ॥

### ಭೈರವಿ ರಾಗ - ಏಕತಾಳ

ಪನ್ನಗಾರಿ ಧ್ವಜನೆ ಕೇಳೆನ್ನ ವಸ್ತ್ರದಂದವನ್ನು । ಸ್ವರ್ಣದ ರೇಖೆ ಸುತ್ತಲು ಮೆರೆವುದು । ಮಿಂಚುತಿರುವುದು ॥ ೧ ॥ ಹಳ್ಳಿಯವಳಲ್ಲ ನಾನು ಹರುಷದಿಂದ ಉಟ್ಟಂಥಾದ್ದು । ಬೆಳ್ಳಿಯ ಕಂಬಿಯ ಸೀರೆ । ಲಾಲಿಸೊ ಬೇಗ । ಪಾಲಿಸೊ ॥ ೨ ॥ ಅಚ್ಯುತಾನಂತ ಗೋವಿಂದ । ಅರಮನೆಯಿಂದ । ಮೆಚ್ಚಿ ಕೊಟ್ಟಂಥ ಸೀರೆ । ತೋರಯ್ಯ । ಕೈಯೊಳ್ ತಾರಯ್ಯ ॥ ೩ ॥ ಬಾಲೆಯರನೆಲ್ಲ ಕರೆದು । ಶಾಲೆಗಳ ಕೊಟ್ಟನೆನಿದು । ಲೀಲೆಯಿಂದ ಉಟ್ಟುಕೊಂಡು ಮೆರೆದರು। ಸುಖವೆರೆದರು ॥ ೪ ॥ ಭಾಳ ಹೊತ್ತಾಯಿತಿಂದು । ಜಲದೊಳಾಡುತ ನಿಂದು । ಕೇಳಿದರೆ ಬೈವರೆಮ್ಮ ಹಿರಿಯರು । ಮನೆ । ಕಿರಿಯರು ॥ ೫ ॥ ಮರದ ಮೇಲಿಂದಿಳಿದು ಕಣ್ವ । ಪುರದ ಗೋಪಾಲಕೃಷ್ಣ । ನೆರೆದ ಗೊಲ್ಲ ಹೆಂಗಳೆಲ್ಲ ನೋಡಿದ । ಒಡ । ಗೂಡಿದ ॥ ೬ ॥

### ವಾರ್ಧಿಕ

ಹರಿಯು ಈ ತೆರದಿ ಯಮುನಾ ನದಿಯ ತೀರದೊಳು । ತರುಣಿಯರ ನೊಡಗೂಡಿ ಸಂಗಡವೆ ಗೋಕುಲಕೆ । ತೆರಳಿ ನಡೆತಂದು ಸುಖದಿಂದಿರ್ದನೆಂಬಲ್ಲಿ ಸಂಧಿ ಸಂಪೂರ್ಣವಾಯ್ತು ॥ ಅರಿತು ಪೇಳುವ ಕೇಳ್ವ ಪುಣ್ಯವಂತರ ಸಕಲ । ದುರಿತವಂ ಪರಿಹರಿಸಿ ಕರುಣದಿಂ ಕಣ್ವಪುರ । ವರದ ಶ್ರೀಗೋಪಾಲ ಕೃಷ್ಣ ರಾಧಾರಮಣ ಪಾಲಿಸುವನನುಗಾಲವು ॥

# ಐರಾವತ

## ಪಾತ್ರಗಳು

ಧೃತರಾಷ್ಟ್ರ
ಕೌರವಾದಿಗಳು
ವ್ಯಾಸ
ಪಂಚಪಾಂಡವರು
ದೇವೇಂದ್ರ
ನಾರದ ಮುನಿ
ಇಂದ್ರನ ಗಜಪಾಲಕ
ಖಚರ (ದೇವದೂತ)
ಬ್ರಾಹ್ಮಣರು
ಶ್ರೀಕೃಷ್ಣ
ಸಾತ್ಯಕಿ
ಚಾರಕರು

ಗಾಂಧಾರಿ
ಕುಂತಿ
ದೇವಸ್ತ್ರೀಯರು
ಅಪ್ಸರಸ್ತ್ರೀಯರು

---

# ಐರಾವತ

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಶರಣು ಶರಣು ಸದಾಶಿವನ ಸುತ । ಶರಣು ಸುರಗಣ ಸೇವಿತ । ಶರಣು ಸಕಲಾಭೀಷ್ಟದಾಯಕ । ಶರಣು ಶ್ರೀ ಗಣನಾಯಕ ॥ ಶರಣು ॥೧॥ ಕರಿವದನ ಕಮನೀಯಗಾತ್ರನೆ । ಕರುಣನಿಧಿ ಸುಪ್ರತಾಪನೆ । ಪರಮಪಾವನ ಪಂಕಜೇಕ್ಷಣ । ನಿರತ ಭಕ್ತಸುಪೋಷಣ ॥ ೨ ॥ ಹೇಮಖಚಿತ ಕಿರೀಟ ಕುಂಡಲ । ಕಾಮಿತಾರ್ಥ ಪ್ರದಾಯಕ । ಭೀಮಬಲ ಹೇರಂಬ ಪೂಜ್ಯ ಸುನಾಮ ವಿದ್ಯಾಶರಧಿಗೆ ॥ ಶರಣು ॥ ೩ ॥ ಪಾಶವೋದಕ ಪರಶುಧರ ಫಣಿ । ಭೂಷ ಪಾರ್ವತಿನಂದನ । ವಾಸವಾರ್ಚಿತ ವರದ ಮಧುಪುರ । ವಾಸ ಶ್ರೀ ಗಣನಾಯಕ ॥ ಶರಣು ॥ ೪ ॥

### ವಾರ್ಧಿಕ

ಈ ರೀತಿಯಿಂದಿಷ್ಟದೇವತೆಗೆ ನಮಿಸಿ ನಿಂ । ದೋರಂತೆ ಸಕಲ ಸುರ ರಿಂಗೆ ತಲೆವಾಗಿ ಸಿರಿ । ಶಾರದೆಯ ಕೊಂಡಾಡಿ ಹಿರಿಯರಿಂಗೆರಗಿ ಗಂಧರ್ವ ರಿಗೆ ಕಯ್ಯ ಮುಗಿದು ॥ ಭಾರತಾಮೃತ ಶರಧಿಯೆಂಬ ಕಥೆಯೊಳಗೆ ವಿ । ಸ್ತಾರವಾಗಿರುವ ಐರಾವತ ಪ್ರಸಂಗವನು । ಧಾರಿಣಿಯೊಳರಿವಂತೆ ವರ್ಣಿಸುವೆ ಕಣ್ವಪುರ ಕೃಷ್ಣನ ಕಟಾಕ್ಷದಿಂದ ॥ ೧ ॥

### ಶಂಕರಾಭರಣ ರಾಗ - ತ್ರಿವುಡೆತಾಳ

ಪ್ರಿಯದಲಿ ವ । ರ್ಣಿಸಿದ ವೈಶಂ । ಪಾಯ ಮುನಿ ಭಾ । ರತದ ಕಥೆಯ । ರಾಯ ಜನಮೇ । ಜಯಗೆ ಚತುರೋಪಾಯದಿಂದ ॥ ೧ ॥ ಒಂದು ದಿನ ಭೂ । ಪಾಲ ಮುನಿಪಗೆ । ವಂದಿಸುತ ಬೆಸ । ಗೊಂಡನರ್ಜುನ। ಇಂದ್ರನಾನೆಯ । ಮಾತೆಗೋಸುಗ ತಂದನೆಂಬ ॥ ೨ ॥ ಅಂದಿನಾಗಮ । ವೇನೆನುವದೆನ । ಗಿಂದು ವರ್ಣಿಸ । ಬೇಕೆನಲು ಮುನಿ । ಮಂದಹಾಸದಿ । ನೃಪನ ಪೊಗಳುತ್ತೆಂದನಾಗ ॥ ೩ ॥ ಕೇಳು ಜನಮೇ । ಜಯ ಧರಿತ್ರೀ ।

ಪಾಲ ಪಾಂಡವ । ಕೌರವಾದ್ಯರು । ಬಾಲಕೇಳಿಯೊ । ಳಾಡುತಿರ್ದರು ಲೀಲೆಯಿಂದ ॥ ೪ ॥ ಹಸ್ತಿನಾಪುರ । ದರಸ ಕೌರವ । ರಿತ್ತ ಪಾಂಡು ಕು । ಮಾರರಿಂದ್ರ । ಪ್ರಸ್ಥಪುರದೊಳ । ಗಿರಲು ದಿನದಿನ ಉತ್ಸವದೊಳು ॥ ೫ ॥ ನಿತ್ಯದೊಳು ಗಾಂ । ಧಾರಿ ಕುಂತಿಗೆ । ಮತ್ಸರದ ಬೆಳೆ । ಬಿತ್ತಿ ಬೆಳೆದುದು । ಚಿತ್ತದಲಿ ದಾ । ಯಾದ್ಯ ಪಾಲಿನ ಕೃತ್ಯದಿಂದ ॥ ೬ ॥ ಒಂದು ದಿನ ಧೃತ । ರಾಷ್ಟ್ರನರಮನೆ । ಗೆಂದು ವೇದ । ವ್ಯಾಸ ಮುನಿ ನಡೆ । ತಂದನೆಂಬುದ ಕೇಳಿ ಭೂಪಾಲನಂದದಿಂದ ॥ ೭ ॥

### ರಾಗ ಸಾಂಗತ್ಯ - ರೂಪಕತಾಳ

ಬಂದ ಮುನಿಯನಿದಿ । ರ್ಗೊಂಡು ಕರೆದು ತನ್ನ । ಮಂದಿರಕೊಯ್ದು ಪಚರಿಸಿ ॥ ಗಾಂಧಾರಿ ಸಹಿತಂದು । ನೃಪ ತಲೆವಾಗುತ್ತಿಂ । ತೆಂದು ಪೇಳಿದ ಮುನಿಯೊಡನೆ ॥ ೧ ॥ ಮುನಿ ನಿಮ್ಮ ಪಾದದ । ರ್ಶನವಾದರಿಂದ ಪಾ । ವನರಾದರೆಮ್ಮ ಪೂರ್ವಜರು ॥ ಘನಭಾಗ್ಯ ನಾನಾದೆ । ನೆಂದು ಪೂಜಿಸಿ ಪಾದ । ವನಜತೀರ್ಥವ ಧರಿಸಿದನು ॥ ೨ ॥ ಯೋಗೀಂದ್ರ ನಿವಿತ್ತ । ಲಾಗಿ ಚಿತ್ತೈಸಿದ । ಆಗಮವರುಹ ಬೇಕೆಂದು ॥ ರಾಗದಿಂದಲಿ ಸತಿ । ಸಹಿತ ವಂದಿಸೆ ದಯಾ । ಸಾಗರ ನೊಲಿದು ವರ್ಣಿಸಿದ ॥ ೩ ॥

### ಕಾಂಬೋಜಿ ರಾಗ - ಏಕತಾಳ

ಸೋಮಕುಲೋದ್ಭವನೆ ಬಹು ನಿಸ್ಸೀಮ ಜಯವಂತ ನಿನ್ನ । ನಾಮ ದುಚ್ಚಾರಣೆಯ ಕೇಳಿ ಕಾಮಿಸಿ ಬಂದೆ ॥ ಭೂಮಿಪಾಲ ವರ್ಗಕ್ಕೆಲ್ಲ ಕ್ಷೇಮ ವಾಗಿರುವದೊಂದು । ನೇಮವುಂಟು ಪೇಳ್ವೆ ನಿನ್ನ ಕಾಮಿನಿಯೊಳು ॥ ೧ ॥ ಇತ್ತ ಕೇಳವ್ವ ಗಾಂಧಾರಿ ಮೃತ್ತಿಕೆಯಾನೆಯ ಮಾಡಿ । ಉತ್ತಮ ಗಜ ನೋಹಿಯ ಆರ್ತಿಯಿಂ ಮಾಡು ॥ ಮತ್ತೆ ದೇವರ್ಕಳಿಗೆಲ್ಲ ತೃಪ್ತಿಕರವೆನ್ನ ಸೊಲ್ಲ । ಸತ್ಯವೆಂದು ನಂಬು ಬಾಲೆ ಉತ್ತಮ ಶೀಲೆ ॥ ೨ ॥

### ಭೈರವಿ ರಾಗ - ಝಂಪೆತಾಳ

ಎಂದು ವೇದವ್ಯಾಸ ಮಂದಿರವ ಬೀಳ್ಕೊಂಡು । ಬಂದನಾಶ್ರಮಕಾಗಿ ಬಾದರಾಯಣನು ॥ ೧ ॥ ಪೋಗಲಾ ಮುನಿಯುತ್ತಲಾಗಿ ಗಾಂಧಾರಿ ಅತಿ ।

ಬೇಗದಲಿ ಕರೆಸಿದಳು ತನ್ನ ಬಾಲಕರ ॥ ೨ ॥ ಪುತ್ರರಿರ ಕೇಳಿರೈ ಪುಣ್ಯ ಋಷಿ ವಚನವಿದು । ಮೃತ್ತಿಕೆಯ ಗಜಸೋಹಿ ಮಾಡಬೇಕೆನಗೆ ॥ ೩ ॥ ಅದಕೆ ಬೇಕಾದುಥ ಅನುಕೂಲ ಮಾಡಿರೆಂ । ಬುದ ಕೇಳ್ದು ಪೌರೋಹಿತರನೆಲ್ಲ ಕರೆಸಿ ॥ ೪ ॥ ಶಾಸ್ತ್ರವಿಧಿಗಳ ತಿಳಿದು ಚಿತ್ರಿಕರ ಕೈಯಿಂದ । ಹಸ್ತಿಯನು ಮಾಡಿಸಿದರುತ್ಸಾಹದಿಂದ ॥ ೫ ॥

### ಕಾಪಿ ರಾಗ - ಅಷ್ಟತಾಳ

ಆಗದು ತಂದರು ಮಣ್ಣ ನೋಡಿ ಬಹು । ಲಗುಬಗೆಯಿಂದ ಕೌರವ ರೊಂದುಗೂಡಿ ॥ ಪಲ್ಲವಿ ॥ ಬಂಡಿ ಬಂಡಿಯ ಮೇಲೆ ಹೇರಿ ತಮ್ಮ । ಮುಂಡೆಯ ಮೇಲೆ ಬಟ್ಟೆಯೊಳ್ತುಂಬ ತೂರಿ ॥ ತಂಡ ತಂಡದಿ ಭಾರ ಭಾರಿ ಮೇಘ । ಮುಂಡಲ ಪರ್ಯಂತ ಬೆಳೆದುದುಬ್ಬೇರಿ ॥ ೧ ॥ ಹಿಂದೆ ನಿಂದವರ ಬೆನ್ನಟ್ಟಿ ಹಿಡಿ । ತಂದು ಮೃತ್ತಿಕೆ ಮುದ್ದೆಗಳ ತುಂಬಿ ಬಟ್ಟಿ ॥ ಚಂದದಿ ಹೊರಿಸಿ ತಂದೊಟ್ಟಿ ಜನ । ಸಂದಣಿ ನಲಿದಾಡಿ ಮಾಡಿದರ್ ಬಿಟ್ಟಿ ॥ ೨ ॥ ತರಿಸಿ ಮಣ್ಣಿನ ಆನೆ ಮಾಡಿ ನಮು । ಸ್ಮರಿಸಿ ಗಾಂಧಾರಿಯೆನ್ನುತ ಮಾತ ನಾಡಿ ॥ ಸುರಪನಾನೆಗೆ ಸರಿಮಾಡಿ ಈ । ಪರಿ ಗಜ ವಿರಚಿಸಿದವರ ಕೊಂಡಾಡಿ ॥ ೩ ॥

### ದ್ವಿಪದಿ

ಕಡುಚೆಲುವಿನಾನೆಯನು ಕೌರವನು ನೋಡಿ । ಉಡುಗೊರೆಯ ಕೊಡಿಸಿದನು ಉಚಿತಗಳ ಮಾಡಿ ॥ ೧ ॥ ಪಟ್ಟೆ ಪೀತಾಂಬರವ ಪರಮ ವಿಧವಿಧದ । ಪಟ್ಟಣದೊಳೆಲ್ಲ ಮೇಲ್ಗಟ್ಟು ಕಟ್ಟಿಸಿದ ॥ ೨ ॥ ಬಣ್ಣಗಳ ಮನೆಮನೆಗೆ ಬರೆಸಿ ಪೌಳಿಗಳ । ಚಿನ್ನದಲಿ ರಚಿಸಿದರು ಚಿತ್ರಗೊಂಬೆಗಳ ॥ ೩ ॥ ಮುತ್ತುಗಳ ಸುರಿಸುರಿದು ಮುಂದೆ ಬೀದಿಯಲಿ । ನೆತ್ತಿಸಿದ ಕೋಣಗಳ ನಡೆವ ಹಾದಿಯಲಿ ॥ ೪ ॥ ಕೋಟಿ ರಥಗಳ ನಿಲಿಸಿ ಸಾಲುಸಾಲಿನಲಿ । ಮೀಟೆನಿಪ ಗಜತುರಗವೆರಡು ಪಾಲಿನಲಿ ॥ ೫ ॥ ಕೇರಿಕೇರಿಯೊಳೆಸೆಯೆ ಕುರುಜು ಮೋರ್ವಗಳು । ಚಾರುತರ ತಳಿರುತೋರಣಗಳೊಪ್ಪಿದವು ॥ ೬ ॥ ಈ ರೀತಿಯಿಂದ ಪಟ್ಟಣವ ಶೃಂಗರಿಸಿ । ಧಾರಿಣೀಪತಿಗಳಿಗೆ ಲೇಖನವ ಬರೆಸಿ ॥ ೭ ॥

ಚಾರಕರು ಕೊಂಡೊಯ್ಯಲಂದು ಚಂದದಲಿ । ಭೇರಿಗಳು ಮೊಳಗಿದುವು ಬಹು ಘೋಷದಲಿ ॥ ೮ ॥

ಕಾಪಿ ರಾಗ - ಅಷ್ಟ ತಾಳ

ಒಸಗೆ ರಂಜಿಸಿತು ರಾಜ್ಯದೊಳೆಲ್ಲ ಸುದ್ದಿ । ಪಸರೆ ಗಾಂಧಾರಿ ಪೂಜಿ ಸುವಳು ಗಜವೆಂಬ ॥ ಪಲ್ಲವಿ ॥ ಛಪ್ಪನ್ನ ದೇಶದ ದೊರೆಗಳು ನಡೆ । ತಪ್ಪ ಸಂದಣಿಯೇನನೆಂಬೆ ಸಂಭ್ರಮದೊಳು ॥ ಒಪ್ಪುವ ಕುದುರೆ ದಂಡಿಗೆಯೊಳು ಸಾಲಾ । ಗಿಪ್ಪ ಪಲ್ಲಂಕಿಯೊಳಪರ ಭೋಗಗಳೆಂಬ ॥ ೧ ॥ ಬಂದ ಬಂದರಸು ಗಳಿದಿರ್ಗೊಂಡು ಕರೆ । ತಂದು ಮನ್ನಿಸಿ ಬಿಡಾರಗಳಿತ್ತು ನಡೆಗೊಂಡು ॥ ಮುಂದೆ ಮುಂದಾಗಿ ಭೂಸುರ ಹಿಂಡು ಬರ । ಲಂದು ಗಾಂಧಾರಿ ಮಂಟಪಕೆ ಬಂದಳುಯೆಂಬ ॥ ೨ ॥

ವಾರ್ಧಿಕ

ಭೂಪಾಲ ಕೇಳಿಂತು ಕೌರವೇಶ್ವರನ ಪ್ರ । ತಾಪವಂ ಪೊಗಳೆ ತುದಿ ಗಾಣೆನಾ ಸಮಯದಲಿ । ಚಾಪಲಾಂಬಕಿ ಸಭಾಮಂಟಪಕೆ ಮಹಾ ಮದಕರಿ ಯಂತೆ ನಡೆತಂದಳು ॥ ಧೂಪ ಗುಗ್ಗುಳಕಲಶ ಕನ್ನಡಿ ಸುನೈವೇದ್ಯ । ದೀಪ ಶ್ರೀಗಂಧ ಮಂಗಲ ಕುಂಕುಮಾಕ್ಷತೆಯೊ । ಳಾ ಪುರವು ಫೇಯೆನಲು ವಾದ್ಯ ಸಂದಣಿಯಿಂದ ಗಜವ ಪೂಜಿಸುತಿರ್ದಳು ॥

ಆಂದೋಳಿ ರಾಗ - ತ್ರಿವುಡೆತಾಳ

ಮಡದಿಯರ ಶಿರೋಮಣಿ ಮಂಟಪ । ನಡುವಿಲಿ ಗಜರೂಪವ ನಿಲ್ಲಿಸಿ । ಪೊಡವಿಪರರಸಿಯರನೊಡಗೊಂಡು ಒಡಗೊಂಡೇ ಶೋಭನ ಪಾಡುತ । ಒಡೆಯನ ಶ್ರೀಪಾದ ನೆನೆದಳು ॥ ೧ ॥ ಬಾಲೆಯರ ಶಿರೋಮಣಿ ನಡೆಯಲು ಕಾಲಂದುಗೆ ಝಣಝಣರೆನ್ನಲು । ಮೇಲು ದೀವಿಗೆಯ ಬೆಳಕಿ ನಲಿ ॥ ಬೆಳಕಿನೊಳಾ ಕುಂಜರ ದೇವನ ಕಾಲಿಗಕ್ಷತೆಯ ತಳಿದಳು ॥ ೨ ॥ ಗಂಧಾಕ್ಷತೆ ಗಜರಾಜನಿಗೆ । ಚಂದದಿ ಪುಷ್ಪಾಂಜಲಿಯಿಂದ । ನಿಂದು ಪ್ರಾರ್ಥಿ ಸುತ ನೈವೇದ್ಯವ ॥ ನೈವೇದ್ಯ ಸಮರ್ಪಣೆಗೈಯ್ಯಲು । ಮಂಗಳಾರತಿಯ ಬೆಳಗ್ಯಾಳು ॥ ೩ ॥ ಗಜಗೌರಿಯ ಪಾದಕೆ ನಮಿಸುತ । ನಿಜಭಕ್ಷ್ಯಂ । ಗಳನೆ

ಸಮರ್ಪಿಸಿ । ಭುಜಗ ಭೂಷಣನ ಸಲಹೆಂದು ॥ ಸಲಹೆಂದಾರತಿಗಳ ನೆತ್ತಲು। ದ್ವಿಜರು ದಕ್ಷಿಣೆಗೆ ಕುಳಿತರು ॥ ೪ ॥ ಸಾಲಿಲಿ ಕುಳಿತಿಹ ದಂಪತಿಗಳ । ಕಾಲು ಮೋರೆ ಕರಗಳ ತೊಳೆದು । ಮೇಲು ವಸ್ತ್ರಗಳನುಡಿಸುತ್ತ ॥ ಉಡಿಸುತ ಬಹು ಚಿನ್ನವ ತೊಡಿಸುತ । ಸಾಲು ಬಾಯನವ ಕೊಡಿಸ್ಯಾಳು ॥ ೫ ॥ ಮಂಗಳ ಗಜಗೌರಿಗೆ ಜಯ ಜಯ । ಮಂಗಳ ಶುಭಕಾರಿಗೆ ಜಯ ಜಯ । ಮಂಗಳ ಮೂರುತಿಗೆ ಜಯ ಜಯ ॥ ಜಯಜಯವೆಂದಾಡುತ ಪಾಡುತ । ಮಂಗಳಾರತಿಯ ಬೆಳಗಿರೆ ॥ ಸೋಬಾನೆ ॥ ೬ ॥

### ವಾರ್ಧಿಕ ಷಟ್ಪದಿ

ಧಾರುಣೀಪತಿ ಕೇಳು ದಾನಗಳ ಕೊಟ್ಟು ಹದಿ । ನಾರು ಸಾವಿರ ಗೋವುಗಳನು ವಿಪ್ರರಿಗೆ ಮು। ನ್ನೂರ ನಾಲ್ವತ್ತೈದು ಭಾರ ಕನಕವನಿತ್ತ ವಸ್ತ್ರಗಳಿಗೆಣಿಕೆಯಿಲ್ಲ ॥ ಬೇರೆಬೇರೊಲಿದುಣಿಸಿ ಭಕ್ಷ್ಯಭೋಜನಗಳಂ । ಭೂರಿ ದಕ್ಷಿಣೆ ಕೊಟ್ಟುದಕ್ಕೆ ಗಡಿಮಿತಿಯಿಲ್ಲ । ಈ ರೀತಿಯಿಂದ ನೋಹಿಯ ಸಮರ್ಪಣೆಗೆಯ್ಯೆ ಕುಂತಿ ಭಾವಿಸುತಿರ್ದಳು ॥

### ವಚನ

ಈ ಪ್ರಕಾರವಾಗಿ ಗಾಂಧಾರಿ ಗಜನೋಹಿಯಂ ಮಾಡಿ ಧೃತರಾಷ್ಟ್ರನು ನೂರೊಂದು ಮಕ್ಕಳು ಸಹ ಸುಖಸಂತೋಷದಿಂದಿರಲಾಗಿ, ಇತ್ತಲ್ ಇಂದ್ರಪ್ರಸ್ಥದಲ್ಲಿ ಕುಂತಿದೇವಿಯು ತನ್ನ ಅಕ್ಕ ಕರೆಸ್ಯಾಳು, ತಾನು ಹೋಗಬೇಕು - ಎಂದು ಸರ್ವಾಂಗ ಶೃಂಗಾರವಾಗಿ ಹೊರಗಣ ಗೋಪುರದ ಬಾಗಿಲೊಳ್ ಕುಳಿತಿರಲು, ಹಸ್ತಿನಾಪುರದಿಂದ ದಕ್ಷಿಣೆಯಂ ತೆಗೆದುಕೊಂಡು ಹೋಹಂಥ ಬ್ರಾಹ್ಮಣರ ಸಮೂಹವಂ ಕಂಡು, ಅದರೊಳೊರ್ವ ಹಿರಿಯ ಭೂಸುರೋತ್ತಮನಂ ಕರೆದು ಏನೆಂದು ಬೆಸಗೊಂಡಳು ಎಂದರೆ–

### ಕೇದಾರಗೌಳ ರಾಗ - ಅಷ್ಟತಾಳ

ಬಾರಯ್ಯ ಭೂದೇವ ಬಳಲುತ್ತ ನೀವಾವ। ಊರಿಂದ ಬಂದಿರಯ್ಯ ॥ ಭೂರಿಭೋಜನವೆಲ್ಲಿಯಾಯಿತು ದಕ್ಷಿಣೆ । ಯಾರ್ಯಾರು ಕೊಟ್ಟರಯ್ಯ ॥ ೧ ॥ ಮೋರೆಯ ಮೇಲೆಲ್ಲ ಮಂಗಳಾಕ್ಷತೆಗಾಳು । ಯಾರದನಿಟ್ಟರಯ್ಯ ॥ ನೂರು

ಇನ್ನೂ ವರ್ಣಂದ್ಯರೊಟ್ಟಾಗಿ ತೆರಳಿದ । ಕಾರಣವೇನಿರಯ್ಯ ॥ ೨ ॥ ಹಸ್ತಿನಾಪುರದೊಳಗೀಹೊತ್ತು ಪೂಜೆಯು । ವರ್ತಮಾನಗಳೇನಯ್ಯ ॥ ಹೊತ್ತು ಕೊಂಡು ಹೋಗಲಾರದ ಪರಿಯಲ್ಲಿ । ಕಟ್ಟಿದ ಗಂಟೇನಯ್ಯ ॥ ೩ ॥ ಸುತ್ತಣ ದೊರೆಗಳು ತೆರಳಿ ಬಂದವರೆಲ್ಲ । ಮತ್ತೆಲ್ಲಿ ಪೋದರಯ್ಯ । ಪುತ್ರರು ಬರ ಲಿಲ್ಲ ದಾರಿಯೊಳ್ ಕಂಡಿರೆ । ಎತ್ತಲೇನಾದರಯ್ಯ ॥ ೪ ॥

### ವಚನ

ಇಂತೆಂದು ಕೇಳುವ ದೇವಿಯ ಮುಖಮಂ ನೋಡಿ ವಿಪ್ರೋತ್ತಮನು ಏನೆಂದನು ಎಂದರೆ-

### ವರಾಳಿ ರಾಗ - ಏಕತಾಳ

ಹಸ್ತಿನಾಪುರದಿಂದ ನಾವು ಬಂದೆವಮ್ಮ ಅಲ್ಲಿ । ಹಸ್ತಿಪೂಜೆಯ ಕಣ್ಣಾರೆ ಕಂಡೆವಮ್ಮ ॥ ವಸ್ತುದಾನಗಳ ಬೇಡಿ ಕೊಂಡೆವಮ್ಮ ಒಳ್ಳೆ । ಪ್ರಸ್ತದ ಊಟಗಳ ಉಂಡೆವಮ್ಮ ॥ ೧ ॥ ಧರಣಿಪಾಲರೆಲ್ಲ ಬಂದು ನೆರೆದ ರಮ್ಮ ಅಲ್ಲಿ । ತರುಣಿಯರೆಲ್ಲರು ಕೂಡಿ ಮೆರೆದರಮ್ಮ ॥ ಗಿರಿಯ ಹಾಳಿ ತಕ್ಕೆ ಹಣ ಸುರಿದರಮ್ಮ ಧರಣೀ । ಸುರರೆಲ್ಲ ತೆ । ಕ್ಕೊಳ್ಳಿರೆಂದು ಒರೆದ ರಮ್ಮ ॥ ೨ ॥ ಕಣ್ಣ ಪಾಪವೆಲ್ಲ ತೀರಿಹೋಯಿತಮ್ಮ ನಮ್ಮ । ಪುಣ್ಯ ದಿಂದುಂಬಷ್ಟು ಭಾಗ್ಯವಾಯಿತಮ್ಮ ॥ ಚಿಣ್ಣರು ಗಾಂಧಾರಿ ಸಹಿತ ಬಾಳಲಮ್ಮ ಅವರ । ಬಣ್ಣದ ವಿಸ್ತಾರವೇನ ಹೇಳಲಮ್ಮ ॥ ೩ ॥

### ಘಂಟಾರವ ರಾಗ - ಝಂಪೆತಾಳ

ಹೀಗೆಂಬ ವಾರ್ತೆಯನು ಪೇಳಿ ಭೂಸುರ ಕಡೆಗೆ । ಆಗಲೇ ಕೈಮುಗಿದು ಸಾಗಿದನು ಮನೆಗೆ ॥ ೧ ॥ ಇಂದುಧರನೇ ಬಲ್ಲನೆಂದು ಮರುಗುತ ಮನದಿ । ನೊಂದುಕೊಂಡಳು ಕುಂತಿ ನಂದನರ ನೆನೆದು ॥ ೨ ॥

### ತೋಡಿ ರಾಗ - ರೂಪಕತಾಳ

ಅಕ್ಕನವರಿಗೆ ನಾನೇನ ಮಾಡಿದೆನೊ ಶ್ರೀ । ಮುಕ್ಕಣ್ಣ ಶಿವನೊಬ್ಬ ಬಲ್ಲ ॥ ಮಕ್ಕಳು ಕುಡಿವಂಥ ಹಾಲೊಳು ವಿಷಬೀದು । ಸಿಕ್ಕಿದಂತಾಯಿ ತೆನ್ನ ಬದುಕು ॥ ೧ ॥ ವಾಸಿಪಂಥಗಳೆಮ್ಮ ಮೇಲಿದ್ದರೇನಾಯ್ತು । ಲೇಸು

ಕಟ್ಟಿಗೆ ನಮ್ಮ ಹೊರತ ॥ ಏಸು ದರಿದ್ರಯಾದರು ತಂಗಿಯೆಂಬಂಥ । ಪಾಶ ವಿಲ್ಲದೆ ಪೋಯಿತಲ್ಲ ॥ ೨ ॥ ಅನ್ಯಾಯಗಾರ್ತಿ ನಾನಾದರೆ ಬಿಡಲೆನ್ನ । ಚಿಣ್ಣರಿಂದೇನ ಮಾಡಿದರು ॥ ಭಿನ್ನ ಭೇದಗಳುಂಟು ದಾಯಾದಿ ಮತ್ಸರ । ವಿನ್ನೆಂಥ ಪಾಪಿಯೋ ಶಿವನೆ ॥ ೩ ॥ ದೊರೆತನವವರಲ್ಲಿ ರಾಜ್ಯಕೋಶಗಳಲ್ಲಿ। ಸಿರಿ ಸೆರೆ ಸಿಕ್ಕಿಹಳಲ್ಲಿ ॥ ಪರದೇಶಿಗಳಾದರು ಪಾಂಡು ಭೂಪತಿ ಹೋದ । ಮರುದಿನ ಎನ್ನ ಬಾಲಕರು ॥ ೪ ॥ ಭಾವನಪರಿಗಂತು ತಮ್ಮನ ಸುತರೆಂಬ । ಭಾವವಿಲ್ಲದೆ ಹೋಯಿತಲ್ಲ । ಯಾವ ಪರಿಯಲಿ ಮಕ್ಕಳ ರಕ್ಷಿಸುವೆನೆಂದು । ದೇವಿ ಚಿಂತಿಸುತಿರ್ದಳಾಗ ॥ ೫ ॥

## ಸೌರಾಷ್ಟ್ರ ರಾಗ - ಅಷ್ಟತಾಳ

ನಳಿನಲೋಚನೆ ಬಲು ಬಳಲುತ್ತ ಬಾಡಿದಳ್ । ಕುಂತಿ ದೇವಿ ಮುಡಿ । ಯೊಳಗಿದ್ದ ಪೂಸರ ಹರಿದು ಬಿಸಾಡಿದಳ್ ಕುಂತಿದೇವಿ ॥ ೧ ॥ ಹಣೆಯ ಮೇಲಿಟ್ಟ ಕುಂಕುಮ ನಾಮ ಒರಸಿದಳು । ಕುಂತಿದೇವಿ ಸೊಂಟ । ಕೆಣೆಯಹಾದ ಡಾಬು ವೈಜಣಿಗಳ ಕಳಚಿದಳು ಕುಂತಿದೇವಿ ॥ ೨ ॥ ಕೊರಳ ಮುತ್ತಿನ ಹಾರ ಹರಿದು ಬೀಸಾಡಿದಳು । ಕುಂತಿದೇವಿ ಎದೆ । ಗೆರಕವಾಗಿರುವ ಕುಪ್ಪಸ ತೆಗೆದೊಗೆದಳು । ಕುಂತಿದೇವಿ ॥ ೩ ॥ ವಜ್ರದ ಅರಳೋಲೆಯ ಸಂದು ಬಿಡಿಸಿದಳು । ಕುಂತಿದೇವಿ ಕೈಯೊ । ಳುಜ್ವಲಿಸುವ ಹತ್ತ ಕಡಗವ ಬಿಸುಡಿ ದಳು ಕುಂತಿದೇವಿ ॥ ೪ ॥ ಕಜ್ಜಳ ಕಣ್ಣನೀರಲಿ ಕೆಸರಾದಳು । ಕುಂತಿದೇವಿ ಬಂದು । ಸೆಜ್ಜೆಯ ಮನೆಯ ಮಂಚದ ಮೇಲೆ ಹೊರಳಿದಳು । ಕುಂತಿ ದೇವಿ ॥ ೫ ॥

## ಸಾಂಗತ್ಯ ರಾಗ - ರೂಪಕತಾಳ

ಎಂದು ಚಿಂತಿಸುತಿಪ್ಪ ಸಮಯದೊಳಯ್ವರು । ನಂದನರೈತಂದ ರಾಗ ॥ ಮಂದಿರದೊಳಗಿರ್ದ ಮಾತೆಯೆಲ್ಲಿಗೆ ಪೋದ । ಳೆಂದು ಚಿಂತಿಸುತಿರ್ದ ರವರು ॥ ೧ ॥ ಎಂದು ನಾವು ಬರುವಾಗ ಮುಂದು ಮಡಿಯನುಟ್ಟು । ಚಂದ ದೊಳಡಿಗೆಯ ಮಾಡಿ ॥ ಕಂದರುಣಲು ಬರಲಿಲ್ಲವೆಂದಿದಿರಾಗೋಳ್ವ । ಳಿಂದೇ ತಕೆಲ್ಲ ಈ ಗೃಹದಿ ॥ ೨ ॥ ಹಿತ್ತಲ ಕಡೆಯೊಳಗಿಹಳೊಯೆಂಬುದಕಾಗಿ ।

ಮತ್ತೆ ಬಂದನು ಭೀಮ ನೋಡಿ ॥ ಸುತ್ತಣ ಮನೆಯೊಳಗರಸಿದರಿಲ್ಲ ಇ। ನ್ನೆತ್ತ ಪೋದಳೊ ಎಮ್ಮ ಜನನಿ ॥ ೩ ॥ ಅಮ್ಮಾ ಅಮ್ಮಾಯೆಂದು ಕೇರಿ ಕೇರಿಯೊಳಿರ್ದ । ಹೆಮ್ಮಕ್ಕಳೊಳು ಕೇಳ್ದರಾಗ ॥ ಧರ್ಮಜ ಭೀಮಪಾರ್ಥ । ನರು ಮನೆಯೊಳ ಹೊಕ್ಕು । ಸುಮ್ಮನೆ ಕುಳಿತಿರ್ದರೆಲ್ಲ ॥ ೪ ॥ ಸೆಜ್ಜೆಯ ಮನೆಯಲ್ಲಿ ನಿದ್ರೆಗೆಯ್ವಳೊಯೆಂದು । ಅರ್ಜುನ ನಡೆದು ಮತ್ತೊಡನೆ ॥ ದುರ್ಜನರಿಂದ ದುಃಖಿಸುವ ತಾಯನು ಕಂಡು । ಸಜ್ಜನರೆಲ್ಲ ಕೇಳಿದರು ॥ ೫ ॥

### ಆನಂದಭೈರವಿ ರಾಗ - ಆದಿತಾಳ

ಏನಾಯ್ತು ತಾಯೆ ನಿಮಗೆ ಪೇಳಿರಿ ಇಂದು । ಏನು ಮಾಡಬೇಕಮ್ಮ ನಾವು ॥ ನೀನೇಕೆ ಚಿಂತಿಸುತಿರುಪೆ ಪೇಳದಕನು । ಮಾನವ ಮಾಡಬೇಡ ॥ ೧ ॥ ಹಸಿದು ಬಂದೆವು ನಾವೆಲ್ಲ ಮಧ್ಯಾಹ್ನದ । ಬಿಸಿಲೊಳು ದಣಿದೆವಮ್ಮ ॥ ಬಿಸಿನೀರ ನೆರೆ ನಮಗೆ ಬಟ್ಟಲನಿಟ್ಟು । ಮೊಸರನ್ನ ಬಡಿಸು ತಾಯೆ ॥ ೨ ॥ ನಾಡಿನ ಭೂತಗಳು ನಿಮ್ಮನು ಸೋಂಕಿ । ಪೀಡಿಸುತ್ತಿದವೇನಮ್ಮ ॥ ಮೂಢ ಬೊಮ್ಮ ರಕ್ಕಸಗೆ ಹರಕೆಯ ಕೊಡದೆ । ಕಾಡುತ್ತಲಿಹುದೇನ । ಮ್ಮ ॥ ೩ ॥ ದಾಯಾದ್ಯರ್ನಮ್ಮ ಕಂಡು ಸೈರಿಸದತಿ । ಮಾಯ ಮಂತ್ರ ಮಾಡಿದರೊ ॥ ಪ್ರೀಯದ ಮನೆ ದೇವರು ಮನಸು ನೊಂದು । ಕಾಯವ ದಣಿಸುವರೊ ॥ ೪ ॥

### ಭೈರವಿ ರಾಗ - ಝಂಪೆತಾಳ

ತನುಜರಾಡಿದ ನುಡಿಯ ವನಜಮುಖಿ ಕೇಳ್ದು । ಬಣಗು ದೈವಗಳೆಲ್ಲ ದಣಿಸಲಾದಪವೆ ॥ ೧ ॥ ಭೂತಗಳ ತೊಡರಿಲ್ಲ ಪ್ರೇತಗಳ ಎಡರಿಲ್ಲ ನೀತಿ ತಪ್ಪಿದ ಜನರೆ ನಡೆವ ಭೂತಗಳು ॥ ೨ ॥ ಬಾಲಕರು ನಿಮ್ಮೊಡನೆ ಪೇಳಿ ಮಾಡುವದೇನು । ಭಾಲಲೋಚನನಿಟ್ಟ ಶೂಲವಿದು ತನಗೆ ॥ ೩ ॥ ಚಿಣ್ಣರಿರ ಬಳಲದಿರಿ ಚಿಂತೆ ಬೇರಿಲ್ಲೆನಗೆ । ಉಣ್ಣೆ ಅಡಿಗೆಯ ಮಾಡಿ ಇಂದಿನ ಪ್ಪರಕೆ ॥ ೪ ॥

### ದ್ವಿಪದಿ

ತಾಯ ಮಾತನು ಕೇಳಿ ತರಳರುಜಿದರು । ಮಾಯುಕಗಳೇನೆಂದು ಮನದಿ ನೋಡಿದರು ॥ ೧ ॥ ಮುಂತದಲಿ ಮಲಗಿದ್ದ ಮಾತೆಯನು ನುಡಿಸಿ ।

ಚಂಚಲಿಸಬೇಡೆಂದು ನಿಜಮೊಳೊಡಬಡಿಸಿ ॥ ೨ ॥ ಕಂಬನಿಯನೊರಸಿದರು ಕಣ್ಣಿನಲಿ ಸುರಿವ । ಹಂಬಲಿಸಬೇಡೆಂದು ತಣಿಸಿದರು ಮನವ ॥ ೩ ॥ ಬೊಮ್ಮ ಹರಿ ಶಿವರಿಂದ ಬಂದರೂ ಬರಲಿ । ಅಮ್ಮ ನೀ ಬೆದರದೆಮಗರುಹು ಗಾಢದಲಿ ॥ ೪ ॥ ಧರ್ಮಜಾದಿಗಳು ಕೈ ಮುಗಿದು ತಾಯಡಿಗೆ । ದಮ್ಮಯ್ಯ ಪೇಳಬೇಕೆಂದರಡಿಗಡಿಗೆ ॥ ೫ ॥ ಎಂದೊಡಂಬಡಿಸಿ ಕೇಳ್ದಿರುವ ಮಕ್ಕಳಿಗೆ । ಮಂದಗಾಮಿನಿ ಪೇಳ್ದಳೇಕಾಂತದೊಳಗೆ ॥ ೬ ॥

### ಕಾಂಬೋಜಿ ರಾಗ - ಏಕತಾಳ

ಮಕ್ಕಳಿರ ಕೇಳಿ ನಿನ್ನೆ ಅಕ್ಕ ಮಾಡಿದ ಕೃತ್ಯವ । ಸಕ್ಕರೆಯ ಕಬ್ಬು ಕಾಸರಕ್ಕನಾಯಿತು ॥ ಮುಕ್ಕಣ್ಣುಳ್ಳಾತ ಮಾಡಿದ ದುಃಖವಲ್ಲಾ ಅದರಿಂದೇನು । ಸೊಕ್ಕಿದಳೈಶ್ವರ್ಯ ಬಂದು ದಕ್ಕಿತುಯೆಂದು ॥ ೧ ॥ ನಾಡಸತಿಯರನೊಡಗೂಡಿ ತಾ ಗಾಂಧಾರಿ ನಿನ್ನೆ । ಮಾಡಿದಳಾನೆಯ ಪೂಜೆ ಮೃತ್ತಿಕೆಯಿಂದ ॥ ನಾಡಬಡವೆ ಎಂದಸಡ್ಡೆ ಮಾಡಿದ್ದಲ್ಲವೆ ಇಂದೆನ್ನ । ನೋಡಿ ದಾರಿದ್ರ್ಯವೆಂಬುದು ಕಷ್ಟವೆಂದಳು ॥ ೨ ॥

### ಶಂಕರಾಭರಣ ರಾಗ - ತ್ರಿವುಡೆತಾಳ

ಪೊಡವಿಪಾಲರನೆಲ್ಲ ಕರೆಸಿದಳವಳು ತನ್ನ ನೋಹಿಗೆ । ಬಡವರಿವರೆಂದೆನುತ ನಮ್ಮೊಳು ನುಡಿಯಲಿಲ್ಲ ॥ ೧ ॥ ಬಡವರಾಗಿನ್ನಿರಲು ಬಾರದು ಪೊಡವಿಯೊಳಗೆ ಕೂಳಿಗೆ । ಒಡಲ ಹೊರುವುದರಿಂದ ಪ್ರಾಣವ ಬಿಡಲು ಲೇಸು ॥ ೨ ॥ ತನ್ನವರು ದಾರಿದ್ರರಾದರೆ ನೋಡರಯ್ಯ ಗುಣದಲಿ । ಹೊನ್ನನುಳ್ಳೊಡೆ ಹೊಲೆಯನಾದರು ಮನ್ನಿಸುವರು ॥ ೩ ॥ ಹಣವನುಳ್ಳವರಕುಲರಾದರು ಕುಲಜರವರು ಲೋಕದಿ । ಬಣಗುಗಳು ನಿರ್ಧನಿಕರಾದರೆ ಹೊದ್ದದಯ್ಯ ॥ ೪ ॥ ಅರಸು ಮಕ್ಕಳು ನೀವು ರಾಜ್ಯಕೆ ನಿಮ್ಮ ತಂದೆ ಕಾಯುವ । ತೊರೆದಡಂದಿಂದಲೆ ದರಿದ್ರತೆ ದೊರಕಿತೆಮಗೆ ॥ ೫ ॥ ಮರುಳನಾದನು ಭಾವ ತಮ್ಮನ ಮಕ್ಕಳೆಂದು ನೋಡದೆ । ಹಿರಿಯ ತಾಯಿಯ ಗುಣಗಳಿಂತಿದ ಕಂಡಿರಲ್ಲ ॥ ೬ ॥

### ನಾದನಾಮಕ್ರಿಯೆ - ಅಷ್ಟತಾಳ

ಆಕೆ ಕೇಳಿದಡೀಗ ನಮ್ಮನು ಈ ಭೂಲೋಕದೊಳಿರ ಬೇಡೆಂದೆಂಬಳು॥ ಈ ಕೇಳ್ದ ಮಾತೆಡಕಿವಿಯೊಳು ಬಿಡಿ । ಏಕಾಂತವಾಗಿ ನೀವೆಲ್ಲರು ॥ ೧ ॥

ಬಲ್ಲಿದವರ ಕೂಡೆ ಬಡವರ್ಗೆ ನ್ಯಾಯ । ಸಲ್ಲದು ರಾಜನೀತಿಗಳಿವು ॥ ಖುಲ್ಲ ರವರು ಲೇಸಾಗಿರ್ಪರು ನಾವು । ಒಳ್ಳಿತಾಗಿರಬೇಕೆಂದವರೊಳು ॥ ೨ ॥ ಅರಸುಗಳವರೀಗ ರಾಜ್ಯಕ್ಕೆ। ಬೇರೆ ಸಿರಿತನ ಉಂಟು ಸಾಮ್ರಾಜ್ಯಕೆ॥ ಪರದೇಶಿ ಗಳು ನಾವು । ನಮ್ಮಂತೆ ಬದುಕಿರುವುದು ಕಷ್ಟವೆಂದಳು ಕಾಂತೆ ॥ ೩ ॥ ಸಣ್ಣ ವರು ನೀವು ಮಾಡುವುದೇನು ಎನ್ನ । ಪುಣ್ಯವ ಫಲವತೋಡಿದರೇನು ॥ ಎಣ್ಣದಿರುವುದೊಳ್ಳಿತೆಂದಳು ಕುಂತಿ । ಕಣ್ಣ ನೀರನು ಕೈಲಿ ತಂದಳು ॥ ೪ ॥

## ಭಾಮಿನಿ ಷಟ್ಪದಿ

ಜನನಿಯಿಂತೆಂದು ಕಂಬನಿದುಂಬೆ ಸಹದೇವ । ಧನುವ ಝೇಂಕರಿಸಲಾ ನಕುಲ ಕೋಪಿಸಿಕೊಂಡ । ಮನದಿ ರೌದ್ರಾವೇಷಮಂ ತಾಳ್ದು ಭೀಮ ಗದೆಯಂ ತಿರುಹುತೊಡನೆದ್ದನು ॥ ಬಣಗು ಕುರುಪತಿಯ ನೂರೊಂದು ಮಕ್ಕಳನೆಲ್ಲ । ಎಣಿಕೆಯಿಂದೆಮನಿಗೊಪ್ಪಿಸಿ ಬರುವೆನೆಂದಾಗ । ಲಣಕದಿಂ ಧರ್ಮಸುತ ನಡಿಗೆರಗಿ ಪೊರಮಡಲು ಸಂತೈಸಿದಂ ಭೀಮನ ॥

## ಕೇದಾರಗೌಳ ರಾಗ - ಅಷ್ಟ ತಾಳ

ತಮ್ಮ ಕೋಪಿಸಬೇಡ ತರವೇನೊ ನಿಜಕುಲ। ಧರ್ಮವ ಮೀರುವದು॥ ತಮ್ಮ ದೋಷಕೆ ತಾವೆ ಕೆಡಲಿರ್ಪರಲ್ಲದೆ । ನಮ್ಮಿಂದ ಬರುಹುವೆ ॥ ೧ ॥ ದಾಯವಾದಿಗಳೆಂಬುದರಿಯೆಯ । ಮೊದಲೆ ದು । ರ್ಮಾನಹಾಪೋಹಿ ತರವರು ॥ ತಾಯ ನೋಹಿಗೆ ಬಂದು ಕರೆದಿಲ್ಲ ಹೀಗೆಂದು । ನ್ಯಾಯಮಾತು ವುದೊಳ್ಳಿತೆ ॥ ೨ ॥ ಹಿರಿಯ ಭೂಪತಿ ಪಾಂಡು ಹಾಗಾದ ಮೇಲಿನ್ನು । ಕರಗಿ ಮಾಡುವದೇನಯ್ಯ ॥ ಸರಸಿಜೋದ್ಭವ ಫಣೆಯೊಳು ಬರೆದಿಟ್ಟುದ । ಒರಸಲಾರಿಗುಬಾರದು ॥ ೩ ॥ ಕಿರಿದಾಗಿ ಬದಲೊಂದು ವ್ರತ ಮಾಳ್ಪೆವೆಂದರೆ। ಅರೆವೀಸ ಕಯ್ಯೊಳಿಲ್ಲ ॥ ಹಿರಿಯರು ಗಳಿಸಿಟ್ಟ ರತ್ನ ಭಂಡಾರವೆ । ವರ ಅರಮನೆಯೊಳಾಯ್ತು ॥ ೪ ॥

## ವಾರ್ಧಿಕ ಷಟ್ಪದಿ

ಧೃತರಾಷ್ಟ್ರಭೂಪತಿಗೆ ದಯವಿಲ್ಲದಂತಾಯ್ತು।ಪಿತಶತ್ರುವಾದ ಕೌರವ ರಾಜ ನಮ್ಮೊಡನೆ । ಜೊತೆಯಾಗಿ ನನೆವ ನೂರೊಂದು ಮಕ್ಕಳ ತಾಯಿ

ಗೋಮುಖದ ಹುಲಿಯಾದಳು ॥ ಗತಿಯಾರು ಮುಂದೆ ಬದುಕುವದೆಂತೆ ನುತ್ತ ಭೂ । ಪತಿ ಧರ್ಮರಾಯ ಕಂಬನಿದುಂಬಿ ಕಣ್ಣೀರು । ಕ್ಷಿತಿಗೆ ಬೀಳಲು ಪಾರ್ಥ ಕಿಡಿಗಣ್ಣನಂತೆ ಕೋಪಿತನಾಗುತಿಂತೆಂದನು ॥

**ಸೌರಾಷ್ಟ್ರ ರಾಗ - ತ್ರಿವುಡೆತಾಳ**

ತಾಯೆ ಬಿಡು ಬಿಡು ಚಿಂತೆ ಕೌರವ । ರಾಯನೆಸಗಿದ ಮಣ್ಣಿ ನಾನೆಯ । ನೋಯಿ ರಚಿಸಲು ಇಂದ್ರನಾನೆಯ ತಹೆನು ಧರೆಗೆ ॥ ೧ ॥ ಚಾರುತರ ವಿಭವದಲಿ ಸುರಪತಿ । ಏರುವೈರಾವತವ ಧರಣಿಗೆ । ತಾರದಿದ್ದರೆ ತಾಯೆ ನಿನ್ನ ಕುಮಾರನಲ್ಲ ॥ ೨ ॥ ಮೇದಿನಿಗೆ ಸುರಗಜವ ತಾರದೆ । ಹೋದೆನಾದರೆ ಧನುವ ಹಿಡಿಯೆನು । ಮೇದಿನೀಪತಿ ಧರ್ಮರಾಯನ ಪಾದದಾಣೆ ॥ ೩ ॥ ಖಂಡ ಪರಶುವೆ ಮುನಿದುನಿಂದರು । ಪುಂಡರೀ ಕಾಂಬಕನೆ ತಡೆವರು । ಕೊಂಡು ಬಾರದೆ ಹೋದೆನಾದರೆ ಗಂಡುಸಲ್ಲ ॥ ೪ ॥

**ಪಂತುವರಾಳಿ ರಾಗ - ಅಷ್ಟತಾಳ**

ದೇವಲೋಕದಲ್ಲಿರುವ ದೇವ ಕನ್ನೆಯರನೆಲ್ಲ । ನೋಹಿಗೆಂದೋಲೆಯ। ಕೊಟ್ಟು । ಕರೆಸುವೆ । ಇಲ್ಲಿ ತರಿಸುವೆ ॥ ೧ ॥ ಕಾಮಧೇನು ಕಲ್ಪವೃಕ್ಷ ವಾ ಮಹಾಂತ ವಜ್ರಾಯುಧವ । ಭೂಮಿಗೆ ತಂದಿರಿಸಿ ನಿಮಗೆ ತೋರುವೆ । ಮತ್ತೆ । ಸಾರುವೆ ॥ ೨ ॥ ಪಾರಿಜಾತ ವೃಕ್ಷ ರಂಭೆ ಊರ್ವಶಿ ಮುಂತಾದ ವರ । ಧಾರಿಣಿಗಿಳಿಸುವಂತೆ ಮಾಡುವ । ಅಣಿ । ನೋಡುವೆ ॥ ೩ ॥ ಮಾಯಕದ ಮಾತಿದಲ್ಲ ತಾಯೆ ಕೇಳಿಂದನ್ನ ಸೊಲ್ಲ । ನೋಯಬೇಡ ಕೋಪವೆಲ್ಲ । ತಾಳಮ್ಮ । ಬೇಗ । ಏಳಮ್ಮ ॥ ೪ ॥

**ವಚನ**

ಇಂತೆಂದು ತಾಯ ಮುಂದೆ ಭಾಷೆಯಂ ಕೇಳ್ದ ವಾಕ್ಯಮಂ ಕೇಳಿ ಧರ್ಮರಾಯನಾಶ್ಚರ್ಯಮಂ ತಾಳಿ ಅರ್ಜುನನೊಡನೆ ಏನೆಂದನು ಎಂದರೆ-

**ಶಂಕರಾಭರಣ ರಾಗ - ಅಷ್ಟತಾಳ**

ತಮ್ಮ ಏನೆಂಬೆ ನಾನು ಪಂಥವ ಮಾಡಿ । ಹೆಮ್ಮೆಯ ಮಾಡುವರೆ ನೀನು॥ ನಮ್ಮ ಕಾರಣವೆಲ್ಲಿ ಸುರಪನ ಗಜವೆಲ್ಲಿ । ಸುಮ್ಮನೇ ಬರುವುದೇನು ಬಲ್ಲವ

ನೀನು ॥ ೧ ॥ ಸೋಮಕುಲಜರು ನಾವು ಆಗಿದ ಮೇಲೆ । ಆ ಮಾತು ತಪ್ಪಬಾರದು ॥ ಭೂಮಿಗೆ ಸುರಗಜವಿಳಿದು ಬರುವುದುಂಟೆ । ನೀ ಮರು ಳಾದೆಯಲ್ಲ ಪೇಳಿದೆ ಸೊಲ್ಲ ॥ ೨ ॥ ಚಾರು ಬಡವನ ಮನ ದಂಡಿಗೆಯ ಮೇ। ಲೇರ ಹೋಗುವ ತೆರನ ॥ ಪಾರಿಜಾತ ಕಲ್ಪತರು ಮೊದಲಾದವ । ಯಾರು ತಂದವರುಂಟಯ್ಯ ಪೇಳಿದಾಶ್ಚರ್ಯ ॥ ೩ ॥ ಹಸಿದ ಕೋಡಗ ಬಂದು ಆಸೆ ಯೊಳಂದು । ಶಶಿಗೆ ಬಾಯೊಡ್ಡಿದಂತೆ ॥ ಪುಸಿಯಾಯಿತಲ್ಲ ಪೇಳಿದುದೆಲ್ಲ ರಂಬೆ ಊರ್ವಶಿಯರಿಲ್ಲಿಗೆ ಬಹರೆ॥ ೪ ॥ಹಾಳು ಬಾವಿಗೆ ಕೋಪಿಸಿ ಹಾರಿದರೆ ಮ । ತ್ತೇಳು ಕೋಪಿಸಿಕೊಂಡರೂ ॥ ಕೇಳುತಾ ದಡಹತ್ತಲರಿದು ಶಾಸ್ತ್ರ ಗಳೆಂಬ । ಕಾಳು ಪೌರುಷವು ನೋಡಾ ಕೋಪಿಸಬೇಡ ॥ ೫ ॥ ಹಗೆಯಾದು ತ್ತುಕರಿಗೆಲ್ಲ ನಿಂದೆಯ ಮಾಡಿ । ನಗುವ ಹಾಗಾಯಿತಲ್ಲ ॥ ಜಗದೊಳು ಸತ್ಯವಾದಿಗಳು ಪಾಂಡವರೆಂಬ । ಮಿಗೆ ಕೀರ್ತಿಯಡಗಿತಲ್ಲ ರಾಜ್ಯ ದೊಳೆಲ್ಲ ॥ ೬ ॥

### ಭಾಮಿನಿ ಷಟ್ಪದಿ

ಉಂಬುದಕೆ ಗತಿಯಿಲ್ಲದವರಿಗೆ । ಡಂಭಕದ ನುಡಿಯೇಕೆ ಪಾಂಡವ । ರೆಂಬವರು ಸತ್ಯಕ್ಕೆ ತಪ್ಪಿದರೆಂಬ ಪೆಸರಾಯ್ತು ॥ ಹಂಬಲಿಸಲಿನ್ನೇಕೆ ಶಾಸ್ತ್ರ ಗಳೆಂಬ ದೋಷವ ಕಳೆಯೆನುತ ನಯ। ನಾಂಬು ವರ್ಷದಿ ಮಿಡಿಯಲರ್ಜುನ ನೆಂದನಗ್ರಜಗೆ ॥

### ಸೌರಾಷ್ಟ್ರ ರಾಗ - ಮಟ್ಟೆ ತಾಳ

ಅಣ್ಣ ಧರ್ಮಜ ಕೇಳು ಜನನಿಯ। ಪುಣ್ಯವಿದ್ದರೆ ತರಿಸದುಳಿಯೆನು ॥ ಬಣ್ಣಗೆಡದಿರು ಬರಿದೆ ಮನದೊಳು । ಎಣ್ಣಲಾಗದು ವ್ಯಸನ ಬಿಡು ಬಿಡು ॥ ೧ ॥ ಲೋಕವೆನ್ನೊಳು ಮುನಿದು ನಿಂದರೂ । ನಾಕಪಾಲರು ಅಡ್ಡ ಬಂದರೂ ॥ ಪಾಕಶಾಸನ ಪಂಥವಿಡಿದರೂ ೩ । ನಾಕಿಯಾನೆ ನಾ ತರಿಸದುಳಿ ಯೆನು ॥ ೨ ॥ ಚಿಂತೆಯಾತಕೆ ಚಿನುಮಯಾತ್ಮಕ । ಕಂತು ಜನಕನ ಕರುಣ ವಿಲ್ಲವೇ ॥ ಅಂತರಂಗದಿ ಆದಿಕೇಶವ । ಸಂತತ ನಮ್ಮ ಸಲಹದೆ ಬಿಡನು ॥ ೩ ॥

### ಮಧ್ಯಮಾವತಿ ರಾಗ - ಏಕತಾಳ

ಎಂದು ಧೈರ್ಯವ ಪೇಳಿ ಧರ್ಮಜಗೆ । ವಂದಿಸಿ ಓಲೆಕಂಠವ ಪಿಡಿದು ॥ ಮಂದರ ಧರನ ಪಾದವ ನೆನೆಯುತ ತನ್ನ । ತಂದೆಗೆ ನಮೊ ನಮೋ ಯೆಂದನಾಗ ॥ ೧ ॥

ಜಯ ಜಯ ಜಯವೆನ್ನುತ್ತ ದೇವೇಂದ್ರಗೆ ॥ ಪಲ್ಲವಿ ॥ ಚಿನ್ನ ದುಂಗುರ ದಂಗುಲಿಯೊಳಂದು । ಉನ್ನಂತ ಓಲೆ ಕಂಠವ ಪಿಡಿದು ॥ ತನ್ನೊಳು ತಾನೆ ಒಕ್ಕಣೆ ಜೋಡಿಸಿಕೊಂಡು । ಚೆನ್ನಾಗಿ ಬರೆದನೆ ಬಿನ್ನಪವ ॥ ೨ ॥ ಮುತ್ತಿನ ಒಂಟಿ ಕರ್ಣದೊಳೆಸೆಯೆ । ಚಿತ್ರದ ಓಲೆ ಕಂಠವ ಪಿಡಿದು ॥ ಮತ್ತೆ ಒಕ್ಕಣೆಯ ಜೋಡಿಸಿಕೊಂಡು ಸುರಪತಿ । ಗರ್ತಿಯಿಂ ಬರೆದನೆ ಪತ್ರಿಕೆಯ ॥ ೩ ॥

### ಶಾರ್ದೂಲವಿಕ್ರೀಡಿತ

ಇಂತಾನಂದದೊಳಂದು ಪಾರ್ಥನು ಮಹಾಸಂತೋಷದಿಂ ತಾತಗಂ । ಕುಂತೀದೇವಿಯ ಸುಪ್ರತಂ ಸಲಿಸಬೇಕಿಂತಾಗಿ ಸದ್ಭಾವದಿಂ । ದಂತೀಂದ್ರಂ ತರು ವಜ್ರ ಸುಂದರಿಯರಂ ಮುಂತಾಗಿ ನೀವ್ ಪಾಲಿಪಾ । ಪಂಥಂಗಳ್ ಪಲವಾಗಿ ಪೇಳಿದೆನವಂ ಸಂತೋಷದಿಂದೀವುದು ॥

### ಭೈರವಿ ರಾಗ - ಮಟ್ಟೆ ತಾಳ

ಮದಕರಿಯವೋಲ್ ಕದಪಿನರ್ಜುನ ಭುಜವನೊದರಿದ । ಮುದದಿ ಬರೆದ ಲಿಖಿತವಂಬಿನ ತುದಿಗೆ ಕಟ್ಟಿದ ॥ ಪದ್ಮನಾಭನ ಪಾದಕೆ ನಮಿಸಿ ಮದನ ವೈರಿಯನ್ನು ಮುದದಿ ನೆನೆದು ಧನುವಿಗೊಪ್ಪುವ ಹೆದೆಯ ಬಿಗಿದನು ॥

### ಘಂಟಾರವ ರಾಗ - ಅಷ್ಟ ತಾಳ

ಏಚ್ಚನೆ ಶರವರ್ಜುನ ನರರೆಲ್ಲ । ಬೆಚ್ಚಿ ಬೆದರಲು ಚೋದ್ಯವೆಂದೆಸು ತಚ್ಚರಿಸೆ ಗಂಧರ್ವರು ॥ ೧ ॥ ಮಿಂಚಿನಂದದಿ ಹೊಳೆದುದರ್ಜುನನಂಬು । ಕಾಂಚನದ ಪರಿಲಾಂಛನದಿ ಸಚರಾಚರಂಗಳು ಬೆದರಲು ॥ ೨ ॥ ಅಂಬು ಬಂತಾಗ ಇಂದ್ರಸಭೆಗೆ ವಜ್ರ । ಕಂಭಕೆರಗಿತು ಸಿಡಿಲಿನಂದದಿ ಶಂಭು ಸಖ ಬೆರಗಾಗಲು ॥ ೩ ॥ ಏನಿದೇನೆಂದು ಅಮರೇಂದ್ರ ಸಭೆಯೊಳು । ಬಾಣ ತುದಿಯಲಿ ಕಟ್ಟಿದೋಲೆಯ ಕಾಣುತಲೆ ಬೆರಗಾದರು ॥ ೪ ॥

ಘಂಟಾರವ ರಾಗ - ಝಂಪೆತಾಳ

ಕಂಭದಲಿ ನೆಟ್ಟಿರುವ ಅಂಬುಪೊನೆಯೋಲೆಯನು । ಕಾಣುತ ತಪಕ ದೊಳಂದು ಸುರರು ಭಾಪೆನುತ ॥ ೧ ॥ ಆವ ಪುಣ್ಯಾತ್ಮಕನೊ ಇದನೆಸಗಿದವ ನೆಂದು । ದೇವತೆಗಳಂಜಿದರು ಠೀವಿಯನು ಕಂಡು ॥ ೨ ॥ ಕರಣಿಕರ ಕರೆದಿತ್ತು ಬರಹ ವಾಚಿಸಲಂದು। ಸುರರೆಲ್ಲ ಕೇಳಿದರು ಪಾರ್ಥನೊಕ್ಕಣೆಯ ॥ ೩ ॥

ಕೇದಾರಗೌಳ ರಾಗ . ಝಂಪೆತಾಳ

ದೇವೇಂದ್ರ ನಿಮ್ಮ ಪದಕೆ ಶರಣೆಂದು । ಭಾಪಶುದ್ಧಿಯೊಳಿರಹುವೆ ॥ ದೇವತೆಗಳೊಡೆಯ ನೀನೆ ಲೋಕವನು । ಕಾವ ಕರುಣಾಳು ನೀನೆ ॥ ೧ ॥ ಮಖಶತಾಂಕಿತನು ನೀನೆ ಸಹಸ್ರಾಕ್ಷ । ಮುಕುತಿಗಧ್ಯಕ್ಷ ನೀನೆ ॥ ಸಕಲಸುಖ ಕೊಡೆಯು ನೀನೆ ಸರ್ವಥಾ । ಅಕಳಂಕ ಚರಿತ ನೀನೆ ॥ ೨ ॥ ಶರಣು ಶರಣೆಂದು ನುತಿಸಿ ಸಾಷ್ಟಾಂಗ । ಬರೆದು ಭಕ್ತಿಯೊಳು ನಮಿಸಿ ॥ ತರಳತನದಿಂದ ನಿನ್ನ ಮಗ ಪಾರ್ಥ ಬರೆದ ಬಿನ್ನಪವಿದನ್ನ ॥ ೩ ॥ ಲಾಲಿಸು ಕಟಾಕ್ಷದಿಂದ ಸವಿ ನಯದ। ಬಾಲಕನೊಕ್ಕಣೆಯೊಂದ॥ ಈ ಲೋಕಕಧಿಕವಾದ ಗಜಪುರದ ಪಾಲ ಪಾಂಡುವಿನರಸಿಗೆ ॥ ೪ ॥ ದೇವಿ ಕುಂತಿಗೆ ನೋಹಿಯ ಸಲಸುವೊಡೆ । ನೀವು ದಯೆದೋರಬೇಕು ॥ ಸೇವೆಯನು ಮಾಡುವದಕೆ ನಿಮ್ಮ ಐ । ರಾವತವ ಕಳುಹಬೇಕು ॥ ೫ ॥ ರಂಭೆಯೂರ್ವಶಿಯು ಸಹಿತ ಕಲ್ಪತರು । ವೆಂಬುವಾರ ಪಾರಿಜಾತ ॥ ಬೆಂಬಿಡದೆ ಸುರಭಿಯಿರಲಿ ವಜ್ರ ಸಹ । ಕುಂಭಿನಿಗೆ ಕೂಡಿ ಬರಲಿ ॥ ೬ ॥ ಕಳುಹಿದರೆ ನಾಲ್ಕು ದಿನಕೆ ಅದ ಮರಳಿ । ಕಳುಹುವೆನು ನಿಮ್ಮ ಪುರಕೆ ॥ ಛಲವಿಡಿದು ದಾಸೀನವವ ಮಾಡಿದರೆ । ಉಳಿಯುಗೊಡೆ ಸುರರ ಪುರವ ॥ ೭ ॥ ಕಂತು ಸಂಹಾರನಾಣೆ ಇದರೊಳ । ಭ್ರಾಂತರವನೇನು ಕಾಣೆ ॥ ಅಂತರಂಗದ ಲೀಲೆಯ ಬರೆದೆ ನಾ ನಿಂತು ಬಿನ್ನಪದೋಲೆಯ ॥ ೮ ॥

ವಾರ್ಧಿಕ ಷಟ್ಪದಿ

ಆನೆಯೂರ್ವಶಿ ರಂಭೆ ವಜ್ರಾಯುಧವು ಕಾಮ । ಧೇನು ಸುರತರು ಪಾರಿಜಾತ ನಾಕನೋಪ್ಪ । ಮಾನಿನೀಯರು ಸಹಿತ ಸ್ವರ್ಗವೇ ಇಳಿಯ ಬರ ಬೇಕೆಂದು ಬರೆನೋಲೆಯ ॥ ತಾನೋದಿಸುತ ಕೇಳ್ದು ಕರಣಿಕರ ಮೊಗ

ನೋಡಿ । ಏನು ಮರುಳಾದನೋ ನರನಿಗಿಷ್ಟರ ಮದವೆ । ತಾನೆಷ್ಟರವ ಬರೆದನೊಕ್ಕಣೆಯನೀತೆರದೊಳೆಂದು ಗರ್ಜಿಸಿದ ಸುರಪ ॥

ಕಾಂಬೋಜಿ ರಾಗ - ಝಂಪೆತಾಳ

ನರಲೋಕದವರಿಗಿಷ್ಟರ ಪಂಥವಾದ ಮೇ । ಲಿರಬಹುದೆ ಸ್ವರ್ಗದಲಿ ನಾವು ॥ ಸುರರೆಲ್ಲ ಕೇಳಿದಿರೆ ಸಮ್ಮತವೆ ನಿಮಗೆ ಈ ಪರಿಯೊಳರ್ಜುನ ಬರೆದ ಲಿಖಿತ ॥ ೧ ॥ ಬರಿ ಮೂರ್ಖ ಭೀಮಯಮಳರು ತರಳರವರೊಳಗೆ । ಮರುಳಾಯಿತೇ ಧನಂಜಯಗೆ ॥ ನೆರೆ ಬಲ್ಲ ಸುಜ್ಞಾನಿ ಧರ್ಮನಂದನನಿದರ । ಪರಿಯನರಿತನೊ ಇಲ್ಲವೇನೊ ॥ ೨ ॥ ಉಳಿಯಗೊಡೆ ಸುರಪುರವನೆಂಬ ಪಂಥದ ಬಗೆಯ । ಬಲುಹ ನಿಲ್ಲಿಸಬೇಕು ನಮಗೆ ॥ ಸುಳಿಗಾಳಿ ಮಿಂಚು ಸಿಡಿಲೆರಗಿ ಹಸ್ತಿನಪುರವು । ಮುಳುಗಿ ಹೋಗಲಿ ಸುರಿದ ಮಳೆಗೆ ॥ ೩ ॥ ಏಳುದಿನ ಹಗಲಿರುಳು ಆನೆ ಸೂಡಿಲ ಗಾತ್ರ । ಬೀಳ ಹೇಳಿರೊ ಮಳೆಯ ನೀರ ॥ ಕಾಳ ಮೇಘಗಳ ಸಂಕಲೆ ಕಡಿದು ಭೂಲೋಕ । ತೇಲಿ ಹೋಗಲಿ ಜಲಾರ್ಣವದಿ ॥ ೪ ॥ ಈ ಪರಿಯಲಿಂದ್ರ ಕೋಪಿಸುತ ಊಳಿಗದವರ್ಗೆ । ತಾ ಪೇಳ್ವ ಸಮಯಾಂತರದಲಿ ॥ ಶ್ರೀಪತಿಯ ನಾಮವನು ಕೀರ್ತಿಸುತ ಸಭೆಗೆ ಸುರ । ತಾಪಸೋತ್ತಮ ಬಂದನಾಗ ॥ ೫ ॥ ನಾರದ ಮಹಾಮುನಿಯ ದೂರದಿಂದಲೆ ಕಂಡು। ಏರಿದಾಸನವಿಳಿದು ಬಂದು ॥ ಚಾರು ಪೀಠದಲಿ ಕುಳ್ಳಿರಿಸಿ ವಂದನೆಗೆಯ್ಯೆ । ಆ ಮುನಿಪ ಪೇಳ್ದನಿಂದ್ರನಿಗೆ ॥ ೬ ॥

ಕಾಂಬೋಜಿ ರಾಗ - ಏಕತಾಳ

ಏತಕಯ್ಯ ಇಷ್ಟು ಕೋಪ ಯಾರ ಮೇಲೆ ಈ ಪ್ರತಾಪ । ಭೂತಳವ ಮುಳುಗಿಸುವದೇತಕೊ ಇಂದ್ರ ॥ ೧ ॥ ಮಾತಿನಲ್ಲೇನುಂಟು ಕುಂತೀಜಾತ ಬರೆದೋಲೆಯ ನೋಡಿ ॥ ನೀತಿಯಹುದೆ ನಿಮಗೆ ಖ್ಯಾತ ಮುನಿರಾಯ ॥ ೨ ॥ ಮಾತೆಗೆ ಪೂಜಿಸಲಿಕಾಗಿ ಪ್ರೀತಿಯಿಂದ ಬರೆದ ಗಜವ । ಭೂತಳಕ್ಕೆ ಕಳುಹೊ ದಿವಿಜನಾಥ ದೇವೇಂದ್ರ ॥ ೩ ॥ ಕೆಟ್ಟ ನರರ್ಗೆ ನಾವೇರುವ ಪಟ್ಟದಾನೆಯನ್ನು ಕಳುಹಿ। ಕೊಟ್ಟವರುಂಟೇನೊ ಋಷಿಶ್ರೇಷ್ಠ ಪೇಳಯ್ಯ ॥ ೪ ॥ ಸೃಷ್ಟಿಯೊಳರ್ಜುನನ ಪೋಲ್ವ ದಿಟ್ಟರಿಲ್ಲವವನ ಮನದಭೀಷ್ಟವ ಸಲಿಸದಡೆ

ಬಲುಕಷ್ಟ ದೇವೇಂದ್ರ ॥ ೫ ॥ ಸಿಟ್ಟು ಬರುವ ಮಾತು ಬೇಡ ಶೀಘ್ರದಿಂದ ತೆರಳಿ ಗಾಢ । ಕಷ್ಟ ಬಂದರೂ ಬರಲಿ ಬಂದಷ್ಟು ಮುನಿರಾಯ ॥ ೬ ॥ ಎಷ್ಟು ಧೈರ್ಯ ನಿನಗಿದ್ದರೂ ಕೃಷ್ಣನ ಸಹಾಯವವಗೆ । ಸಿಷ್ಟ್ರರ ಜೊತೆ ಪೇಳ್ವಿ ಕಂಡಷ್ಟು ದೇವೇಂದ್ರ ॥ ೭ ॥

**ವರಾಳಿ ರಾಗ - ಏಕತಾಳ**

ನಿನ್ನ ಮೇಲೆ ಅಂಬೆಸೆದರೆ ಪಾಳ್ಪುದೇನು ಆತ । ಪ್ರಣ್ಯಕ್ಕೆ ಕಂಭಕ್ಕೆ ಬಾಣವೆಸೆದ ತಾನು ॥ ೧ ॥ ಕೀಲಿಸಿದ ವಜ್ರಕಂಭದ ಸೀಳನೋಡಯ್ಯ ನಿನ್ನ । ಬಾಲಕನಲ್ಲವೆ ಕರುಣೆ ಬಹಳ ಮಾಡಯ್ಯ ॥ ೨ ॥ ಕುಂತಿಯಾತ್ಮಜನ ಕೂಡೆ ಕೋಪವೇಕಯ್ಯ ಆತ । ನಂಥವರಿಲ್ಲ ಜೇರಿನ್ನು ಸಿಟ್ಟು ಸಾಕಯ್ಯ ॥ ೩ ॥ ಅಂಬು ಬಲ್ಲುದೇ ದೇವೇಂದ್ರನೆಂಬುದನ್ನ ಕಮಲಾಂಬಕ ತಪ್ಪಿಸಿದ ಗುರಿಯು ಕೊಂಬ ಮುನ್ನ ॥ ೪ ॥

**ದ್ವಿಪದಿ**

ಮುನಿಪನಾಡಿದ ನುಡಿಯ ಮುದದಿ ಸುರನಾಥ । ಮನಸಿನಲಿ ಗ್ರಹಿಸಿ ಪೇಳಿದನು ವಿಖ್ಯಾತ ॥ ೧ ॥ ಎಂತು ಕಳುಹುವುದಿಳೆಗೆ ಎನ್ನ ಮದಗಜವ । ದಂತಿ ನಡೆಗೊಳುವುದಕೆ ದಾರಿಯಾ ನಿಜವ ॥ ೨ ॥ ತೋರಿಕೊಡಿ ತನಗದನು ತೊಡರಿಲ್ಲವಿದಕೆ । ಭೂರಿವಸ್ತುಗಳೆಲ್ಲ ಭುವನಕಿಳಿವುದಕೆ ॥ ೩ ॥ ಎನುತ ಯೋಚನೆಗೆಯ್ದು ಏಕಾಂತದೀದ । ಮುನಿಪನೊಳು ಕೇಳಿದನು ಮುದದಿ ದೇವೇಂದ್ರ ॥ ೪ ॥ ನಾರದ ಮಹಾಮುನಿಪ ನಸುನಗುತಲಂದು । ತೋರಿ ದನುಪಾಯವನು ತಾ ಕಂಡುದೊಂದು ॥ ೫ ॥

**ಘರಜು ರಾಗ - ಏಕತಾಳ**

ಖಚರನ್ನ ಕರೆಸೆಂದನು ನಾರದ ಮುನಿ ॥ ಪಲ್ಲವಿ ॥ ಖಚರನ್ನ ವೇಗ ಕರೆಸು ರಚನೆಯಿಂದೊಲೆ ಬರೆಸು ॥ ರಚಿಸು ದಾರಿಯನೆಂದು ವಚಿಸು ಪಾರ್ಥನಿಂಗೆಂದು ॥ ೧ ॥ ಸುದ್ದಾನೆ ಬರಲೆಂದು ಹೆದ್ದಾರಿ ಮಾಡಿಸೆಂದು । ಮುದ್ದು ಕುವರಾರ ಪಾರ್ಥನಿದ್ದಲ್ಲಿಗಟ್ಟು ತ್ವರಿತ ॥ ೨ ॥ ದಾರಿಯ ಮಾಡಿ ನಿನ್ನ ಊರೊಳಗೆಲ್ಲ ಶೃಂಗಾರವಾಗಲೆಂದು ಕುಮಾರನಿಂಗೊಲೆ ಬರೆಸು॥೩॥

ಈ ರೀತಿಯಲಿ ಯುಕ್ತಿದೋರಿ ದೇವೇಂದ್ರನಿಂಗೆ ॥ ನಾರಾಯಣಾಯೆನ್ನುತ್ತ ನಾರದ ನಡೆದನತ್ತ ॥ ೪ ॥

### ವಾರ್ಧಿಕ ಷಟ್ಪದಿ

ಇಂತು ಯುಕ್ತಿಯ ಪೇಳ್ದು ನಾರದಂ ತೆರಳೆ ರವಿ । ಯಂತರಿಸಲಂದು ಮರುದಿನ ಪದ್ಮ ಬಾಂಧವನು । ನಿಂತನುದಯಾಚಲದ ಮಕುಟದಲಿ ದೇವೇಂದ್ರನೊಡ್ಡೋಲಗಂಗೊಟ್ಟನು ॥ ಕುಂತಿಯಹಾತ್ಮಜನಿಗಾಶೀರ್ವಾದ ಪತ್ರಿಕೆಯ । ತಾಂ ತಿಳಿದು ಬರೆಸಿ ಕರುಣಿಕರ ಕೈಯಿಂದ ತದ । ನಂತರದೊಳಾ ದೂತನಂ ಕರೆದು ಕೊಡೆ ಖಚರ ಸಂತಸದಿ ಕೈಕೊಂಡನು ॥

### ವೃಂದಾವನ ಸಾರಂಗ ರಾಗ - ಏಕತಾಳ

ಕಡುಬೇಗ ಖಚರನೈತಂದನು ತನ್ನ । ಒಡೆಯನಪ್ಪಣೆಯಿಂದ ಪೊಡವಿ ಗಿಳಿವೆನೆಂದು ॥ ಪಲ್ಲವಿ ॥ ಶಕ್ತಿಯಿಂ ನಭವಿಳಿದೋಡಿದ ಇಂದ್ರ । ಪ್ರಸ್ಥ ಪಟ್ಟಣವನ್ನ ನೋಡಿದ ಅಲ್ಲಿ । ಪಾರ್ಥನ ಕಂಡು ಶರಣು ಮಾಡಿದ ತಂದ । ಪತ್ರಿಕೆಯನು ಕೈಗೆ ನೀಡಿದ ॥

### ವಚನ

ಈ ರೀತಿಯಿಂದ ಬಂದ ಖಚರನಂ ಮನ್ನಿಸಿ ಪತ್ರಿಕೆಯಂ ಶಿರಸಾವಹಿಸಿ ವಾಚಿಸಿದ ಒಕ್ಕಣೆಯದೆಂತೆನೆ—

### ಕೇದಾರಗೌಳ ರಾಗ - ಅಷ್ಟತಾಳ

ಸ್ವಸ್ತಿ ಶ್ರೀ ಮದ್ದಿವಿಜೋತ್ತಮ ಖಳಕುಲ। ಮಸ್ತಕಾಂಕಿತ ಶೂಲನು॥ ಹಸ್ತಿನಾಪುರದರಸಿನ ತಮ್ಮ ಮಗ ಪಾರ್ಥಗಿತ್ತ ಆಶೀರ್ವಾದವು ॥ ೧ ॥ ಕ್ಷೇಮದೊಳಿದೆ ನಮ್ಮ ಪದವಿ ನಿಮ್ಮವರೆಲ್ಲ । ಕ್ಷೇಮಿಗಳಾಗಿಹರೆ ॥ ಕಾಮಿಸಿ ನೀ ನಿನ್ನೆ ಬರೆದ ಬಿನ್ನಪದೋಲೆ । ನೇಮದಿ ಬಂತಿಲ್ಲಿಗೆ ॥ ೨ ॥ ಭೂಮಿಗೆ ಸುರಗಜ ರಂಭೆ ಊರ್ವಶಿಯರು । ಕಾಮಧೇನುವು ಸಹಿತ ॥ ಪ್ರೇಮದಿ ಸಕಲ ವಸ್ತುಗಳನು ಕಳುಹಿಸೆಂ । ಬಾ ಪಹಾತ ಗ್ರಹಿಸಿದವು ॥ ೩ ॥ ಈ ರೀತಿ ಬರೆದುದೊಳ್ಳಿತು ಮದಗಜ ಬಹ । ದಾರಿಯೆಮಗೆ ತೋರಿಸು ॥

ಧಾರಿಣೀಪತಿಗಳ ಕರೆಸಿಕೊ ನಗರ ಶೃಂಗಾರವಾಗಲಿ ಬೇಗದಿ ॥ ೩ ॥ ಮೂರು ಕೋಟಿ ಮಂದಿ ಬರುವರಿಲ್ಲಿಂದ ವಿ। ಸ್ತಾರವಾಗಲಿ ಚಪ್ಪರ ॥ ನೂರು ಕೋಟಿ ಹೆಂಗಳಿರುವರವರ್ಗೆ ಬಿ। ಡಾರವಾಗಲಿ ಚೆನ್ನಾಗಿ ॥ ೫ ॥ ಎಂಟು ಯೋಜನದುದ್ದ ಕಾಮಧೇನುವಿಗೊಂದು। ಮಂಟಪವನು ರಚಿಸು ॥ ಉಂಟಾದ ಮೇಲೆ ಈ ಸನ್ನಾಹಗಳು ನಮ್ಮ। ಬಂಟರಿಲ್ಲಿಗೆ ಕಳುಹು ॥ ೬ ॥ ಕುಂತಿಯಾತ್ಮಜನೆ ಕೇಳಾ ಮೇಲೆ ನೀ ಬೇಡಿದಂಥ ವಸ್ತುಗಳೆರ್ಪ ದಾದಂತೀಶ ನನು ಕೂಡಿ ಶೀಘ್ರದಿ ಕಳುಹುವೆ। ಎಂತೀ ಮಾಳ್ಪಾಶೀರ್ವಾದ ॥ ೭ ॥

### ಮಧ್ಯಮಾವತಿ ರಾಗ - ಅಷ್ಟತಾಳ

ತೋರಿದ ಓಲೆ ತೋರಿದ ॥ ಪಲ್ಲವಿ ॥ ತೋರಿದನೋಲೆಯು ಧರ್ಮ ಜಗಂದು। ಭಾರಿ ಸಂಭ್ರಮದಿಂದ ಭೀಮನೊಳಂದು ॥ ಚಾರು ಕುಂತೀ ದೇವಿಯ ಬಳಿನಿಂದು। ಸಾರಿ ನಕುಲ ಸಹದೇವರಿಗೆಂದು ॥ ೧ ॥ ದಯೆ ಮಾಡಿದನು ನಮ್ಮ ಮೇಲೆ ಸುರೇಶ। ಕ್ಷಯವಾಯ್ತು ನಮ್ಮ ಮನದೊಳಿದ್ದ ಕ್ಲೇಶ ॥ ಭಯವಿಲ್ಲ ಮುಂದೆಮ್ಮ ಕಾರ್ಯ ಸಂತೋಷ। ಜಯವೆಂಟು ಮಾಡಿದ ಕಣ್ವಪುರೇಶ ॥ ೨ ॥ ದ್ರೋಣ ಭೀಷ್ಮಾಚಾರ್ಯ ವಿದುರರ ಕರೆಸಿ। ಮಾಣದೆ ಅಂತರಂಗದೊಳನುವದಿಸಿ ॥ ಕಾಣೆನು ಇದಕೇನು ದಾರಿಯೆಂದೆನುತ। ಕ್ಷೋಣಿಪ ಧರ್ಮಜ ನುಡಿದ ಕಂಗೆಡುತ ॥ ೩ ॥

### ವಚನ

ಇಂತೆಂದು ಧರ್ಮರಾಯನು ನುಡಿಯಲಾಗಿ ಭೀಷ್ಮಾಚಾರ್ಯನು ಏನೆಂದನು ಎಂದರೆ-

### ಮಧ್ಯಮಾವತಿ ರಾಗ - ಏಕತಾಳ

ಮತವಲ್ಲ ನಮಗಸಂಗತವಾದ ಕಾರ್ಯ। ಪಥದಲ್ಲಿ ಮಾಳ್ಪುದು ಕ್ಷಿತಿಗಾನೆ ಬಹುದೆ ॥ ಪಲ್ಲವಿ ॥ ಪರ್ವತ ತುದಿಯಲ್ಲ ಪೆರತೊಂದು ಮರನಲ್ಲ। ಊರ್ವಿಯಿಂ ದಾಕಾಶ ಕೊನೆವರಿಯಂತ ॥ ಗರ್ವದ ಮದಗಜ ಬಹದಾರಿ ಮಾಳ್ಪುದು। ಸರ್ವಥಾ ಯತ್ನವ ನಾ ಕಾಣೆನಿದಕೆ ॥ ೧ ॥ ಪೊಡವಿ ಪಾಲಕ ರನ್ನೆ ಕರೆಸಿದರವರಿಗೆ। ಉಡುಗೊರೆಯುಚಿತವ ಕೊಡುವದೇನುಂಟು ॥

ಬಿಡದೆ ದಕ್ಷಿಣೆ ದಾನ ಧರ್ಮವ ಮಾಳ್ಪಡೆ । ಒಡವೆ ವಸ್ತುಗಳಾವ ಕಡೆಯೊಳುಂಟಯ್ಯ ॥ ೨ ॥ ಇಳೆಯನಾಳುವನು ಕೌರವರಾಯನದರಿಂದ । ಹಲಪ್ರಸಂಭ್ರಮದುತ್ಸಹಗಳ ಮಾಡಿಸಿದ ॥ ಹುಲಿಯು ಬಣ್ಣಕ್ಕಾಗಿ ನರಿ ಮೈಯ್ಯ ಸುಟ್ಟಂಥ । ಪರಿಹಾಸ ವಚನಕ್ಕೆ ಗುರಿಯಾದೆವಲ್ಲ ॥ ೩ ॥ ಮಚ್ಚರ ಕೊಂದ ಮಾಡಿದರೆಂದೆಂಬರು ಲೋಕ । ಹುಚ್ಚರೆಂಬರು ಭೂಮಿ ಪಾಲಕರೆಲ್ಲ ॥ ಅಚ್ಯುತಾನಂತನ ಮೈದುನರೀಪರಿ । ಇಚ್ಚೆ ತಪ್ಪಿದರೆಂಬ ಅಪಕೀರ್ತಿ ಬಹದು ॥ ೪ ॥

ವಚನ

ಇಂತೆಂದು ಭೀಷ್ಮಾಚಾರ್ಯರು ನುಡಿಯಲಾಗಿ ಆ ಮಾತಿಗೆ ಅರ್ಜುನನು ಏನೆಂದನು ಎಂದರೆ—

ಝಂಪೂರವ ರಾಗ - ಏಕತಾಳ

ಆನೆಯ ಚಿಂತೆ ಬೇಡ ನಿಮಗೆ ದೇವೇಂದ್ರನಾ ಮ । ದ್ದಾನೆಯ ॥ ಪಲ್ಲವಿ ॥ ದಾನವಾಂತಕನ ದಯೆಯೊಂದಿದ್ದರೆ । ನಾನದ ನಿರ್ವಹಿಸುವೆ ಸನ್ನಾಹವ ॥ ಅನುಪಲ್ಲವಿ ॥ ಧಾರಿಣೀಪತಿಗಳಿಗೋಲೆಯ ಬರೆಸಿ । ಕೇರಿಕೇರಿ ಶೃಂಗಾರವ ರಚಿಸಿ ॥ ಭೂರಿ ದಕ್ಷಿಣೆ ತಿದ್ದಲಿಕೀ ಕ್ಷಣದಿ ಕು । ಬೇರನ ಕಯ್ಯಲಿ ಸಾಲವ ತೆಗೆವೆ॥ ಆನೆಯ ॥ ೧ ॥ ದಾರಿಯ ಸಮತೆಯ ಮಾಡಲಿ ಮೊದಲು । ಮೇರುವೆ ಕುರುಜನು ಹೂಡಲು ಬದಲು ॥ ತೋರಣಗಳ ಮೇಲ್ಕಟ್ಟನು ಕಟ್ಟಲಿ ಬೇರೆ ಬಿಡಾರಗಳಾಗಲಿ ಕ್ಷಣದಿ ॥ ಆನೆಯ ॥ ೨ ॥

ವಚನ

ಇಂತೆಂದು ಅರ್ಜುನನು ಧೈರ್ಯವಂ ಪೇಳಲಾಗಿ ಭೀಷ್ಮಾಚಾರ್ಯನು ಆತನ ಪರಾಕ್ರಮಕ್ಕೆ ಮೆಚ್ಚಿ ಕೊಂಡಾಡಿದನದೆಂತೆನೆ-

ಮಾರವಿ ರಾಗ - ಅಷ್ಟತಾಳ

ಧೀರನಹುದಹುದೊ । ಅರ್ಜುನ ರಣ । ಶೂರನಹುದಹುದೊ ॥ ಪ ॥ ಮೂರುಲೋಕದಿ ನಿನಗೆಣೆ ಪಾರ್ಥಿವರೊಳಿಲ್ಲ ॥ ಧೀರ ॥ ಅ ॥ ಧರಣೀರಪರೊಳಗೆ ನಿಶ್ಶಂಕ । ಸುಧಾ । ಕರಕುಲದೊಳು ಬಿರುದಂಕ ॥ ಸರಿಯಿಲ್ಲ ನಿನಗೆ ಸಂತೋಷವಾಯ್ತೆಮಗೆ ನೀ । ನೆರೆ ಪ್ರೌಢನಹುದು ಜಾಣ ।

ಇಲ್ಲಿಗೆ ಸುರ । ಕರಿಯು ತರಿಸಪೆ ಪ್ರಾಣೆ । ಯೆಂಬುದನು ಕಂ । ಡರಿತೆ ನಾ ನಿನ್ನ ತ್ರಾಣ ॥ ಧೀರ ॥ ೧ ॥ ಹಿಂದೆ ಹುಟ್ಟಿದರೊಳಗಿಲ್ಲ । ಇನ್ನು । ಮುಂದೇನೊ ಶಿವನೊಬ್ಬ ಬಲ್ಲ ॥ ಇಂದಿಗಿಪ್ಪರೊಳಗೆ ಹಿರಿಯರು ನಾವಿಂಥ। ದೊಂದನು ಕೇಳಲಿಲ್ಲ । ಸ್ವರ್ಗದ ದೂತ । ಬಂದುದ ನೋಡಲಿಲ್ಲ । ನಡೆ ಸದೆ ಬಿಡೆ । ನೆಂದಾಣೆ ತಾಳ್ದಿಯಲ್ಲ ॥ ಧೀರ ॥ ೨ ॥

ವಚನ

ಇಂತೆಂದು ಭೀಷ್ಮಾಚಾರ್ಯನು ಅರ್ಜುನನಂ ಪೊಗಳಿ ಧರ್ಮರಾಯ ನೊಳೇನೆಂದನು ಎಂದರೆ-

ಭೈರವಿ ರಾಗ - ಝುಂಪೆತಾಳ

ಕುಂತಿಯಡಾತ್ಮಜ ಕೇಳು । ಚಿಂತೆ ಬೇಡಿದಕಿನ್ನು । ಸಂತೋಷ ಕಾರ್ಯವಿದು । ಸರ್ವರಿಗು ನಮಗು ॥ ೧ ॥ ವಂಶಕ್ಕೆ ಕೀರ್ತಿಯಿದು । ವರಪ್ರಸಾದಗಳಹುದು । ಹಂಸವಾಹನನೊಲಿದ । ಸಂಸಾರದೊಳಗೆ ॥ ೨ ॥ ಇಹಪರಕೆ ಗತಿಯುಂಟು । ಈ ವ್ರತವನೆಸಗಿದರೆ । ಬಹು ಸೌಭಾಗ್ಯದ ಪುಣ್ಯ । ಬಹುದಗ್ರಗಣ್ಯ ॥ ೩ ॥ ಸಾಲವನು ತರಬೇಡ । ಸಾಕು ದ್ರವ್ಯಗಳುಂಟು । ಮೂಲ ಬಚ್ಚಿಟ್ಟಿಹರು । ಮುನ್ನಿನವರುಗಳು ॥ ೪ ॥ ಕೌರವೇಶ್ವರ ಬಂದು । ಕಾಡಿದರು ಕೊಡಲಿಲ್ಲ । ಭೂರಿ ಭದ್ರದೊಳಿಹುದು । ಭಂಡಾರದೊಳಗೆ ॥ ೫ ॥ ಇದಕೆ ಬೇಕಾದುದ । ನ್ನೀಕ್ಷಣವೆ ತರಿಸೆಂದು । ಮುದದಿಂದ ಭೀಷ್ಮ ಬೀ । ಗದ ಕಯ್ಯ ಕೊಟ್ಟ ॥ ೬ ॥

ವಾರ್ಧಿಕ

ಭೂಪಾಲ ಕೇಳು ನಿಮ್ಮನ್ವಯಾಂತರಗಳೊಳು । ದೀಪ ಭೀಷ್ಮನ ಪೋಲ್ವ ಗುಣವಂತರಾರುಂಟು । ಆ ಪುಣ್ಯ ಶರಧಿ ಸಂತೋಷದಿಂದಿವರಿಂಗೆ ಭಂಡಾರವೊಪ್ಪಿಸಿದನು ॥ ಈ ಪಾಂಡುಸುತರು ತೆಗೆಸಿದರು ಬಳಿಕಲ್ಲಿಂದ । ದೀಪದಂತುರಿವ ನವರತ್ನ ಮುಕ್ತಾವಳಿಗ । ಳಾ ಪಟ್ಟೆ ಪೀತಾಂಬರವ ಹೊರಿಸಿದರು ಪರ್ವತಕೆ ನೂರುಮಡಿ ಮಿಗಿಲೆನೆ ॥

### ದ್ವಿಪದಿ

ಅರಸ ಕೇಳಾ ಮೇಲೆ ಪಾಂಡುನಂದನರು । ಭರದಿ ನೂತನ ಕೆಲಸದವರ ಕರೆಸಿದರು ॥ ೧ ॥ ಮಣ್ಣನೊಡ್ಡದ ಕೆಲಸ ಮತ್ತೊಂದು ಬಗೆಯು । ಬಣ್ಣಗಾರರು ಬರೆದ ಚಿತ್ರವೆಡೆಯೆಡೆಯು ॥ ೨ ॥ ಪಾಂಚಾಲ ರಚಿಸಿರುವ ಬೊಂಬೆಗಳ ನಡುವೆ । ಕಾಂಚನದ ರೂಹುಗಳನಿಡುವುದಕೆ ತಡವೆ ॥ ೩ ॥ ಆಣೆ ಮುತ್ತುಗಳದರ ಮಧ್ಯ ಮಧ್ಯದಲಿ । ಕೋಣೆಗಳ ಮಾಡಿದರು ಮುಂದೆ ಚೋದ್ಯದಲಿ ॥ ೪ ॥ ಉಪ್ಪರಿಗೆಯೆಡೆಯೊಳಿಪ್ಪ ಉಯ್ಯಾಲೆಯು । ಚಪ್ಪರದ ಮಂಚಗಳನಿಡಲದರ ಬಳಿಯು ॥ ೫ ॥ ಕೋಟಿ ಸೂರ್ಯರ ಜರೆವ ಚಾವಡಿಯು ಮುಂದೆ । ಮೊಟಾದ ವಜ್ರದ ಕವಾಟುಗಳು ಹಿಂದೆ ॥ ೬ ॥ ಗೋಮೇದಿಕದಲಿ ರಚಿಸಿರುವ ಗೋಡೆಗಳು । ಸ್ತೋಮದಲಿ ಬಿಗಿದ ವೈಡೂರ್ಯ ಲೋಪೆಗಳು ॥ ೭ ॥ ಎಂಟು ಸಾವಿರ ಮನೆಗಳಲ್ಲಿ ಸಂದಣಿಸಿ । ಮಂಟಪವ ರಚಿಸೆ ನೂರೆಂಟು ಪೊಸತೆನಿಸಿ ॥ ೮ ॥ ಕಡೆಕಡೆಯೊಳೊಂದೊಂದು ಕೆರೆಗಳನು ತೋಡಿ। ಅಡಿಗಡಿಗೆ ಬಚ್ಚಲುಗಳಲ್ಲಲ್ಲಿ ಮಾಡಿ ॥ ೯ ॥ ಈ ವಿಭವದಿಂದ ಪಟ್ಟಣವ ಸಿಂಗರಿಸಿ । ದೇವೇಂದ್ರನಿಹ ಪುರಕೆ ನೂರುಮಡಿಯೆನಿಸಿ ॥ ೧೦ ॥

### ಮಧುಮಾಧವಿ ರಾಗ - ಏಕತಾಳ

ನಗರವನಿಂತು ಸಿಂಗರಿಸಿದ ಚರರು । ಸೊಗಸಾಯಿತೆಂದು ಧರ್ಮಜಗೆ ಪೇಳಿದರು ॥ ನಗುತವನಿಪನವರೆಲ್ಲರ ಕರೆದು । ಬಗೆ ಬಗೆಯುಡುಗೊರೆಗಳ ಕೊಟ್ಟನೊಲಿದು ॥ ೧ ॥ ಆ ಮೇಲೆ ನಕುಲ ಸಹದೇವರ ಕರೆಸಿ । ಭೂಮಿಪಾಲರಿಗೆಲ್ಲ ಓಲೆಯ ಬರೆಸಿ ॥ ಸೀಮೆ ಸೀಮೆಯೊಳೆಲ್ಲ ಡಂಗುರವ ಹೊಯ್ದು। ತಾ ಮನದಲಿ ಹರುಷಿತನಾದನೊಲಿದು ॥ ೨ ॥

### ವಚನ

ಈ ರೀತಿಯಿಂದ ನಕುಲ ಸಹದೇವರು ದೇಶಾಧಿಪತಿಗಳ ಕರೆಯ ಹೋಗಲು ಇತ್ತಲಾ ಭೀಷ್ಮಾಚಾರ್ಯನು ಧರ್ಮಜನೊಡನೆ ಏನೆನ್ನುತಿರ್ದನೆನೆ-

### ಶಂಕರಾಭರಣ ರಾಗ - ತ್ರಿವುಡೆತಾಳ

ಕೇಳು ಧರ್ಮಜ ಸತ್ಯವಚನವ । ಪೇಳ್ವೆ ನಾನು ಲಾಲಿಸಿ ॥ ತಾಳು ಮನಸಿಗೆ ಬಾರದಿದ್ದರೆ । ಎನಗೆ ಏನು ॥ ೧ ॥ ಖೂಳರವರದರಿಂದ ನಿಮ್ಮನು।

ಕರೆಯಲಿಲ್ಲ ಸೋಹಿಗೆ ॥ ಪೇಳು ನೀನವರೊಡನೆ ಗುಣವಿದು । ಚಿಂತೆಯಿಲ್ಲ ॥ ೨ ॥ ಹಿರಿಯ ತಂದೆಯು ಪೊದಲಿಗಾತನ । ಕರೆಯಬೇಕು ಸೋಹಿಗೆ ॥ ಬರಲಿ ಬಾರದೆ ಕುಳಿತರಾದರೆ । ತಮ್ಮ ಮನಸು ॥ ೩ ॥ ಮರೆಯಲಾಗದು ನಾವು ನೀತಿಯ । ಮಾತ ಕೇಳು ಬಾಲಕ ॥ ಗುರುಲಘುತ್ವವ ಮೀರಬಾರದು। ಗ್ರಹಿಸಿ ನೋಡು ॥ ೪ ॥ ಹೋಗು ನೀ ಧೃತರಾಷ್ಟ್ರನಲ್ಲಿಗೆ । ಕರವ ಮುಗಿದು ಹೇಳಿಕೊ ॥ ಸಾಗಿ ನೋಹಿಯ ನಡಿಸಿರೆನುತಲೆ । ಕಾಲಿಗೆರಗು ॥ ೫ ॥ ಬೇಗ ದಲಿ ಕೌರವನ ಕರೆಯಲು । ಕಳುಹಬಹುದು ಭೀಮನ ॥ ಹೋಗಿ ಬಾ ನೀನೆಂದು ನುಡಿದನು । ಗಂಗೆಯಣುಗ ॥ ೬ ॥ ಉಂಡು ಸೊಗಸಿಲಿ ವೀಳ್ಯ ವನು ಕೈ । ಗೊಂಡು ಯಮಜನು ಬೇಗದಿ । ದಂಡಿಗೆಯನೇರಿದನು ವಾದ್ಯದ । ಸಂದಣಿಯಲಿ ॥ ೭ ॥ ತಂಡ ತಂಡದಿ ಪಾಠಕರು ಜಯ । ವೆಂದು ಪೊಗಳೆ ಹರುಷದಿ ॥ ಕಂಡು ಧರ್ಮಜನಂದು ಭೂಪನ । ಬಂದು ದೂರ ॥ ೮ ॥ ಕಾಲುನಡೆಯಲಿ ಭರದಿ ಭೂಮಿಪ । ನೋಲಗವನು ಹೊಕ್ಕನು ॥ ಲೀಲೆಮಿಗೆ ಪಾದದಲಿ ಬಿದ್ದನು । ಪಾಂಡುತನುಜ ॥ ೯ ॥

ವಚನ

ಈ ರೀತಿ ನಮಿಸಿದ ಧರ್ಮಜನಂ ತೆಗೆದಪ್ಪಿ ಸಿಂಹಾಸನದೊಳ್ ಕುಳ್ಳಿರಿಸಿ ಆನಂದಬಾಷ್ಪಗಳಿಂದ ಧೃತರಾಷ್ಟ್ರನು ಏನೆಂದನು ಎಂದರೆ-

ಮಧ್ಯಮಾವತಿ ರಾಗ - ಏಕತಾಳ

ಬಂದೆಯ ನೀಯೆನ್ನ ಮುದ್ದಿನ ಕಣಿಯೆ । ಕಂದಯ್ಯ ಬಾರೊ ಬಾರೆನ್ನರಗಿಣಿಯೆ ॥ ಬಂದೆಯ ॥ ಪ ॥ ಕ್ಷೇಮವೆ ಕುಂತೀದೇವಿಗು ಫಲು ಗುಣನಿಗು । ಭೀಮ ಮುಂತಾದ ಮಾದ್ರೀ ಕುಮಾರರಿಗು ॥ ಗ್ರಾಮ ಭೂಮಿ ಯೊಳೆಲ್ಲ ಸ್ವಸ್ಥವಾಗಿಹರೇನೊ । ಹೇ ಮುದ್ದು ಕಂದ ಇತ್ತಿತ್ತ ಬಾರೆಂದ ॥ ಬಂದೆಯ ॥ ೧ ॥ ತರಳರು ನೀವೆನ್ನ ತಮ್ಮ ಹೋದಾಗಲೀ । ಪರಿಯೊಳಿ ನ್ನೆಂತು ಸಾಕಿದಳಯ್ಯೊ ಕುಂತಿ ॥ ವರ ಪತಿವ್ರತೆ ಪುಣ್ಯವಂತೆ ಚಂಪಕಮಾಲೆ। ವರ ಸೋಮಕುಲ ಚಿಂತಾಮಣಿಗಳು ನೀವು ॥ ಬಂದೆಯ ॥ ೨ ॥ ಕಂದರು ನೂರೊಂದು ಪಡೆದಳು ಗಾಂಧಾರಿ। ಯೊಂದಕ್ಕು ನಿಜಬುದ್ಧಿ ಬರಲಿಲ್ಲವಯ್ಯ ॥ ಎಂದಿಗಾದರು ನಿಮ್ಮ ವಾರ್ತೆಯ ಕೇಳುತಾ । ನಂದವಾಗಿರುವೆನಿಲ್ಲಿದ್ದು

ವನ್ನಣುಗ ॥ ಬಂದೆಯ ॥ ೩ ॥ ಸಣ್ಣವನಾದರು ಧರ್ಮದ ಗುಣವುಂಟು ಪುಣ್ಯಾತ್ಮನೆನಿಸಿಕೊಂಡಿರುವೆ ಲೋಕದೊಳು ॥ ಕಣ್ಣಿಲ್ಲದವರು ಕಂಡುದ ಕಿಂತ ಹೆಚ್ಚಿನ್ನ । ಚಿಣ್ಣ ನೀ ಬಂದ ಕಾರ್ಯಗಳೆಲ್ಲ ಪೇಳು॥ ಬಂದೆಯ ॥ ೪ ॥

ವಚನ

ಇಂತೆಂದು ಧೃತರಾಷ್ಟ್ರನು ನುಡಿಯಲಾಗಿ ಧರ್ಮರಾಯನು ಏನೆಂದನು ಎಂದರೆ-

ಮಾರವಿ ರಾಗ - ಝಂಪೆತಾಳ

ಇಂದುಕುಲ ತಿಲಕ ನಿಮ್ಮಾಶೀರ್ವಾದದ ಕರುಣ । ದಿಂದ ನಾವೆಲ್ಲವರು ಸುಖದೊಳಿಹೆವಯ್ಯ ॥ ತಂದೆ ಕೇಳಾದರಿನ್ನೊಂದು ಬಿನ್ನಪವುಂಟು । ಹಿಂದು ಮುಂದರಿಯದ ಕಂದರ್‍ಯೆ ನಾವು ॥ ೧ ॥ ಪೊನ್ನೆ ಗಾಂಧಾರಿ ಗಜನೋಹಿ ಯನು ಮಾಳ್ಪಾಗ । ಲಿನ್ನಿಮ್ಮ ಜನನಿಯನು ಕರೆಯಲಿಲ್ಲಂತೆ ॥ ಖಿನ್ನೆ ಯಾದಳು ಮಾತೆಯದಕೆ ಕೋಪಿಸಿಕೊಂಡು । ಅನ್ನೋದಕವ ಬಿಟ್ಟು ಅಳು ತಿರ್ದಳಯ್ಯ ॥ ೨ ॥ ಆ ಸಮಯದಲಿ ಪಾರ್ಥ ಭಾಷೆಯನು ನೆರೆಕೊಟ್ಟು । ಆ ಸುರೇಂದ್ರನ ಗಜವ ತಾ ತರುವೆನೆಂದು ॥ ಏನು ಧೈರ್ಯವೊ ಕಾಣೆಯೆನಗೆ ತಿಳಿಯದಿದೊಂದು । ವಾಸಿ ಪಂಥವು ಮಹಾದೋಷಕರವಯ್ಯ ॥ ೩ ॥ ಓಲೆಯನು ಬರೆದದರ ಶರತುದಿಯೊಳೆಸೆಯೆ ಸುರ । ಪಾಲನಿಹ ಚಾವಡಿಗೆ ತಾಗಿ ತಂದಾಗ ॥ ಬಾಳ ಕೋಪಿಸಲೊಡನೆ ನಾರದರು ನಡೆತಂದು । ಪೇಳಿ ಶಾಂತವ ಮಾಡಿ ಪೋದರವರಂತೆ ॥ ೪ ॥ ಮಂದಗಜ ಬರುವುದಕೆ ಮಾಡು ದಾರಿಯನೆಂದು।ಬಂದನಲ್ಲಿಂದೊರ್ವ ಗಂಧರ್ವನಿಳೆಗೆ॥ಇಂದುಮುಂದರ್ಜುನನ ಹೋಗಗೊಡಲಿಲ್ಲವನ । ಒಂದೆರಡು ದಿನಕೆಂದು ಒಡಂಬಡಿಸಿದ ॥ ೫ ॥ ನಾಡ ಮಾತಲ್ಲವಿದು ನಾ ಬಂದ ಕೆಲಸ ದಯ । ಮಾಡಬೇಕಲ್ಲಿ ಪರಿಯಂತ ಬಂದು ॥ ನೋಡಿ ಸನ್ನಾಹಗಳ ಮಾಡಿ ನಾವರಿಯೆವಾಲೋಕ । ವಾಡಿ ಕೊಂಬಪಕೀರ್ತಿ ನಿಮಗೆ ॥ ೬ ॥

ಕಾಂಬೋಜಿ ರಾಗ - ಏಕತಾಳ

ಚಂದವಾಯಿತಯ್ಯ ಮಾತು । ಇಂದುಕುಲಜಾತ । ಸಂದೇಹ ವೇಕಿನ್ನು ನಾವು । ಬಂದೆವು ಸಂಗಾತ ॥ ಇಂದೆನ್ನ ಮಕ್ಕಳು ನೀವು ।

ಚಂದದಿಂದ ಪೋಗಿ । ವೃಂದಾರಕ ಪುರದಾನೆಯು । ಪೂಜಿಸಿರೊಂದಾಗಿ ॥ ೧ ॥ ಅಂಗಜ ಸನ್ನಿಭನೆ ಕೇ । ಳಲ್ಲಿ ಬಂದರೇನು । ಕಂಗಳಿಲ್ಲದವನ ಪ್ರ । ಸಂಗ ವೇತಕಿನ್ನು ॥ ಸಂಗಡ ನೀವಿದ್ದು ಮಾಡಿ । ಸಂತೋಷದೊಳಿಲ್ಲ । ಮಂಗ ಳಾತ್ಮಕನು ದಯದಿ । ರಕ್ಷಿಪ ಸುಳ್ಳಲ್ಲ ॥ ೨ ॥

### ವಚನ

ಇಂತೆಂದು ಲೇಸಿನ ಮಾತನಾಡಿ ವೀಳಯಮಂ ಕೊಟ್ಟು ಬೀಳ್ಕೊಡಲು ಧರ್ಮಜನರಮನೆಗಯ್ತಂದು ಭೀಮನೊಳ್ ಕೌರವರಂ ಕರೆತಾರೆನಲು ಭೀಮನು ಮತ್ತೇನೆಂದನು ಎಂದರೆ-

### ಕೇದಾರಗೌಳ ರಾಗ - ಅಷ್ಟ ತಾಳ

ಅಣ್ಣ ನಿನಗೆ ಕಯ್ಯ ಮುಗಿವೆನು ಈ ಮಾತ । ನೆನ್ನೊಡನುಸಿರಬೇಡ॥ ಕುನ್ನಿ ಪಿಶಾಚಿ ಕೌರವನನು ಕರೆತರ । ಲೆನ್ನಿಂದ ಸಾಧ್ಯವಲ್ಲ ॥ ೧ ॥ ಮೊದಲೆ ಕೌರವರು ಮೂರ್ಖರು ಜಗಳದಲಿ ನಾ । ನವರಿಂದ ಕಡುಮೂರ್ಖನು ॥ ಕದನವಾಗುವುದು ನಮ್ಮೊಡನೆ ಲೇಸಾಗದು । ಬದಲೊಬ್ಬನನು ಕಳುಪು ॥ ೨ ॥ ಮೊನ್ನೆ ಗಾಂಧಾರಿಯು ನೋಂಪಿಯ ಮಾಳ್ಪಾಗ । ನಮ್ಮನ್ನು ಕರೆದ ರೇನ್ಯೆ ॥ ಇನ್ನು ನಾವವರ ಕರೆವುದಾವ ಬಗೆಯಿಂದ । ಭಿನ್ನ ಯೋಚಿಸುವವರ ॥ ೩ ॥ ತಮ್ಮ ಈ ಮಾತನು ಪೇಳ್ವರೆ ತಿಳಿದು ಸ । ದ್ಧರ್ಮದ ಸಂಗತಿಯ ॥ ಹೆಮ್ಮಕ್ಕಳವರೊಳು ಭೇದವೆಣಿಸಿದರು । ನಮ್ಮೊಳು ಭೇದವುಂಟೆ ॥ ೪ ॥ ಮರುಳೊಬ್ಬ ಬತ್ತಲೆ ಕುಣಿದಾಡಿದರೆ ಮಿಕ್ಕ । ವರು ಕಂಡು ಕುಣಿವರೇನ್ಯೆ ॥ ಕರೆದು ಬಾರೆಂದರೆ ನೂರೆಂಟು ಮಾತನು । ತ್ತರ ಕೊಡಬೇಡ ನೀನು ॥ ೫ ॥ ಮಿಗುವರಿದವರು ಮಾತಾಡುತ್ತ ಬಂದರು । ಜಗಳಾಡಬೇಡ ನೀನು ॥ ನಗುತ ಮಾತಾಡಿ ವೀಳ್ಯವ ಕೊಟ್ಟಿಲ್ಲರನು ನೋ । ಡಿಗೆ ಬನ್ನಿರೆಂದು ಹೇಳು ॥ ೬ ॥

### ವಚನ

ಅಗ್ರಜನಪ್ಪಣೆಯಂ ಕೇಳ್ದು ಭೀಮನು ಸಕಲ ಸನ್ನಾಹದಿಂದ ಪೊರಟು ನಡೆತಂದನದೆಂತೆನೆ-

ಕಾಪಿ ರಾಗ - ಅಷ್ಟ ತಾಳ

ಭೀಮ ಬಂದನು । ಕೌರವನ ಮನೆಗೆ । ಭೀಮ ಬಂದನು ॥ ಪ ॥ ತಾಮಸದೊಳು ನಗುತ । ಹಲವು ಹಂಬಲಿಸುತ್ತ ॥ ಭೀಮ ಬಂದನು ॥ ಅ ॥ ಅಣ್ಣನಪ್ಪಣೆ ಕೊಟ್ಟನದರಿಂದ ನಾ ಬಂದೆ । ಎಣ್ಣೆ ಸೀಗೆಯು ಕೌರವರಿಗು ನಮಗು ॥ ಬಣ್ಣದಿಂದಲಿ ಕರವೆ ಬಂದರೆ ಜಗಳಕ್ಕೆ । ನ್ನಣ್ಣ ನಾಜ್ಞೆಯ ಮೀರಿ ಮಣ್ಣು ಗೂಡಿಸುವೆನೆಂದು ॥ ಭೀಮ ಬಂದನು ॥ ೧ ॥ ಬಂದರೊಳ್ಳಿತು ಬಾರದಿದ್ದರೆ ಲೇಸು ತಾ । ನೊಂದೊಂದು ಮಾತಿಂದೆನ್ನನು ಕೆಣಕಿದರೆ ॥ ಹಿಂದು ಮುಂದೆಣಿಸದೆ ಗಾಂಧಾರಿ ಪಡೆದ ನೂ । ರೊಂದು ಮಕ್ಕಳನೆಲ್ಲ ಕೊಂದು ಬರುವೆನೆಂದು ॥ ಭೀಮ ಬಂದನು ॥ ೨ ॥ ಮಾರು ತಾತ್ಮಜನಿಂತು ಮನದಿ ನೆನೆದುಕೊಂಡು । ಬೇರೆಬೇರೆ ಯೋಚಿಸುತಲಿ ಬಂದು । ಕೇರಿಕೇರಿಯ ಜನರು ನೆರೆದು ನೋಡುತ್ತಿರಲು । ಧಾರಿಣಿಪತಿ ಯೆಡೆಗೆ ಸೇರಿಕೊಂಡನು ಒಳಗೆ ॥ ಭೀಮ ಬಂದನು ॥ ೩ ॥

ಕಂದ

ಮಾರುತ ತನಯನ ಕಾಣುತ । ಲೇರಿದ್ದಾಸನವ ಬಿಟ್ಟು ಕುಳ್ಳಿರಿ ಸುತ್ತಂ ॥ ಕೌರವರಾಯನು ಪ್ರಿಯದಿಂ । ಬೇರೆಬೇರೆ ನಯೋಕ್ತಿಯಿಂದ ಬೆಸ ಗೊಳುತಿರ್ದಂ ॥

ಸಾಂಗತ್ಯ ರಾಗ - ರೂಪಕತಾಳ

ಬಂದೆಯ ಭೀಮ ಕುಳ್ಳಿರು ಫಲುಗುಣ ಮಾದ್ರಿ । ನಂದನರ್ ಸಹಿತ ಕ್ಷೇಮಿಗಳೆ ॥ ಮಂದಿರದೊಳಗೆ ಚಿಕ್ಕಮ್ಮನವರು ಮನ । ನೊಂದು ಕೊಂಡಿ ಹರಂತೆ ಬಹಳ ॥ ೧ ॥ ಇಂದ್ರನಾಸೆಯು ಬಂತೆ ಈ ಸಾರಿ ಧರಣೀಶರ್ । ಬಂದರೆ ನಿಮ್ಮರಮನೆಗೆ ॥ ಗಾಂಧಾರಿ ಕರೆಯದ ಬಗೆಗಾಗಿ ಪ್ರತಿನೋಹಿ । ಯೆಂದು ನಿಶ್ಚಯಿಸಿದಿರಂತೆ ॥ ೨ ॥ ತಂದೆಯಿಲ್ಲದ ಮಕ್ಕಳೆಂದು ನೋಡಿದ ರೀಗ । ಬಂದನರ್ಜುನ ನಮಗಿದಿರು ॥ ಹಿಂದು ಮುಂದರಿಯದ ಮಡುಗ ಮೂಳರಿಗೆಲ್ಲ । ಮುಂದೆ ನಮ್ಮೊಡನೆ ಪಂಥಗಳೆ ॥ ೩ ॥ ಇಂದ್ರನ ಗಜ ವಂತೆ ಇಳೆಗೆ ಬರುವುದಂತೆ। ಇಂದು ನೋಡಿಯು ಮಾಳ್ಪರಂತೆ ॥ ಒಂದೊಂದು

ಪರಿಯ ಚೋದ್ಯವ ಮಾಡಿಕೊಂಡೆಮ್ಮ । ಸಿಂದೆಯ ಮಾಳ್ಪರು ಜಗದಿ ॥ ೪ ॥ ಉಂಬುದಕನುಕೂಲವಿಲ್ಲದಿದ್ದರು ಬಾಯ। ಡಂಭಕತನ ಬಿಡ ಪಾರ್ಥ। ಕುಂಭಿನಿಯೊಳಗರ್ಧ ಕೊಟ್ಟ ಕಾರಣದಿಂದ। ಸಂಭ್ರಮ ಬಂತು ಧರ್ಮಜಗೆ ॥ ೫ ॥ ಹಿಂದಣಾರಣ್ಯವೆ ಸಾಕು ಪಾಂಡವರಿಗೆ । ಮುಂದೆ ಗ್ರಾಮಗಳೆಲ್ಲ ತಡಸಿ ॥ ಇಂದಿನಾರಭ್ಯದಿ ಹಣವನೊಕ್ಕಲಿನ ಕ । ಯ್ಯಿಂದ ತೆಕ್ಕೊಳ್ಳಿರರ ಮನೆಗೆ ॥ ೬ ॥ ಮನೆಗೆ ಬಂದವನೊಳು ನಿಷ್ಠುರವೇಕೆ ಸು । ಮ್ಮನೆ ನೋಡಬಹುದೆಲ್ಲ ನಾಳೆ॥ ಇನಿತು ನೀ ಬಂದ ಕಾರ್ಯಗಳೇನು ಹೇಳದ। ನೆನುತ ವೀಳ್ಯವ ಕೊಟ್ಟನಾಗ ॥ ೭ ॥

## ಭೈರವಿ ರಾಗ - ಝಂಪೆತಾಳ

ಅಣ್ಣ ಕೇಳೀ ಮಾತಿ । ಗುತ್ತರವ ಕೊಡುವುದಕೆ। ಅಣ್ಣನಪ್ಪಣೆಯಿಲ್ಲ। ವಾಗಲದಕೇನು ॥ ೧ ॥ ಹಿರಿಯವರು ನೀವೊಂದು । ಹೆಚ್ಚು ಕುಂದಾಡಿದರು। ಕಿರಿಯವರು ನಾವದನು । ಕೇಳುವುದು ಸಹಜ ॥ ೨ ॥ ಇನ್ನು ಪೇಳುವ್ರದೇನು । ಈ ಪಾರುಪತ್ಯವನು । ಮುನ್ನವೇ ಆಡಿ ಮುಗಿ । ಸಿದೆಯಲ್ಲ ನೀನು ॥ ೩ ॥ ಕರಿನೋಹಿಯುತ್ಸವವ । ಮಾಡಬೇಕೆಂದೆನುತ। ಕರೆದು ಬಾರೆಂದೆನ್ನ। ಕಳುಹಿರುವನಣ್ಣ ॥ ೪ ॥ ತಮ್ಮಂದಿರೆಲ್ಲರನು । ಸಂಗಡಲೆ ಕರೆಕೊಂಡು । ನಿಮ್ಮ ಬರಹೇಳಿದನು । ಧರ್ಮಜನು ನಾಳೆ ॥ ೫ ॥ ಊಳಿಗವ ಮಾಡು ವರಿ। ಗೂರ ಮಾತುಗಳೇಕೆ। ಹೇಳಬಂದವರೊಡನೆ। ನ್ಯಾಯವೇಕಯ್ಯ ॥ ೬ ॥ ಪೊಡವಿಪತಿ ನೀ ಬಂದು । ನಡೆಸಿಕೊಡಬೇಕಂತೆ । ತಡವಾಗುತಿದೆಯೆನಗೆ । ತೆರಳುವರೆ ಮನೆಗೆ ॥ ೭ ॥

## ಸೌರಾಷ್ಟ್ರ ರಾಗ - ತ್ರಿವುಡೆತಾಳ

ಕಂಡಿರೇ ಮಂತ್ರಿಗಳು ಭೀಮನ । ಪುಂಡುತನದುತ್ತರವ ಲೋಕದಿ । ಗಂಡರಿಲ್ಲದ ಸತಿಯರೀ ವ್ರತ । ಗೊಂಡುದುಂಟೆ ॥ ೧ ॥ ಪುಟ್ಟು ನೆರೆಮುದಿ ಭ್ರಾಂತು ಭೀಷ್ಮನ । ಕಟ್ಟಳೆಯು ನೆರೆಕೇಳಿ ಧರ್ಮಜ । ಕೆಟ್ಟನಲ್ಲಸೆ ಮುಂದೆ ಲೇಸಿನ । ಬಟ್ಟೆಯುಂಟೆ ॥ ೨ ॥ ಎಷ್ಟು ಮಾತೆಲೊ ನಿನಗೆ ಅರಮನೆ। ಮೆಟ್ಟಲೇರಲಿಕರಿಯೆ ಸುಮ್ಮನೆ । ಪೆಟ್ಟು ತಿನ್ನದೆ ಹೋಗು ನಿನ್ನಯ। ಗುಟ್ಟು ನುಳುಹಿ ॥ ೩ ॥

### ಆಹೇರಿ ರಾಗ - ಝಂಪೆತಾಳ

ಲೇಸಾಯಿತಯ್ಯ ಹಿರಿಯಣ್ಣ । ನಾ ನಿನ್ನ । ಕರೆಯಬಂದುದಕು ನೀ ಪೇಳಿದುದಕು ॥ ಲೇ ॥ ಪ ॥ ಪುಂಡುಗಾರನುಯೆಂದು ಮೊದಲೆನಗೆ ಪೆಸರಿಟ್ಟೆ। ದಿಂತನೆಂದೆನುತ ನಾಮವನಿಟ್ಟೆಯರ್ಜುನಗೆ । ಉಂಡು ಸೊಕ್ಕಿದನೆಂದು ಧರ್ಮಜನ ಜರದೆ ಮರು । ಳೆಂದು ಆಚಾರ್ಯನನು ಕರೆದೆ ॥ ತಾಯ । ಮುಂಡೆಯೆಂದೆನುತ ನಮ್ಮದಿರಿನೊಳು ಬೈದೆ ॥ ಲೇ ॥ ೧ ॥ ದೊರೆಯಹುದು ನೀವು ಕುಂಬಾರರೆಲ್ಲರು ನಾವು । ಅರಮನೆಯ ಪುಟ್ಟಿದಾರಭ್ಯ ಕಂಡವರಲ್ಲ । ಮರಿಯಾದೆಯುಳಿಯದಿಂತೆಂಬ ಮಾತುಗಳಿಲ್ಲ । ಮರೆಯದೇ ಕಟ್ಟಿರಿಸು ನೀನು ॥ ಇದಕೆ । ಕರಿನೋಹಿಯನು ಮುಗಿಸಿ ಮಿಗೆ ಬರುವೆ ನಾನು ॥ ಲೇ ॥ ॥ ೨ ॥ ಖಳಶಿರೋಮಣಿಯ ಬೆದರಿಸುತ ಬಂದಲ್ಲಿಂದ । ಮೊಳಗಿದುವು ಭೇರಿ ವಾದ್ಯವು ನಾಲ್ಕು ದಿಕ್ಕಿಂದ । ಇಳೆಯ ಪಾಲಕರು ನಡೆತಂದರರೆಂದೆನು ತಾಗ । ಬಳಿಯ ಸಂಬಳವನುಂಬುವರು ॥ ಬಂದು । ತಿಳುಹಿದರು ಧರ್ಮಜ ಗಿದಿರ್ಗೊಳ್ಳಲವರು ॥ ಲೇ ॥ ೩ ॥ ರಥವಾಜದಂತಿಗಳ ಸತ್ತಿಗೆಯ ಸಾಲುಗಳ। ಚತುರಂಗ ಮಾರ್ಬಲ ವಿಲಾಸಗಳ ಘೋಷಗಳ । ಜೊತೆಯಾಗಿ ನಡೆತರುವ ದಂತಿಗಳ ಪಂಙ್ಕ್ತಿಗಳ । ಜತನದಿಂದಿದಿರ್ಗೊಂಬರಾಗ॥ ಕಂಡು । ಅತಿಶಯ ದೊಳುತ್ಸವವನೆಸಗಿದರು ಬೇಗ ॥ ಲೇ ॥ ೪ ॥ ಒಂದು ಕಡೆಯಲಿ ಭೀಮನಿದಿ ಗೊರ್ಂಬನರಸುಗಳ । ನೊಂದು ಕಡೆಯಲಿ ನಕುಲ ಕರೆತರುವ ಹರುಷಗಳ । ನೊಂದು ಕಡೆಯಲಿ ಪಾರ್ಥ ಮನ್ನಿಸುವ ಸಹಸಗಳ । ನೊಂದು ಕಡೆಯಲಿ ನೃಪಾದಿಗಳ ॥ ಕರೆದು । ಚಂದದಲಿ ಭೀಷ್ಮ ತೋರಿಪ ಬಿಡಾರಗಳ ॥ ಲೇ ॥ ॥ ೫ ॥

### ಸೌರಾಷ್ಟ್ರ ರಾಗ - ಅಷ್ಟತಾಳ

ಬಂದಿರೆ ಮಗಧಭೂಪಾಲರು ಶೀಲರು । ಬಂದಿರೇನೈ ॥ ದಯೆ । ಯಿಂದಂಗ ವಂಗ ಕಳಿಂಗ ಕಾಂಭೋಜರು । ಬಂದಿರೇನೈ ॥ ೧ ॥ ಗೋರಾಷ್ಟ್ರ ಮಹರಾಷ್ಟ್ರ ಕರ್ಣಾಟದರಸರು । ಬಂದಿರೇನೈ ॥ ಮಿತಿ । ಮೀರಿದ ಪಾಂಡ್ಯ ದ್ರಾವಿಡದೇಶದರಸರು । ಬಂದಿರೇನೈ ॥ ೨ ॥ ಚೋಳೇಂದ್ರ ತೆಲುಗು ಕೊಂಕಣ ದೇಶದರಸರು । ಬಂದಿರೇನೈ ॥ ಜೈನ । ಮಾಳವ ಮಲೆಯಾಳ ಜಾಲದ ಕ್ಷಿತಿಪರು । ಬಂದಿರೇನೈ ॥ ೩ ॥ ಕಮ್ಮಾರ ಕಮ್ಮೀರದರಸರು

ನೀವೆಲ್ಲ । ಬಂದಿರೇನೈ ॥ ಬಲುಧಿಮ್ಮನೆ ಗೌಳವ ಸೌರಾಷ್ಟ್ರ ಸುಜನರು । ಬಂದಿರೇನೈ ॥ ೪ ॥ ಕುಂತಳದೊಡೆಯ ಕಾಶ್ಮೀರ ಬಲಾಢ್ಯರು । ಬಂದಿರೇನೈ॥ ದಿ। ಗಂತ ಸಮುದ್ರ ನಾಯಕರೆಲ್ಲರೊಟ್ಟಾಗಿ । ಬಂದಿರೇನೈ ॥ ೫ ॥ ಬರ್ಬರ ದೇಶದೊಳಿರುವ ನೃಪಾಲರು । ಬಂದಿರೇನೈ ॥ ನೀವು । ನಿರ್ಭಯವಾದ ನಿರಾವತಿ ವಂಶರು । ಬಂದಿರೇನೈ ॥ ೬ ॥ ಛಪ್ಪನ್ನ ದೇಶದೊಳಿರುವ ಭೂಕಾಂತರು । ಬಂದಿರೇನೈ ॥ ನೀವು । ವಪ್ಪಗೊಂಡಿರಬೇಕು ತಿಳಿಯದವರು ನಾವು । ಬಂದಿರೇನೈ ॥ ೭ ॥ ಬಡವರು ನಾವು ನಮ್ಮೊಡನೆ ಸಂಪ್ರೀತಿಯಿಂ । ಬಂದಿರೇನೈ ॥ ಇನ್ನು । ನಡೆಸಿಕೊಳ್ಳಲು ಬೇಕು ನಮ್ಮ ಕಯ್ ವಿಡಿದು ನೀವ್ । ಬಂದಿರೇನೈ ॥ ೮ ॥

### ವಾರ್ಧಿಕ

ಈ ರೀತಿಯಿಂದ ಬಂದರಸುಗಳ ಮನ್ನಿಸುತ । ಬೇರೆಬೇರವರಿಗೆ ಬಿಡಾರಗಳನಿತ್ತು ಎಳೆ । ನೀರು ಸಕ್ಕರೆ ಬೆಲ್ಲ ಹಾಲು ಹಣ್ಣುಗಳ ಕೊಟ್ಟೋ ರಂತೆ ತೃಪ್ತಿಪಡಿಸಿ ॥ ತಾರತಮ್ಯಗಳಿತು ಉಚಿತಗಳ ಕೊಡಿಸಿ ಪ । ನ್ನೀರು ಕಮ್ಮೆಣ್ಣೆ ಕಸ್ತುರಿ ಜವಾಜಿಗಳ ವಿಸ್ತಾರ ಮಲ್ಲಿಗೆ ಜಾಜಿ ಪರಿಮಳದೊಳು ಪಚರಿಸಿಯರ್ಜುನನೊಳಿಂತೆಂದನು ॥

### ಗೌಳ ನೀಲಾಂಬರಿ ರಾಗ - ಏಕತಾಳ

ಬಂದ ಭೂಪರಂದ ನೋಡೊ । ತಮ್ಮ ತಮ್ಮ । ಇಂದ್ರನಾನೆಯ । ನಿಂದು ಪೂಜಿಪ ಪಂಥವೇನೊ । ತಮ್ಮ ತಮ್ಮ ॥ ಮಂದ ಬುದ್ಧಿಗಳಾವೆ ವಲ್ಲೊ । ತಮ್ಮ ತಮ್ಮ ॥ ೧ ॥ ಹಗೆಯುವರು ಬಹಳ ನಮಗೆ । ತಮ್ಮ ತಮ್ಮ । ಎಂದೆಂದಿಗವರು। ನಗುವ ರೀತಿಯಾಯಿತಲ್ಲೊ । ತಮ್ಮ ತಮ್ಮ ॥ ಹಗುರಾದೆವು ರಾಜ್ಯಕೆಲ್ಲ । ತಮ್ಮ ತಮ್ಮ । ಈ ಮಾತು ಎಂದೆಂ । ದಿಗು ಬಿಟ್ಟು ಹೋಗದಲ್ಲೊ । ತಮ್ಮ ತಮ್ಮ ॥ ೨ ॥ ಇಚ್ಛೆ ತಪ್ಪಿತಲ್ಲೊ ಈಗ । ತಮ್ಮ ತಮ್ಮ । ಭೂಪಾಲರೆಲ್ಲ । ಹುಟ್ಟರೆಂದು ವೈರಲ್ಲೊ । ತಮ್ಮ ತಮ್ಮ ॥ ಎಚ್ಚರಿಕೆಯ ತಪ್ಪದಿರು । ತಮ್ಮ ತಮ್ಮ । ಏನೆಂಬೆ ನಿನ್ನ । ಹೆಚ್ಚಿನ ಪೌರುಷಕಿನ್ನು । ತಮ್ಮ ತಮ್ಮ ॥ ೩ ॥

### ದೇಶಿ ರಾಗ - ಅಷ್ಟತಾಳ

ಈ ಮಾತಿಗೆ ಚಿಂತೆ ಬೇಡ । ಅಣ್ಣದೇವ । ಬಂದ। ಭೂಮಿಪರನಿದಿರು ಗೊಳ್ಳು। ಅಣ್ಣದೇವ ॥ ೧ ॥ ಏನು ತಾಮಸಗೊಳದಿರಯ್ಯ । ಅಣ್ಣದೇವ। ಇಂದ್ರ।ನಾನೆಯೊಗ ಬರುವುದಯ್ಯ।ಅಣ್ಣದೇವ॥ ೨ ॥ಚಿಂತಿಸುವುದೇತಕೆ ನೀ। ಅಣ್ಣದೇವ । ಲಕ್ಷ್ಮೀ । ಕಾಂತನ ಕೃಪೆಯಿಲ್ಲವೇನೊ । ಅಣ್ಣದೇವ ॥ ೩ ॥

### ಕೋರೆ ರಾಗ - ಅಷ್ಟತಾಳ

ಬರಲಿಲ್ಲವಲ್ಲ । ಸ್ವಾಮಿಯು ಕರೆ । ತರಲಿಲ್ಲವಲ್ಲ ॥ ಧರಣಿಪಾಲರು ಬಂದು ನೆರೆವ ಮೊದಲು ಶ್ರೀ । ಹರಿಯೊಳಪ್ಪಣೆ ಕೇಳಮರೆತೆವು ನಾವೆಲ್ಲ ॥ ಬರಲಿಲ್ಲ ॥ ೧ ॥ ಏನ ಹೇಳುವನೊ ಮುರಾರಿ ಮ । ತ್ತೇನ ಯೋಚಿಪನೊ ॥ ನೀನೆ ಪೋಗತಿ ಬೇಗದಲಿ ಕಾಲ ಕಟ್ಟಿಕೊ । ದಾನವಾಂತಕನನ್ನು ದಮ್ಮಯ್ಯ ಎನ್ನು ॥ ಬರಲಿಲ್ಲ ॥ ೨ ॥ ನಡೆ ನಿಲ್ಲಬೇಡ ಹೋಗಿ ಜಗ । ದೊಡೆಯನನು ಗಾಢ॥ಕಡುಬೇಗದಲಿ ಕರೆತಾರದಿದ್ದರೆ ಇಲ್ಲಿ। ಪೊಡವಿಪಾಲರು ನಿಲ್ಲರಡಿಗಡಿಗೆಲ್ಲ॥ ಬರಲಿಲ್ಲ ॥ ೩ ॥

### ದ್ವಿಪದಿ

ರಥವೇರಿ ರಾಜಬೀದಿಯಲಿ ಫಲುಗುಣನು । ಅತಿಹರುಷದಿಂದ ದ್ವಾರಕೆಗೆ ತೆರಳಿದನು ॥ ೧ ॥ ವಿಸ್ತಾರವಾಗಿರುವ ಜಲಧಿ ಮಧ್ಯದಲಿ । ಅತ್ಯಂತ ರಂಜಿಸುತಲಿಹ ದ್ವಾರಕೆಯಲಿ ॥ ೨ ॥ ಚಿನ್ನದಾ ನೆಲೆಗಟ್ಟು ಚಿತ್ರ ವಾಗಿರುವ । ರನ್ನದಾ ಗೋಡೆಗಳು ರಮಣೀಯಕರವ ॥ ೩ ॥ ಕನ್ನಡಿಯ ಬಾಗಿಲೊಳು ಕಡುಪ್ರಕಾಶಗಳು । ಸನ್ನೆಗಳ ಮಾಡಿರುವ ಸೊಗಸು ಬೊಂಬೆ ಗಳು ॥ ೪ ॥ ವಜ್ರದ ಕವಾಟಗಳ ಮಧ್ಯ ಮಧ್ಯದೊಳು ॥ ಸಜ್ಜುಗೊಳಿಸಿರ್ದ ಪೊಳೆಪೊಳೆವ ವಸ್ತುಗಳು ॥ ೫ ॥ ಕಾಲದೀವಿಗೆಗಳ ಕಂಭಗಳ ನಡುವೆ । ಸಾಲಾಗಿ ನಿಂದಿರುವ ಸೇವೆಗಳ ಜನರು ॥ ೬ ॥ ಪೊಂಬಣ್ಣದುಪ್ಪರಿಗೆಯೊಳಗೆ ಉಯ್ಯಾಲೆ। ಸಂಭ್ರಮದ ಮಂಚಗಳ ಪೊಳವದರ ಮೇಲೆ ॥ ೭ ॥ ಪಚ್ಚೆಯಾ ಹರಳುಗಳ ಹಂತಿಯಲಿ ಬಿಗಿದು। ಅಚ್ಯುತನ ಪಟ್ಟಣದೊಳರ್ತಿಯಿಂದಿಹುದು ॥ ೮ ॥ ನೀಲದಾ ತೊಲೆಗಳಲಿ ಬಿಟ್ಟಿರುವ ಝಲ್ಲಿ । ಮೇಲು ಮುತ್ತಿ ನೊಳೆಸೆವ ಮಂಟಪಗಳಲ್ಲಿ ॥ ೯ ॥ ಸಿಂಹಾಸನವೇರಿ ಶ್ರೀಕೃಷ್ಣನಿರಲು ।

ಬ್ರಹ್ಮಾದಿ ಸುಮನಸರು ಬಂದು ಜಯವೆನಲು ॥ ೧೦ ॥ ಎಡಬಲದಿ ರಾಧೆ ಕಾಳಿಂದಿ ರುಕ್ಮಿಣಿಯು । ಅಡಿಗಡಿಗೆ ಕೃಷ್ಣನಿಗೆ ಕೊಡಲು ಮಡಿದೆಲೆಯು ॥ ೧೧ ॥ ಜಾಂಬವತಿ ಬೀಸುವಳು ಬೀಸಣಿಗೆಯಿಂದ । ಸಂಭ್ರಮದಿ ಭದ್ರೆ ಕಾಲೊತ್ತುತಿರಲಂದ ॥ ೧೨ ॥ ಸತ್ಯಭಾಮೆಯು ತೊಡೆಯ ತಲೆದಿಂಬು ಮಾಡಿ । ಅತ್ಯಂತ ಹರುಷದಲಿ ಹರಿಯಿರಲು ನೋಡಿ ॥ ೧೩ ॥ ಬಾಗಿಲ ವರಯ್ಯಂದು ಬಂದ ಫಲುಗುಣನ । ಬೇಗದಲಿ ಪೇಳಿದರು ನಾಗಶಯನನಿಗೆ ॥ ೧೪ ॥ ಒಳಗೆ ಬಂದಾ ಪಾರ್ಥನುತ್ಸಾಹದಿಂದ । ನಳಿನನಾಭನ ಪದಾಂಬುಜವ ನೆರೆಕಂಡ ॥ ೧೫ ॥

### ಸಾವೇರಿ ರಾಗ - ಏಕತಾಳ

ಪಾಹಿ ಕೇಶವ ಶ್ರೀಕೃಷ್ಣದೇವ । ಜಯ ಜಯ ಪಾಹಿ ॥ ಪ ॥ ಅಂಗಜಪಿತ ಸಮರಾಂಗಣಜಿತ ಸುರ । ಪುಂಗವನುತ ಸಜ್ಜನ ರಕ್ಷಕನೆ ॥ ಪಾಹಿ ॥ ೧ ॥ ಕಮಲನಾಭ ಕಮಲಾಕ್ಷ ಜನಾರ್ದನ ॥ ಕಮಲಪ್ರಿಯ ಹೃತ್ಕಮಲ ನಿಶಾಂತ ॥ ಪಾಹಿ ॥ ೨ ॥ ಸರ್ವಲೋಕಾಧಾರ ಸರ್ವೇಶ್ವರ । ಸರ್ವವಂದ್ಯ ಹರಿ ಸರ್ವ ಸುಶೀಲ ॥ ಪಾಹಿ ॥ ೩ ॥ ನಿತ್ಯ ಶುದ್ಧ ನಿರಾಮಯ ನಿರ್ಮಲ । ಸತ್ಯ ಸಾಕ್ಷಿ ಸಜ್ಜನ ವರದ ॥ ಪಾಹಿ ॥ ೪ ॥ ಮತ್ಸ್ಯ ಕೂರ್ಮ ವರಾಹ ನರ ಹರಿ । ನಿತ್ಯ ವಾಮನ ಮಂಗಳ ನಿಜರೂಪ ॥ ಪಾಹಿ ॥ ॥ ೫ ॥ ಪರಶುರಾಮ ಶ್ರೀರಾಮ ಸದಾನಂದ । ಭರಿತ ಮೂರ್ತಿ ಶ್ರೀ ಗೋಪಾಲಕೃಷ್ಣ ॥ ಪಾಹಿ ॥ ೬ ॥

### ವಚನ

ಇಂತೆಂದು ಸ್ತುತಿಯಂ ಮಾಡಿ ಸಾಷ್ಟಾಂಗ ವಂದಿಸಿದ ಅರ್ಜುನನನ್ನು ತೆಗೆದಪ್ಪಿ ಸಿಂಹಾಸನದಿ ಕುಳ್ಳಿರಿಸಿ ಶ್ರೀಕೃಷ್ಣನು ಏನೆಂದನು ಎಂದರೆ-

### ರೇಗುಪ್ತಿ ರಾಗ - ಆದಿತಾಳ

ಬಂದೆಯೇತಕೆ ಬಳಲುತ್ತ ಬಹುದೂರ । ಇಂದ್ರನಂದನ ಹೇಳು ಹೇಳಯ್ಯ ॥ ಕುಂದಿತೇತಕೆ ಕಡು ಮುದ್ದಾದ ವದನಾರ । ವಿಂದ ಬಾಡಿದ ಮೊಗ್ಗೆಯೊಳಿಕಿ ದಣಿವಿಕೆಯಿಂದ ॥ ಬಂದೆ ॥ ೧ ॥ ಕ್ಷೇಮವೆ ಕುಂತಿದೇವಿ

ಧರ್ಮಜ ಮುಖ್ಯ । ಭೀಮ ನಕುಲ ಸಹದೇವರು ॥ ಭೂಮಿಪಾಲಕನು ಮತ್ತೇನು ಕಾರ್ಯದ ಮೇಲೆ । ನೇಮವಿತ್ತಿಲ್ಲಿಗೆ ಕಳುಹಿದ ನಿನ್ನನು ॥ ಬಂದೆ ॥ ೨ ॥ ಮಾತನಾಡದ ಮುನ್ನ ಕಣ್ಣೆರಡರೊಳ್ । ಶ್ವೇತ ಬಿಂದುಗಳಿಳಿವುದೇನಯ್ಯ ॥ ಏತಕೀಗ ಕಂಗೆಡಿಕೆ ನಿನ್ನೊಡಲೊಳು । ಕಾತರಿಸದೆ ಪೇಳ್ಳೈ ಬೆದರದೆ ನಮ್ಮೊಳು ॥ ಬಂದೆ ॥ ೩ ॥

## ಘಂಟಾರವ ರಾಗ - ಏಕತಾಳ

ಲಾಲಿಸಿ ಕೇಳೆನ್ನ ಮಾತ । ಶ್ರೀಲೋಲ ಗೋಪಾಲ । ಪೇಳುವೆ ಸಜ್ಜನ ಪಾಲ । ಕರುಣಾಲವಾಲ ॥ ಲಾಲಿಸಿ ॥ ಪ ॥ ಪೊನ್ನೆನಮ್ಮ ಹಿರಿಯ ತಾಯಿ । ಮಣ್ಣನಾನೆ ಮಾಡಿ ॥ ಸಂ । ಪನ್ನ ವ್ರತಮಾಳ್ಪಾಗಲೆಮ್ಮ । ಕರೆಯದುದನು ನೋಡಿ ॥ ಖಿನ್ನೆಯಾದಳೆಮ್ಮ ಮಾತೆ । ಶೋಕದಿಂದ ಬಾಡಿ॥ ಇನ್ನು ಫಣಾತೊಂದೊರೆದೆ ನಿಮ್ಮ । ದಯದಿ ಶೌರ್ಯಗೂಡಿ ॥ ಲಾಲಿಸಿ ॥ ೧ ॥ ಇಂದ್ರನಾನೆ ಇಳೆಗೆ ತರುವೆ । ನೆಂದು ಭಾಷೆಕೊಟ್ಟೆ ॥ ತಂದೆಗೋಲೆ ಬರೆದದನ್ನು । ಶರದಿಂದ ಬಿಟ್ಟೆ ॥ ಬಂದನೋರ್ವ ಖಚರ ಸ್ವರ್ಗ । ದಿಂದ ಓಲೆ ಮುಟ್ಟಿ ॥ ಒಂದು ಮಾತಿಗೆ ಗೋವಿಂದ । ಮುಂದೆ ನಾ ಕಂಗೆಟ್ಟು ॥ ಲಾಲಿಸಿ ॥ ೨ ॥ ದಾರಿಯ ಮಾಡೆಂದು ಖಚರ । ನಾಡುತಾನೆ ತನ್ನ ॥ ಭಂ । ಡಾರವನೊಪ್ಪಿಸಿಕೊಟ್ಟನು । ಭೀಷ್ಮಾಚಾರ್ಯ ಮುನ್ನ ॥ ಧಾರಿಣಿ ಪಾಲಕರ ಕಂಡು । ಬೆದರುತಾನೆ ಅಣ್ಣ ॥ ಸಾರಸಾಕ್ಷ ದಯದಿ ಬಂದು । ಸಲಹಯ್ಯ ಸಂಪನ್ನ ॥ ಲಾಲಿಸಿ ॥ ೩ ॥

## ಸಾರಂಗ ರಾಗ - ಅಷ್ಟ ತಾಳ

ಮರುಳಾದೆಯೇನೊ ಪಾರ್ಥ । ಲೋಕದೊಳಿಲ್ಲ । ಪರಿಹಾಸ್ಯವಾಯ್ತು ವ್ಯರ್ಥ ॥ ಬರಿಗುಲ್ಲು ನಿದ್ದೆಗೇಡೆಂಬ ಗಾದೆಯನು ವಿ । ಸ್ತರವ ಮಾಡಿದೆ ನಿನ್ನ ಸರಿಯಾರು ಮುಂದೆ ॥ ೧ ॥ ಧರಣೀಶರ್ಬಂದುದಕು । ಪೂರ್ವಜರ ಭಂ ॥ ಡಾರವ ತಂದುದಕು ॥ ಸುರಪನಗಜವಿಂದು ಧರಣಿಗಿಳಿಪುದಕು । ನೆರೆ ನಿನ್ನ ತಾಯಿ।ಅದರ ಪೂಜಿಪುದಕು ॥ ೨ ॥ಏನೆಂದ ಭೀಷ್ಮಾಚಾರ್ಯ।ತಾಳ್ದನೆ ಮತ್ತೆ। ಜ್ಞಾನವ ಧರ್ಮರಾಯ ॥ ಮಾನಿನಿಯರೊಳಗೆ ಜಾಣೆ ಕುಂತೀದೇವಿ ॥

ತಾನೀಗ ಮತಿಗೆಟ್ಟು ಕುಣಿದಾಡಿದಳಿಂತು ॥ ೩ ॥ ಲೇಸಾಯಿತಯ್ಯ ಪಾರ್ಥ । ಮನದೊಳಿನ್ನು । ಬೇಸರಿಸದಿರು ವ್ಯರ್ಥ ॥ ಆ ಸುರೇಂದ್ರನಗಜ ನೋಡಲು ನಾವು ಮ । ಹಾ ಸಂತೋಷದೊಳಲ್ಲಿಗೀಗಲೆ ಬರುವೆವು ॥ ೪ ॥

### ಭೈರವಿ ರಾಗ - ಝಂಪೆತಾಳ

ಅಪ್ರಯೋಜಕನಾದೆ । ಹುಡುಗ ಬುದ್ಧಿಯೊಳೆನ್ನ । ಕ್ಷಿಪ್ರದಲಿ ಸಲಹು ನೀ । ಕ್ಷೀರಾಬ್ಧಿಶಯನ ॥ ೧ ॥ ಭಕ್ತವತ್ಸಲನೆಂಬ । ಬಿರುದುಳ್ಳ ಹೊ ಪರಮಾತ್ಮ । ಭಕ್ತನಪರಾಧವನು । ನೋಡುವರೆ ನೀನು ॥ ೨ ॥ ಅರಿಯದಜ್ಞಾನದಲಿ । ಆಡಿದೆನು ನಾನೊಂದು । ಪರಿಪರಿಸಿ ಕೊಡಬೇಕು । ಪಾಪನಾಶನನೆ ॥ ೩ ॥ ಕಂಸಾರಿ ನೀ ಬಂದು । ಕರುಣದಲಿ ದಯಮಾಡೀರಿ। ವಂಶದಪಕೀರ್ತಿಯನು । ಪರಿಹರಿಸು ನೀನು ॥ ೪ ॥

### ವಚನ

ಈ ರೀತಿಯಿಂದರ್ಜುನನು ಹೇಳಿಕೊಳ್ಳಲು ಮುರಾಂತಕನು ಕಟಾಕ್ಷ ದಿಂದ ಪಾರ್ಥನ ಕರವಂ ಪಿಡಿದು ಸಾತ್ಯಕಿಯೊಡನೆ ಏನೆಂದು ನಿರೂಪಿಸುತಿರ್ದ ನೆಂದರೆ-

### ಶಂಕರಾಭರಣ ರಾಗ - ತ್ರಿವುಡೆತಾಳ

ಏಳು ಸಾತ್ಯಕಿಯೊಡನೆ ರಥವನು । ಹೇಳು ಬೇಗ ಹೂಡಲಿ ॥ ಪಾಳೆಯುದಿ ಡಂಗುರವ ಹೊಡೆಸಲಿ । ಪಯಣವೆಂದು ॥ ೧ ॥ ಬಾಲೆಯರು ಹೊರವಡಲಿ ಸಂಗಡ । ಬರಲಿ ಆನೆ ಕುದುರೆಯು ॥ ಸಾಲಿನಲಿ ನಡೆತರಲಿ ಪಾಂಡವ । ರಿಪ್ಪ ಪುರಕೆ ॥ ೨ ॥ ಅತ್ತೆ ಮನದಲಿ ನೊಂದುಕೊಂಬಳು । ಹೋಗದಿರಲು ಧರ್ಮಜ ॥ ಚಿತ್ತದಲಿ ಚಿಂತಿಸುವ ಭೇದನ । ಹೊತ್ತು ಕೊಂಡು ॥ ೩ ॥ ನೋಡಬಹುದರ್ಜುನನ ಶಕ್ತಿಯ।ನಾವು ಪೋಗಿ ಸುರಪನ ॥ ಚಾರು ಗಜವೆಂತಿಳಿವುದೆಂಬುದ । ಗಾಢದಿಂದ ॥ ೪ ॥ ನರಮುರಾಂತಕರೇರಿ ದರು ಸುರು । ಚಿರದ ರಥವಾ ಸ್ವಾಮಿಯು ॥ ತರುಣಿಯರು ಮಂಡಿಗೆ ಯನೇರಲು । ಪರುಪದಿಂದ ॥ ೫ ॥ ಆನೆಯಲಿ ಕುಳಿತನು ಹಲಾಯುಧ । ಅರ್ತಿಯಿಂದ ಮಿಕ್ಕಿನಾ ॥ ಮಾನನಿಧಿಗಳು ತೆರಳುತಿರ್ದರು । ತೇಜಿಗಳಲಿ ॥ ೬ ॥

**ಕಲ್ಯಾಣಿ ರಾಗ - ಏಕತಾಳ**

ಬಂದನೆ ದೇವರ ದೇವ । ಬಿಡದೆ ಭಕ್ತರ ಕಾವ ॥ ಚಂದ್ರಕೋಟಿ ಪ್ರಕಾಶ । ಚಾರುತರವಿಲಾಸ । ಇಂದ್ರನಂದನ ಭಾವ । ಕರುಣಿ ಸಂಜೀವ ॥ ಬಂದನೆ ॥ ೧ ॥ ನೀಲಮೇಘನಿಭಾಂಗ। ನಿರತ ಸಜ್ಜನ ಸಂಗ॥ ಶೂಲಪಾಣಿಯ ಮಿತ್ರ । ಸುಗುಣ ಶೋಭನಗಾತ್ರ ॥ ಕಾಲ ಭಯವಿದೂರ । ಕಂಸಸಂಹಾರ ॥ ೨ ॥ ವೇದಾಂತ ವೇದ್ಯ ಸು । ಶೀಲ ಸಜ್ಜನಪಾಲ । ಯಾದವಕುಲ ಜಾತ । ಎಸೆವ ಕೀರ್ತಿಪ್ರಖ್ಯಾತ । ಮಾಧವ ಮದನರೂಪ ಮಹತ್ಪ್ರತಾಪ ॥ ೩ ॥

**ಗೌಳ ಸಾವೇರಿ ರಾಗ - ಏಕತಾಳ**

ಬಂದನು ದ್ವಾರಕೆಯಿಂದ ಮುಕುಂದ । ಮಂದಿ ಕುದುರೆ ವಾದ್ಯ ಸಂದಣಿಯಿಂದ ॥ ಬಂದನು ॥ ಪ ॥ ಸತ್ತಿಗೆ ಪಕ್ಕನಿಶಾನೆ । ಉತ್ತಮವಾದ ಚಾಮರ । ಒತ್ತಿ ಪಾಡುವ ಸಂಗೀತ । ದುತ್ಸಹ ನಾಟ್ಯ ॥ ಇತ್ತಂಡೆದಿ ಪಾಠಕರು । ಎತ್ತಿ ಸ್ವರವ ಪಾಡುತಿರಲು । ಚಿತ್ರಜನಪಿತ ದೇ । ವೋತ್ತಮನು ತೆರಳಿ ಬಂದ ॥ ಬಂದನು ॥ ೧ ॥ ನಾರಾಯಣನು ಬಂದನೆಂದು । ಚಾರರು ಪೇಳಲಾಕ್ಷಣಕೆ । ಧಾರಿಣಿಪಾಲಕರೆಲ್ಲ । ಧರ್ಮಜಸಹಿತ ॥ ಬೇರೆಬೇರೆ ಇದಿರುಗೊಂಡು । ಚಾರು ತರದ ವಿಭವದಿಂದ । ದೂರದಲ್ಲಿ ಕಂಡು ಹರಿಪ । ದಾರವಿಂದಕೊಂದಿಸುತ್ತ ॥ ಬಂದನು ॥ ೨ ॥ ಕೇರಿ ಕೇರಿಯೊಳಗೆ ಹೆಂಗ । ಳೋರಂತೆ ಪಾಡುತ್ತ ಮಂಗ। ಳಾರತಿಯನು ತಂದಾಗ ಮು । ರಾರಿಗೆತ್ತುತ್ತ॥ ಧಾರಿಣಿಪಾಲಕರ ನಡುವೆ । ಧರ್ಮಜನ ಕರವ ಪಿಡಿದು । ಪೌರಜನಕನತಿ ಸಂಭ್ರಮದಿ । ಸೂರ್ಯಕೋಟಿ ಪ್ರಕಾಶದಿಂದ ॥ ಬಂದನು ॥ ೩ ॥ ವಾಸುದೇವನೀ ರೀತಿ ಸಿಂಹಾಸನದಿ ಕುಳ್ಳಿರಿಸಿ । ಕೇಶವನ ಪಾದತೀರ್ಥ । ವೆಲ್ಲರು ಧರಿಸಿ ॥ ಆ ಸಮಯದಲ್ಲಿ ಕುಂತಿ । ಅಷ್ಟು ಹೆಂಗಳ ಮನ್ನಿಸಿ । ಶೇಷಶಯನ ನೊಡನೆ ತನ್ನ । ಕ್ಲೇಶವ ಮಾತಾಡುತಿರಲು ॥ ಬಂದನು ॥ ೪ ॥

**ದೇಶಿ ರಾಗ - ಏಕತಾಳ**

ಪಾಹಿಮಾಂ ಪಾಹಿಮಾಂ ಪಾಹಿ । ಕೃಷ್ಣ ಕೃಷ್ಣ । ಖಗ । ವಾಹನ ಕಂಸ ಸಂಹಾರಿ । ಕೃಷ್ಣ ಕೃಷ್ಣ ॥ ೧ ॥ ನಂದಗೋಪನ ಕಂದನೇ ಶ್ರೀ ಕೃಷ್ಣ ಕೃಷ್ಣ । ಗೋ । ವಿಂದನೇ ರಾಜಾಧಿರಾಜ । ಕೃಷ್ಣ ಕೃಷ್ಣ ॥ ೨ ॥ ದೇವಕೀ

ಪುತ್ರನೆ ಪಾಹಿ । ಕೃಷ್ಣ ಕೃಷ್ಣ । ಪಾದ । ಸೇವಕಜನ ಸಂರಕ್ಷ । ಕೃಷ್ಣ ಕೃಷ್ಣ ॥ ೩ ॥ ದೇದ ಪಾರಿಜಾತ ತಂದೆ । ಕೃಷ್ಣ ಕೃಷ್ಣ । ಸ್ವಾಮಿ । ದೇವ ಮೋಕ್ಷವೀವ । ಕೃಷ್ಣ ಕೃಷ್ಣ ॥ ೪ ॥ ವೃಷಭ ವಾಹನನ ಮಿತ್ರ । ಕೃಷ್ಣ ಕೃಷ್ಣ । ಸಲಹೊ ಕುಶಲದಿ ವೈಕುಂಠವಾಸ । ಕೃಷ್ಣ ಕೃಷ್ಣ ॥ ೫ ॥

### ಸಾಂಗತ್ಯ ರಾಗ - ರೂಪಕತಾಳ

ಅಕ್ಕನವರ ಸಂಗಡಿರುವೆನೆಂದರೆ ಎನ್ನ । ಮಕ್ಕಳ ಕಂಡು ಸೈರಿಸಳು ॥ ಮಿಕ್ಕಾದ ಭಾವನವರ ಒಡಲೊಳು ವಿಷ । ವುಕ್ಕುತಲಿನೆ ದ್ವೇಷದಿಂದ ॥ ೧ ॥ ಪಾಂಡು ಭೂಪತಿ ಹೋದ ಮರುದಿನ ತಿರುಕೂಳ । ನುಂಡು ಸಾಕಿದೆ ಮಕ್ಕಳನ್ನು ॥ ಪುಂಡರೀಕಾಕ್ಷನೆ ಆ ಮೇಲೆ ಹಿರಿಯರು । ಕಂಡು ಕೊಡಿಸಿದರು ಗ್ರಾಮಗಳ ॥ ೨ ॥ ಪೊಡವಿಪಾಲನು ನಿನ್ನೆ ಮತ್ತು ಭೀಮನ ಕೈಯ । ತೊಡರು ಮಾಡಿದನಂತೆ ಅದಕು ॥ ಕಡೆಗೆ ಈ ರೀತಿಯಾಯಿತು ಭೀಷ್ಮನವ ರಿಂದ । ಒಡೆಯನ ಕಂಡ ಹಾಗಾಯ್ತು ॥ ೩ ॥ ಇನಿತು ದಿವಸ ನಿನ್ನ ಕರುಣ ಕಟಾಕ್ಷದಿ । ತನಯರನಿಂತು ಸಾಕಿದೆನು ॥ ವನಜನಾಭನೆ ನಿನ್ನ ದಿವ್ಯ ಪಾದವ ಕಂಡೆ । ವಿನಯದಿ ಪೇಳ್ವುದಿನ್ನೇನು ॥ ೪ ॥ ನಿನ್ನ ಮನದೊಳಿದ್ದ ಹಾಗೆ ಮಾಡೆಂದೆಂಬ । ಕನ್ನೆಯ ಮಾತನು ಕೇಳಿ ॥ ಪನ್ನಗಶಯನ ಕಂಬನಿಯ ತುಂಬುತ ಕುಂತಿ । ಯನ್ನಿರೀಕ್ಷಿಸುತೆಂದನಾಗ ॥ ೫ ॥

### ಭೈರವಿ ರಾಗ - ಝಂಪೆತಾಳ

ಅತ್ತೆಯವರೇ ಕೇಳಿ । ಮತ್ತಾವುದಕು ನೀವು । ಚಿತ್ತದಲಿ ನೊಂದು ಬೇ । ಸತ್ತುಕೊಳಬೇಡಿ ॥ ೧ ॥ ಅನ್ಯಾಯ ಮಾಡಿದರೆ । ಆ ದೋಷಗತಿಯು ವರ । ಮಣ್ಣುಕೂಡಿಸದಿರದು । ಕಣ್ಣಾರೆ ನೋಡಿ ॥ ೨ ॥ ಧರ್ಮರಾಯನು ಮಾಳ್ಪ । ಸತ್ಯದಿಂದಿನಿತು ದಿನ । ನಿಮ್ಮ ಕತೆ ಹಾಯ್ಸಿದರು । ಬ್ರಹ್ಮಾದಿ ಸುರರು ॥ ೩ ॥ ಈ ತೆರದಿ ನೀತಿಯನು । ಇಂದುವದನೆಗೆ ಪೇಳಿ । ಶ್ವೇತ ವಾಹನನೊಡನೆ । ಮಾತಾಡುತಿರ್ದ ॥ ೪ ॥

### ಘಂಟಾರವ ರಾಗ - ಏಕತಾಳ

ಏಕೆ ನೋಡುವೆ । ಅರ್ಜುನ ಸುಮ್ಮ । ನೇಕೆ ನೋಡುವೆ ॥ ಪ ॥ ಏಕೆ ನೋಳ್ಪೆ ನಮ್ಮೆಲ್ಲರ।ನೇಕೆ ಕರೆದು ತಂದೆಯ।ಭೂಕಾಂತರು ಕುಳ್ಳಿರುವುದ।

ಶ್ರೀಕರದಿ ಕಂಡೆಯಾ ॥ ಬೇಕಾದಂಥ ವಸ್ತುಗಳ । ನೀ ತರಿಸಿಕೊಂಡೆಯಾ। ಈ ಕಡೆಯೊಳಿನ್ನು ನಿಲ್ಲು । ಏತಕೀಗ ಸಂಶಯ ॥ ಯಾಕೆ ॥ ೧ ॥ ಮಿಂದು ಮಡಿಯನುಟ್ಟುಕೊಂಡು । ಬಂದು ಧನುವ ತೆಗೆಯಯ್ಯ । ತಂದೆತಾಯಿ ಬಂಧುಗುರುವಿ। ಗೆಂದು ಶರಣು ಮಾಡಯ್ಯ ॥ ಮುಂದುವರಿಯದಂತೆ ತೆಬ್ಬಿ। ಗಿಂದು ನಾಣ ಬಿಗಿಯಯ್ಯ । ಒಂದೆ ಮನಸ್ಸಿನಲ್ಲಿ ಸ್ವರ್ಗ । ಕೆಂದು ಶರವನೆಸೆಯಯ್ಯ ॥ ಯಾಕೆ ॥ ೨ ॥

### ಮಧ್ಯಮಾವತಿ ರಾಗ - ತ್ರಿವುಡೆತಾಳ

ಹರಿನಿರೂಪವ ಕೇಳಿ ಮುದದಿಂ । ಹರಿವ ನದಿಗಯ್ತಂದನು ॥ ತರಣಿ ಗರ್ಘ್ಯವನಿತ್ತು ಮಂತ್ರದಿ । ಪರಮ ಗಂಗೆಯೊಳ್ ಮಿಂದನು । ಚಂದದಿಂದ ॥ ೧ ॥ ನವದುಕೂಲವನುಟ್ಟು ಮಡಿಯಲಿ । ಪರಿಮಳವ ಲೇಪಿಸುತಲಿ ॥ ತವಕದಿಂದಾಭರಣ ತೊಟ್ಟನು । ಬಹುವಿಧದಿ ಸಿಂಗರಿಸಿದ । ತೋಷದಿಂದ ॥೨॥ ಗುರುವಿನಂಘ್ರಿಗೆ ನಮಿಸಿ ಗಜಮುಖ । ಗೆರಗಿ ಬ್ರಹ್ಮಗೆ ವಂದಿಸಿ ॥ ಗಿರಿಜೆಯನು ಪೂಜಿಸುತ ಶ್ರೀ ಶಂ । ಕರನ ಧ್ಯಾನವ ಮಾಡುತ । ವಿನಯದಿಂದ॥೩॥

### ಸಾರಂಗ ರಾಗ - ಏಕತಾಳ

ಬಂದನರ್ಜುನ ಮುದದಿಂದ । ಮಾತೆಗೊಂದಿಸುತ । ಬಂದನರ್ಜುನ ಮುದದಿಂದ ॥ ಪ ॥ ಮಂದರಧರನ ಪಾ । ದವ ಮುಟ್ಟಿ ಆ ಮೇಲೆ । ಕುಂದದೆ ಧರ್ಮಜ । ನಂಘ್ರಿಗೆಯೆರಗಿ ॥ ಬಂದ ॥ ೧ ॥ ಭೀಮಗೆರಗಿ ಸುರ । ವೃಂದಕೆ ನಮಿಸುತ । ಸೋಮಸೂರ್ಯರ್ಗೆ ದೇ । ವೇಂದ್ರಗೆ ಮಣಿದು ॥ ಬಂದ ॥ ೨ ॥ ಕಂಡು ಸಭೆಗೆ ಕಯ್ಯ । ಮುಗಿದು ಹಸ್ತದಲಿ ತೆ । ಕ್ಕೊಂಡು ಬಿಲ್ಲಿಗೆ ತೆಬ್ಬ । ಬಿಗಿದನು ಮುದದಿ ॥ ಬಂದ ॥ ೩ ॥

### ಶಹಡಿ ರಾಗ - ಅಷ್ಟತಾಳ

ಎಂತು ಪರ್ಣಸುಪೆಸರ್ಜುನನ ಸಾಪಸಪ ಶ್ರೀ । ಕಾಂತನ ಮೊಗ ನೋಡಿ ಬಾಣಪೆಟ್ಟಡೆ ॥ ಕಿಂಥಿಣಿಯೊಳಗೆ ಲಕ್ಷಾಂತರ ಕೋಟಿಯು । ನಂತಾಬ್ಜದದಿ ದಿಗಂತವೆಲ್ಲ ಮುಸುಕಿತು ॥ ೧ ॥ ಬಿಡದೆ ಶರವು ಕವಲೊಡೆದು ಚುಚ್ಚಿದವು ಮ । ತ್ಸ್ಯಡಿಗಡಿಗೆಡೆಯೆಡೆಯೊಳು ಬಾಣವೆಸೆಯೆ ॥

ಪೊಡವಿಯಿಂದಭ್ರಕೆ ಗಡಿಯಿಲ್ಲದಾಯಿತು । ಸಡಗರದಿಂದೆಸೆದಂಬುಗಳ ಗಲದಿ ॥ ೨ ॥ ಕ್ಷೋಣಿಯ ಪಿಡಿದಮರಾವತಿ ಪರಿಯಂತ । ಬಾಣದ ಸೇತು ವಾಯಿತು ಕ್ಷಣವಹಾತ್ರಕೆ ॥ ತ್ರಾಣಿಯಹುದು ಭಳಿಭಳಿರೆಂದು ನಭದ ಗೀ । ರ್ವಾಣರು ಪೊಗಳ್ದು ಪೂಮಳೆಯನ್ನು ಕರೆದರು ॥ ೩ ॥

### ವಾರ್ಧಿಕ

ಜನಪ ಕೇಳರ್ಜುನನ ಸಾಹಸವ ನೋಡಿ ನಿ । ಮ್ಮನುವಯಾಂತರ ದೊಳಿಂಥ ಸಮರ್ಥರ ಕಾಣೆ । ಗುಣಕೆ ಹುರುಡೇ ಶರದ ಪಂಜರವ ಕಟ್ಟಿದನು ಭೂಮಿಯಿಂದಮರಪುರಕೆ ॥ ವನಜಾಕ್ಷ ಕಂಡು ಪಾರ್ಥನ ಕೂಡೆ ಸಾಕಿನ್ನು । ಧನುವ ಬಿಡು ಮಾರ್ಗವಾಯ್ತೆಂದೆನಲು ಹರುಷದಿಂ । ದನಿಮಿಷಾಧೀಶ ಕಳುಹಿದ ಖಚರನಂ ಕರೆದು ಫಲುಗುಣಂ ಬಳಿಕೆಂದನು ॥ ೧ ॥

### ಶಹನ ರಾಗ - ಏಕತಾಳ

ಬಾರಯ್ಯ ಖಚರ ಕೇಳೆಂದನು । ಇಕ್ಕೊ । ದಾರಿಯಾಯಿತು ನಿಮ್ಮ ಊರು ಪರಿಯಂತಕ್ಕು ॥ ಬಾರಯ್ಯ ॥ ಪ ॥ ನಿನ್ನ ಮನಕೆ ಸೊಗಸಾಯಿತೆ । ಪೇ । ಳಿನ್ನು ಸಂಶಯ ಬಿಟ್ಟು ಹೋಯಿತೆ ॥ ಹೋಗು । ಮುನ್ನ ನಿಲ್ಲಲು ಬೇಡ । ಚೆನ್ನಾಗಿ ನಡೆಯೊ ಗಾಢ ॥ ಬಾರಯ್ಯ ॥ ೧ ॥ ಧರಣಿಪಾಲಕರ ನೀ ನೋಡಯ್ಯ । ಇಂತು । ಸುರಪಗೆ ಬಿನ್ನಹ ಮಾಡಯ್ಯ ॥ ಪೊನ್ನೆ । ಬರೆದು ಕಳುಹಿದುದೆಲ್ಲ । ಭರದಿ ಕಳುಹಿಸಲೆಲ್ಲ ॥ ಬಾರಯ್ಯ ॥ ೨ ॥ ಎನುತ ವೀಳ್ಯವ ಕೊಟ್ಟು ತೋಷದಿ । ಖಚ । ರನ ಕಳುಹಿಸಲಂದಾ ಮಾರ್ಗದಿ ॥ ಒಂದೇ । ಕ್ಷಣದಿ ಸ್ವರ್ಗಕೆ ಪೋಗಿ । ಸುರನಾಥಗೆಂದ ಸಾಗಿ ॥ ಬಾರಯ್ಯ ॥ ೩ ॥

### ಘಂಟಾರವ ರಾಗ - ಏಕತಾಳ

ವಂದನಂ ದೇವ ಬಿನ್ನಪವ । ನೊಂದ ಲಾಲಿಸಯ್ಯ ॥ ವಂದನಂ ॥ ಪ ॥ ಕಂದನರ್ಜುನ ದೇವನಿ । ಗೋಲೆಯ ಬಿಟ್ಟನಗೆ । ಅಂದು ನಿಮ್ಮ ವೋಲೆಯ ರಾ । ಣುತ್ತ ಧರ್ಮಜನಿಗೆ ॥ ಚಂದದಿಂದ ತೋರ್ದ ಮೇಲಾ । ನಂದದಿ ಭೀಮನಿಗೆ । ಸಂದಿಸುತ್ತ ತಾಯಿಗೆ ಹೀ । ಗೆಂದು ಭೀಷ್ಮಾದ್ಯರಿಗೆ ॥ ವಂದನಂ ॥ ೧ ॥ ಧರಣಿಪಾಲಕರಿಗೋಲೆ । ಬರೆದೆಲ್ಲರ ಕರೆಸಿದ । ಕರಿನೋಹಿಗೆ

ಬೇಕಾದ ಸೋಪ । ಸ್ವರವನೆಲ್ಲ ತರಿಸಿದ ॥ ಪರಿಪರಿಯೊಳು ವಿಭವದಿಂದ । ಪುರವನು ಸಿಂಗರಿಸಿದ । ಹಿರಿಯರ ಮನೆಯೊಳಿದ್ದ । ಭಂಡಾರವ ಹೊರಿಸಿದ ॥ ವಂದನಂ ॥ ೨ ॥ ದ್ವಾರಾವತಿಯಿಂದ ಕೃಷ್ಣ । ದೇವ ತೆರಳಿ ಬಂದನು । ವಾರಣಾಸಿಯಲ್ಲಿ ಹೋಗಿ । ವೀರ ಪಾರ್ಥ ಮಿಂದನು ॥ ಬೇರೆ ಬೇರೆ ಎಲ್ಲವ ರಿಗೆ । ವಂದಿಸುತ್ತ ನಿಂದನು । ವಾರಿಜನೇತ್ರನ ಮೊಗವ । ನೋಡುತ್ತ ಬಿಲ್ಗೊಂಡನು ॥ ವಂದನಂ ॥ ೩ ॥ ಮಂತ್ರಬಾಣವಿಡಿದು ಚಾಪಕೆ । ತೆಬ್ಬ ವನ್ನು ಬಿಗಿದನು । ನಿಂತುಕೊಂಡು ಶಕ್ತಿಯಿಂದ । ಧನುವ ಮೇಲೆ ತೆಗೆದನು॥ ಕುಂತಿಸುತಾತ್ಮಜನು ಸರಳ । ಹೂಡಿ ಬೆರಳಿಂದುಗಿದನು । ಇಂತು ಕರ್ಣ ಪರ್ಯಂತ । ಎಳೆದು ಶರವನೊಗೆದನು ॥ ವಂದನಂ ॥ ೪ ॥ ಇಲ್ಲಿ ಪರ್ಯಂತ ಅಂಬಿ । ನಲ್ಲಿ ದಾರಿ ಮಾಡಿದ । ಚಲ್ಲಿಸದ ಹಾಗೆ ಪಾಶ । ದಲ್ಲಿ ಬಿಗಿದು ನೋಡಿದ ॥ ಮೆಲ್ಲನೆ ಆ ಮೇಲೆಯೆನ್ನ । ಕರೆದು ವೀಳ್ಯ ನೀಡಿದ । ಸೊಲ್ಲಿಸು ತ್ತಲೆನಗಪ್ಪಣೆ । ಕೊಟ್ಟಲ್ಲಿಗೆ ಕಳುಹಿದ ॥ ವಂದನಂ ॥ ೫ ॥

ವಚನ

ಇಂತು ಖಚರನಾಡಿದ ಮಾತಂ ಕೇಳಿ ದೇವೇಂದ್ರನತಿ ಸಂತೋಷವ ಪಟ್ಟು ಮಾವುತರಂ ಕರೆದು ಹೇಳಲಾಗಿ ಮಾವುತರತಿ ಸಂತೋಷದಿಂದ ಆನೆಯನ್ನು ಬಿಚ್ಚಿ ತಂದು ಸಿಂಗರಿಸಿದರದೆಂತೆನೆ–

ಶಂಕರಾಭರಣ ರಾಗ - ತ್ರಿವುಡೆತಾಳ

ಇಂದ್ರನೈರಾವತವ ಪನ್ನೀ । ರಿಂದ ಮಿಾಸಿ ಕೊರಳಿಗೆ । ಗಂಧವನು ಲೇಪಿಸಿದರಾ ಕ । ಮ್ಮೆಣ್ಣೆಗಳನು ॥ ೧ ॥ ಚಂದ್ರಸೂರ್ಯರ ಜರೆವುತಿಹ ಮುಖ । ರಂಗ ಬಿಗಿದು ಬೆನ್ನಿಗೆ । ಕುಂದಣದ ಕವಚವನು ತೊಡಿಸಿದ । ರಂದು ಮೊದಲು ॥ ೨ ॥ ಕೋಟಿ ರತ್ನದ ಸರವು ಕೊರಳಿಗೆ । ಚಂದದಿಂದ ಹೊಳೆಯಲು । ಅಣಿಮುತ್ತಿನ ಮಾಲೆ ಸರಗಳು । ಸಂದಿಗೆಸೆಯೆ ॥ ೩ ॥ ಹೊನ್ನಗಂಟೆಗಳಯ್ದು ಸಾವಿರ । ವನ್ನು ಬಿಗಿದು ಕೊರಳಿಗೆ । ಚಿನ್ನದಾ ಸರಪಣಿಯನಿಟ್ಟರು । ಕರಗಳಲ್ಲಿ ॥ ೪ ॥ ಲಕ್ಷ ಬಿಡುಮುತ್ತುಗಳು ಸಲಿ ನ । ಕ್ಷತ್ರದಂತೆ ಹೊಳೆಯಲು । ಅಕ್ಷಿಗಳು ಕೋರವಿಸಲಾ ಗಜ । ವೀಕ್ಷಿಸಿದರು॥೫॥

ಮೇಲೆ ನವರತ್ನದಿ ಬಿಗಿದ ಚೌ । ಡಾಳೆ ಕಟ್ಟೀ ಇಂದ್ರನ। ಓಲಗದಿ ತಂದಿರಿಸಿ ಮಣಿದರು । ವಹಾವ್ಯರಂದು ॥ ೬ ॥

### ಮಧುಮಾಧವಿ ರಾಗ - ಏಕತಾಳೆ

ಇಂತೀ ಪರಿಯಲಿ ಸಿಂಗರವ ಮಾಡಿದರು । ದಂತೀಶನನ್ನಿಂದ್ರನಿದಿರು ನಿಲಿಸಿದರು ॥ ಕುಂತಿಯಹಾತ್ಮಜನೂರಿಗಯ್ದಿ ಬಾರೆನುತ । ಸಂತೋಷದಿಂದ ಪ್ಪಣೆಯನಿತ್ತ ನಗುತ ॥ ೧ ॥ ಕಾಮಧೇನುವ ಕಲ್ಪವೃಕ್ಷವ ತರಿಸಿ । ಭೂಮಿಗೆ ಹೋಗಿಬಾರೆನುತ ಸಿಂಗರಿಸಿ ॥ ಆ ಮಹಾರಂಭೆಯೂರ್ವಶಿಯರ ಕರೆಸಿ । ಪ್ರೇಮದಿಂದೆಲ್ಲರ್ಗ ವೀಳ್ಯವ ಕೊಡಿಸಿ ॥ ೨ ॥ ಪಾರಿಜಾತವು ಸಹಿತಾಗಿ ನೀವಿಂದು । ಧಾರಿಣಿ ಪರ್ಯಂತ ಪೋಗಿ ಬಾರೆಂದು ॥ ಚಾರು ವಜ್ರಾಯುಧ ಮೊದಲಾಗಿ ಕಳುಹಿ । ಓರಂತೆ ಸುರಪಾಲನೆಲ್ಲರನಿಳುಹಿ ॥ ೩ ॥

### ವಾರ್ಧಿಕ

ಸುತ್ತ ಬೀಸುವ ಚಾಮರದ ಮೇಲೆ ಛತ್ರಗಳ । ಹತ್ತು ಸಾವಿರ ಪತಾಕೆಗಳ ಸಿಂಧಗಳ ಮೂ । ವತ್ತು ಸಾವಿರ ದೇವಕನ್ನೆಯರ ವಾದ್ಯ ದುಂದುಭಿಯ ಕಹಳಾರವಗಳ ॥ ಇತ್ತಂಡ ಪಾಠಕರು ಜಯ ಜಯವೆನುತ್ತ ಪೊಗ । ಳುತ್ತ ನಾಟ್ಯವ ಗೆಯ್ವ ರಂಭೆಯೂರ್ವಶಿಯರುಂ । ಎತ್ತ ನೋಡಿದರು ಗಂಧರ್ವ ಕಿನ್ನರರುಗಳ ವೊತ್ತದಿಂ ಪೊರಮಟ್ಟರು ॥

### ಭೈರವಿ ರಾಗ - ತ್ರಿವುಡೆತಾಳ

ಬಂದಿತಾಗ । ಸುರಗಜ । ಬಂದಿತಾಗ ॥ ಪ ॥ ಮಂದರಗಿರಿಯಿಂದ ನೂರ್ಮಡಿ । ಯಂದದಿಂದ ಸುರೇಂದ್ರನಾ ಗಜ ॥ ಬಂದಿತಾಗ ॥ ಅ ॥ ಎಡ ಬಲದಿ ಪರಿಪರಿಯ ಸೇವಕ । ರೊಡನೆ ಚಾಮರ ಬೀಸುತ । ಮಡದಿಯೂರ್ವಶಿ ರಂಭೆಯರು ಅಡಿ । ಗಡಿಗೆ ನಾಟ್ಯವನಾಡುತ । ಹೊಡೆವ ಭೇರಿ ಮೃದಂಗ ವಾದ್ಯದ । ಗಡಣೆನೆಲನುಗ್ಗಡಿಸುತ । ಒಡೆಯನಪ್ಪಣೆಯಿಂದ ಪೊಡವಿಗೆ । ನಡೆದು ಸಂಭ್ರಮದಿಂದ ಮದಗಜ ॥ ಬಂದಿತಾಗ ॥ ೧ ॥ ಒಸರೆ ಕಹಳೆಗಳೆಂಟು ದಿಕ್ಕಿನೊ । ಳಸುರರೆದೆ ತಲ್ಲಣಿಸುತ । ಪಸರಿಸುತ್ತತಿ ಬಿರುದುಗಳ ಸುಮಾ । ನಸರ ಗಣ ಸಂದಣಿಸುತ । ದೆಸೆದೆಸೆಯನೀಕ್ಷಿಸುತ ಗಜವನು ।

ಕುಶಲಗತಿಯಲಿ ಕಾಣಿಸುತ । ವಸುಧೆಯೊಳು ನೋಡುವರ ಮನಕಿದು । ಪೊಸತೆನಿಸಿ ತೋರ್ಪಂತೆ ವಿಭವದಿ ॥ ಬಂದಿತಾಗ ॥ ೨ ॥ ಏನನೆಂಬೆನು ಸುರ ಗಜವು ಸು । ವಹ್ನಾನದಿಂದಲಿ ಬರುವುದ । ಭಾನುಕೋಟಿ ಪ್ರಕಾಶದಂದದಿ । ಕಾಣಿಸುತ ನಡೆತರುವುದ । ಧೇನು ಸಹಿತಲಿ ಬೆಂಬಿಡದೆ ಸುರ । ಮಾನಿನಿಯ ರೊಪ್ಪಿಸುವುದ । ನಾನು ತಾನೆಂದೆನುತ ಶರದ ನ । ವೀನ ಪಥದಲಿ ನಡೆದು ಮೆಲ್ಲನೆ ॥ ಬಂದಿತಾಗ ॥ ೩ ॥

### ಪಂತುವರಾಳಿ ರಾಗ - ಏಕತಾಳ

ಮೆಲ್ಲಮೆಲ್ಲಗೆ ಮದಗಜ । ಪಾರ್ಥನಂಬಿನ ಪಥ । ದಲ್ಲಿಯೊಂದು ಕಾಲಿಟ್ಟು ಬಿಡದೆ। ನೋಡಿತು। ಅ । ಲ್ಲಾಡಿತು ॥ ೧ ॥ ಬಾಣಪಂಜರವಿದಕ್ಕೆ। ತ್ರಾಣವು ಸಾಲದುಯೆಂದು । ಕಾಣುತ್ತಲೆ ಕೃಷ್ಣ ಬೆನ್ನ । ನಿತ್ತನು । ಅದ । ಪೊತ್ತನು ॥ ೨ ॥ ಇಂದಿರಾಪತಿಯು ತಾನು । ಭಕ್ತನಾ ಮೇಲೆ ಕರುಣದಿ । ಮುಂದರಾದ್ರಿ ಎತ್ತಿದಂತೆ । ಧರಿಸಿದ । ಶಕ್ತಿ । ಯಿರಿಸಿದ ॥ ೩ ॥ ಹಾದಿವಿಡಿದು ಆನೆ ತಾನು ಮೇದಿನಿಗಿಳಿದು ಬಹುದ । ಚೋದಿಗವೆಂದು ನೋಡುತಿರಲು । ಚಂದವ । ಆ । ನಂದವ ॥ ೪ ॥

### ಪುನ್ನಾಗವರಾಳಿ ರಾಗ - ಅಷ್ಟತಾಳ

ಆನೆ ಬಂತು ನೋಡುವ ಬನ್ನಿ । ಇಂದ್ರನ ವರ ಪಟ್ಟ । ದಾನೆ ಬಂತು ನೋಡುವ ಬನ್ನಿ ॥ ಪ ॥ ಅರ್ಜುನನೆಸಗಿಹ ಅಂಬಿನ ಪಥದಲ್ಲಿ । ಆನೆ ಬಂತು ನೋಡುವ ಬನ್ನಿ ॥ ೧ ॥ ಕಾಮಧೇನುವು ಕಲ್ಪವೃಕ್ಷವು ಸಹಿತಲಿ । ಆನೆ ಬಂತು ನೋಡುವ ಬನ್ನಿ ॥ ೨ ॥ ಪಾರಿಜಾತವು ರಂಭೆಯೂರ್ವಶಿ ಸಹಿತಲಿ । ಆನೆ ಬಂತು ನೋಡುವ ಬನ್ನಿ ॥ ೩ ॥ ಸುಂಡಿಲ ತೂಗುತ್ತಲಡಿಗಡಿಗೊಲೆವುತ್ತ। ಆನೆ ಬಂತು ನೋಡುವ ಬನ್ನಿ ॥ ೪ ॥ ಸಂಭ್ರಮದಿಂದಲಿ ಸ್ವರ್ಗವಿಳಿದು ಬರುವ। ಆನೆ ಬಂತು ನೋಡುವ ಬನ್ನಿ ॥ ೫ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಗಗನಮಾರ್ಗದೊಳಿಳಿವ ಆನೆಯ । ಬಗೆಯನೀಕ್ಷಿಸಿ ಕುಂತಿದೇವಿಯು । ಮಗನ ಪಡೆದುದು ಪುಣ್ಯವೆನುತಲೆ । ಪೊಗಳುತಿಹರು ॥ ೧ ॥ ನಾಕವೇ

ನಡೆದಿಂದು ಈ ಭೂ । ಲೋಕಕಿಳಿಯಿತೊಯೆಂಬ ತೆರದಲಿ । ಪಾಕಶಾಸನ ನಾನೆ ಬಂತು ಪಿ । ವೇಕದಿಂದ ॥ ೨ ॥ ನೋಡಿ ಹರುಷಿತನಾದ ಧರ್ಮಜ । ಮೂಡಿತೆಳೆನಗೆ ಕುಂತಿದೇವಿಗೆ । ಹೇಡಿಸಿದ ತೆರನಾಯ್ತು ಕೌರವ । ರೂಢಿ ಪತಿಗೆ ॥ ೩ ॥ ಅಂಧನೃಪತಿಯ ಸತಿಗೆ ಮತ್ಸರ । ಬಂಧುಗಳಿಗೊಡಲುರಿಯು ತಗಲಿತು । ಮಂದನಾದ ಸುಯೋಧನನು ಬಹು । ಕುಂದಿ ಮನದಿ ॥ ೪ ॥ ವಹಿಲದಿಂದಿಳಿಯಲು ನಗರ ಸ । ನ್ನಿಹದಿ ನಿಲಿಸಿದ ಬಳಿಕಲಾ ದಿನ । ಮಿಹಿರ ನಸ್ತಮಿಸಿದನು ತಾನು । ತ್ನಹದೊಳಂದು ॥ ೫ ॥

### ವಚನ

ಇಂತು ರವಿಯಸ್ತಮಯವಾಗೆ ಎಂದಿನಂತೆ ಸರ್ವರು ಸುಖನಿದ್ರೆಯಂ ಗೆಯ್ಯಲು ಮರುದಿನ ಸೂರ್ಯೋದಯದಲ್ಲಿ ಭೀಷ್ಮಾಚಾರ್ಯರು ಕುಂತೀ ದೇವಿಯನ್ನು ಕರೆದು ಏನೆನ್ನುತಿರ್ದರೆನೆ-

### ಕಾಂಬೋಜಿ ರಾಗ - ಏಕತಾಳ

ವಾರಿಜನೇತ್ರೆ ನೀನಿತ್ತ । ಬಾರೆ ಕುಂತಿದೇವಿ ॥ ಧಾರಿಣಿಗಿಳಿದು ಬಂತಿಂದ್ರ । ನಾನೆ ನೋಡು ಠೀವಿ ॥ ೧ ॥ ಮೂರು ಲೋಕಕ್ಕು ಖ್ಯಾತ । ನಿನ್ನ ಮಗನಾದ । ಕೌರವನವ್ವೆಗಾಯಿತು । ಮುಂದೆ ಮನದಿ ಕ್ರೋಧ ॥ ೨ ॥ ಕರೆಯಲಿಲ್ಲ ನಿನ್ನನೆಂದು ಜರೆವರ್ ಲೋಕವೆಂದು । ಕರೆಯದಿದ್ದರೆ ನಿನ್ನನೂ । ಎಂಬರು ಹೀಗೆಂದು ॥ ೩ ॥ ಹಿರಿಯವಳು ನಿನ್ನಿಂದಾಕೆ । ಬಹಳ ವರುಷಕ್ಕೆ ॥ ಕರಿನೋಹಿಯ ಮಾಡಬೇಕು । ಬಂದು ಇಲ್ಲಿಗಾಕೆ ॥ ೪ ॥ ಹೇಳು ಹೋಗು ನೀನೆ ಅಕ್ಕ । ನೊಳು ಬೇಗ ಕುಂತಿ ॥ ತಾಳಬೇಡಿನ್ನು ಪೂಜೆ । ಮಾಡಬೇಕು ದಂತಿ ॥ ೫ ॥ ಹೇಳಿ ಬಾರದಿದ್ದರೇನು । ಚಿಂತೆಯಿಲ್ಲ ಮುಂದೆ ॥ ಹೇಳಲಿಲ್ಲ ವೆಂಬ ಮಾತ । ಕಳೆಯಬೇಕು ಇಂದೆ ॥ ೬ ॥

### ವಚನ

ಇಂತೆಂದು ಭೀಷ್ಮಾಚಾರ್ಯರು ನುಡಿಯಲಾಗಿ ಆ ಮಾತಿಗೆಲ್ಲರೂ ಒಡಂಬಡುತ್ತಿರಲು ಕುಂತಿದೇವಿಯು ಸಿಂಗಾರವಾದಳದೆಂತೆನೆ-

### ಜಹಜು ರಾಗ - ಅಷ್ಟತಾಳ

ಮುಖಮಜ್ಜನವ ಮಾಡಿ ಮೋರೆಗರಸಿನ ಹಚ್ಚಿ । ಮುಕುರ ಬಿಂಬ ಕಪೋಲೆ ಚಂಪಕ ಮಾಲೆ ॥ ಸಕಲ ಶಾಸ್ತ್ರ ವಿಚಾರೆ ಕರ್ಣಕೊಪ್ಪುವ ಮಾ । ಣಿಕದೋಲೆಯನು ತಾನು ಧರಿಸಿದಳಂದು ॥ ೧ ॥ ಬಣ್ಣದುಟಿಯ ಬಾಲೆ ಬೈತಲೆಯನು ಕಟ್ಟಿ । ಸಣ್ಣ ಮಲ್ಲಿಗೆ ಮಾಲೆ ಮುಡಿದಳಾಗ ॥ ಕಣ್ಣಿಗಂಜನ ಹಚ್ಚಿ ಫಣೆಗೆ ಕುಂಕುಮವಿಟ್ಟು । ಬಣ್ಣದ ಸೀರೆಯ ನೆರಿಪಿಡಿದುಟ್ಟು ॥ ೨ ॥ ಚಂದ್ರನಂತಿಹ ಬೊಟ್ಟು ಚಂದದಿಂದಳವಟ್ಟು । ಗಂಧ ಕಸ್ತೂರಿಯ ಲೇಪಿಸಿದಳು ॥ ಕುಂದಣದೊಡ್ಯಾಣ ಡಾಬು ಸರಪಣಿ ಕಾ । ಲಂದುಗೆಯಿಟ್ಟಳಂಬುಜಪಾಣೆ ॥ ೩ ॥ ಏಕಾವಳಿಯ ಸರ ಪವಳದ ಬಾಲ್ಸರಗಳ । ನೇ ಕಂಠದೊಳು ಜೋಡಿಸಿದಳು ॥ ನಾಕೆಂಟು ಮುತ್ತಿನ ಹಾರ ಸರಿಗೆಯಿಟ್ಟು । ಶ್ರೀಕರದಿಂದ ವೊಪ್ಪಿದಳು ಕುಂತಿ ॥ ೪ ॥ ಕನ್ನಡಿಯನು ನೋಡಿ ಕೈಲಿ ವೀಳ್ಯವ ಪಿಡಿದು । ಸನ್ನಾಹದಿಂದ ದಂಡಿಗೆಯೇರಿ ॥ ಪನ್ನಗವೇಣಿಯೊ ಪರಿಯ ಸೊಬಗಿನಿಂದ । ತನ್ನರಮನೆಯ ಹೊರಟಳು ಕುಂತಿ ॥ ೫ ॥

### ಶಂಕರಾಭರಣ ರಾಗ - ಅಷ್ಟತಾಳ

ಬಂದಳು ಹಸ್ತಿನಾಪುರಕೆ । ಕುಂತಿ । ಗಾಂಧಾರಿಯನು ಕರೆವುದಕೆ ॥ ಅಂದಣವೇರಿದ ಭರಕೆ। ವಾದ್ಯ । ಸಂದಣಿಯಿಂದಲಾ ಪುರಕೆ ॥ ಮನ । ಕುಂದದಾನಂದದಿ। ಚಂದಿರ ಮೊಗದರ। ವಿಂದ ಲೋಚನೆ ಸೊಗ । ಸಿಂದ ಸಂಭ್ರಮದಿಂದ ॥ ಬಂದಳು ॥ ೧ ॥ ಅಂಗಜನಾ ಮದದಾನೆ । ಮೇಲಿ । ಶೃಂಗಾರ ಸೊಬಗಿನ ಸೋನೆ ॥ ಹಿಂಗದೆ ಕೋಕಿಲಗಾನೆ । ಚತು । ರಂಗ ವೇದಗಳ ನಿಧಾನೆ ॥ ಇಂತು । ಹೆಂಗಳ ಮಧ್ಯದಿ । ಕಂಗಳಿಗೆಸೆವುತ್ತ । ಸಂಗಡ ಬಂದಳು । ಮಂಗಳದಬಲೆ ॥ ಬಂದಳು ॥ ೨ ॥ ಈ ರೀತಿಯಲಿ ಕುಂತಿ ಬಂದು । ಗಾಂ । ಧಾರಿಯ ಅರಮನೆಗಂದು ॥ ನಾರಿಯರ್ ತಿಳುಪಲಿಂತೆಂದು । ಬಲು । ಮೋರೆ ತಿರುಹುತಲಪ್ಪುಂದು ॥ ತಂಗಿ । ಬಾರೆ ಮೈಯ್ಯಾರೆ ಗಂ । ಭೀರೆ ಚಂದ್ರನ ಮೊಗ । ದೋರೆಂದು ಸುಬಲಕು । ಮಾರಿಯು ನುಡಿದಳು ॥ ಬಂದಳು ॥ ೩ ॥

### ಶಂಕರಾಭರಣ ರಾಗ - ಏಕತಾಳ

ಬಂದೆಯ ಕುಳ್ಳಿರು ಕಮಲ । ಗಂಧಿ ನಿನ್ನ ಮೊಗದ ಮೇಲೆ। ಚಂದ್ರನ ಪ್ರಕಾಶ ಹೆಚ್ಚಿ । ತಿಂದೇನೆ ಕುಂತಿ॥ ೧ ॥ ಮಂದಗಮನೆ ಅಕ್ಕ ನಿನ್ನ ।

ಕಂಡು ನೆರೆ ಹರುಷವಾಯ್ತು । ಕಂದಿತೇಕೆ ನಿನ್ನ ಮುಖವು । ಯಿಂದು ಗಾಂಧಾರಿ ॥ ೨ ॥ ಎಂದು ಇಲ್ಲದ ಸಂತೋಷ । ಏಂದೇಕೆ ಬಂತೆನ್ನ ನೋಡಿ । ಒಂದು ಮಾತಿಲೊಂದು ಮನಸಿ । ಲೊಂದೇನೆ ಕುಂತಿ ॥ ೩ ॥ ಅಂದಿ ನಾರಭ್ಯ ನಾನಿಂಥ । ದೊಂದನು ಕಲಿತವಳಲ್ಲ । ನೊಂದು ನೀನೇಕೆ ಈ ರೀತಿ। ಯೆಂದೆ ಗಾಂಧಾರಿ ॥ ೪ ॥ ಸಿಟ್ಟೇನೆ ಮೈಯ್ಯುರಿವ ಮಾತಿ । ಗೆಷ್ಟು ನೀ ಮಾತಾಡಿದರೆ । ಎಷ್ಟು ದಿವಸ ನಿನ್ನ ಭಾಗ್ಯ । ವಿದ್ದೀತು ಕುಂತಿ ॥ ೫ ॥ ನಿಷ್ಠೂರ ಬೇಡ ಕಾಣಕ್ಕ । ಹುಟ್ಟು ಬಡವೆ ನಿನ್ನ ಕೂಡೆ । ಕಷ್ಟಕ್ಕೆ ಬಂದವಳಲ್ಲ । ದಿಟ್ಟೆ ಗಾಂಧಾರಿ ॥ ೬ ॥ ಹುಟ್ಟು ಬಡವೆಯಾದರೆ ನೀ । ಸೃಷ್ಟಿಪಾಲರ ಕರೆಸಿದ । ಗುಟ್ಟ ತೆಗೆದು ಪೇಳ್ದರೆ ಮ । ತ್ತೆಷ್ಟುಂಟು ಕುಂತಿ ॥ ೭ ॥ ಸೃಷ್ಟಿಪಾಲರ ಕರೆದುದು । ಕೃಷ್ಣನ ಸಹಾಯ ನೋಡೆ । ಪಟ್ಟದಾನೆ ಸುರಪ ಕಳುಹಿ । ಕೊಟ್ಟ ಗಾಂಧಾರಿ ॥ ೮ ॥ ಮಾನಿನಿ ಹಾಗಾದರಿಂದ್ರ । ನಾನೆಯೇಕೆ ಬಂತು ಧರೆಗೆ । ನೀನಿಂಥ ಮಾತನಾಡುವು । ದೇನೆಲೆ ಕುಂತಿ ॥ ೯ ॥ ನಾನೇನ ಮಾಡಲಿ ಪಾರ್ಥ । ತಾನೆ ಕರಸಿದೋಲೆ ಬರೆದು । ನೀನೆ ಪೂಜೆ ಮಾಡಬಾರ । ದೇನೆ ಗಾಂಧಾರಿ ॥ ೧೦ ॥ ಎನ್ನ ಮೇಲಣ ಪಂಥದಿ । ನಿನ್ನ ಮಗ ತರಿಸಿದಾನೆಯ । ನಿನ್ನು ನಾ ಪೂಜೆ ಮಾಳ್ಪುದು । ಸಮ್ಮತವೆ ಕುಂತಿ ॥ ೧೧ ॥ ನನ್ನ ನಿನ್ನ ಮಕ್ಕಳೆಂಬ । ಭಿನ್ನ ಭೇದಗಳುಂಟೇನೆ । ಇನ್ನಿಂಥ ಮಾತಾಡಬೇಡ । ಪೆನ್ನೊಳ್ ಗಾಂಧಾರಿ ॥ ೧೨ ॥ ಎರವು ಇಲ್ಲದವಳಾದರೆ । ಕರೆಯ ಮರತೆ ನಾ ನಿನಗೆ । ಬರಬಾರದಿತ್ತೆ ಬಾರದ । ಬಗೆಯೇನೆ ಕುಂತಿ ॥ ೧೩ ॥ ತರಳರೊಬ್ಬರಾ ದಿವಸ । ಇರಲಿಲ್ಲವೆಂಬುದರಿಂದ । ಅರಮನೆಯ ಕಾದಿರ್ದೆ ನೀ । ನರಿಯೆ ಗಾಂಧಾರಿ ॥ ೧೪ ॥ ಮಾತ ಕಲಿತ ಜಾಣೆ ಸುಮ್ಮ । ನೇತಕೆ ನಿಷ್ಠೂರವಿನ್ನು । ನೀತಿಯಿಂದ ಹಾಗಾಗಲಿ । ನೀ ತೆರಳೆ ಕುಂತಿ ॥ ೧೫ ॥ ನೀ ತೆರಳಿಬಾರದನಕ । ಏತಕೆ ಪೋಗುವುದು ನಾನು । ನಾ ತಪ್ಪಿದರೆ ಕಾಲ ಹಿಡಿವೆ । ಬಾರೆ ಗಾಂಧಾರಿ ॥ ೧೬ ॥ ಕಾಲ ಹಿಡಿವೆಯಹುದು ನಿನ್ನ । ಬಾಲರಿಗೆಲ್ಲ ಸಂತೋಷ । ಕಾಲ ಬಂತು ಆದರಿಂದ ನೀ । ಹೇಳಿದೆ ಕುಂತಿ ॥ ೧೭ ॥ ಜಾಲಮಾತಿದಲ್ಲ ಶ್ರೀ ಗೋ । ಪಾಲ ಭೀಷ್ಮಾಚಾರ್ಯರ್ ಸಹಿತ । ಹೇಳಿ ಕಳುಹಿದರ್ ದಮ್ಮಯ್ಯ । ಯೇಳೆ ಗಾಂಧಾರಿ ॥ ೧೮ ॥ ದಮ್ಮಯ್ಯ ದಕ್ಕಯ್ಯನೆಂಬ । ಹೆಮ್ಮೆಯ ಮಾತಾಡಬೇಡ । ಸುಮ್ಮನೆ ನೀ ಹೋಗೆ ಮನೆಗೆ । ದಮ್ಮಯ್ಯ ಕುಂತಿ ॥ ೧೯ ॥ ಧರ್ಮಜ ಭೀಮಾರ್ಜುನರು ।

ನಿಮ್ಮ ಬಿಟ್ಟು ಹೋದರೆನಗೆ । ಒಮ್ಮಿಂದೊಮ್ಮೆಗೆ ಬೈವ । ರೆನ್ನ ಗಾಂಧಾರಿ ॥ ೨೦ ॥ ಸಡವ್ವಗಳೆನ್ನೊಡನೆ ಬೇಡ । ನಡೆ ಸುಮ್ಮನೆ ಮನೆಗೆ ಗಾಢ । ಬಡವರು ನಾವೆಮಗೆ ನಿಮ್ಮ । ಗೊಡವೇನೆ ಕುಂತಿ ॥ ೨೧ ॥ ಬಡವರಾದ ರೇನು ವಸ್ತು । ಒಡವೆಗಳಿದ್ದರೆಯೇನು । ಕೊಡವೇಡ ಎಲ್ಲ ಯಾರಿಗು । ಮಡದಿ ಗಾಂಧಾರಿ ॥ ೨೨ ॥ ಕರೆಯ ಬಂದವಳೊ ಯೆನ್ನ । ಜರೆಯ ಬಂದ ವಳೊ ನೀನು । ಮರಿಯಾದೆಯು ನುಳುಹಿಕೊಂಡು । ತೆರಳೆಲೆ ಕುಂತಿ ॥ ೨೩ ॥ ಸರಿಯೆ ನಿನಗಿಂಥ ಮಾತುಗಳು। ಗರುವದಿಂದ ನೀ ದೂರಿಗೆ । ಗುರಿ ಯಾಗಬೇಡ ಕಾಣಕ್ಕ । ಹಿರಿಯ ಗಾಂಧಾರಿ ॥ ೨೪ ॥ ಹೊತ್ತು ಹೋಗದೇನೆ ಮೂಳಿ । ಸುಮ್ಮನೆ ಹೋಗು ನಿವಾಳಿ । ಸತ್ತ ಹಾಗೆ ನಡೆಯೆ ಮನೆಗೆ । ಅತ್ತಲೆ ಕುಂತಿ ॥ ೨೫ ॥ ಸತ್ತವರು ಬರುವರೇನೆ । ನಿನ್ನ ಕರೆವುದಕ್ಕೆ ಬಂದೆ । ಚಿತ್ತ ಮರುಳರಂದದೊಳೇ । ನೆಂಬೆ ಗಾಂಧಾರಿ ॥ ೨೬ ॥ ಗಂಡ ಹೋದ ಮೇಲೆ ಸತಿಯ । ರುಂಡು ಜಗಳವಾಡುವುದು ಭೂ । ಮಂಡಲದೊಳಿಲ್ಲ ನೀತಿ । ಕಂಡೆಯ ಕುಂತಿ ॥ ೨೭ ॥ ಗಂಡ ಕುರುಡನಾದ ಮೇಲೆ । ಹೆಂಡತಿ ಸೊಕ್ಕಿರುವಳು । ತುಂಡು ಸೂಳೆಯರಿಗೆ ಜೋಡು । ದಿಂಡೆ ಗಾಂಧಾರಿ ॥ ೨೮ ॥ ಘಳಿಗೆಗೊಬ್ಬೊಬ್ಬರನೆ ಕರೆದು। ಹಲವು ಮಕ್ಕಳನ್ನೆ ಪಡೆದು। ಇಳೆಗೆ ಇಂದ್ರನಾನೆ ತರಿಸ । ದುಳಿವೆಯು ಕುಂತಿ ॥ ೨೯ ॥ ಮೂರು ಮಂತ್ರದಿಂದಲ ವರು । ಸೇರಿದರಯ್ವರು ಸುತರು । ಕ್ರೂರ ಮಾತನಾಡಬೇಡ । ಧೀರೆ ಗಾಂಧಾರಿ ॥ ೩೦ ॥ ನಳಿನನೇತ್ರನಾಣೆ ನಿನಗೆ । ಮರೆಯ ಬೇಡ ಈ ಮಹಾತಿಗೆ। ಬಳಿಕ ಹೀಗೆಂದಲ್ಲಿಂದ । ಹೊರಟಳು ಕುಂತಿ ॥ ೩೧ ॥

ವಾರ್ಧಿಕ

ಗಾಂಧಾರಿ ಪೇಳ್ದ ನಿಷ್ಠುರದ ವಾಕ್ಯವ ಕೇಳಿ । ಬಂದು ಭೀಷ್ಮಾಚಾರ್ಯ ದ್ರೋಣರಿಂಗೆರಗುತ್ತ । ಲಿಂದ್ರನೈರಾವತವ ಪೂಜಿಸುವ ಬಗೆಗಾಗಿ ಮಂದ ಗಾಮಿನಿ ಬಂದಳು ॥ ಗಂಧ ಕಸ್ತೂರಿ ಕುಂಕುಮ ಧೂಪಗುಗ್ಗುಳರ । ವಿಂದ ಮಲ್ಲಿಗೆ ಜಾಜಿ ಮೊದಲಾದ ಪುಷ್ಪಗಳ । ಸಾಂದ್ರ ಹೇಮದ ಕಲಶಗನ್ನಡಿಯು ಅಕ್ಷತೆಗಳಿಂದ ಸನ್ನಾಹವಾಗಿ ॥

### ದೇಶಿ ರಾಗ - ಏಕತಾಳ

ಬರುತಾಳೆ ಕುಂತೀದೇವಿ ನೋಹಿಗೆಂದಾ । ಲೋಕ । ನೆರೆದು ನೋಡುವ ನಾನಾ ಜನವೃಂದ ॥ ಪರಿವಿಡಿದಿಪ ಸಂಭ್ರಮದಿಂದ । ಧರಣಿಪಾಲರ ಹೊಗ ಳಿಲ್ಲರು ಸುತ್ತುಮುತ್ತಲು। ಇರಲು ಶೋಭಾನದ ವಿಸ್ತರದ ಬೆಡಗಿನಿಂದ॥ ೧ ॥ ಎಡಬಲದಿ ಪೊಗಳುವ ಪಾಠಕರು । ನಪ । ನಡುವೆ ನಾಟ್ಯಕರು । ತಡವಾಯಿ ತೆಂಬ ಬೂಟಕರು ॥ ಹೊಡೆವ ಭೇರಿ ಡಮಾಮಿ ಅಡಿಗಡಿಗೆ ವಾದ್ಯಗಳ । ಪಿಡಿದ ಸತ್ತಿಗೆ ಸಾಲು । ಗಡಣದ ರಭಸದಿ ॥ ೨ ॥ ಎತ್ತನೋಡಿದರು ಕೂಗುವ ಕಹಳೆ । ಸುತ್ತು ಮುತ್ತು ನಗಾರಿ ಆನೆಯ ಮೇಲೆ ॥ । ತ್ತರದಿ - ಚಾಮರವ ಬೀಸುವ ಸೂಳೆಯರು॥ ಮುತ್ತು ಮಾಣಿಕ ನವರತ್ನ ಜಲ್ಲಿಗಳಿಂದ। ವಿಸ್ತಾರದ ಪಲ್ಲಕಿಯ ಹತ್ತಿ ವಿಭವದಿಂದ ॥ ೩ ॥

### ಮಧುಮಾಧವಿ ರಾಗ - ಏಕತಾಳ

ಕೇಳು ಪಾಂಡವ ಕುಲಶಿರೋಮಣಿಯೆ । ಬಾಳ ಸಂಭ್ರಮದಿಂದ ಬಂದಳು ಕುಂತಿದೇವಿ ॥ ಪ ॥ ಸುರನರಲೋಕದವರು ಒಂದಾಗಿ ನಾಲ್ಕು । ಶರಧಿ ಒಟ್ಟಾಗಿ ಮಾತಾಡುವವೊಯೆಂಬ ॥ ಪರಿಮಳಿ ಪಸರಿಸುತ ಮಂದಿ ಸಂದಣಿಗಳು ಎಲ್ಲ । ಪುರದ ಬಾಹ್ಯೆಯಿಂದ ಒಳಗೆ ಬಂದು ಮೆಲ್ಲ ॥ ೧ ॥ ದೇವಲೋಕದಿ ಬಂದ ಸೇವಕಜನರಿಂದ । ದೇವಕಿತನಯನಿಗೆ ವಂದನೆಯ ಮಾಡಿ ದೇವೇಂದ್ರನಾನೆ ಕೃಷ್ಣದೇವಗೆ ಶರಣೆಂದು । ಮಾವುತಕೋವಿದ ಮಂಟಪದ ಬಳಿಗೆ ಬಂದ ವಿನೋದದಿ ॥ ೨ ॥ ಧರಣಿಪಾಲಕರೆಲ್ಲ ಸುರಲೋಕ ದವರಿಗೆ । ಶರಣು ಮಾಡಿದರು ಪಾಂಡವರು ಸಹ ॥ ನೆರೆ ಶಾಸ್ತ್ರವಿಧವನು ಗುರುಮುಖದಿಂದ ಕೇಳಿ । ಪರಿಪರಿ ವಿಧದ ಸೋಪಸ್ಕರವ ತಂದಿಟ್ಟರಾಗ ॥ ೩ ॥

### ವಚನ

ಈ ರೀತಿಯಿಂದ ಸಕಲ ಸನ್ನಾಹವಾಗಿರುವಂಥ ಕುಂತೀದೇವಿಯನ್ನು ಕಂಡು ಅರ್ಜುನನು ಜನನಿಯ ಕರವಂ ಪಿಡಿದು ದೇವಲೋಕದ ವಸ್ತುಗಳನ್ನು ತೋರಿಸುತಿರ್ದನದೆಂತೆನೆ-

### ಸೌರಾಷ್ಟ್ರ ರಾಗ - ಅಷ್ಟತಾಳ

ತಂದೆಯವರ ಲೋಕದಿಂದ ಬಂದಾನೆಯ । ನೋಡೆಯಮ್ಮ । ಇಕೊ । ಕುಂದವೆ ನಿಂದಿಹ ಸುಮನಸ ಸೇನೆಯ । ನೋಡೆಯಮ್ಮ ॥ ೧ ॥ ಕಾಮಧೇನುವು ನಿಂತಿಹುದು ಮುಂದುಗಡೆಯಲ್ಲಿ । ನೋಡೆಯಮ್ಮ । ಒಳ್ಳೆ । ಕಾಮಿತಫಲ ಬೇಡಿದವರಿಗೆ ಕೊಡುವುದು । ನೋಡೆಯಮ್ಮ ॥ ೨ ॥ ಕಲ್ಪವೃಕ್ಷವನು ಕಣ್ಣಾರೆ ಸಂತೋಷದಿ । ನೋಡೆಯಮ್ಮ । ಬ್ರಹ್ಮ । ಕಲ್ಪದ ಪರಿಯುತ ಸ್ವರ್ಗಮೊಳಿರುವುದು । ನೋಡೆಯಮ್ಮ ॥ ೩ ॥ ಪಾರಿಜಾತದ ಹೂವು ಪರಿಮಳಿಸುವುದೀಗ । ನೋಡೆಯಮ್ಮ । ದೇವ । ನಾರಿಯರೆಲ್ಲರು ಕುಳಿತಿರುವುದನೀಗ । ನೋಡೆಯಮ್ಮ ॥ ೪ ॥ ಊರ್ವಶಿ ರಂಭೆ ಮೇನಕೆ ತಿಲೋತ್ತಮೆಯರ । ನೋಡೆಯಮ್ಮ । ದೊಡ್ಡ । ಪರ್ವತಗಳ ಖಂಡಿಸಿರುವಂತ ಕುಲಿಶವ । ನೋಡೆಯಮ್ಮ ॥ ೫ ॥ ದೇವ ಲೋಕದ ಭೇರಿ ವಾದ್ಯ ದುಂದುಭಿಗಳ । ನೋಡೆಯಮ್ಮ । ನಮ್ಮ । ದೇವೇಂದ್ರನವರಿಗೆ ಸೇವೆ ಮಾಡುವರನ್ನು । ನೋಡೆಯಮ್ಮ ॥ ೬ ॥ ಗಾನವ ಪಾಳ್ಪ ಗಂಧರ್ವರ ಪಂಙ್ಕ್ತಿಯ ನೋಡೆಯಮ್ಮ । ಇಗೋ । ನಾನಾ ಸಂಗೀತವ ಪಾಳ್ಪ ಕಿನ್ನರರನು । ನೋಡೆಯಮ್ಮ ॥ ೭ ॥ ಈರಿತೆ ನಾ ಕೊಟ್ಟ ಭಾಷೆ ಸುಳ್ಳಾಗದೆ । ನೋಡೆಯಮ್ಮ । ಈಗ । ಬೇರೆ ಬೇರವರ ಪೂಜಿಸು ಶಾಸ್ತ್ರ ವಿಧಿಯಿಂದ । ನೋಡೆಯಮ್ಮ ॥ ೮ ॥

### ಸಾರಂಗ ರಾಗ - ಏಕತಾಳ

ಮಗನ ಮಾತನು ಕೇಳಿ ಬಳಿಕ ಮುದದಿ ಕುಂತಿ । ನಗುತ ಬಂದಳು ಎಲ್ಲರಿಗೆ ಕಯ್ಯ ಮುಗಿದು ॥ ೧ ॥ ಜಗದೀಶ್ವರನ ತಂತ್ರವೆಂದು ಸಂತೋಷದಿ । ಮೊಗವ ನೋಡಿದಳಾಗ ಶ್ರೀಕೃಷ್ಣ ದೊರೆಯ ॥ ೨ ॥ ಮೊದಲೆರಗಿದಳು ಭೂಪರ ಹೆಂಗಳೊಡನಾಗ । ಪದುಳದಿ ಗಜರಾಜನಿದಿರಲಿ ನಿಂದು ॥ ೩ ॥ ಭೂಮಿದೇವಿಗೆ ಕಯ್ಯ ಮುಗಿದು ಪ್ರಾರ್ಥಿಸಿಕೊಂಡು । ಶ್ರೀಮಹಾಲಕ್ಷ್ಮಿಗೆ ಶರಣೆಂದಳಾಗ ॥ ೪ ॥ ಗಿರಿಜೆಯ ಮನದಲ್ಲಿ ನೆನೆದು ವಿಘ್ನೇಶನ । ಚರಣ ಧ್ಯಾನವ ಮಾಡಿ ಮಾಡಿ ಗುರುವಿಗೊಂದಿಸುತ ॥ ೫ ॥ ಧರಣೀಪಾಲರಿಗೆಲ್ಲ ಶಿರವ ಬಾಗಿದ ಮೇಲೆ । ಕರಿನೋಟಗಪ್ಪಣೆ ಕೇಳಿದಳ್ ಕುಂತಿ ॥ ೬ ॥

ವಾರ್ಧಿಕ

ವರಗಂಧ ಪುಷ್ಪ ಮಲ್ಲಿಗೆ ಜಾಜಿ ತುಲಸಿಯಿಂ । ಪರಮಷಡುರಸದನ್ನ ನೈವೇದ್ಯ ಪೂಜೆ ವಿ । ಸ್ತರವಾದ ಕಡಲೆ ಕಬ್ಬಿನ ಕೋಲು ತೆಂಗು ದಾಳಿಂಬ ಖರ್ಜೂರ ದ್ರಾಕ್ಷೆಯು ॥ ತರಗು ಚಕ್ಕುಲಿ ಬೆಲ್ಲ ಕಜ್ಜಾಯ ಭಕ್ಷ್ಯಗಳು । ಉರಿವುತಿಹ ದೀಪಗುಗ್ಗುಳವು ಮೊದಲಾದ ಪರಿ । ಪರಿಯ ನಾನಾ ವಿಧದ ಲರ್ಚಿಸುವ ವೇಳ್ಯಕ್ಕೆ ಭೂಸುರರು ನಡೆತಂದರು ॥

ಧನ್ಯಾಸಿ ರಾಗ - ಅಷ್ಟತಾಳ

ವಿಪ್ರರು ಬರುತಿರ್ದರಾಗ ಅತಿ । ಕ್ಷಿಪ್ರದಿ ದಕ್ಷಿಣೆಗೆನುತಲೆ ವೇಗ ॥ ವಿಪ್ರರು ॥ ಪ ॥ ಶಿರದೊಳು ಸಕಲಾತಿ ಮಕರಕುಂಡಲವಿಟ್ಟು । ವರ ವ್ಯಾಘ್ರ ಚರ್ಮ ದೇವರ ಪೂಜೆಯು ॥ ಪರಿಪರಿ ಪೆಟ್ಟಿಗೆ ಚೆಂಬು ಕಯ್ಯಲಿ ಕೋಲು । ಸರದ ರುದ್ರಾಕ್ಷಿಯ ಮಾಲೆಯ ಧರಿಸಿ ॥ ವಿಪ್ರರು ॥ ೧ ॥ ಅಡ್ಡ ಗಂಧವನಿಟ್ಟು ದೊಡ್ಡ ಧೋತ್ರವನುಟ್ಟು । ವಡ್ಡರಾಗಿ ಜೋಲುವ ಕಟ್ಟೆಯ ॥ ಅಡ್ಡಕ್ಕೆ ಮುಸುಕಿನ ದೊಡ್ಡ ಕೈಕಾಲಿನ । ಗಡ್ಡದುಪಾಧ್ಯರು ಗಿಡ್ಡುಗಿಡ್ಡಾಗ ॥ ವಿಪ್ರರು ॥ ೨ ॥ ಎಲ್ಲಿ ಮದುವೆಯೂಟ ಎಲ್ಲಿ ಶೋಭನದೂಟ।ವೆಲ್ಲಿ ದೇವರ ಶುಭಕಾರ್ಯವು ॥ ಅಲ್ಲಲ್ಲಿ ಗೆಯ್ಯುತ್ತ ಜಪ್ಪವೆನ್ನುತ ಮೆಲ್ಲ । ಮೆಲ್ಲನೆ ಬ್ರಾಹ್ಮಣರೆಲ್ಲರೊಂದಾಗಿ ॥ ವಿಪ್ರರು ॥ ೩ ॥ ವಡೆ ಪರಮಾನ್ನ ಚಕ್ಕುಲಿ ತೋವೆ ತುಪ್ಪದ । ಎಡೆಮಾಡಿ ಬಡಿಸಿದರುಂಬುವಂತೆ ॥ ವಡವೆ ವಸ್ತುಗಳ ಕೊಟ್ಟರೆ ಹೊರುವುದಕೆಲ್ಲ । ಮಡದಿ ಮಕ್ಕಳು ಚಿಳ್ಳೆಪಿಳ್ಳೆಯು ಸಹವಾಗಿ ॥ ವಿಪ್ರರು ॥ ೪ ॥ ಎಷ್ಟುವು ಗಜನೋಹಿ ದಕ್ಷಣೆ ಉಂದಿಯೊ । ಚೆಪ್ಪು ಧರ್ಮಜ ಮಹಾ ಮಂಚವಾಡು ॥ ಪಪ್ಪುವ್ರೇದಿರಾ ರಾ ವಚ್ಚೆನುಮೆಂದೆನು । ತಿಪ್ಪಂತೆ ತೆಲುಗರು ತಪ್ಪದೆ ಭರದಿ ॥ ವಿಪ್ರರು ॥ ೫ ॥ ಪಾಂಡವಾಂಚ ಕರನೋಹಿ ಕರಿಕಾಹಿ । ಯಿಂತೊ ಸು ಸುಬ್ಬ ಭಟ್ಟ ಕೊಂಟುಂಗೆಲೊ ॥ ತಂಡುಲಾಯೆ ಬಾಯಿ ಬಕರಿಕ ರಾಗವೆ । ತುಂಡಲೆಸು ನಹಿ ಕೊಗೊಯೆಂಬ ಮಹರಾಷ್ಟ್ರ ॥ ವಿಪ್ರರು ॥ ೬ ॥ ಧೋತ್ರಗೆತ್ತೊಣು ಮಾಣಿ ದೇವೆರುಳೆನ್ ಮಾಂತ । ಪಾಕ್ರೊಟು ಜಂಜೋಲ ಶುದ್ಧೊಂಟುಲ । ಶಾಸ್ತ್ರ ನಿಂಕ್ ಜಾಯೆಗ್ ಮಂಲ್ಲ ಪತ್ರದ ಏನ್ । ಮುಕ್ತಿತ್ತಾಯೆ ಎಂಬ ಮತೆಲ್ತೊಬ್ಬ

ತುಳುವ ॥ ವಿಪ್ರರು ॥ ೭ ॥ ಎವುಡೆನ್ನ ವರಿನಾಡ ಎಂಜಪ್ರೋಯಿ ಪೇಶಿನೋ ಹಿಂಡು । ಇನ್ನೊರು ಘೋಶತ್ತುಡೆ ॥ ಕುಂಞಕ್ಕುವರಿಲ್ಲ ಸರ್ವಾಣೆ ಕೊಡು । ಕುಂನಡಾಯೆಂಬ ಮಲಯಾಳ ವಿಪ್ರರು ॥ ವಿಪ್ರರು ॥ ೮ ॥

### ಭೈರವಿ ರಾಗ - ತ್ರಿವುಡೆತಾಳ

ಏನ ಬಣ್ಣಿಸುವೆ ನಾನು । ಪೂಜಿಸುವಲ್ಲಿ । ನಾನಾ ದೇಶದ ಭೂಸುರರು ನಡೆತರುವುದ ॥ ಏನ ॥ ಪ ॥ ಬಂದ ಭೂಸುರಜನ ವೃಂದವನಿದಿರ್ಗೊಂಡು । ಕುಂದಣ ವರಪೀಠದಲ್ಲಿ ಕುಳ್ಳಿರಿಸಿ ॥ ಗಂಧ ಕಸ್ತೂರಿಯನಿತ್ತು । ಆಭರಣ । ಒಂದೊಂದ ತೊಡಿಸಿಯೆ ಮತ್ತು । ದಂಪತಿಗಳ ಚಂದದಿ ಪೂಜಿಸಿ ವಾಯನ ವಿತ್ತು ಆ ಹೊತ್ತು ॥ ೧ ॥ ಅಜ ನಾರಾಯಣ ಪರಶಿವರಿಗೆಯೆರಗುತ್ತ । ಗಜರಾಜನಿದಿರು ನಿಂದಳು ಕುಂತಿ ತಲೆವಾಗಿ ॥ ಭಜಿಸಿ ಅಕ್ಷತೆಯನಿಟ್ಟು । ಶಾಸ್ತ್ರವಿಧದಿ । ನಿಜವನು ತಿಳಿದು ಗುಟ್ಟು । ಕೌಮಾರಿಯೆ । ತ್ರಿಜಗವಂದಿತೆ ಸಲಹೆನುತಲೆ ಪೊಡಮಟ್ಟು ॥ ೨ ॥ ಆ ಮೇಲೆ ನಡೆತಂದು ಕಾಮಧೇನುವ ಕಂಡು । ಕಾಮಿತಫಲಗಳ ಕೊಡುವ । ಕಲ್ಪವೃಕ್ಷವ ನೇಮದಿಂದಲಿ ನೋಡುತ ॥ ಇಷ್ಟಗಳನ್ನು । ಸಾಮದಿಂದಲೆ ಬೇಡುತ । ಸ್ವರ್ಗದೊಳಿರ್ದ । ಆ ಮಹಾಕೋವಿದ ವಸ್ತುಗಳ ಪೂಜೆ ಮಾಡುತ್ತ ॥ ೩ ॥

### ವಾರ್ಧಿಕ

ಏಸು ನಾಂ ಬಣ್ಣಿಸುವೆ ಕುಂತಿ ದೇವಿಯ ಮಹೋ । ಲ್ಲಾಸ ಸೌಭಾಗ್ಯವತಿ ಸಂಭ್ರಮದ ಸಂತೋಷ । ವಾ ಸಮಯದಲ್ಲಿ ಬ್ರಹ್ಮಾಂಡ ವೊಡೆವಂತೆ ಬಹುಘೋಷಗಳು ಮೊಳಗುತಿರಲು ॥ ಶೇಷಮಲಸಿರೆ ಕೂರ್ಮ ನೆದೆಗೆಟ್ಟನಷ್ಟ ಗಜ । ಬೇಸತ್ತು ಮಹಮೇರುವಲ್ಲಾಡೆ ಕೈಲಾಸ । ವೋಸರ ದೊಳದುರುತಿರೆ ಪಾಂಡವರ ಮೇಲೆ ಪೂಮಳೆಗರೆದರಂದು ಸುರರು ॥

### ಧವಳಾರ ರಾಗ - ಏಕತಾಳ

ನೂತನವಾದ ಮಂಟಪದಿ । ಶ್ವೇತಗಜವು ನಿಂದಿರಲು । ಭೂತ ಳಾಧೀಶರ ಸತಿಯರು ಕೂಡಿ । ಪ್ರೀತಿಯಿಂದಲೆ ಶೋಭನವ ಪಾಡಿ ॥

ಜಾತಿ ಮಾಣಿಕದೋಲೆ ಕರ್ಣದೊಳಿಸೆಯಲು । ನೂತನ ದಾರತಿಯ ಬೆಳಗಿರೆ ॥ ಶೋಭಾನೆ ॥ ೧ ॥ ಶ್ರೀಕರವಾದ ಮಂಟಪದಿ । ಆ ಕಾಮಧೇನು ನಿಂತಿರಲು । ಭೂಕಾಂತರ ತರುಣಿಯರೆಲ್ಲ ಕೂಡಿ । ಬೇಕಾದಂತ ಶೋಭನವ ಪಾಡಿ । ಏಕಾವಳಿ ಸರಕೊರಳೊಳಗೆಸೆಯಲು । ಕೋಕನದಾರತಿಯ ಬೆಳಗಿರೆ ॥ ಶೋಭಾನೆ ॥ ೨ ॥ ದೇವ ನೀಲ ಮಂಟಪದಿ । ದೇವತಾವೃಕ್ಷ ನಿಂದಿರಲು । ಭೂವರರುಗಳ ಹೆಂಗಳನೊಡಗೂಡಿ । ಸಾವಧಾನದಲಿ ಶೋಭನವ ಪಾಡಿ ॥ ನೇವಳ ನಡುವಿನೊಳೆಸೆಯಲು ಹರುಷದಿ । ಭಾವೆಯ ರಾರತಿಯ ಬೆಳಗಿರೆ ॥ ಶೋಭಾನೆ ॥ ೩ ॥ ಚಾರು ಮಾಣಿಕ್ಯ ಮಂಟಪದಿ । ಪಾರಿಜಾತವು ನಿಂದಿರಲು । ಧಾರಿಣಿಪತಿ ಸತಿಯರನೊಡಗೂಡಿ । ಬೇರೆ ಬೇರೆ ಶೋಭನವ ಪಾಡಿ ॥ ಹಾರದ ತೊಡರನು ಬೆರಸಿ ತೊಡರುತಲೆ । ಮೇರುವೆಯಾರತಿಯ ಬೆಳಗಿರೆ॥ ಶೋಭಾನೆ ॥ ೪ ॥ ದಿವಿಜ ವಸ್ತುಗಳು ನಿಂತಿರಲು । ದಿವಿಜ ಭುವನೇಶರ ವಧೂನಿನಿಯರು ಕೂಡಿ । ಬಹುವಿಧದಿಂದ ಶೋಭನವ ಪಾಡಿ ॥ ಯುವತಿಯರೆಲ್ಲರು ಪಾರ್ಥನ ಪೊಗಳುತ । ಹವಳದಾರತಿಯ ಬೆಳಗಿರೆ ॥ ಶೋಭಾನೆ ॥ ೫ ॥

### ವಾರ್ಧಿಕ

ಅರಸ ಕೇಳಾ ಮೇಲೆ ಕಾಮಧೇನುವ ಸ್ತುತಿಸಿ । ಪರಿಪರಿಯ ಭಕ್ಷ್ಯ ಭೋಜ್ಯಂಗಳಂ ಕೊಡೆ ಸುರಭಿ । ಸುರನಿವಹಮಂ ತೃಪ್ತಿಬಡಿಸಿ ಸುರಪುರದಿಂದ ಬಂದವರಿಗೌತಣವನು ॥ ಹರಿಗೆ ನೈವೇದ್ಯ ಊಟದ ರಚನೆಗಳನು ಗಂಧರುವರಿಗೆ ಸಿದ್ಧಚಾರಣರಿಗೆ ಫಲಾಹಾರ । ಪರಮಾಮೃತವ ಸಕಲ ಜನರುಂಡು ದಣಿದ ಮೇಲೆ ಭೂರಿದಕ್ಷಿಣೆ ಕೊಟ್ಟರು ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಕೇಳಿದ್ಯೆ ರಾಜೇಂದ್ರ ಭೀಷ್ಮಾ । ಚಾರ್ಯ ಧರ್ಮಜ ದ್ರೋಣ ವಿದುರರು । ಸಾಲಿನಲಿ ಹೇರಿದರು ಹಣ ಭಂ । ಡಾರದಿಂದ ॥ ೧ ॥ ಭಂಡಿಗಳ ಗಾಲಿಗಳು ಕಳಚಿತು । ಹಿಂಡು ಒಂಟೆಯ ಬೆನ್ನು ತಗ್ಗಿತು । ಪಿಂಡಿ ವಸ್ತ್ರಗಳನ್ನು ನೋಹಿಗೆ । ಕೊಂಡು ಬಂದು ॥ ೨ ॥ ದಂತಿಯರಸನ ಮುಂದೆ ಭೂಸುರ । ತಿಂಥಿಣಿಯು ಕರೆಕರೆದು ಪೂಜಿಸಿ । ನಿಂತುಕೊಂಡೇ ದಾನವಿತ್ತಳು।

ಕುಂತಿದೇವಿ ॥ ೩ ॥ ವಸ್ತ್ರಗಳ ಕೊಡುವಾತ ಭೀಷ್ಮನು । ವಸ್ತುಗಳ ಬಹು ವಿದುರ ಕೊಡುವ ಸು । ದತ್ತಗಳ ಮಾಡುವನು ಗ್ರಾಮವ । ಧರ್ಮರಾಯ ॥ ೪ ॥ ಮಾಣಿಕದ ಹರಳುಗಳ ಬುಧರಿಗೆ । ಕಾಣಿಕೆಯ ಮಾಡಿದ ಧನಂಜಯ। ದ್ರೋಣನೀಲವನಿತ್ತ ವಿಬುಧರ । ಶ್ರೇಣಿಗೊಲಿದು ॥ ೫ ॥ ಮುತ್ತುಗಳ ಸಹದೇವ ವಿಪ್ರರಿ । ಗೆತ್ತಿ ಕೊಡುವನು ನಕುಲ ವಜ್ರವ । ಮತ್ತೆ ಮಾರುತಿ ಗೋವ್ರ ದಾನವ । ನಿತ್ತನಂದು ॥ ೬ ॥ ಸಹದೇವ ವಿಪ್ರರಿ । ಗೆತ್ತಿ ಕೊಡು ವನು ನಕುಲ ವಜ್ರವ । ಮತ್ತೆ ಮಾರುತಿ ಗೋವ್ರ ದಾನವ । ನಿತ್ತನಂದು ॥ ೬ ॥ ಇತ್ತು ದಣಿಯರು ಪಾಂಡವರು ಧನ ಪೊತ್ತು ದಣಿದರು ಭೂಸುರರು ಬಹು । ಅರ್ತಿಯಾಯಿತು ಗಜದ ಸೋಹಿಯ ವರ್ತಮಾನ ॥ ೭ ॥

ವಾರ್ಧಿಕ

ದಣಿಸಿದರು ಭೂಸುರರ ದಾನಗಳ ಕೊಟ್ಟು ಸಾ । ಕೆನಿಸಿದರು ವಜ್ರ ವೈಡೂರ್ಯ ನವರತ್ನಗಳ । ನುಣಿಸಿದರು ಮಿಗೆ ಪಂಚಭಕ್ಷ್ಯ ಪರಮಾನ್ನದಿಂ ಬಹುಜನರ ತೃಪ್ತಿಗೊಳಿಸಿ ॥ ಕುಣಿಸಿದರು ಹರ್ಷಾಮೃತದ ಕಡಲೊಳಾಡಿ ಮ । ತ್ತುಣಬಡಿಸಿದರು ರಾಯ ರಾಯರಿಂಗುಡುಗೊರೆಯ । ದಣಿವಂತೆ ಕೊಡಿಸಿದರು ಗಜಸೋಹಿಯಂ ಕೃಷ್ಣನಿಗೆ ಸಮರ್ಪಣೆಗೆಯ್ದರು ॥

ಮಧುಮಾಧವಿ ರಾಗ - ಏಕತಾಳ

ಈ ರೀತಿಯಿಂದ ಸೋಹಿಯ ಮಾಡಿ ಕಡೆಗೆ । ಕೇರಿಕೇರಿಯೊಳು ಮೆರೆಸುತಡಿಗಡಿಗೆ ॥ ಸಾರಿ ಪಾರ್ಥನು ಕುಂತಿದೇವಿಗೆ ನಮಿಸಿ । ತೀರಿತು ನಾ ಕೊಟ್ಟ ಭಾಷೆ ಸಂತೈಸಿ ॥ ೧ ॥ ಧಾರಿಣಿ ಪತಿಗಳು ಪಾರ್ಥನ ಕರೆದು । ಮೂರು ಲೋಕದ ಗಂಡ ಇದು ನಿನ್ನ ಬಿರುದು ॥ ಬಾರಿಬಾರಿಗೆ ಧೀರನಹು ದೆಂದರೊರೆದು । ಕೌರವಾದ್ಯರು ಮತ್ಸರಿಸಿದರು ಹಿರಿದು ॥ ೨ ॥ ಆ ಮಹಾ ಸುರಲೋಕದಿಂದ ಬಂದವರು । ಭೂಮಿಯೊಳಿದ್ದ ಸಕಲ ಭೂಪಾಲಕರು ॥ ಕ್ಷೇಮದೊಳಿರಿಯೆಂದು ಎಲ್ಲರ ಪರಸಿ । ಆ ಮೇಲೆ ಸ್ವರ್ಗಕ್ಕೆ ಎಲ್ಲರು ಗಮಿಸಿ ॥ ೩ ॥ ಸೀಮೆಸೀಮೆಯ ಭೂಪರೆಲ್ಲರೊಂದಾಗಿ । ಕಾಮಜನಕ ನಪ್ಪಣೆಯಿಂದ ಸಾಗಿ ॥ ೪ ॥ ಹೋದರಾ ಮೇಲೆ ಆ ಕ್ಷಣದಿ ಪಾಂಡವರು । ಶ್ರೀಧರ ಸಹಿತ ಅರಮನೆಗೆ ತೆರಳಿದರು ॥ ೫ ॥ ಯಾದವ ಶರಣೆಂದು ಮಾಡಿ ಸಂಸ್ತುತಿಯ । ಪಾದಕೆತ್ತಿದರಾಗ ಮಂಗಳಾರತಿಯ ॥ ೬ ॥

### ಮುಖಾರಿ ರಾಗ - ಝಂಪೆತಾಳ

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ಪ॥ ನೀಲ ಮೇಘಾಂಗನಿಗೆ ನಿಜ ಚರಣಸಂಗನಿಗೆ। ಕಾಲಭಯನಾಶನಿಗೆ ಕಮಲಾಕ್ಷಗೆ॥ ಬಾಲಾರ್ಕಚಂದ್ರಾಗ್ನಿ ಬಹುಕೋಟಿ ತೇಜನಿಗೆ। ಮೂಲೋಕ ವಂದ್ಯನಿಗೆ ಮುರವೈರಿಗೆ ॥ ಮಂಗಳಂ ॥ ೧ ॥ ಕಾಮಪಿತನಾದವಗೆ ಕಡು ಚೆಲ್ವ ಮಾಧವಗೆ। ಸಾಮಗಾನ ವಿಲೋಲ ಸರ್ವೇಶಗೆ ॥ ವಾಮನಾಕಾರನಿಗೆ ವಸುದೇವ ಪುತ್ರನಿಗೆ । ಶ್ರೀ ಮಹಾ ಗೋವಿಂದ ಗೋಪಾಲಗೆ ॥ ಮಂಗಳಂ ॥ ೨ ॥ ಕರುಣಾಲವಾಲನಿಗೆ ಕಂಜದಳ ನೇತ್ರನಿಗೆ ॥ ಪರಮಪಾವನಿಗೆ ಪಂಕಜನಾಭಗೆ ॥ ಧರೆಯೊಳತ್ಯಧಿಕವಾಗಿಹ ಕಣ್ವಪುರದೊಳಗೆ । ಸ್ಥಿರದಿ ನೆಲಸಿರುವ ಗೋಪಾಲಕೃಷ್ಣನಿಗೆ ॥ ಮಂಗಳಂ ॥ ೩ ॥

### ವಾರ್ಧಿಕ

ಹರಿಯ ಕಳುಹಿಸಿ ದ್ವಾರಕಾಪುರಕೆ ಪಾಂಡವರು। ಅರಮನೆಯೊಳಿದ್ದರು ಅನೇಕ ದಿನ ಸಾಮ್ರಾಜ್ಯ । ಕರವಾಗಿ ಸುಖಶರಧಿಯೊಳ್ ಮುಳುಗು ತನುದಿನಂ ವೃದ್ಧಿ ಚಂದ್ರಮನಂದದಿ ॥ ನೆರೆ ಜಾಣ ಜನಮೇಜಯ ಕ್ಷಿತಿಪ ಕೇಳು ಈ। ಪರಿಯಲ್ಲೈರಾವತ ಕಥಾವೃತವಿದೀಗಲೆಂ। ದೊರೆದ ವೈಶಂಪಾಯ ಮುನಿಯಿದರ ಕೇಳ್ಪರಿಗೆ ಕಣ್ವಪುರಿ ಕೃಷ್ಣನೊಲಿವ ॥ ೧ ॥ ಅರಿಯೆ ಲಕ್ಷಣ ಕಂದ ಪದ್ಯವಡಿಪ್ರಾಸು ಅ । ಕ್ಷರ ಗಣಂಗಳು ರಾಗ ತಾಳ ಮುಂತಾಗಿ ಗೋ। ಚರವಿಲ್ಲ ಶಾಸ್ತ್ರಗಳ ಕಂಡರಿಯೆ ಕವಿತೆಯೊಳ್ ವಿನೋದನಾಗೆ ತಿಳಿಯದು । ಜರೆಯಲಾಗದು ಬಲ್ಲವರು ತಪ್ಪುಗಳ ಕಳೆದು । ನೆರೆ ತಿದ್ದಿಕೊಂಡಿದನು ಹೇಳಿ ಕೇಳುವ ಸಜ್ಜ । ನರಿಗೊಲಿವ ಕಣ್ವಪುರದೊಡೆಯ ಶ್ರೀಕೃಷ್ಣ ಕೈವಿಡಿದೀವ ಸೌಭಾಗ್ಯವ ॥ ೨ ॥

# ಸಭಾಲಕ್ಷಣ

## ಚೌಕಿ ಪೂಜೆ

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಗಜಮುಖದವಗೆ ಗಣಪಗೆ । ಚೆಲ್ವ । ತ್ರಿಜಗವಂದಿತಗಾರತಿ ಯೆತ್ತಿರೆ ॥ ಗಜಮುಖದವಗೆ ॥ ಪಲ್ಲ ॥ ಒಳ್ಳಿತಾದಪಲು ತೆಂಗಿನ ಕಾಯಿ ಕಡಲೆಯ । ಎಳ್ಳುಂಡಲಿಗೆ ಕಬ್ಬು ಮೆಲುವವಗೆ ॥ ಬೆಳ್ಳಿಯ ಹುರಿಗೆಜ್ಜೆಗಳ ಕಟ್ಟಿ ಕುಣಿವಂಥ । ಡೊಳ್ಳಿನ ಗಣಪತಿಗಾರತಿಯೆತ್ತಿರೆ ॥ ಗಜ ॥ ೧ ॥ ದೇವತೆಗಳ ಕಯ್ಯ ಕಪ್ಪವ ಕೊಂಬಗೆ । ದಾವಾಗ್ನಿಯಂದದಿ ನಲಿವವಗೆ ॥ ಆವಗಂ ಮನದಲ್ಲಿ ನೆನೆವರಿಷ್ಟಾರ್ಥವ । ನೀವ ಗಣೇಶಗಾರತಿಯೆತ್ತಿರೆ ॥ ಗಜ ॥ ೨ ॥

### ಮಟ್ಟೆತಾಳ

ಕರದೊಳು ಪರಶು ಪಾಶಾಂಕುಶಧಾರಗೆ । ಹರುಷದಿ ಭಕ್ತರ ಪೊರೆವವಗೆ ॥ ಉರಗ ಭೂಷಣನ ಕುವರಾರ ಗಜವದನನ । ಚರಣ ಕಮಲಕೆ ಆರತಿಯೆತ್ತಿರೆ ॥ ಗಜ ॥ ೩ ॥ (ಮಂಗಳಾರತಿಯ ನಂತರ, ಆರತಿಯನ್ನು ತಂದು ಹಿಮ್ಮೇಳಗಳಿಗೆ ಪ್ರಸಾದ ಮುಟ್ಟಿಸಿ, ಎಲ್ಲರಿಗೂ ಕೊಟ್ಟು, ಪ್ರಾರ್ಥನಾನಂತರ - ವೀಳ್ಯ ಪಡಕೊಂಡು - ಕೋಡಂಗಿ ದೀವಟಿಗೆ ಸಹಿತ - ಹಿಮ್ಮೇಳದವರೊಡನೆ ರಂಗಪ್ರವೇಶ - ರಂಗಸ್ಥಳ ಪೀಠಿಕೆ - ಕೋಡಂಗಿ ಕುಣಿತ)

## ಗಣಪತಿ ಸ್ತುತಿ

### ನಾಟಿರಾಗ - ಝಂಪೆತಾಳ

ಮುದದಿಂದ ನಿನ್ನ ಕೊಂಡಾಡುವೆನು ಅನವರತ । ಮದವೂರ ವಿಘ್ನೇಶ ಪಾಹಿ ಜಗದೀಶ ॥ ಮುದದಿಂದ ॥ ಪ ॥ ಪರಬ್ರಹ್ಮರೂಪ ವೇದಾಂತ ಸಾರಪ್ರಿಯ । ಪುರುಹೂತ ನಮಿತ ದಿವ್ಯಾಂಘ್ರಿ ಕಮಲ ॥ ಗಿರಿಜಾತೆಯಣುಗ ಆದಿತ್ಯಕೋಟಿ ಪ್ರಕಾಶ । ಕರಿವದನ ಕರುಣಾ ಸಮುದ್ರ ಭವ ಛಿದ್ರ ॥

ಮುದದಿಂದ ॥ ೧ ॥ ಭರದಿಂದ ರಕ್ಕಸರ ಪುರವ ಸಾಧ್ಯವ ಮಾಡಿ । ಪರ ಮೊದಲು ನಿನ್ನನರ್ಚಿಸಿ ಮೆಚ್ಚಿಸಿ ॥ ಹರಿ ವಿರಿಂಚಿಗಳೆಲ್ಲ ಜಯ ಜಯಾ ಜಯವೆನಲು । ವರವಿತ್ತು ಮೆರೆದೆ ಗಣನಾಥ ವಿಖ್ಯಾತ ॥ ಮುದದಿಂದ ॥ ೨ ॥ ಅರರೆ ನಿನ್ನಯ ಮಹಿಮೆಯನು ಪೊಗಳಲಳವಲ್ಲ । ಧರಣಿಯನು ಪೊತ್ತಿರ್ದ ಮಹಾಶೇಷಗರಿದು ॥ ಹರನ ಸುಕುಮಾರ ಸಕಲಾಗಮಕ್ಕೆ ಸಾಕಾರ । ಧರೆಯೊಳು ವಿಶೇಷ ಮದಪೂರ ವಿಘ್ನೇಶ ॥ ೩ ॥

### ಮಧ್ಯಮಾವತಿ ರಾಗ - ತ್ರಿವುಡೆತಾಳ

ಶರಣು ತಿರುವಗ್ರುಶಾಲಿ ವಾಹಿನಿ । ಶರಣು ಶ್ಯಾಮಳ ರೂಪಿಣಿ ॥ ಶರಣು ಶಂಕರಿ ಗೌರಿ ಪಾರ್ವತಿ ॥ ಶರಣು ಭಳಿರನ್ನ ಪೂರಿಣಿ ॥ ಶರಣು ಶರಣು ॥ ೧ ॥ ಚಂದ್ರವದನೆ ಸುಧಾಂಶು ಶೇಖರಿ । ಶಕ್ತಿ ರೂಪೇ ಮಂಗಲೇ ॥ ಮಂತ್ರ ರೂಪಿಣಿ ಕನಕ ಭೂಷಿಣಿ । ಶಾಲಿನೀ ಗುಣಶೀಲೆ ನೀ ॥ ಶರಣು ಶರಣು ॥ ೨ ॥ ಲೋಕ ನಾಯಕಿ ಏಕ ರೂಪಿಣಿ । ಓದುಪೋಂಕಾರ ಭಾಷಿಣೀ ॥ ನಾಗ ರಾಜಕುಮಾರಿ ಭೈರವಿ । ಪಾಲಿನೀಯನ್ನ ಪೂರಿಣೀ ॥ ಶರಣು ಶರಣು ॥ ೩ ॥ ಸಿಂಹವಾಹಿನಿ ಮಹಿಷಮರ್ದಿನಿ । ದೇವರಡಿ ಪರಿಪಾಲಿನಿ ॥ ಪಂಕಜಾಕ್ಷಿಣಿಯ ಖಿಳ ಗುಣಪರಿ । ಪಾಲಿನೀ ಪದ್ಮಧಾರಿಣಿ ॥ ಶರಣು ಶರಣು ॥ ೪ ॥ ಪಂಕಜಮುಖಿ ಪರಮಪಾವನೆ । ಶಂಖಚಕ್ರ ಗದಾಧರಿ ॥ ಶಂಕರ ಪ್ರಿಯೆ ದೇವಿ ತವ ಪದ । ಪಂಕರುಹಕೆ ನಮೊ ನಮೊ ॥ ಶರಣು ಶರಣು ॥ ೫ ॥

### ಶ್ಲೋಕ

ಮುಖತೋ ಪೂರ್ಣ ಚಂದ್ರಶ್ಚ ನೇತ್ರೇ ಪದ್ಮದಳಾ ಕೃತೀ ।
ಕೋಟಿ ಸೂರ್ಯ ಪ್ರಕಾಶೇಣ ಸಭಾ ಸರ್ವಾಂಗ ವಂದನಂ ॥

(ಧಿತ್ತ)

### ಶಾರ್ದೂಲ ವಿಕ್ರೀಡಿತ

ಸರ್ವಾಶಾ ಪರಿಪೂರಣ ಕ್ಷಮಕರಂ ಸರ್ವೋಪಕಾರೋದಯಂ ।
ಸನ್ಮಾರ್ಗಾಭಿರತಂ ಸಮಸ್ತ ತಮಸಃ ಪ್ರಧ್ವಂಸಿ ಸತ್ಯಾಸ್ಪದಂ ॥

ಬ್ರಹ್ಮಾವಾಸಮಶೇಷವೇದನಿಲಯಂ ವಿದ್ಯಾಧರಾರಾಧಿತಂ ।
ಪ್ರತ್ಯಕ್ಷಂ ಭುವಿ ಭಾನು ಬಿಂಬ ಸದೃಶಂ ವಂದೇ ಸಭಾಮಂಡಲಂ ॥

(೧೩)

### ಆರಭಿ ರಾಗ - ತ್ರಿವುಡೆತಾಳ

ನಿಗಮ ಗೋಚರ ನಿತ್ಯ ನೀರಜಲೋಚನ । ಖಗವಾಹನ ಗಂಧರ್ವ ಗಾನ ವಿಲೋಲ ॥ ಭೃಗು ವಸಿಷ್ಠ ವಾಲ್ಮೀಕಿ ಭೂಸುರ ಸೇವಿತ । ಅಗಣಿತ ಗುಣ ಶ್ರೀರಘುರಾಮ ॥ ೧ ॥ ದಶರಥ ನಂದನ ದನುಜ ಸಂಹಾರಣ । ಶಶಿಧರ ಗುಹನುತ ವರದ ಶ್ರೀ ರಘುರಾಮ ಹರೇ ॥ ಖರದೂಷಣ ತ್ರಿಶಿರ ಕಳೇವರ ಖಂಡನ । ವರ ಮುನಿಸ್ತುತಿ ಪ್ರಿಯ ವಾಸವಾರ್ಚಿತ ರಾಮ ಹರೇ ॥ ೨ ॥ ಶರಣಾಗತ ಹಲ್ಯಾ ಶಾಪ ವಿಮೋಚನ । ಧರಣಿ ದಾನವ ಕುಲಹರಣ ಶ್ರೀ ರಘುರಾಮ ಹರೇ ॥ ವಿಬುಧ ವಂದಿತ ಪಾದ ವಿನುತ ಪಾಪವಿದೂರ । ಸದನ ನಿಚಯ ದಿವ್ಯ ಸಾಧು ಸಜ್ಜನ ಪಾಲ ॥ ೩ ॥ ಸದಮಲ ಸಮರ ಪ್ರಸಂಗ ಸಂಗರ ಶೂರ । ಮದನ ಜನಕ ಕೈವಲ್ಯದ ಶ್ರೀ ರಘುರಾಮ ಹರೇ ॥ ೪ ॥

### ಷಂವರ್ಧಿನೀ

ಧರೆಯೆಲ್ಲವು ನಿನ್ನುದರದೊಳಿರುತಿರೆ । ಸಿರಿಯೊಂಬಳು ನಿನ್ನ ಚರಣವ ನರಿಯಳು ॥ ಶರಣಾಗತ ರಕ್ಷಾಮಣಿ ನರಹರಿ । ಗಗನವೆಲ್ಲವು ನಿನ್ನ ನಾಭಿ ॥ ೧ ॥ ನೀಲವೇಣಿ ನಿಭ ರುಕ್ಮಿಣಿ ವಿಠಲ । ಬಾಲಕರೊಡನಾಹ ಬಾಲ ಗೋಪಾಲಕ ॥ ಬಾಲತನದಿ ಗೋವಳರೊಡನಾಡಿದ । ಗಗನವೆಲ್ಲವು ನಿನ್ನ ನಾಭಿ ॥ ೨ ॥ ಅನುಪಮ ಗುಣನಿಧಿಯುನ್ನತ ಕೀರುತಿ । ಮುನಿಗಣ ಸನ್ನುತ ಖಗಪತಿ ವಾಹನ ॥ ಘನತರ ಗದುಗಿನ ವೀರನಾರಾಯಣ । ಗಗನ ವೆಲ್ಲವು ನಿನ್ನ ನಾಭಿ ॥ ೩ ॥

( ಪ್ರಥಮ ಭಾಗ ಮುಗಿಯಿತು. )

# ಸಭಾಲಕ್ಷಣ

### ಶಾರ್ದೂಲವಿಕ್ರೀಡಿತಂ

ಸತ್ಕಾಚಾರ ಸಭಾ ಗುಣೋಜ್ವಲ ಸಭಾ ಸದ್ಧರ್ಮಕೀರ್ತೇಃ ಸಭಾ ।
ವೇದಾಲಂಕೃತ ಶಾಸ್ತ್ರ ಪೂರಿತಸಭಾ ವಿಖ್ಯಾತ ವೀರಾ ಸಭಾ ॥
ರಾಜದ್ರಾಜಕುಮಾರ ಶೋಭಿತಸಭಾ ರಾಜ ಪ್ರಕಾಂತಿಃ ಸಭಾ ।
ಸಂಗೀತಾದಿ ಸತ್ಸಭಾ ಕವಿಸಭಾ ಸಾಮ್ರಾಜ್ಯಲಕ್ಷ್ಮೀಸಭಾ ॥

### ಶ್ಲೋಕ

ಸಭಾ ಕಲ್ಪತರುಂ ವಂದೇ ಋಜ್ಯುಮೂಲಂ ಸಾಮಶಾಖಿನಂ ।
ಷಡಂಗ ಕುಸುಮ ಶ್ವೇತಂ ತತ್ವಜ್ಞಾನ ಫಲೋದಯಂ ॥

### ಮಹಾಸ್ರಗ್ಧರಾ

ವರಭಾವಜ್ಞಂ ಕೃತಜ್ಞಂ ರಸಿಕನುತಗುಣಂ ಸರ್ವಭಾಷಾಪ್ರವೀಣಂ ।
ಸ್ಥಿರಧೈರ್ಯಂ ಖ್ಯಾತಶೌರ್ಯಂ ಸ್ಮಿತವಚನಹಿತಂ ಕೀರ್ತಿಕಾಂತಾಸಮೇತಂ ॥
ಸ್ಮರರೂಪಂ ಮುಕ್ತ ಕೋಪಂ ವಿಮಲಗುಣಗಣಂ ಸತ್ಯಧರ್ಮಂ ಸುಶೀಲಂ
ವರಕಾರುಣ್ಯಂ ಶರಣ್ಯಂ ಬುಧಜನಕುಮುದಾನಂದ ಚಂದ್ರಂ ಸಭೇಂದ್ರಂ ॥

### ಶ್ಲೋಕ

ರಾಜಾನಃ ಪೃಥ್ವಿರೂಪೇಣ ಪ್ರಧಾನಾಃ ಕಲ್ಪ ರೂಪಿಣಃ ।
ಪರಿವಾರಃ ಕಾಮಧೇನುಃ ಯಥಾ ರಾಜಾ ತಥಾ ಪ್ರಜಾಃ ॥ ೧ ॥

ವಿದ್ವಾಂಸಃ ಕವಯೋ ಭಟ್ಟಾ ಗಾಯಕಾಃ ಪರಿಹಾಸಕಾಃ ।
ಇತಿಹಾಸೀ ಪುರಾಣೇಕಃ ಸಭಾ ಸಪ್ತಾಂಗಲಕ್ಷಣಂ ॥ ೨ ॥

ವಾಮಭಾಗೇ ಮೃದಂಗೀಚ ದಕ್ಷಿಣೇ ತಾಲಧಾರಿಕಾ ।
ತನ್ಮಧ್ಯೇ ಗೀತಗಾಯಂತೀ ತತ್ಪಾರ್ಶ್ವೇ ಶ್ರುತಿಪಾಠಕಃ ॥ ೧ ॥

ಸಮ್ಮುಖೇ ನರ್ತಕಶ್ಚೈವ ತದ್ವಾಮೇ ಪರಿಹಾಸಕಾಃ ।
ನಾಟ್ಯಾದಿ ಪರಿಪೂರ್ಣಂ ಚ ಶೋಭಿತಂ ರಂಗಮಂಟಪಂ ॥ ೨ ॥

## ಸಭಾಲಕ್ಷಣ

ಪಂಚಹಸ್ತೇನ ವಿಸ್ತೀರ್ಣಂ ದಶಹಸ್ತೇನ ಉನ್ನತಂ ।
ಅರ್ಧಚಂದ್ರ ಪ್ರಮಾಣೇನತಿಷ್ಠತೇ ರಂಗಮಂಟಪಂ ॥ ೩ ॥

## ಭಾಗವತರ ಲಕ್ಷಣಗಳು

ಭಕಾರೋ ಭಕ್ತಿ ಪೂರ್ವೇಣ ಗಕಾರೋ ಗರ್ವವರ್ಜಿತಃ ।
ವಕಾರೋ ವಾಕ್ಯ ಸಂಪನ್ನಃ ತಕಾರಸ್ತತ್ವನಿರ್ಣಯಃ ॥ ೧ ॥
ಪೂರ್ವೋತ್ತರಮುಖಶ್ಚೈವ ದಿವಾರಾತ್ರೌ ಪ್ರಕೀರ್ತಿತಃ ।
ಪಶ್ಚಿಮಾಭಿಮುಖೋ ರಾತ್ರೌ ದಕ್ಷಿಣೇ ನ ಕದಾಚನ ॥ ೨ ॥
ಪಂಚದಂಡ ಪ್ರಮಾಣಂ ತು ನರ್ತನ ಸ್ಥಾನಮೇವ ಚ ।
ಏವಂ ಲಕ್ಷಣ ಸಂಯುಕ್ತೇ ಸಭಾಮಧ್ಯೇ ಹರಿಂ ಸ್ಮರೇತ್ ॥ ೩ ॥

## ಶ್ಲೋಕ

ವಾಣೀ ಗಣಪತಿರ್ಗೌರೀ ಬ್ರಹ್ಮಾ ವಿಷ್ಣುರ್ಮಹೇಶ್ವರಃ ।
ಅಂತರಿಕ್ಷಂ ಕ್ಷಿತಿರ್ಲಕ್ಷ್ಮೀರಿಷ್ಟಾದಿ ಗುರುದೇವತಾಃ ॥ ೧ ॥
ವಿಶ್ವಾಮಿತ್ರೋ ವಸಿಷ್ಠಶ್ಚ ಶುಕಕಣ್ವಪರಾಶರಾಃ ।
ಅಗಸ್ತ್ಯೋ ಗೌತಮಶ್ಚೇತಿ ದೇವರ್ಷೀಣಾಂ ಹಿ ವಂದನಂ ॥ ೨ ॥

## ತಾಳಲಕ್ಷಣಗಳು

ತಕಾರಸ್ತಾಂಡವಃ ಪ್ರೋಕ್ತಃ ಳಕಾರ ಶಕ್ತಿದೇವತಾ ।
ಶಿವಶಕ್ತಿ ಸಮುದ್ಭೂತ ವಿಲಾಸಶ್ಚಾತ್ರ ಉಚ್ಯತೇ ॥ ೧ ॥
ಅಂಬರಂ ಕುಂಭಿನೀ ದೇವೀ ತಾಳವೃತ್ತಂ ಚ ಯುಗ್ಮಕಂ ।
ಉಭಯೋರ್ಯೋಗರೂಪೇಣ ತಾಳಸೂತ್ರಂ ಚ ವಾಸುಕಿಃ ॥ ೨ ॥
ಅಸ್ಯೈವ ಪುಟಕೇ ತಾಳೇ ದರ್ಪಣಃ ಕೋಕಿಲ ಪ್ರಭಾ ।
ಅಭಂಗ ಮುದ್ರಿಕಾ ಚೈವ ಷಡ್ಯೈತೇ ಶಿವನಂದನಾಃ ॥ ೩ ॥
ತಾಳ ಮೂಲೇ ಸ್ಥಿತೋ ಬ್ರಹ್ಮಾ ತಾಳಮಧ್ಯೇ ಜನಾರ್ದನಃ ।
ತಾಳಾಗ್ರೇ ಚ ಮಹಾರುದ್ರಃ ಸದಾ ಮೂರ್ತಿತ್ರಯೋಷಿತಂ ॥ ೪ ॥

ಧ್ರುವೋ ಮಠ್ಯಂ ರೂಪಕಂ ಚ ಝುಂಪಾ ತ್ರಿಪುಟ ಏವಚ ।
ಅಟತಾಳೈಕತಾಳೀ ಚ ಸಪ್ತತಾಳಾಃ ಪ್ರಕೀರ್ತಿತಾಃ ॥ ೫ ॥

ಭಾನುವಾರೇ ಪುಷ್ಯಋಕ್ಷೇ ಧ್ರುವತಾಳ ಸಮುದ್ಭವಃ ।
ಶ್ವೇತವರ್ಣಾ ವಿಶಾಲಾಕ್ಷೀ ಹೀರಮಾಲಾಭಿ ಶೋಭಿತಾ ॥ ೬ ॥

ಶುಭ್ರವಸ್ತ್ರಧರಶ್ಚೈವ ಶಾಂಡಿಲ್ಯಶ್ಚ ಋಷಿಃ ಸ್ವಯಾಂ ।
ಛಂದೋಽನುಷ್ಟುಬ್ಭವೇದತ್ರ ತಥಾ ಬ್ರಹ್ಮಾದಿ ದೇವತಾಃ ॥ ೭ ॥

ಜಂಬೂದ್ವೀಪನಿವಾಸಶ್ಚ ಧ್ರುವತಾಳಾಂಗ ಸಂಜ್ಞಕಃ ।
ಲಘುದ್ರುತಲಘುದ್ವಂದ್ವಂ ಧ್ರುವತಾಳಸ್ಯ ಲಕ್ಷಣಾಂ ॥ ೮ ॥

ಸೋಮವಾರೇ ಹಸ್ತಋಕ್ಷೇ ಮಠ್ಯತಾಳ ಸಮುದ್ಭವಃ ।
ಶ್ಯಾಮವರ್ಣೋ ಮಹಾಕಾಯಃ ನಾನಾಭರಣ ಭೂಷಿತಃ ॥ ೯ ॥

ರಕ್ತಗಂಧಸ್ತ್ರಿಷ್ಟುಪ್ ಛಂದಃ ಕೌಮಾರೀ ಅಧಿದೇವತಾ ।
ರಕ್ತವಸ್ತ್ರಧರಶ್ಚೈವ ವಿಶ್ವಾಮಿತ್ರ ಋಷಿಃ ಸ್ವಯಂ ॥ ೧೦ ॥

ಪ್ಲಕ್ಷ ದ್ವೀಪನಿವಾಸಶ್ಚ ಮಠ್ಯತಾಳಸ್ಯ ಲಕ್ಷಣಂ ।
ಲಘುದ್ರುತ ಸರಳಾಂಗಂ ಚತುರಶ್ರಃ ಪ್ರಕೀರ್ತಿತಃ ॥ ೧೧ ॥

ಕುಜವಾರೇ ಮೃಗೇ ಋಕ್ಷೇ ರೂಪಕಸ್ಯ ಸಮುದ್ಭವಃ ।
ಪೀತವರ್ಣಃ ಕೋಮಲಾಂಗೋ ನಾನಾ ಭರಣ ಭೂಷಿತಃ ॥ ೧೨ ॥

ಪೀತವಸ್ತ್ರಧರಶ್ಚೈವ ಅಂಬಿಕಾ ಅಧಿದೇವತಾ ।
ಸ್ವಯಂ ಋಷಿರ್ಗೌತಮಃ ಸ್ಯಾತ್ ಕುಶದ್ವೀಪನಿವಾಸಕಃ ॥ ೧೩ ॥

ದ್ರುತಮೇಕಂ ಲಘು ಹ್ಯೇಕಂ ಶೃಣು ಅಂಗಾನಿ ಶಂಕರಿ ।
ದಶಪ್ರಾಣಾತ್ಮಕಂ ತಾಳಂ ರೂಪಕಸ್ಯ ಪ್ರಕೀರ್ತಿತವ್ ॥ ೧೪ ॥

ಬುಧವಾರೇ ಪೂರ್ವಋಕ್ಷೇ ಝುಂಪತಾಳ ಸಮುದ್ಭವಃ ।
ಚಿತ್ರವರ್ಣವರಾಂಗಶ್ಚ ಸ್ವರ್ಣಾಭರಣ ಭೂಷಿತಃ ॥ ೧೫ ॥

ಚಿತ್ರವಸ್ತ್ರಧರಶ್ಚೈವ ಜಮದಗ್ನಿ ಋಷಿಃ ಸ್ವಯಂ ।
ಕ್ರೌಂಚ ದ್ವೀಪನಿವಾಸಶ್ಚ ಮಹೇಶ್ವರ್ಯಧಿ ದೇವತಾ ॥ ೧೬ ॥

ಲಘುವಾಸದ್ರುತಂ ಬಿಂದು ರಂಗಲಕ್ಷಣಮಿತ್ಯಪಿ ।
ದಶಪ್ರಾಣಾತ್ಮಕಂ ತಾಳಂ ಝಂಪತಾಳಃ ಪ್ರಕೀರ್ತಿತಃ ॥ ೧೭ ॥
ಗುರುವಾರೇ ರುದ್ರಋಕ್ಷೇ ತ್ರಿಪ್ರುಟತಾಳ ಸಮುದ್ಭವಃ ।
ಪೀತ ವರ್ಣಶ್ಚ ಶ್ರೇಷ್ಠಾಂಗೀ ನಾನಾಭರಣ ಭೂಷಿತಃ ॥ ೧೮ ॥
ಪೀತವಸ್ತ್ರಧರಶ್ಚೈವ ರವಳಾ ಈಶ್ವರಿ ದೇವತಾ ।
ಭರದ್ವಾಜ ಋಷಿಶ್ಚೈವ ಶಾಲ್ಮಲೀ ದ್ವೀಪವಾಸಕಃ ॥ ೧೯ ॥
ಲಘುರೇಕಃ ದ್ರುತ ದ್ವಂದ್ವಂ ತಾಳ ತ್ರಿಪ್ರುಟಲಕ್ಷಣಂ ।
ಅಯಂ ಲೋಕಹಿತಾರ್ಥಾಯ ಭರತಾದ್ಯೈಃ ಪ್ರಯುಜ್ಯತೇ ॥ ೨೦ ॥
ಭೃಗುವಾರೇಽಶ್ವಿನೀ ಋಕ್ಷೇ ಅಟತಾಳ ಸಮುದ್ಭವಃ ।
ಧರ್ಮವರ್ಣಃ ಕೋಮಲಾಂಗಃ ಮುಕ್ತಾಭರಣ ಭೂಷಿತಃ ॥ ೨೧ ॥
ಅಸ್ಯಪ್ರಧಾನಕಶ್ಚೈವ ವಿಕೃತಿಃ ಶುದ್ಧರೂಪಿಣೀ ।
ಮೃಡಾನ್ಯಧಿಪತಿರ್ದೇವಃ ಪೀತಾಂಬರಧರಸ್ತಥಾ ॥ ೨೨ ॥
ಅಯಂ ಕಾಕದ್ವೀಪವಾಸೀ ಕಶ್ಯಪಶ್ಚ ಋಷಿಃ ಸ್ವಯಂ ।
ಲಘುದ್ವಂದ್ವಂ ದ್ರುತದ್ವಂದ್ವಂ ಅಟತಾಳಃ ಪ್ರಕೀರ್ತಿತ ॥ ೨೩ ॥
ಶನಿವಾರೇ ಸ್ವಾತಿಋಕ್ಷೇ ಏಕತಾಳ ಸಮುದ್ಭವಃ ।
ನೀಲವರ್ಣೋ ರಕ್ತನೇತ್ರಃ ರತ್ನಮಾಲಾಭಿ ಶೋಭಿತಃ ॥ ೨೪ ॥
ಪೀತಾಂಬರಧರಶ್ಚೈವ ಏಕೇಶಾ ಚ ಸರಸ್ವತೀ ।
ಸ ಪುಷ್ಕರ ದ್ವೀಪವಾಸೀ ವಸಿಷ್ಠಶ್ಚ ಋಷಿಃ ಸ್ವಯಂ ॥ ೨೫ ॥
ಏಕತಾಳೋ ಲಘುಶ್ಚೈವ ತಾಳಜ್ಞಾನ ವಿನೋದಿನೀ ।
ಇತ್ಯೇತತ್ ಸಪ್ತತಾಳಾಂಗ ಪೂರ್ವಾಣೇ ಶಾಸ್ತ್ರ ಸಮ್ಮತಂ ॥ ೨೬ ॥

## ಮೃದಂಗ ಲಕ್ಷಣಗಳು

ಮೃದಂಗೋ ರೂಕ್ಷಕಾಂಗಶ್ಚ ವರ್ತುಲಾಕಾರ ಉನ್ನತಃ ।
ಸೂರ್ಯ ಚಂದ್ರಾಕೃತೇ ಚರ್ಮದ್ವಿಭಾಗೇ ಮಧ್ಯಕೇ ದೃಶಾ ॥ ೧ ॥
ಪುರುಷಾರ್ಧ ಪ್ರಮಾಣೇನ ಕರ್ಣಕುಂಡಲ ಶೋಭಿತಃ ।
ಮಣಿಹಸ್ತೇ ಸುವಿಸ್ತೀರ್ಣಂ ಬತ್ತೀ ಸಾಲಯ ರಂಜಿತಃ ॥ ೨ ॥

ಮೃಕಾರಶ್ಚ ಮಹಾಲಕ್ಷ್ಮೀಃ ದಕಾರೋ ಶಾರದಾಂಬಿಕಾ ।
ಗಕಾರಃ ಪಾರ್ವತೀ ದೇವೀ ಮೃದಂಗೇ ನಾಮ ದೇವತಾಃ ॥ ೩ ॥

ಶ್ರುತಿ ಲಕ್ಷಣಗಳು

ಸಪ್ತ ಮಾತ್ರಾನು ರೂಪಾ ಸ್ಯಾದ್ದ್ವಾದಶಾಂಗುಲ ಮುನ್ನತಾ ।
ಮೃದುಂಗೇ ಸ್ವರ ಸಂಯುಕ್ತಾ ಶ್ರುತೇರ್ಲಕ್ಷಣ ಮೇವಚ ॥ ೧ ॥
ಶ್ರುತಿ ಕಾಲ ಪ್ರಮಾಣೇನ ಸ್ವರಜ್ಞಾನಂ ತಥೈವ ಚ ।
ಶಿಶು ಸ್ವರೂಪಕಂ ಚೈವ ಕುಲಾಂಕಃ ಶ್ರುತಿ ಪಾರಗಾಃ ॥ ೨ ॥

ಮೇಳ ಲಕ್ಷಣ

ಅಷ್ಟಾಂಗುಲಯುತಂ ತಾಳಂ ದ್ವಾದಶಾಂಗುಲ ಮದ್ದಲಂ ।
ಷಡಂಗುಲಂ ಚ ತಂಬೂರು ಖಿಗವಸ್ತು ದ್ವಯಾಂಗುಲಂ ॥ ೧ ॥
ನರ್ತಕೋ ನಾಟ್ಯಕಾರಶ್ಚ ಮದ್ದಲಂ ಶ್ರುತಿ ಹಾಸ್ಯಕೇ ।
ಗಾಯಕಶ್ಚ ಷಡಂಗಾನಿ ಇತ್ಯೇತನ್ಮೇಳ ಲಕ್ಷಣಂ ॥ ೨ ॥

ಹಾಸ್ಯಗಾರನ ಲಕ್ಷಣ

ಸಭಾನಾಯಕ ಭಾವಜ್ಞಃ ಸರ್ವಭಾಷಾಸು ಕೋವಿದಃ ।
ಮಾನಸಶ್ರವಣಾನಂದಃ ಮೈತ್ರಜ್ಞಃ ಪರಿಹಾಸಕಃ ॥

ನವರಸಾಲಂಕಾರಗಳು

ಶೃಂಗಾರ ವೀರ ಕರುಣಾ ಅದ್ಭುತಃ ಶಾಂತ ಹಾಸ್ಯಕೌ ।
ಭಯಾನಕಶ್ಚ ಬೀಭತ್ಸೋ ರೌದ್ರೋ ನವರಸಸ್ತಥಾ ॥

ಚತುರ್ವಿಧ ಗುಣಚಾತುರ್ಯಗಳು

ದಯಾಪರೋ ದಾನಪರೋ ಧರ್ಮಚಾರೀ ಪರೋಪಕೃತ್ ।
ಚತುರ್ಗುಣೈಶ್ಚ ಸಂಪೂರ್ಣಃ ತೇನತೇನ ವಿರಾಜಿತಃ ॥

ಶ್ಲೋಕ

ಕಾಯಾತೀತಂ ವಚೋಽತೀತಂ ಮನೋಽತೀತಂ ನಿರಂಜನಂ ।
ಸರ್ವಶೂನ್ಯಂ ನಿರಾಕಾರಂ ನಿಶ್ಶಬ್ದಂ ಬ್ರಹ್ಮ ಚೋಚ್ಯತೇ ॥

### ನರ್ತಕಲಕ್ಷಣಗಳು

ಯಥಾ ಹಸ್ತಸ್ತಥಾ ದೃಷ್ಟಿಃ ಯಥಾ ದೃಷ್ಟಿಸ್ತಥಾ ಮನಃ ।
ಯಥಾ ಮನಸ್ತಥಾ ಭಾವ ಇತ್ಯೇತನ್ನಾಟ್ಯ ಲಕ್ಷಣಂ ॥

### ಶ್ಲೋಕ

ದುರ್ಲಭೋ ಮಾನುಷೋ ದೇಹೋ ದೇಹಂ ಚ ಕ್ಷಣಭಂಗುರಂ ।
ತತ್ರಾಪಿ ದುರ್ಲಭಂ ಮನ್ಯೇ ವೈಕುಂಠ ಪುರದರ್ಶನಂ ॥ ೧ ॥
ವಿಷ್ಣೋರ್ಗಾನಂ ಚ ಗೀತಂ ಚ ನಟನಂ ಚ ವಿಶೇಷತಃ ।
ಬ್ರಹ್ಮ ಬ್ರಾಹ್ಮಣಜಾತೀನ ಕರ್ತವ್ಯಂ ನಿತ್ಯಕರ್ಮವತ್ ॥ ೨ ॥
ಕಾಲಕ್ಷೇಪೋ ನ ಕರ್ತವ್ಯಃ ಕ್ಷೀಣ ಮಾಯುರ್ದಿನೇ ದಿನೇ ।
ಕೃತಾಂತಸ್ಯ ಕೃಪಾ ನಾಸ್ತಿ ಕರ್ತವ್ಯಂ ಹರಿಕೀರ್ತನಂ ॥ ೩ ॥

### ಮಾರವಿ ರಾಗ - ಏಕತಾಳ

ರಾಮಭದ್ರಾ ಗೋವಿಂದಾ । ಹರೇ ರಮಣಾ ಗೋವಿಂದಾ ॥ ಅಚ್ಯುತಾನಂತ ಗೋವಿಂದ । ಹರೇ ರಾಮಕೃಷ್ಣ ಗೋವಿಂದ । ಹತ್ತವತಾರ ಗೋವಿಂದ । ಮತ್ಸ್ಯೊ ಮತ್ಸ್ಯೊ ಗೋವಿಂದ ॥

### ಶಾರ್ದೂಲವಿಕ್ರೀಡಿತಂ

ಆದೌ ದೇವಕಿ ದೇವಿ ಗರ್ಭಜನನಂ ಗೋಪೀಗೃಹೇ ವರ್ಧನಂ ।
ಮಾಯಾಪೂತನಿಜೀವಿತಾಪಹರಣಂ ಗೋವರ್ಧನೋದ್ಧಾರಣಂ ॥
ಕಂಸಚ್ಛೇದನ ಕೌರವಾದಿಹರಣಂ ಕುಂತೀ ಸುತಪಾಲನಂ ।
ಏತದ್ಭಾಗವತ ಪುರಾಣ ಪುಣ್ಯಕಥನಂ ಶ್ರೀಕೃಷ್ಣಲೀಲಾಮೃತಂ ॥

### (ಬಾಲಗೋಪಾಲರ ಪ್ರವೇಶ)

ಹರೇ ರಮಣಾ ಗೋವಿಂದಾ । ನಾರಾಯಣ ಕೇಶವ ಮಾಧವ ಕೃಷ್ಣ ಮುಕುಂದ ಮುರಾರೇ ॥

### ಶಾರ್ದೂಲವಿಕ್ರೀಡಿತಂ

ಹೇ ಗೋಪಾಲಕ ಹೇ ಕೃಪಾಜಲನಿಧೇ ಹೇ ಸಿಂಧುಕನ್ಯಾಪತೇ ।
ಹೇ ಕಂಸಾಂತಕ ಹೇ ಗಜೇಂದ್ರ ಕರುಣಾಪಾರೀಣ ಹೇ ಮಾಧವ ॥

ಹೇ ರಾಮಹಾನುಜ ಹೇ ಜಗತ್ತ್ರಯ ಗುರೋ ಹೇ ಪುಂಡರೀಕಾಕ್ಷ ಮಾಂ ।
ಹೇ ಗೋಪೀ ಜನನಾಥ ಪಾಲಯ ಪದಂ ಧ್ಯಾಯಾಮಿ ಚಿತ್ತೇ ಸದಾ ॥

### ಶ್ಲೋಕ

ವಿಷ್ಣುಶಕ್ತಿ ಸಮುದ್ಭೂತೇ ಶಂಖ ವರ್ಣಮಹೀತಲೇ ।
ಅನೇಕ ರತ್ನ ಸಂಭೂತೇ ಭೂಮಿದೇವಿ ನಮೋಽಸ್ತು ತೇ ॥ ೧ ॥

ಭೂತೇಶ ಕೇಶಪಾಶಾಯ ಸೂರ್ಯೇಂದುಸುರವಾಹನ ।
ಭಾಗೀರಥೀ ಸ್ವಲಂಕಾರ ಆಕಾಶಾಯ ನಮೋ ನಮಃ ॥ ೨ ॥

ಮತ್ಸ್ಯಕೂರ್ಮವರಾಹಾಶ್ಚ ನಾರಸಿಂಹಶ್ಚ ವಾಮನಃ ।
ಭಾರ್ಗವೋ ರಾಮಕೃಷ್ಣ ಚ ಬುದ್ಧ ಕಲ್ಕೀ ದಶಾಕೃತಿಃ ॥ ೩ ॥

ನಾರಾಯಣ ಜಗನ್ನಾಥ ಶಂಖ ಚಕ್ರ ಗದಾಧರ ।
ಲಕ್ಷ್ಮೀಕಾಂತ ಜಗನ್ಮೋಹ ಮುಕುಂದ ಗರುಡಧ್ವಜ ॥ ೪ ॥

ಇಂದ್ರಾನಲ್ ಯಮಶ್ಚೈವ ನಿರ್ಋತಿರ್ವರುಣಸ್ತಥಾ ।
ವಾಯುಶ್ಚೈವ ಕುಬೇರಶ್ಚ ಈಶಾಶ್ಚೈಷಾಂ ಹಿ ವಂದನಂ ॥ ೫ ॥

### ಕೇದಾರಗೌಳ ರಾಗ - ಏಕತಾಳ

ಹರಿ ನಾರಾಯಣ ಗೋವಿಂದಾ । ಅಚ್ಯುತಾನಂತ ಗೋವಿಂದಾ ॥ ಮತ್ಸ್ಯವತಾರಾ ಗೋವಿಂದಾ । ಕೂರ್ಮಸ್ವರೂಪ ಗೋವಿಂದ ॥ ೧ ॥ ಕ್ರೋಡಾಕಾರಾ ಗೋವಿಂದ । ನರಹರಿ ವಾಮನ ಗೋವಿಂದ । ಅನಂತ ಮಹಿಮ ಗೋವಿಂದ । ಭಾರ್ಗವರಾಮ ಗೋವಿಂದ ॥ ೨ ॥ ದಶರಥ ನಂದನ ಗೋವಿಂದ । ವಸುದೇವಾತ್ಮಜ ಗೋವಿಂದ । ಬೌದ್ಧವತಾರ ಗೋವಿಂದ । ಕಲ್ಕಿ ಸ್ವರೂಪ ಗೋವಿಂದ ॥ ೩ ॥

### ಕಾಂಬೋಜಿ ರಾಗ - ಅದಿತಾಳ

ಕೇಶವ ಮಾಧವ ಮಧುಸೂದನ । ರಾಮ । ದಶರಥನಂದನ ದನುಜಾರಿ ॥ ೧ ॥ ಕಣ್ಣಿನ ದಣಿಯೆ ನಾ ನೋಡುವೆ । ಕಾಯಿ । ಹಣ್ಣು ಹೂವಿಲಿ ಪೂಜೆ ಮಾಡುವೆ ॥ ೨ ॥ ಸೃಷ್ಟಿಗೊಡೆಯನೆಂದು ಕೊಂಡಾಡುವೆ । ನಾನಿ । ನ್ನಿಷ್ಟವೆಂದು ಭಿನ್ನಪವ ಮಾಡುವೆ ॥ ೩ ॥ ಇಷ್ಟಾರ್ಥ ವರಗಳ ಬೇಡುವೆ ।

ನಾನು । ಸಾಷ್ಟಾಂಗವಂದನೆಯ ಮಾಡುವೆ ॥ ೪ ॥ ಅನುದಿನವು ನಿನ್ನಂಘ್ರಿ ಯುಗವನ್ನು । ನಾನು । ಮನದೊಳು ಬಿಡದೆ ನೆನೆವೆನು ॥ ೫ ॥ ಅಂಗನೆ ಮಣಿಪೋಗಿ ಕರೆತಾರೆಲೆ । ಮಹ । ಲಿಂಗನೆಡೆಗೆ ಪೋಗಿ ಬರಹೇಳೆ ॥ ೬ ॥ ಅನವರತವು ಪಾಲಿಸೆನ್ನನು । ದೇವ ಚಿನುಮಯಾತ್ಮಕ ಸರ್ವೋತ್ತಮ ನೀನು ॥ ೭ ॥ ಗಿರಿಜೆ ಶ್ರೀ ಮಹಾಲಕ್ಷ್ಮೀ ಪ್ರಾಣೇಶ । ನಿನ್ನ । ಚರಣ ನಂಬಿದೆನು ಪಾಲಿಸು ಲೇಸ ॥ ೮ ॥ ವರಕ್ರೀಡನಗರದಿ ಸ್ಥಿರವಾಸ । ಶ್ರೀ ಶಂ । ಕರ ನಾರಾಯಣ ದೇವ ಜಗದೀಶ ॥ ೯ ॥ ಕಿಡ್ತಕ್ ಧಾಂ ಧಾಂ ಧಾಂ । ದಿಕತಕ ಧಾಂ ಧಾಂ ಧ ಥೈ । ಕಿಡ್ತಕ್ ಧಾಂ ಧಾಂ ಧಾಂ । ದಿಕಿತಕ ಧಾಂ ಧಾಂ ಧ ಥೈ ॥ ೧೦ ॥

(ಚೌಕಿಯಿಂದ ಗಣಪತಿಯನ್ನು ತರುವುದು)

### ಶಾರ್ದೂಲ ವಿಕ್ರೀಡಿತಂ

ವಿಘ್ನಧ್ವಾಂತ ನಿವಾರಣೈಕ ತರಣಿರ್ವಿಘ್ನಾಟವೀ ಹವ್ಯವಾಟ್ ।
ವಿಘ್ನವ್ಯಾಲ ಕುಲಾಭಿಮಾನ ಗರುಡೋ ವಿಘ್ನೇಭ ಪಂಚಾನನಃ ॥
ವಿಘ್ನೋತ್ತುಂಗ ಗಿರಿ ಪ್ರಭೇದನಪವಿಃ ವಿಘ್ನಾಬ್ಧಿ ಕುಂಭೋದ್ಭವಃ ।
ವಿಘ್ನೌಘಾಭ್ರ ಕುಲ ಪ್ರಚಂಡ ಪವನೋ ವಿಘ್ನೇಶ್ವರಃ ಪಾತುಮಾಂ ॥

### ಸೌರಾಷ್ಟ್ರ ರಾಗ - ತ್ರಿವುಡೆತಾಳ

ಗಜಮುಖದವಗೆ ಗಣಪನೆ ॥ ಚೆಲ್ವ । ತ್ರಿಜಗವಂದಿತನಿಗಾರತಿ ಯೆತ್ತಿರೆ । ಗಜಮುಖದವಗೆ ॥ ಪಲ್ಲ ॥ ಒಳ್ಳಿತಾದವಲು ತೆಂಗಿನ ಕಾಯಿ ಕಡಲೆಯ । ಎಳ್ಳುಂಡಲಿಗೆ ಕಬ್ಬು ಮೆಲುವವಗೆ ॥ ಬೆಳ್ಳಿಯ ಹುರಿಗೆಜ್ಜೆಗಳ ಕಟ್ಟಿ ಕುಣಿವಂಥ । ಡೊಳ್ಳಿನ ಗಣಪತಿಗಾರತಿಯೆತ್ತಿರೆ ॥ ಗಜ ॥ ೧ ॥ ದೇವತೆಗಳ ಕಯ್ಯ ಕಪ್ಪವ ಕೊಂಬಗೆ । ದಾವಾಗ್ನಿಯಂದದಿ ನಲಿವವಗೆ । ಆವಗಂ ಮನದಲ್ಲಿ ನೆನೆವರಿಷ್ಟಾರ್ಥವ । ನೀವ ಗಣೇಶಗಾರತಿಯೆತ್ತಿರೆ ॥ ಗಜ ॥ ೨ ॥

### ಮಟ್ಟೆತಾಳ

ಕರದೊಳು ಪರಶು ಪಾಶಾಂಕುಶಧಾರಗೆ । ಹರುಷದಿ ಭಕ್ತರ । ಪೊರೆವವಗೆ ॥ ಉರಗ ಭೂಷಣನ ಕುಮಾರ ಗಜವದನನ । ಚರಣ ಕಮಲಕೆ ಆರತಿಯೆತ್ತಿರೆ ॥ ಗಜ ॥ ೩ ॥

ಸೌರಾಷ್ಟ ರಾಗ - ಏಕತಾಳ

ನೆನೆಯಿರೋ ಜನರೆಲ್ಲ ಗುಣಯುತನ । ಘನವಮೂರ್ತಿ ಮದವೂರ ಗಣನಾಥನ ॥ ನೆನೆಯಿರೋ ॥ ಪ ॥ ದೇವರ ದೇವ ಕೃಪಾಕರನ । ಪಾವನ ಚರಿತ ಪುಣ್ಯೋದಯನ ॥ ಭಾವಜ ವಿಷಯಕೆ ಸಿಲುಕದನ । ಕೋವಿದೆ ಗಿರಿಜೆಯ ವರಸುತನ ॥ ನೆನೆಯಿರೊ ॥ ೧ ॥ ಚಂದ್ರಗೆ ಶಾಪವ ನಿತ್ತವನ । ಅಂದ । ಚಂದದಿಂದೊಪ್ಪುವ ಗಜಮುಖನ ॥ ಚಂದನ ಕುಂಕುಮ ಲೇಪಿತನ । ಇಂದ್ರಾದಿ ಭಕುತರ ಪೊರೆವವನ ॥ ನೆನೆಯಿರೊ ॥ ೨ ॥ ಸುರ ಮುನಿ ನಮಿತ ಸರ್ವೇಶ್ವರನ । ಭರಿತ ಸಿದ್ಧಿಯ ನೀವ ಭವಹರನ ॥ ಪರಮಾತ್ಮ ದುರಿತ ಭಯಂಕರನ । ವರ ಮದವೂರ ವಿಘ್ನೇಶ್ವರನ ॥ ನೆನೆಯಿರೊ ॥ ೩ ॥

ಝಂಟಾರವ ರಾಗ - ಏಕತಾಳ

ಗಜಮುಖ ನಾ ನಿನ್ನ ಪಾದವ ನೆನೆವೆ । ನಿಜವಾಗಿ ಕರುಣಿಸೊ ವರ ಗಳಸು ॥ ೧ ॥ ಮೂಷಿಕ ವಾಹನ ಮೋದಕ ಹಸ್ತ । ಪಾಶಾಂಕುಶ ಕರ ಕಮಲ ಪ್ರಶಸ್ತ ॥ ೨ ॥ ಶ್ಯಾಮಲ ಕರ್ಣ ವಿಲಂಬಿತ ಸೂತ್ರ । ವಾಮನ ರೂಪ ಮಹೇಶ್ವರ ಪುತ್ರ ॥ ೩ ॥ ಬುದ್ಧಿಪ್ರದಾಯಕ ಪುಸ್ತಕಧಾರಿ । ಸಿದ್ಧಿ ವಿನಾಯಕ ಪಾದ ನಮಸ್ತೇ ॥ ೪ ॥ ವಾರಿಜ ಸಂಭವ ನುತ ವಂದಿತ ಪಾದಾಂಬುಜ । ಗೌರಿಯ ವರಪುತ್ರ ಗಣನಾಯಕ ॥ ೫ ॥

ಗಣಪತಿ ಕೌತಕ (ಕವುತಕಿತ) ಆದಿತಾಳ

ತಾಂ ದಿಗಿದಿಗಿ ತೈ ತಿತ್ತಿತೈ - ದಾಂದಿಗಿ ತತ್ತರಿ ತತ್ತತ್ತಾಂ ।
ತತ್ತಾಂ ತಿರಿಕುಟ ತೋಂಗುತಕ - ತಕ್ಕಿಟ ಕಿಟತಕ ತೋಂಗುತಕ ।
ತರಿಕಿಟ ಗಣಪತಿ ಕೌತಕಿತ - ಹುತ್ತಾಂಹುತಕಿಟ ತೋಂಗುತಕ ॥
ಅರಿದಿರು ಮರುದಿರು । ವಿಘ್ನವಿನಾಯಕ । ಯಿನಕುಡ ಅರುಳಿಯ ।
ಗಣಪತಿ ಜೇ ಜೇ । ತಕ್ಕಿಟ ಉದರಿಕಿ । ಟಂ - ಕಿಣ್ಣಾಂ ।
ತದಿಕ್ಕು ತುದಿಕ್ಕು । ಅನೆವರ್ ಕತೆಯುರ್ । ತಕ್ಕಿಟ ಕಿಟತಕ । ತೋಂಗುತಕ ।
ದೇವರು ತಿರುಮುಗ । ತಾಕಿಂಟ ಕಿಟತಕ । ತೋಂಗುತಕ ।

ಗಣಪತಿ ಕವೃತಂ । ಕತೆಯರ್ ವಿನೆಯರ್ । ಉಗ್ರುದಾಂ ಉಗ್ರುದೀಂ ।
ತಕ್ಕು ದಿಕ್ಕು ತಕ್ಕುಟ್ಟೀಂ - । ತಕ್ಕಿಟಕಿ ಟತಕತೋ ॥

(ಕೆಳಗಿನ ಸಾಲು ಹಾಡುತ್ತಿರುವಾಗ ಬಾಲಗೋಪಾಲರು ರಂಗಸ್ಥಳದಲ್ಲಿ ಪ್ರದಕ್ಷಿಣೆ ಬಂದು - ಸಭೆಗೆ ನಮಸ್ಕರಿಸಿ ಹೋಗುವರು. ನಂತರ ಷಣ್ಮುಖನ ವೇಷಕ್ಕೆ ತೆರೆಹಿಡಿಯುವುದು)

ಖಮಾಜು ರಾಗ - ಏಕತಾಳ

ಓ ದೇವ ದೇವಾ । ದೇವನಲ್ಲವೆ ॥ ಪ ॥ ಗಜಮುಖದಾತಾ । ತ್ರಿಜಗ ವಂದಿತ । ಸುಜನರ ದಾತ । ಕೀರ್ತಿ ವಿಖ್ಯಾತ ॥ ೧ ॥ ವಂದೇ ಶಂಭೋ ವರದ ಗಣೇಶ । ಗಣಪತಿ ಮೂಷಕ ವಾಹನರೆ ॥ ೨ ॥

ಭಾಮಿನಿ

ತಾರಕನ ಕೊಲಲೆಂದು ಶಿವನ ಕು । ಮಾರ ಪರ್ವತದಲ್ಲಿ ನೆಲಸಿಹ । ಮೂರು ಲೋಕದ ಒಡೆಯ ಸುಬ್ರಹ್ಮಣ್ಯ ಸಲಹೆನ್ನ ॥ ಆರು ಮತ್ತೊಂದ ನೆಯ ದಿನದಲಿ । ಘೋರ ದನುಜನ ಶಿರವನರಿದ ಮ । ಯೂರವಾಹನ ಕೊಡು ನಮಗೆ ಇಷ್ಟಾರ್ಥ ಸಂಪದವ ॥

ವೃಂದಾವನ ರಾಗ - ಏಕತಾಳ

ಕುಂಡಲ ಮಣಿಭೂಷಣ । ಸ್ವಾಮಿ ಸುಬ್ಬರಾಯ । ಮಂಡಲ ನಾಯಕನೆ ॥ ೧ ॥ ಕಂಡು ನಾ ವಂದಿಸುವೆನು । ದೇವ ಸುಬ್ಬರಾಯ । ಬೆಂಬಿಡದೆ ಸಲಹೆನ್ನನು ॥ ೨ ॥ ಬಾಲಾರ್ಕ ಕೋಟಿ ಪ್ರಕಾಶ । ಸ್ವಾಮಿ ಸುಬ್ಬರಾಯ । ಲೀಲಾವಿನೋದಿದೇವ ॥ ೩ ॥ ಕೈಲಾಸಗಿರಿವರದ । ದೇವ ಸುಬ್ಬರಾಯ । ಶೈಲಕುಮಾರಿಜಾತ ॥ ೪ ॥ ತಾರಕಾಸುರಮರ್ದನ । ಸ್ವಾಮಿ ಸುಬ್ಬರಾಯ । ಚಾರು ಮಯೂರವಾಹನ ॥ ೫ ॥ ಕಾಲ ಕಾಲಕು ನಾನಿನ್ನ । ದೇವ ಸುಬ್ಬರಾಯ । ಲೀಲೆಯ ಕೊಂಡಾಡುವೆನು ॥ ೬ ॥

ಕಾಂಬೋಜಿ ರಾಗ - ಏಕತಾಳ

ನವಿಲ ವಾಹನದಿಂದೇರಿ । ಪೊಯಲಂ ಪಿಡಿದು ಕುಂಡಲಾ । ವಿಳಂಗ ವೇಪ್ಪೋ ಸೇನಾಪತಿಯೇ । ಮುಕುಟಾವಿತಂಸಮಾಲಾ ॥ ೧ ॥ ಓ ಭೂಮಿ ಪಾಲಾ । ಭಳಿರೆ ಭಳಿರೆ ಸುಬ್ಬರಾಯಾ । ಓ ಸುಬ್ಬರಾಯಾ ॥ ೨ ॥

ಸೌರಾಷ್ಟ್ರ ರಾಗ - ಆದಿತಾಳ

ಪಕ್ಷಿವಾಹನ ದೇವ ಪರಮ ಪುರುಷಂ । ಲಾಲಿ ಲಾಲೀ । ಲಾಲಿ ಮಾಂ । ಲಾಲಿ ಲಾಲೀ । ಜಾವು ಮೇರೆ ಲಾಲಿ ಲಾಲೀ । ಲಾಲಿ ಮಣಂ ಲಾಲಿ ಲಾಲೀ ॥ ೧ ॥ ವಂದೇ ದೇವರ ದೇವಾ । ಸುಬ್ಬರಾಯಾ । ಸುಬ್ಬ ರಾಯಾ । ವಂದನೆಯ ಮಾಡುವೆ ಸುಬ್ಬರಾಯಾ ॥ ೨ ॥ ಬಂದ ಹಾಗೆ ಹಿಂದೆ ಹೋಗೋ ಸುಬ್ಬರಾಯ ॥

ಶ್ಲೋಕ

ಗಂಗಾತರಂಗ ಕಮನೀಯ ಜಟಾಕಲಾಪಂ ।
ಗೌರೀ ನಿರಂತರ ವಿಭೂಷಿತ ವಾಮ ಭಾಗಂ ॥
ನಾರಾಯಣ ಪ್ರಿಯಮನಂಗಮದಾಪಹಾರಂ ।
ವಾರಾಣಸೀ ಪುರಪತಿಂ ಭಜ ವಿಶ್ವನಾಥಮ್ ॥

ಶಂಕರಾಭರಣ ರಾಗ - ಆದಿತಾಳ

ನಮಃ ಶಿವಾಯ । ಶಂಭೋ । ನಮಃ ಶಿವಾಯ । ನಮಃ ಶಿವಾಯ। ಹರಹರ ಶಂಭೋ ನಟನಾಲಂಕಾರ ॥ ಅಗಸ್ತ್ಯ ಗೌತಮ ಸೇವಿತ ಪಾದ । ಅಂಗಜ ಭಂಜನ ಚಿನ್ಮಯ ರೂಪ ॥ ನಮಃ ಶಿವಾಯ । ಶಂಭೋ । ನಮಃ ಶಿವಾಯ ॥

ಪದ

ಓ ಇಂದುವದನೇ ಮಂದಗಮನೇ । ಪಾಲಿಸೆನ್ನಾ । ಕುಂದರದನೆ ಕುಮುದ ಗಂಧಿ । ಸುಂದರಾಂಗಿ ಪಾರ್ವತಿ ॥ ಓ ಇಂದು ವದನೆ ॥

(ಈಶ್ವರನ ವೇಷ ಹೋಗಿ - ಒಡನೆ ಪಾರ್ವತಿ (ಅರ್ಧನಾರಿ) ಬರುವುದು)

ಶ್ಲೋಕ

ಉಮಾ ಕಾತ್ಯಾಯಿನೀ ಗೌರೀ ಕಾಳೀ ಹೈಮವತೀಶ್ವರೀ ।
ಶಿವಾ ಭವಾನೀ ರುದ್ರಾಣೀ ಶರ್ವಾಣೀ ಸರ್ವಮಂಗಳಾ ॥

(ಅರ್ಧನಾರಿ ಕುಣಿಸುವ ಪದ್ಯ)

ಕೇದಾರಗೌಳ ರಾಗ - ಅಷ್ಟತಾಳ

ಅಂಗನಾಮಣಿಯೆ ಬಾರೇ । ಎನ್ನಯ ಅಂತ । ರಂಗ ಮಹಲಿಂಗದ ತೋರೇ ॥ ಕಂಜವದನೆ ಕರೆದು ತಾರಮ್ಮಯ್ಯ । ಕರೆದು ತಾರೇ । ನಂಜುಂಡ ಲಿಂಗನಾ । ಹೇ ಭಾವೆ ಲಿಂಗನಾ । ಹೇಗೆ ತಾಳಲೀ । ಭಾವೆ । ಹೇಗೆ ಬಾಳಲೀ । ಪಂಚ ಬಾಣನಿಗೆ ಮುನಿದವನಲ್ಲವೇ ॥

ಕೋರೆ ರಾಗ - ಅಷ್ಟತಾಳ

ನೋಡು ನೋಡಲೆ ತಂಗಿ । ನೋಟಪುರುಷನುಳ್ಳ । ಗಾಡಿಯ ಗರುವರೆ । ಮೃಯ ಲಿಂಗನಾ ॥ ೧ ॥ ನೊಸಲಕಣ್ಣುರಿಯಿಂದ । ನೋಡಿ ಒಬ್ಬನ ಕೊಂದ । ದಶಭುಜ ಪಂಚಮು । ಖದ ದೇವನ ॥ ೨ ॥ ಭಸಿತ ಶೂಲವ ಪಿಡಿದು । ಬಲಗಯ್ಯ ಡಮರುಗ । ಕುಶಲದಿ ಕುಣಿವರೆ । ಮೃಯ ಲಿಂಗನ ॥ ೩ ॥

ನೀಲಾಂಬರಿ ರಾಗ - ಅಷ್ಟತಾಳ

ಬಲು ಸೊಗಸುಗಾರನಂತೆ । ಅಮ್ಮಯ್ಯ ಕೇಳೆ । ಚೆಲುವ ನಂಜುಂಡ ನಂತೆ । ಕೇಳೆಲೆ ಕಾಂತೆ । ಅಂಗಜ ರೂಪನಂತೆ । ಚೆಲುವ । ಮಂಗಳ ಮಹಿಮನಂತೆ । ಹೆಂಗಳ ಕಲೆ ಬಲ್ಲ । ಮೆಚ್ಚಿ ಪೋಷಿಪನಲ್ಲ । ತುಂಗವಿಕ್ರಮ ನಂತೆ । ತ್ರಿಪುರ ಸಂಹಾರನಂತೆ ॥ ಬಲು ಸೊಗಸುಗಾರನಂತೆ ॥

ಪದ - ಅಷ್ಟತಾಳ

ಪ್ರಾಣನಾಥನ ಕಾಣೆ ನೀರೆ ಪಂಚ । ಬಾಣ ಬಾಧೆಯ ತಾಳಲಾರೆ ॥ ಜಾಣೆ ಬೇಗನೆ ಕರತಾರೆ ಸರಿ । ಗಾಣೆ ನಿನ್ನಾಣೆ ಪ್ರವೀಣೆ ಸುಗುಣನ ॥ ೧ ॥ ಕರುಣಾಂಬು ನಿಧಿಚಂದ್ರಮನ ಆಗ । ಲಿರಲಾರೆ ಪುರುಷೋತ್ತಮನ ಬೇಗ ।

ಕರತಾರೆ ನಂದೀಶ ಗಮನ ॥ ತರವೇ ಬೇಸರವೇ ನಾ ಬರುವೆ ಚೆನ್ನಿಗನ ॥ ೨ ॥ ಹಿಂಗಿರಲಾರೆ ಮೋಹನನ ಮದನಾಂಗಕೇಳಿಗೆ ಸುಖಕರನ ದೇವೋ । ತ್ರ್ಯಂಗ ಶ್ರೀ ಎಡವೂರೀಶ್ವರನ ಪಾಂಡು । ರಾಂಗ ಕೃಪಾಂಗ ಭುಜಂಗ ಭೂಷಣನ ॥ ೩ ॥

ಭೃನ್ನಾಗವರಾಳಿ ರಾಗ - ಏಕತಾಳ

ಅರ್ಧರಾತ್ರಿಯಾಯಿತು ಇನ್ನೇನು ಬಂದನೇ ಮತ್ತಿ । ನ್ನೇನು ಬಂದನೇ ಬಂದನೇ ಬಂದನೇ । ಮನಸಿಜ ಮಾನಭಂಗ ಮಾನಿನಿ ನಂಜುಂಡ ಲಿಂಗ । ಏನು ಬಂದನೇ ಮತ್ತಿನ್ನೇನು ಬಂದನೇ । ಹೊತ್ತು ಮೀರಿ ಹೋಯಿತು ಇನ್ನೇನು ಬಂದನೇ ಸಖಿ ಏನು ಬಂದನೇ ಬಂದನೇ ಬಂದನೇನೇ॥

(ಈಶ್ವರನ ಪ್ರವೇಶ)

ಶಂಕರಾಭರಣ ರಾಗ - ಅಷ್ಟತಾಳ

ಕಾಣಿರೆ ಎಲ್ಲಾಟದರೂ ಎಂತಾದರೂ । ಪ್ರಾಣನಾಯಕಿ ಕಮಲಾಂಬಕಿ ಗೌರಿಯ । ಏಣಾಂಕವದನೆ ಎನ್ನಗಲಿ ಪೋದಳ ಮುನ್ನ । ಕಾಣದೆ ನಿಲಲಾರೆ ವೈ ಪಾರ್ವತಿಯ ॥

(ಈಶ್ವರ ಅರ್ಧನಾರಿ ಕೋಡಂಗಿ - ಕುಣಿಯುವುದು)

ಪದ - ಏಕತಾಳ

ವಿಶ್ವೇಶಾ ವಿಶ್ವನಾಯಕಾ ವಿಶ್ವನಾಥ ಶಿವ ತವ ಶರಣಂ ।
ಹರನೇ ಕುಣಿಯೆಂದೂ ಗಿರಿಜಾವರನೇ ಕುಣಿಯೆಂದೂ ।
ಇಂದುಧರನಾ ನುಡಿಯಾ ಕೇಳಿ ಚಂದದಿ ಎಡ ತೊಡೆಯನಾಳಿ ।
ಎಂದೂ ಶ್ರೀ ಸದಾಶಿವನೊಳೊಂದಾಗಿರಲು ಪೇಳಲೆ ನಾರಿ ॥

(ಈಶ್ವರ ಪಾರ್ವತಿ ನಿರ್ಗಮನ)

## ಸ್ತ್ರೀವೇಷ ಹೊರಡುವುದು

ಮಧ್ಯಮಾವತಿ ರಾಗ - ಏಕತಾಳ

ಚಂದಭಾಮಾ ಚಂದಭಾಮಾ । ಏ ಚಂದ ಭಾಮಾ ॥ ಚಂದಿರವದನೆ ಕೇಳ್ । ಏ ಚಂದ ಭಾಮಾ ॥ ಚಂದನ ಗಂಧಿ ಕೇಳೇ । ಚಂದಭಾಮಾ ॥

ಚಂದಿರವದನೆ ಕೇಳೇ । ಚಂದಭಾಮಾ ॥ ಚಂದನ ಸಾಗರೇ ಕೇಳೇ । ಚಂದ ಭಾಮಾ ॥ ಚಂದನ ಚರ್ಚಿತೆ ಏ ಚಂದಭಾಮಾ ॥ ೧ ॥ ನಂದಗೋಪಕಂದ ನಾರೀ ಏ ಭಾಮಾ । ಚಂದನ ಕಲೆಯ ತೋರೇ ಏ ಭಾಮಾ ॥ ೨ ॥ ವಾರಿಜಾಕ್ಷಗೊಂದನೆ ಮಾಡೆ ಏ ಭಾಮಾ । ಸಾರಸಾಕ್ಷಿ ವಂದನೆ ಮಾಡೇ ಏ ಭಾಮಾ ॥ ೩ ॥

### ಶಂಕರಾಭರಣ ರಾಗ - ಅಷ್ಟತಾಳ

ರಂಗನ್ಯಾತಕೆ ಬಾರನೇ ಅಂಗನಾಮಣಿ ॥ ಪಲ್ಲವಿ ॥ ರಂಗನ್ಯಾತಕೆ ಬಾರ ತಿಂಗಳಾಯಿತು ಪೂರ । ಬೆಳ್ದಿಂಗಳ್ ಬಿಸಿಲಾಯಿತೆ ಅಂಗನಾಮಣಿ ॥ ೧ ॥ ಜಾಜಿಮಲ್ಲಿಗೆ ಹೂವು ದೂಜಿಯಂತಾಯಿತು । ಭೋಜನ ವಿಷ ವಾಯಿತೆ ಅಂಗನಾಮಣಿ ॥ ೨ ॥ ಬಾಲೆ ನೀ ಪೋಗಿ ಗೋಪಾಲನ ಕರತಾರೆ । ಭಾಲೇಂದು ಧರ ಸಖಿನ ಅಂಗನಾಮಣಿ ॥ ೩ ॥ ಜಲಜಲೋಚನೆ ಕೇಳೆ ಛಲಕೆ ನಲ್ಲನೊಳ್ಪೇಳೆ । ಮನಸು ಮಾರಗೆ ಸೂರೆ ಕ್ಷಣದೊಳಾಯಿತು ನೀರೆ । ವಿನಯವ ಬಿಡಲಾರೆ ವನಿತೆ ನೀ ಕರತಾರೆ ॥ ೪ ॥

### ಸೌರಾಷ್ಟ್ರ ರಾಗ - ಅಷ್ಟತಾಳ

ಚಿಕ್ಕ ಪ್ರಾಯದ ಬಾಲೆ ಚದುರೆ ನಿನ್ನಂಗವ । ಒರೆವುದೇನೆ ॥ ಮದ । ವೃಕ್ಕುತ ಬರುತಿದೆ ಮಾರನ ಮದದಾನೆ । ಒರೆವುದೇನೆ ॥ ೧ ॥ ವಾರಿಜಗಂಧಿ ವಯ್ಯಾರೆಯ ಸಡಗರ । ಒರೆವುದೇನೆ ॥ ಭಂಗಾರದ ಕಂಠಿ ಕೈಬಳೆ ಸರಮಣಿ ಗಳ । ಒರೆವುದೇನೆ ॥ ೨ ॥ ಪಂಕಜಪಾಣಿ ಕಾಳಾಹಿವೇಣಿಯ । ಒರೆವುದೇನೆ ॥ ಸ್ಮರ । ಬಿಂಕವ ಬಿಡಿಸಿ ನಿಶ್ಶಂಕದಿ ಪಾಲಿಸೆ । ಒರೆವುದೇನೆ ॥ ೩ ॥

### ಚೌತಾಳ ತಿತ್ತಿತ್ರ್ಯ

ಮಾಯಗಾರನು ನೀನೇ ಮಹಿಮನು ನೀನೇ । ತೋಯಜಾಂಬಕನು ಬ । ದಾರನು ನೀನೇ ॥ ಪಲ್ಲ ॥ ಕಾಯಜ ಪಿತಲೋಕನಾಥ ಶ್ರೀಹರಿಯೇ । ಶ್ರೀಯರಸ ಚೆನ್ನಿಗರಾಯ ಮೂರುತಿಯೇ ॥

ಬಾಯಿತಾಳದ ನಾಟ್ಯಗಳು

ಗುಬ್ಬಿನಾಟ್ಯ–

ತಾ ತೈಯ ತೈಯ ತಾ -

ತಹತ ದಿನ್ನತ [4 ಸಲ]

ಕುತ್ತಿಗಾಲು–ಜಾರುಗುಪ್ಪೆ—

ಝುಣುತ ಝುಣುತ ಝಣುತ ಧಿನ್ನತ ಧೀಂತನ ದಿರಿನ ತೋಂತನ ದಿರಿನ

ಸಲಾಂ ಹೆಜ್ಜೆ—

ತತ್ತೋಂಗ ದಿಕುತ ಕ ತೈ ತಾಕಿಟತಕ ತರಿಕಿಟ [4 ಸಲ]

ಹುಡಿನಾಟ್ಯಗಳು—

ಧಿತ್ತ ಧೀಕಿಟ ಕಿಟತಕ ತರಿಕಿಟ ಕಿಟತಕದ [3 ಸಲ]

ಧೀಕಿಟ ಕಿಟತಕ ತರಿಕಿಟ ಕಿಟತಕ [3 ಸಲ]

ಧಿತ್ತ [3 ಸಲ] [3 ಮುಕ್ತಾಯ]

ತೈ ದಿನ್ನತಾ ದಿನ [ಮುಕ್ತಾಯ] ತಾನನಾಂತದಿರಿನಾ

(ಹಾಸ್ಯಗಾರನ ಪ್ರವೇಶ)

ಹೊಗಳಿಕೆ

ಸುರಪಸುತನ ಕೊಂದು ಬಂದ ಮುಚುಕುಂದನ । ಮರೆಹೊಕ್ಕು ಸುಡಿಸಿದೆ ಕಾಲಯವನನ ॥ ಉಪಚರಿಸಿದೈ ವಿಸ್ತರದಿಂದ ಕೌರವನ । ಕರೆದು ಆದರಿಸಿದೆ ಶರಣ ವಿದುರನ ॥

ಏಕತಾಳ

ಚರಣಾ ಭರಣಾ ಶರಣಾ ಕರುಣಾ। ಧುರದೊಳು ತರಣಿಯ ಮರೆಯನು ಸ್ಫುರಿಸಿ । ವರನರ ಕರಶರ ವರದಲಿ ಸೈಂಧವ । ಶಿರವ ತರಿದ ಬಹು ದುರುಳರ ಕೆಡಹಿದ ॥ ೧ ॥ ಪವವ್ರಜಗೊಲಿದು ಶಿಲೆಯ ಪೆಣ್ಣಸಗಿದೆ । ಒದಗಿ ನೀರೊಳಗೆ ಬೆಟ್ಟವನು ತೇಲಿಸಿದೆ । ಮಾವ ಮುಖರನು ಕೋಪದಿಂದ ಸೀಳಿಸಿದೆ । ಕದನದೊಳಳಿದ ವಾನರರನೆಬ್ಬಿಸಿದೆ ॥ ಚದುರಾ ಮಧುರಾ ಸದರಾ ನೇ ನೀ। ತ್ರಿದಶನ ಗರಿಗೈದಿದ ಪಿತೃಗಳ ತಾ। ಸೊದಗಿದ ಧರೆಯೊಳು ದನುಜನ ಪಡೆದೆ । ಮುದದೊಳು ಮುನಿಗಳು ಪಿದ ಕಮನೀಯನೆ ॥ ೨ ॥

### ಕಲ್ಯಾಣಿ ರಾಗ - ಅಷ್ಟತಾಳ (ದಶಾವತಾರಸ್ತುತಿ)

ಸಲಹೊ ಸದಾನಂದನೆ ಲಕ್ಷ್ಮೀಶನೆ ॥ ಪಲ್ಲವಿ ॥ ನಂದನಂದನ ಮುನಿ ವೃಂದವಂದಿತ ಶ್ರುತಿ । ತಂದ ಶ್ರೀ ಗಾಧಿಕನೆ ಲಕ್ಷ್ಮೀಶನೆ ॥ ೧ ॥ ಸಾಧು ಸಚ್ಚರಿತ ವಿನೋದ ಬೋಧಾಗಮ್ಯ । ನಾದ ಕಚ್ಛಪರೂಪನೆ ಲಕ್ಷ್ಮೀಶನೆ ॥ ೨ ॥ ಸರಸಿರುಹಾಕ್ಷ ಸಂತತ ಸಕಲಾನಂದ । ವರಾಹಗೆ ನಮೋ ಎಂಬೆನೆ ಲಕ್ಷ್ಮೀಶನೆ ॥ ೩ ॥ ಆ ಮಹಾಬಲಿಯಿಂದ ಭೂಮಿಯನೆಳೆತಂದ । ವಾಮನ ನಮೊ ಎಂಬೆನೆ ಲಕ್ಷ್ಮೀಶನೆ ॥ ೪ ॥ ರಾಮಣೀಯಕ ರೂಪನಾ ಮಹಾತ್ಮ ಪರಶು । ರಾಮನಮೋಯೆಂಬೆನೆ ಲಕ್ಷ್ಮೀಶನೆ ॥ ೫ ॥ ಕೋಮಲಕಾಯಸು ನಾಮ ಸುಪ್ರಿಯ ಸೀತಾ । ರಾಮ ನಮೋಯೆಂಬೆನೆ ಲಕ್ಷ್ಮೀಶನೆ ॥ ೬ ॥ ಹಾಲು ಬೆಣ್ಣೆಯ ತಿಂದ ಮೇಲು ಗೋಪಿಯ ಕಂದ । ಶ್ರೀಲೋಲ ಶರಣೆಂಬೆನೆ ಲಕ್ಷ್ಮೀಶನೆ ॥ ೭ ॥ ಭಕ್ತವತ್ಸಲ ಬಹು । ಶಕ್ತ ಪರಾಕ್ರಮ । ಕಲ್ಕ್ಯನಮೋಯೆಂಬೆನೆ ಲಕ್ಷ್ಮೀಶನೆ ॥ ೮ ॥

### ಸಾವೇರಿ ರಾಗ - ಏಕತಾಳ

ಬಾರೊ ಬಾರೊ ಮುದ್ದು ನೀರ ಮಾರನಟ್ಟುಳಿಗಾರ । ಬಾರೋ ಬಾರಯ್ಯ ನೀರನೇ ಇಂದೆನ್ನ ಮನೆಗೆ ॥ ಕೃಷ್ಣಯ್ಯ ಮನೆಗೆ ಬಾ ರಂಗಯ್ಯ ಮನೆಗೆ ಬಾ । ಬಾರೋ ಬಾ ಮುದ್ದು ನೀರನೆ ॥ ಪ ॥ ನಿನ್ನೆ ಮೊನ್ನೆ ಬರುತೇನೆಂದು ಎನ್ನ ವಂಚಿಸಿ ಪೋದೆಯಾ । ಎನ್ನ ಠಕ್ಕಿಸಿ ಪೋದೆಯಾ ನೀ ಸೆನ್ನ ಸಂಚಿಸಿ ಪೋದೆಯಾ ॥ ನಿನ್ನ ಬಿಟ್ಟು ನಾನಿರುವವಳಲ್ಲ ಮುನ್ನ ಹೋದ್ರೆ ಕರತರುವವರಿಲ್ಲ ॥ ೧ ॥ ಚಂಚಲಕಿಷ್ಟು ಕಾರಣವೇನು ಮುಂಚೆ ಕೊಟ್ಟಿರುವುದು ಕೈಯಲಿ ಹೊನ್ನು । ಪಂಚಬಾಣನಟ್ಟುಳಿಯಾ ಬಾಧೆಗೆ ಮಂಚಕಾಗಿ ನಡೆನಡೆಯೋ ಮನೆಗೆ ॥ ೨ ॥ ಕಣ್ಣುಸನ್ನೆಲಿ ಕರೆದೇಯಾ ಸಣ್ಣವಳೆಂದು ತೊರೆದೇಯಾ । ಬಣ್ಣದಿಂದ ಕೊಡು ಮನಸಾಭೀಷ್ಟವ ಕಣ್ವಪುರದ ಶ್ರೀ ಗೋಪಾಲಕೃಷ್ಣ ॥ ೩ ॥

### ಝಂಪೆತಾಳ

ನೀಲಮೇಘಾಂಗನಿಗೆ ನಿಜಶರಣ ಸಂಗನಿಗೆ । ಕಾಲಭಯ ನಾಶನಿಗೆ ಕಮಲಾಕ್ಷಗೆ ॥ ಬಾಲಾರ್ಕ ಶತಕೋಟಿ ಭಾಸ ಪ್ರಕಾಶನಿಗೆ । ಮೂಲೋಕ ದೊಡೆಯನಿಗೆ ಮುರವೈರಿಗೆ ॥ ೧ ॥ ಕಾಮಪಿತನಾದವಗೆ ಕಡುಚೆಲ್ವ

ಮಾಧವಗೆ । ಸಾಮಗಾನವಿಲೋಲ ಸರ್ವೇಶಗೆ ॥ ವಾಸುದೇವನ ಮಿತ್ರ ವಸುದೇವ ಪುತ್ರನಿಗೆ। ಶ್ರೀಮಹಾಗೋವಿಂದ ಗೋಪಾಲಗೆ ॥ ೨ ॥ ವರಾಹಾವತಾರನಿಗೆ ದುರಿತ ಸಂಹಾರನಿಗೆ । ಪರಶಿವನ ಮಿತ್ರ ಪಾವನ ಚರಿತಗೆ ॥ ಧರೆಯೊಳತ್ಯಧಿಕವಹ ವರ ಕಣ್ವಪುರದೊಳಗೆ । ಸ್ಥಿರವಾಗಿ ನೆಲಸಿರುವ ಶ್ರೀಕೃಷ್ಣಗೆ ॥ ಮಂಗಲಂ ಜಯ ನೀಲ ಮೇಘಾಂಗಗೆ ॥ ೩ ॥

**ಏಕತಾಳ**

ಹೋಗಿ ಹೇಳಮ್ಮ ಬೇಗದಿಂದವಗೆ ॥ ಪಲ್ಲವಿ ॥ ಹೋಗಿ ಹೇಳಮ್ಮ ಹೊತ್ತು ಹೋಗದಿನ್ನೆನಗೆ। ಭೋಗಿ ಶಯನನು ಬಾರನೆ ಎನ್ನ ಮನೆಗೆ ॥ ೧ ॥ ಕಣ್ಣ ಮುಚ್ಚಲು ನಿದ್ರೆ ಬಾರದಿಂದೆನಗೆ । ಬಣ್ಣಿಸಿ ಮಾತಾಡ ಸೇರದಿಂದೆನಗೆ ॥ ೨ ॥ ಹೆಣ್ಣು ಸಣ್ಣವಳೆಂದು ಕಡು ದಯೆ ಬೀರಿ । ಕಣ್ವಪುರೀಶ ಬರಲಿ ಒಂದು ಬಾರಿ ॥ ೩ ॥

(ಹಾಸ್ಯಗಾರನ ನಿರ್ಗಮನ)

- ಸಭಾಲಕ್ಷಣ ಮುಕ್ತಾಯ -

# ಪ್ರಸಂಗ ಪೀಠಿಕೆ

**ಶ್ಲೋಕ**

ಹರುಸತ ಗಜವಕ್ತ್ರಂ ವಿಘ್ನ ಜೀಮೂತ ವಾಯುಂ । ದಿನಮಣಿಶತ ತೇಜಂ ದತ್ತ ಭಕ್ತೇಪ್ಸಿತಾರ್ಥಂ ॥ ತಮ ದನುಜವಿನಾಶಂ ಭೂಧರಂ ವಾರಿಜಾಕ್ಷಂ । ಕಮಲಜಸುರ ಸ್ತೋತ್ರಂ ವೇದ ವೇದ್ಯಂ ನಮಾಮಿ ॥

**ಕಾಂಭೋಜಿ ರಾಗ - ಏಕತಾಳ**

ಹರಿಹರಾ ಕ್ರತುಹರಾ । ಅಮರಾ ಪೂಜಿತುರೇ ॥ ಹರಿಹರಾ ॥ ಪಲ್ಲ ॥ ವಾಮನ ರೂಪ ವರಯೇಕದಂತ । ಕಾಮಿತ ಫಲದಾಯಕ ಗಣನಾಥ ॥ ಹರಿಹರಾ ॥ ೧ ॥ ವಾರಣಾನನ ನಾಗಾಭರಣ । ಚಾರು ಚತುರ್ಭುಜ ಲಂಬೋದರ ಹರೇ ॥ ಹರಿಹರಾ ॥ ೨ ॥

### ನಾಟಿ ರಾಗ - ಝಂಪೆತಾಳ

ಪರಿಪಾಹಿ ಪರಾಂ ರಾಮ । ಪರಿ ಪಂಥಿರಣಭೀಮ । ಪರಿಣಮಿತ ಗುಣಧಾಮ । ಪ್ರಣತಾಭಿರಾಮಾ ॥ ಜಯ ಜಯತು ಜಯತು ॥ ೧ ॥ ಸುರ ರಾಜನುತ ಪಾದ। ಸುಮುಖಿ ನತ ನೃತ ಮೋದ। ನರಕ ಭವ ಭಯ ದೂರ । ನರಮೃಗಶರೀರ ॥ ಜಯ ಜಯತು ಜಯತು ॥ ೨ ॥ ಮಾರ್ತಂಡಪರಕಿರಣ। ಮಾನಸ ವಿಮೋಚನ । ಶ್ರೀರಾಮ ರಘುವೀರ । ರಾಜೀವ ನೇತ್ರ ॥ ಜಯ ಜಯತು ಜಯತು ॥ ೩ ॥ ವರದ ರಘುಕುಲ ಬಾಲ । ವಾರಣಧ್ವಂಸಿಪರ । ವಾಂಛಿತವ ನೀವಕೇ। ರಳವಿಬುಧವಿನುತ॥ ಜಯ ಜಯತು ಜಯತು ॥ ೪ ॥

### ಸುರುಟಿ ರಾಗ - ಮಟ್ಟೆ ತಾಳ

ಪಂಪಾಲ್ಬಲ ಪಯಮಾರ್ಬಲ । ಮಮ್ಮಾರ್ಬಲಯೆರೆಯಂ ॥ ಅಂಬಾರ್ಚಿತ ಶುಭಕೇರಳ । ಅಂಬಾರ್ಚಿತ ಶುಭಕಂ ॥ ಜಯ ಜಯ ಜಯ ಜಯತು ॥ ೧ ॥ ಅಂಬುಜಂ ನಾಲ್ಕೋರಂ । ಹೇರಂಬಂ ಪೊರೆಯುವಗಂ ॥ ವಾಂಛಿತನಾ ವಂಚಿತನಂ । ವಾಂಛಿತ ಬಹುಶೂರ ॥ ಜಯ ಜಯ ಜಯ ಜಯತು ॥ ೨ ॥ ಬಾಲರಹಿ ವಂಶನುತ । ಬಾಲಯಶೋ ಖ್ಯಾತ । ಪಾಹಿ ಪಾಹಿನಿ ॥ ವಿಭವಾಹಿನಿ ॥ ೩ ॥

### ಅಷ್ಟ ತಾಳ

ಅಂಬುಜದಳನಯನೇ । ಅಮರವಂತ ಪಾದ । ತುಂಬುರ ನಾರದ ವಂದ್ಯೇ । ಅಂಬಿಕೇ । ಜಗದಂಬಿಕೇ । ದುರ್ಗಾಂಬಿಕೇ । ಕಾಳಿಕಾಂಬಿಕೇ । ಮೂಕಾಂಬಿಕೇ ॥ ಜಯ ಜಯ ಜಯ ಜಯ ಜಯತು ॥

### ಅಹೇರಿ ರಾಗ - ಏಕತಾಳ

ಉಡುಪತಿ ನಗುತಿರ । ಕಡುಮುಳಿದಾತಗೆ । ಬಿಡದೆ ಶಾಪವನಿತ್ತ । ಮೃಡಸುತ ಛಳಿರೇ ॥ ಪೊಡವಿಗುತ್ತಮವಾದ । ಮಧುಪುರದ ಕ್ಷೇತ್ರದಲಿ । ದೃಢದಲಿ ನೆಲಸಿಹ । ಒಡೆಯ ವಿಘ್ನೇಶಾ ॥ ಜಯ ಜಯ ಜಯ ಜಯ ಜಯತು ॥

-ತೋಂಗತೋ-

ಪಾಂಡವರ ಒಡ್ಡೋಲಗದ ತೆರೆ ಕುಣಿತ

(ಪ್ರಾರಂಭದಲ್ಲಿ ದೇವತಾಸ್ತುತಿಯ ನಂತರ ಈ ಕೆಳಗಿನ ಹಾಡಿನೊಂದಿಗೆ ತೆರೆ ಕುಣಿತ ಪ್ರಾರಂಭ)

ಕಾಂಭೋಜಿ ರಾಗ - ಆದಿತಾಳ

ಓ ದೇವ ದೇ । ವರ ದೇವ ದಯಾಸಾಂದ್ರ । ಭಾವಿಪೆ ನಾ ॥ ಮುದ ದಿಂದ ॥ ಓ ದೇವ ॥ ೧ ॥ ನಂಬಿದವರ । ಆ । ನಂದದಿಂದ । ಬೆಂಬಿಡದೆ । ಪೊರೆಯೊ ದೇವ ॥ ಓ ದೇವ ॥ ೨ ॥ ಮುರಮಥನ । ದೇವ । ಸಿರಿಯರಸ । ಪೊರೆವ್ರ ದೆನ್ನ । ಗುರುರನ್ನ ॥ ಓ ದೇವ ॥ ೩ ॥ ಕರುಣಾನಿಧಿಯೆ । ವರಕರಿ ವರದ । ಉರಗಶಯನ । ದೇವ । ಗರುಡವಾಹನ ॥ ದೇವ । ಚಂದ್ರಕೋಟಿ ಸುಂದರಾಂಗ ॥ ೪ ॥

(ಹೀಗೆ ತೆರೆಯಲ್ಲಿ ಕುಣಿದ ಮೇಲೆ)

ಕಾಂಭೋಜಿ ರಾಗ - ಏಕತಾಳ

ಕುಂದರದನ । ಆ । ನಂದ ಶರಧಿ ॥ ಚಂದ್ರ ಕೋಟಿ । ಸುಂದರಾಂಗ ಕುಂದರದನ ॥ ೧ ॥ ಇಂದೀವರಾಕ್ಷ । ದೇವ ಇಂದ್ರಾದಿರಕ್ಷ ॥ ವಂದಿಸು ವೆನು ॥ ಗೋ । ವಿಂದ ರಕ್ಷಿಸು ॥ ಕುಂದರದನ ॥ ೨ ॥

## ರಾಮನ ಒಡ್ಡೋಲಗ

ಕಾಂಭೋಜಿ ರಾಗ - ಆದಿತಾಳ

ರಾಮ ರಾಮ । ದಯಾಸಾರ । ಭೂಮಿಪಾಲಕ । ಭಕ್ತವತ್ಸಲ ॥ ಪ ॥ ಸಾಕೇತಾಧಿಪನಾದ ದಶರಥ । ನಾ ಕುಮಾರರು ರಾಮಲಕ್ಷ್ಮಣ ॥ ೧ ॥ ಮಾತೆ ಕೈಕೆಯ ಮಾತಿಗೋಸುಗ । ಈತ ರಾಘವ । ಸೀತೆಯೊ ಸಹ ॥ ೨ ॥

ಭೈರವಿ ರಾಗ - ಏಕತಾಳ

ಆಡುತಾಡುತ ಬಂದ ರಾಮ । ಸಂತೋಷದಿಂದ । ಆಡುತಾಡುತ ಬಂದ ರಾಮ ॥ ನೋಡುವವರಿಗೆ ದಯ । ಮಾಡುವ ಗುಣ ನಿಧಿ । ಬೇಡುವವರಿಗೆ ಕೈಯೊಳ್ । ನೀಡುತ ವರವ ॥ ಆಡುತಾಡುತ ಬಂದ

ರಾಮು ॥ ೧ ॥ ಮಲ್ಲಿಗೆ ಹೂವಿನಂಥ ಮೈಯ್ಯಸು । ಪರಿಮಳಿಸುವ । ಫುಲ್ಲ ಲೋಚನ ಮದನನಯ್ಯ ॥ ಕಲ್ಲಾಗಿ ಮಲಗಿದ । ಹಲ್ಯೆಯು ಸಲಹಿದ । ಕಲ್ಯಾಣಾಂಗ ರಘು । ವಲ್ಲಭ ರಾಮು । ಆಡುತಾಡುತ ಬಂದ ರಾಮು ॥ ೨ ॥

## ಕೃಷ್ಣನ ಒಡ್ಡೋಲಗ

### ಶಾರ್ದೂಲವಿಕ್ರೀಡಿತಂ

ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಸ್ಥಲೇ ಕೌಸ್ತುಭಂ ।
ನಾಸಾಗ್ರೇ ನವಮೌಕ್ತಿಕಂ ಕರತಲೇ ವೇಣುಂಕರೇ ಕಂಕಣಂ ॥
ಸರ್ವಾಂಗೇ ಹರಿಚಂದನಂ ಚ ಲಲಿತಂ ಕಂಠೇ ಚ ಮುಕ್ತಾವಲೀ ।
ಗೋಪಸ್ತ್ರೀ ಪರಿವೇಷ್ಟಿತೋ ವಿಜಯತೇ ಗೋಪಾಲ ಚೂಡಾಮಣಿಃ ॥

### ಶಂಕರಾಭರಣ ರಾಗ - ಆದಿತಾಳ

ದೇವ ಬಂದ । ದೇವರ ದೇವ ಬಂದ ॥ ಪ ॥ ಉರಗ ಶಯನ ಬಂದ । ಗರುಡವಾಹನ ಬಂದ । ನರಗೊಲಿದವ ಬಂದ । ನಾರಾಯಣ ಬಂದ ॥ ೧ ॥ ಪೂತನಿ ಸಂಹರಣ ಬಂದ । ಪುರುಹೂತವಂದ್ಯ ಬಂದ । ಮಾತುಳನ ಮಡುಹಿದ । ಗೋವಿಂದ ಬಂದ ॥ ೨ ॥ ಮಂದರೋದ್ಧರ ಬಂದ । ಮಾಮನೋಹರ ಬಂದ । ಕಂದರ್ಪಪಿತ ಬಂದ । ಕರುಣಾಳು ಬಂದ ॥ ೩ ॥

### ನವರೋಜು ರಾಗ - ಏಕತಾಳ

ಬಂದನು ದೇವರ ದೇವ । ಚಂ । ಬಿಡದೆ ಭಕ್ತರ ಕಾವ ॥ ಚಂದ್ರಕೋಟಿ ಪ್ರಕಾಶ । ಚಾರುತರ ವಿಲಾಸ । ಇಂದ್ರನಂದನ ಭಾವ । ಕರುಣ ಸಂಜೀವ ॥ ೧ ॥ ನೀಲಮೇಘನಿಭಾಂಗ । ನಿರತ ಸದ್ಗುಣವೃಂದ ॥ ಶೂಲಪಾಣಿಯು ಮಿತ್ರ । ಸುಗುಣ ಶೋಭನಗಾತ್ರ । ಕಾಲಭಯವಿದೂರ । ಕಂಸ ಸಂಹಾರ ॥ ೨ ॥ ವೇದಾಂತ ಗುಣಲೋಲ । ಸಾಧು ಸಜ್ಜನಪಾಲ ॥ ಯಾದವರ ಕುಲದೀಪ ॥ ಎಸೆವ ಕೀರ್ತಿಕಲಾಪ । ಮಾಧವ ಮಧುಸೂದನ ರೂಪ ॥ ೩ ॥

## ಮಂಗಳ ಪದ

### ಕೇಗುಪ್ತಿ ರಾಗ - ತ್ರಿವುಡೆತಾಳ

ಮಂಗಲಂ ಜಯ ಜಯತು ॥ ಪ ॥ ಕರಿಗೊರಳವನಿಗೆ । ಕರಿಗೊಲಿದವಗೆ ॥ ಕರಿಮುಖನಯ್ಯಗೆ । ಕರಿಯ ಮೈಯವಗೆ ॥ ಮಂಗಲಂ ಜಯ ಜಯತು ॥ ದಶಭುಜದವಗೆ । ದಶಪತಿಧ್ವಜಗೆ ॥ ದಶಶಿರಗೊಲಿದಗೆ । ದಶರಥಸುತಗೆ ॥ ಮಂಗಲಂ ಜಯ ಜಯತು ॥ ೧ ॥ ಶಂಕರಿರಮಣಗೆ । ಸಂಕರುಷಣಗೆ ॥ ಶಂಕರನಾರಾಯಣ ಶ್ರೀ । ವೆಂಕಟರಮಣಗೆ ॥ ಮಂಗಲಂ ಜಯ ಜಯತು ॥ ೨ ॥

### ವೀಳ್ಯ ತೆಗೆದುಕೊಳ್ಳುವಾಗ ಹೇಳುವ ಮಾತು

ಭಾಗವತರು : ಆಹೋ ಹೋ!

ಸ್ತ್ರೀವೇಷಧಾರಿ : ಆಹೋ ಹೋ!

ಭಾಗವತರು (ಮೇಳ ಮತ್ತು ದೇವರ ಹೆಸರು) ದೇವರ ಸನ್ನಿಧಾನದಿಂದ

ಸ್ತ್ರೀ : ಸನ್ನಿಧಾನದಿಂದ (ಆಟ ಆಡಿಸಿದವರ ಕುಲದೇವರ ಹೆಸರು) ಭಕ್ತರು ಸಲ್ಲಿಸಿದ ಸೇವೆಯನ್ನು ಪರಾಂಬರಿಸಿ ಕೊಟ್ಟ ಶ್ರೀಮುಡಿ ಗಂಧ ಪ್ರಸಾದ ದಕ್ಕಿತೋದಕ್ಕಿತು-

## ರಂಗಸ್ಥಳದಿಂದ ಚೌಕಿಗೆ ಹೋಗುವಾಗ ಹೇಳುವ ಪದ್ಯ

### ಜಂಜೋಟಿ ರಾಗ - ರೂಪಕತಾಳ

ರಾಮಕೃಷ್ಣರು ಮನೆಗೆ ಬಂದರು । ಬಾಗಿಲ ತೆರೆಯಿರೋ ॥ ಕಾಮಧೇನು ಬಂದಂತಾಯ್ತು ಸುಖವ ಪಡೆಯಿರೋ ॥

## ಚೌಕಿಯಲ್ಲಿ ಆರತಿ ಪದ

### ಮೋಹನ ರಾಗ - ಅಷ್ಟತಾಳ

ಕರದೊಳು ಪರಶು ಪಾಶಾಂಕುಶಧರನಿಗೆ । ಹರುಷದಿ ಭಕ್ತರ ಪ್ರೇರಿವವಗೆ ಉರಗ ಭೂಷಣನ ಕು । ಮಾರ ಗಜವದನನ । ಚರಣಕಮಲಕಾರತಿಯೆತ್ತಿರೆ ॥ ಗಜಮುಖದವಗೆ ಗಣಪಗೆ ॥

-ಮಂಗಲಂ-

-ಶ್ರೀ ಕೃಷ್ಣಾರ್ಪಣ ಮಸ್ತು-

ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ
ಪ್ರಕಾಶನ

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
14–3 A ನೃಪತುಂಗ ರಸ್ತೆ
ಬೆಂಗಳೂರು 560 002